# "ಜಾತಿ, ವರ್ಗ ಮತ್ತು ಮಾರುಕಟ್ಟೆ-ಕರ್ನಾಟಕದಲ್ಲಿನ ಬಡತನ ರೇಖೆಯ ಕೆಳಗಿರುವ ಕುಟುಂಬಗಳ ಅಧ್ಯಯನ"

(ವಾಣಿಜ್ಯಶಾಸ್ತ್ರ ವಿಷಯದಲ್ಲಿ ಪಿಎಚ್.ಡಿ. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ ಸಂಶೋಧನಾ ಮಹಾಪ್ರಬಂಧ)


**ಶ್ರೀ ಹಣಮಂತಪ್ಪಾ ರಾಮಣ್ಣ ಚನ್ನಕ್ಕಿ**
ಎಂ.ಕಾಂ., ಐ.ಡಿ.ಐ.ಆರ್.ಎಚ್.ಈ.ಎಮ್
ಸಂಶೋಧನಾ ವಿದ್ಯಾರ್ಥಿ
ಅಭಿವೃದ್ಧಿ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ವಿದ್ಯಾರಣ್ಯ, ಹಂಪಿ-೫೮೩೨೭೬

**ಡಾ. ಎಂ. ಚಂದ್ರ ಪೂಜಾರಿ**
ಎಂ.ಕಾಂ., ಪಿಎಚ್.ಡಿ.
ಮಾರ್ಗದರ್ಶಕರು ಮತ್ತು ಪ್ರಾಧ್ಯಾಪಕರು
ಅಭಿವೃದ್ಧಿ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ವಿದ್ಯಾರಣ್ಯ, ಹಂಪಿ-೫೮೩೨೭೬






ಅಭಿವೃದ್ಧಿ ಅಧ್ಯಯನ ವಿಭಾಗ
ಸಮಾಜ ವಿಜ್ಞಾನಗಳ ನಿಕಾಯ
ಕನ್ನಡ ವಿಶ್ವವಿದ್ಯಾಲಯ, ವಿದ್ಯಾರಣ್ಯ
ಹಂಪಿ - ೫೮೩೨೭೬

೨೦೧೮

# "ಜಾತಿ, ವರ್ಗ ಮತ್ತು ಮಾರುಕಟ್ಟೆ–ಕರ್ನಾಟಕದಲ್ಲಿನ ಬಡತನ ರೇಖೆಯ ಕೆಳಗಿರುವ ಕುಟುಂಬಗಳ ಅಧ್ಯಯನ"

(ವಾಣಿಜ್ಯಶಾಸ್ತ್ರ ವಿಷಯದಲ್ಲಿ ಪಿಎಚ್.ಡಿ. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ
ಸಂಶೋಧನಾ ಮಹಾಪ್ರಬಂಧ)

**ಶ್ರೀ ಹಣಮಂತಪ್ಪಾ ರಾಮಣ್ಣ ಚನ್ನಕ್ಕಿ**
ಎಂ.ಕಾಂ., ಐ.ಡಿ.ಐ.ಆರ್.ಎಚ್.ಈ.ಎಮ್
ಸಂಶೋಧನಾ ವಿದ್ಯಾರ್ಥಿ
ಅಭಿವೃದ್ಧಿ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ವಿದ್ಯಾರಣ್ಯ, ಹಂಪಿ–೫೮೩೨೭೬

**ಡಾ. ಎಂ. ಚಂದ್ರ ಪೂಜಾರಿ**
ಎಂ.ಕಾಂ., ಪಿಎಚ್.ಡಿ.
ಮಾರ್ಗದರ್ಶಕರು ಮತ್ತು ಪ್ರಾಧ್ಯಾಪಕರು
ಅಭಿವೃದ್ಧಿ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ವಿದ್ಯಾರಣ್ಯ, ಹಂಪಿ–೫೮೩೨೭೬



**ಅಭಿವೃದ್ಧಿ ಅಧ್ಯಯನ ವಿಭಾಗ**
**ಸಮಾಜ ವಿಜ್ಞಾನಗಳ ನಿಕಾಯ**
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ – ೫೮೩೨೭೬

**೨೦೧೮**

# ಪ್ರಮಾಣ ಪತ್ರ

**"ಜಾತಿ, ವರ್ಗ ಮತ್ತು ಮಾರುಕಟ್ಟೆ–ಕರ್ನಾಟಕದಲ್ಲಿನ ಬಡತನ ರೇಖೆಯ ಕೆಳಗಿರುವ ಕುಟುಂಬಗಳ ಅಧ್ಯಯನ"** ಎಂಬ ವಾಣಿಜ್ಯಶಾಸ್ತ್ರದ ಶೀರ್ಷಿಕೆಯ ಮಹಾಪ್ರಬಂಧವನ್ನು ಪಿಎಚ್.ಡಿ. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯದ ಅಭಿವೃದ್ಧಿ ಅಧ್ಯಯನ ವಿಭಾಗದ ಡಾ. ಎಂ.ಚಂದ್ರ ಪೂಜಾರಿ ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಲಾಗಿದೆ. ಪ್ರಸ್ತುತ ಮಹಾ ಪ್ರಬಂಧದ ಯಾವುದೇ ಭಾಗವನ್ನು ಈ ಮೊದಲು ಬೇರೆ ಯಾವುದೇ ಉದ್ದೇಶ ಅಥವಾ ಪದವಿಗಳಿಗಾಗಿ ಸಲ್ಲಿಸಿರುವುದಿಲ್ಲವೆಂದು ಪ್ರಮಾಣೀಕರಿಸುತ್ತೇನೆ.

ದಿನಾಂಕ: 4.08.2018
ಸ್ಥಳ : ವಿದ್ಯಾರಣ್ಯ, ಹಂಪಿ

**(ಹಣಮಂತಪ್ಪಾ ರಾಮಣ್ಣ ಚನ್ನಕ್ಕಿ)**
ಸಂಶೋಧನಾ ವಿದ್ಯಾರ್ಥಿ
ಅಭಿವೃದ್ಧಿ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ವಿದ್ಯಾರಣ್ಯ, ಹಂಪಿ

# ಮಾರ್ಗದರ್ಶಕರ ದೃಢೀಕರಣ ಪತ್ರ

ಶ್ರೀ ಹಣಮಂತಪ್ಪಾ ರಾಮಣ್ಣ ಚನ್ನಕ್ಕಿ ಇವರು ವಾಣಿಜ್ಯಶಾಸ್ತ್ರ ವಿಷಯದಲ್ಲಿ ಪಿಎಚ್.ಡಿ. ಪದವಿಗಾಗಿ ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ **"ಜಾತಿ, ವರ್ಗ ಮತ್ತು ಮಾರುಕಟ್ಟೆ– ಕರ್ನಾಟಕದಲ್ಲಿನ ಬಡತನ ರೇಖೆಯ ಕೆಳಗಿರುವ ಕುಟುಂಬಗಳ ಅಧ್ಯಯನ"** ಎಂಬ ವಿಷಯದ ಮಹಾಪ್ರಬಂಧವನ್ನು ಕನ್ನಡ ವಿಶ್ವವಿದ್ಯಾಲಯದ ಅಭಿವೃದ್ಧಿ ಅಧ್ಯಯನ ವಿಭಾಗಕ್ಕೆ ಸಲ್ಲಿಸುತ್ತಿದ್ದು, ಪ್ರಸ್ತುತ ಮಹಾಪ್ರಬಂಧದ ಯಾವುದೇ ಭಾಗವನ್ನು ಈ ಮೊದಲು ಬೇರೆ ಯಾವುದೇ ಉದ್ದೇಶ ಅಥವಾ ಪದವಿಗಳಿಗಾಗಿ ಸಲ್ಲಿಸಿರುವುದಿಲ್ಲವೆಂದು ದೃಢೀಕರಿಸುತ್ತೇನೆ.

ದಿನಾಂಕ:
ಸ್ಥಳ : ವಿದ್ಯಾರಣ್ಯ, ಹಂಪಿ

**(ಡಾ. ಎಂ. ಚಂದ್ರ ಪೂಜಾರಿ)**
ಪ್ರಾಧ್ಯಾಪಕರು
ಅಭಿವೃದ್ಧಿ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ವಿದ್ಯಾರಣ್ಯ, ಹಂಪಿ

# ಪರಿವಿಡಿ

# ಪ್ರಸ್ತಾವನೆ

**ಪೀಠಿಕೆ**

ಪ್ರಸ್ತುತ ಅಧ್ಯಯನವು ರಾಜ್ಯದ ಧಾರವಾಡ ಮತ್ತು ಕಲಬುರಗಿ ಜಿಲ್ಲೆಗಳಲ್ಲಿನ ಒಂದೊಂದು ಗ್ರಾಮಗಳನ್ನು ಆಯ್ಕೆಮಾಡಿಕೊಂಡು ಆ ಗ್ರಾಮಗಳಲ್ಲಿರುವ ಬಡತನ ರೇಖೆಯ ಕೆಳಗಿರುವ ಕುಟುಂಬಗಳು ತಮ್ಮ ದಿನನಿತ್ಯದ ಆಹಾರ, ಆರೋಗ್ಯ, ಶಿಕ್ಷಣ, ವಸತಿ, ಕುಡಿಯುವ ನೀರು ಮತ್ತು ಶೌಚಾಲಯಕ್ಕಾಗಿ ಇರುವ ಬೇಡಿಕೆ, ಪೂರೈಕೆ ಮತ್ತು ಕೊರತೆಯನ್ನು ತಿಳಿದುಕೊಳ್ಳುವುದಾಗಿದೆ. ಒಂದು ವೇಳೆ ಸರಕಾರವು ಕೊಡುತ್ತಿರುವ ಅನುಕೂಲತೆಗಳು ಸಾಕಾಗದೇ ಇದ್ದರೆ ಕೊರತೆಯಾಗುವ ಪ್ರಮಾಣ ಎಷ್ಟಿದೆ ಮತ್ತು ಕೊರತೆಯನ್ನು ಯಾವ ಮೂಲದಿಂದ ಭರಿಸಿಕೊಳ್ಳುತ್ತಿದ್ದಾರೆ ಎಂದು ತಿಳಿದುಕೊಳ್ಳುವುದಕ್ಕೋಸ್ಕರ ಈ ಒಂದು ಸಂಶೋಧನೆಯನ್ನು ಕೈಗೆತ್ತಿಕೊಳ್ಳಲಾಗಿದೆ.

ಬಡತನ ರೇಖೆಯು ಕೆಳಗಿರುವ ಕುಟುಂಬಗಳಿಗಾಗಿ ಸರಕಾರವು ಹಲವಾರು ಕಾರ್ಯಕ್ರಮಗಳನ್ನು ಹಾಕಿಕೊಂಡರೂ ಸಹ ಅವರಿಗೆ ಕಾರ್ಯಕ್ರಮಗಳ ಲಾಭಗಳು ಸರಿಯಾಗಿ ಮುಟ್ಟುತ್ತಿಲ್ಲ ಮತ್ತು ಇವರಿಗಾಗಿ ಇರುವ ಸವಲತ್ತುಗಳನ್ನು ಉಳ್ಳವರು ತಮ್ಮ ಪ್ರಭಾವ ಬೀರಿ ಉಪಯೋಗಿಸಿಕೊಳ್ಳುತ್ತಿದ್ದಾರೆ ಎಂದು ತಿಳಿದು ಬರುತ್ತದೆ (ಚಂದ್ರ ಪೂಜಾರಿ, ಎಂ. 2014, ಶಾರದಾ ಗೋಪಾಲ 2016, ರಮ್ಯ ವಿಜಯ ಮತ್ತು ಇತರರು 2013, ಶಿವಕುಮಾರ ಸ್ವಾಮಿ 2012, ಚಂದ್ರ ಪೂಜಾರಿ, ಎಂ. 2017, ಅಶ್ವಿನಿ ದೇಶಪಾಂಡೆ 2011). ಸರಕಾರಿ ಲೆಕ್ಕಚಾರದ ಪ್ರಕಾರ ವರ್ಷದಿಂದ ವರ್ಷಕ್ಕೆ ಬಡತನ ಕಡಿಮೆಯಾಗುತ್ತದೆ. ಸರಕಾರವು ಪ್ರಕಟಿಸುವ ಅಂಕಿ ಸಂಖ್ಯೆಯ ಪ್ರಕಾರ ಬಡತನ ರೇಖೆಯ ಕೆಳಗಿರುವ ಒಟ್ಟು ಕುಟುಂಬಗಳ ಸಂಖ್ಯೆಯು ಕಡಿಮೆಯಾಗುತ್ತಿದೆ. ಏಕೆಂದರೆ ಸರಕಾರ ಬಡತನ ನಿವಾರಣೆಯ ಕಾರ್ಯಕ್ರಮಗಳ ಮೇಲೆ ಮಾಡುವ ಖರ್ಚು ಕೂಡ ವರ್ಷದಿಂದ ವರ್ಷಕ್ಕೆ ಹೆಚ್ಚುತ್ತಲೇ ಇರುತ್ತದೆ (ಚಂದ್ರ ಪೂಜಾರಿ, ಎಂ. 2013). ಬಡತನ ನಿವಾರಣೆಯ ಕಾರ್ಯಕ್ರಮಗಳ ಮೇಲೆ ಸರಕಾರವು ಮಾಡುವ ಖರ್ಚು ಹೆಚ್ಚಾದಂತೆ ಬಡತನದ ಪ್ರಮಾಣ ಕಡಿಮೆಯಾಗಬೇಕು ಎಂದು ಸರಕಾರದ ಲೆಕ್ಕಚಾರ. ಆದರೆ ವಾಸ್ತವದಲ್ಲಿ ಹೀಗೆ ಅಂದುಕೊಂಡ ಹಾಗೆ ನಡೆಯುತ್ತಿಲ್ಲ. ಇದಕ್ಕೆ ಮೂಲ ಕಾರಣ ಮಾರುಕಟ್ಟೆಯಲ್ಲಿ ಬಡತನ ರೇಖೆಯ ಕೆಳಗಿನ ಕುಟುಂಬಗಳಿಗೆ ವ್ಯವಹರಿಸುವ ಶಕ್ತಿ (ಇದು ಹಣಕಾಸಿನ ರೂಪದಲ್ಲಿ, ವ್ಯವಹರಿಸುವ ಜ್ಞಾನದ ರೂಪದಲ್ಲಿ, ಮತ್ತು ಕೌಶಲ್ಯದ ರೂಪದಲ್ಲಿ) ಇಲ್ಲದಿರುವದೇ ದಿನದಿಂದ ದಿನಕ್ಕೆ ಬಡತನ ಹೆಚ್ಚಾಗಲು ಮೂಲ ಕಾರಣವಾಗಿದೆ. ಮುಕ್ತ ಮಾರುಕಟ್ಟೆಯಲ್ಲಿ ದಿನದಿಂದ ದಿನಕ್ಕೆ ಏರುತ್ತಿರುವ ಬೆಲೆಯನ್ನು ಕೊಟ್ಟು ಕೊಂಡುಕೊಳ್ಳಲು ಬಡತನ ರೇಖೆಯ ಕೆಳಗಿನ ಕುಟುಂಬಗಳಲ್ಲಿ ಸಾಕಷ್ಟು ಪ್ರಮಾಣದಲ್ಲಿ ಹಣವಿರುವುದಿಲ್ಲ.

ಜಾತಿ, ಬಡತನ ಮತ್ತು ಮಾರುಕಟ್ಟೆಯ ನಡುವೆ ನೇರವಾದ ಸಂಬಂಧವಿದೆ (ಈಶ್ವರನ್ ಕೆ. 1976, ಅಶ್ವಿನಿ ದೇಶಪಾಂಡೆ 2011 ಮತ್ತು ಚಂದ್ರ ಪೂಜಾರಿ 2017). ಕಾಲಕ್ಕೆ ತಕ್ಕಂತೆ ಸರಕಾರವು ಘೋಷಿಸುವ ಬಡತನ ರೇಖೆಯ ಕೆಳಗಿನ ಕುಟುಂಬಗಳ ಪಟ್ಟಿಯಲ್ಲಿ ಹೆಚ್ಚಾಗಿ ಕೆಳಜಾತಿಯವರು ಅಂದರೆ ಕೆಳವರ್ಗದವರೇ ಇದ್ದಾರೆ. ಇವರಿಗೆ ದಿನ ನಿತ್ಯದ ಜೀವನ ನಡೆಸಲು ಬೇಕಾಗುವ ಆಹಾರ, ಆರೋಗ್ಯ, ಶಿಕ್ಷಣ, ವಸತಿ ಮತ್ತು ಶುಚಿತ್ವವನ್ನು ಪಡೆದುಕೊಳ್ಳಲು ಬೇಕಾದ ಉತ್ಪಾದನಾ ಪರಿಕರಗಳಿಲ್ಲ. ಸರಕಾರವು ಒದಗಿಸುತ್ತಿರುವ ಸಹಾಯಧನ ಬಡತನ ರೇಖೆಯ ಕೆಳಗಿನ ಕುಟುಂಬಗಳಿಗೆ ಸಾಕಾಗುತ್ತಿಲ್ಲ. ಆದ್ದರಿಂದ ಕಾಲಕ್ಕೆ ತಕ್ಕಂತೆ ಕೇಂದ್ರ ಮತ್ತು ರಾಜ್ಯ ಸರಕಾರಗಳು ಈ ಕುಟುಂಬಗಳ ಜೀವನವನ್ನು ಮೇಲೆತ್ತಲು ಹಲವಾರು ಅಭಿವೃದ್ಧಿ ಕಾರ್ಯಕ್ರಮಗಳನ್ನು ಹಾಕಿಕೊಂಡಿವೆ. ಹೀಗಾಗಿ ಸರಕಾರದ ಅಭಿವೃದ್ಧಿ ಕಾರ್ಯಕ್ರಮಗಳಿಂದ ಬಡತನ ರೇಖೆಯ ಕೆಳಗಿನ ಕುಟುಂಬಗಳಿಗೆ ಜೀವನ ನಡೆಸಲು ಎಷ್ಟು ಅವಶ್ಯಕತೆ ಇರುತ್ತದೆ, ಎಷ್ಟರ ಮಟ್ಟಿಗೆ ಲಾಭವಾಗಿದೆ ಮತ್ತು ಮೂಲಭೂತ ಸೌಕರ್ಯಗಳಲ್ಲಿನ ಕೊರತೆಯ ಪ್ರಮಾಣವನ್ನು ಯಾವ ಮೂಲದಿಂದ ಸರಿದೂಗಿಸಿಕೊಳ್ಳುತ್ತಿದ್ದಾರೆ ಎಂಬುದನ್ನು ತಿಳಿದುಕೊಳ್ಳಬಹುದಾಗಿದೆ.

ಪ್ರಪಂಚದ ಎಲ್ಲಾ ದೇಶಗಳಲ್ಲಿ ಬಡವರು ಮತ್ತು ಶ್ರೀಮಂತರು (ಉಳ್ಳವರು) ಎಂದು ಜನರನ್ನು ವರ್ಗೀಕರಿಸಲ್ಪಡಲಾಗುತ್ತದೆ. ಬಡವರು ಅನೇಕ ಸಾಮಾಜಿಕ, ಆರ್ಥಿಕ, ರಾಜಕೀಯ, ಸಾಂಪ್ರದಾಯಿಕ ಮತ್ತು ಹಲವಾರು ಕಾರಣಗಳಿಂದಾಗಿ ಬಡತನಕ್ಕೆ ತಳ್ಳಲ್ಪಟ್ಟಿರುತ್ತಾರೆ. ಈ ಬಡತನವನ್ನು ಜನರ ಆದಾಯ ಮತ್ತು ಅನುಭೋಗದ ಆಧಾರದ ಮೇಲೆ ವ್ಯಾಖ್ಯಾನಿಸಲ್ಪಡುತ್ತದೆ. ಈ ರೀತಿಯಾಗಿ ಯು.ಎನ್.ಡಿ.ಪಿ. (2011)ಯ ಪ್ರಕಾರ ಭಾರತದಲ್ಲಿ ಶೇ. 37 ರಷ್ಟು ಜನಸಂಖ್ಯೆಯು ಬಡತನ ರೇಖೆಗಿಂತ ಕೆಳಗಿದ್ದಾರೆ. ಇದರಲ್ಲಿ ಶೇ.41.8%ರಷ್ಟು ಬಡವರು ಗ್ರಾಮೀಣ ಭಾರತದಲ್ಲಿದ್ದಾರೆ. ಈ ಗುಂಪಿನಲ್ಲಿ ಶೇ.80ರಷ್ಟು ಬಡವರು ಹಿಂದುಳಿದ ಜಾತಿ ಮತ್ತು ಬುಡಕಟ್ಟು ಸಮುದಾಯಕ್ಕೆ ಸೇರಿದವರಾಗಿದ್ದಾರೆ. ಇವರಲ್ಲಿ ಶೇ.90 ರಕ್ಕಿಂತ ಹೆಚ್ಚಿನ ಜನರು ಅಸಾಂಪ್ರದಾಯಿಕ, ಆರ್ಥಿಕ ವ್ಯವಸ್ಥೆಯಲ್ಲಿ ದುಡಿಯುವರು ಮತ್ತು ಇದರಲ್ಲಿ ಹೆಚ್ಚಿನವರು ಹೆಣ್ಣುಮಕ್ಕಳು. ಈ ಬಡತನವು ಕರ್ನಾಟಕ ರಾಜ್ಯದಲ್ಲಿ ರಾಷ್ಟ್ರಮಟ್ಟಕ್ಕಿಂತ ಸ್ವಲ್ಪ ಹೆಚ್ಚಾಗಿದೆ. ಇದು ಗ್ರಾಮೀಣ ಮತ್ತು ನಗರ ಪ್ರದೇಶಗಳಲ್ಲಿ ಹೆಚ್ಚು ಕಡಿಮೆಯಾಗಿರುತ್ತದೆ. ಈ ಬಡತನಕ್ಕೆ ಸಮಾಜದಲ್ಲಿರುವ ಜಾತಿ, ವರ್ಗ ಮತ್ತು ಮಾರುಕಟ್ಟೆಗಳು ತಮ್ಮದೆ ಆದ ಸಮಪಾಲಿನ ಕಾಣಿಕೆಯನ್ನು ನೀಡಿವೆ, ನೀಡುತ್ತವೆ ಮತ್ತು ಮುಂದೆಯೂ ಸಹ ನೀಡುತ್ತವೆ ಎಂದು ಹೇಳಬಹುದು. ಆದ್ದರಿಂದ ಈ ಒಂದು ಸಂಶೋಧನೆಯಲ್ಲಿ ಜಾತಿ, ವರ್ಗ, ಮಾರುಕಟ್ಟೆ ಮತ್ತು ಬಡತನ ರೇಖೆಯ ಕೆಳಗಿರುವ ಕುಟುಂಬಗಳ ನಡುವೆ ಇರುವ ಸಂಬಂಧವನ್ನು ತಿಳಿದುಕೊಳ್ಳಲು ಕೈಗೆತ್ತಿಕೊಳ್ಳಲಾಗಿದೆ.

**ಸಮಸ್ಯೀಕರಣ**

ಭಾರತ ಸರಕಾವು ದೇಶದಲ್ಲಿನ ಬಡವರನ್ನು ಲೆಕ್ಕ ಹಾಕಲು ಹಲವಾರು ಸಮಿತಿಗಳನ್ನು ರಚಿಸಿದೆ. ಸಮಿತಿಗಳು ಕೊಟ್ಟ ಸಲಹೆ ಸೂಚನೆಗಳನ್ನು ಆಧಾರವಾಗಿಟ್ಟುಕೊಂಡು ದೇಶದಲ್ಲಿರುವ ಬಡವರ ಪ್ರಮಾಣವನ್ನು ಯೋಜನಾ ಆಯೋಗವು ಪ್ರಕಟಿಸುತ್ತದೆ. ಇದಕ್ಕಾಗಿ ಇಲ್ಲಿಯವರೆಗೆ ಸರಕಾರವು ನೇಮಿಸಿದ ಸಮಿತಿಗಳ ಬಗ್ಗೆ ಸಂಕ್ಷಿಪ್ತವಾಗಿ ಕೆಳಗಿನ ಭಾಗದಲ್ಲಿ ವಿವರಿಸಲಾಗಿದೆ. ಇವುಗಳ ಸಲಹೆ ಸೂಚನೆಗಳನ್ನು ಪರಿಗಣನೆಗೆ ತೆಗೆದುಕೊಂಡು ಯೋಜನಾ ಆಯೋಗವು ಕೇಂದ್ರ ಸರಕಾರಕ್ಕೆ ಒಂದು ನಿರ್ದಿಷ್ಟವಾದ ಕಾರ್ಯಸೂಚಿಯನ್ನು ಒದಗಿಸುತ್ತದೆ. ಇದರ ನಂತರದಲ್ಲಿ ರಾಷ್ಟ್ರೀಯ ಯೋಜನಾ ಸಮಿತಿಯು ಒಂದು ವರದಿಯನ್ನು ಸಿದ್ಧಪಡಿಸಿ ಕನಿಷ್ಠ ಜೀವನ ಮಟ್ಟದ ಜೀವನವನ್ನು ನಡೆಸಲು ಬೇಕಾದ ವ್ಯಾಖ್ಯೆಯನ್ನು ಹೇಳುತ್ತದೆ. ಅಖಿಲ ಭಾರತೀಯ ಕಾಂಗ್ರೆಸ್ ನೆಹರುರವರ ಅಧ್ಯಕ್ಷತೆಯಲ್ಲಿ ಒಂದು ಸಮಿತಿಯನ್ನು ರಚಿಸಿ ಬಡತನದ ಬಗ್ಗೆ ವರದಿ ಮಾಡಲು ಹೇಳಿದಾಗ, ಸಮಿತಿಯು ಕೆಳಗಿನಂತೆ ತನ್ನ ವರದಿಯಲ್ಲಿ ಸೂಚಿಸಿತ್ತು. ಭೌತಿಕವಾಗಿ ಮತ್ತು ಸಾಮಾಜಿಕವಾಗಿ ಅತ್ಯಂತ ಸುಖಿಯಾಗಿ ಜೀವಿಸಲು ಒಂದು ನಿರ್ದಿಷ್ಟ ಸಮಯದಲ್ಲಿ ಕನಿಷ್ಠ ಮಟ್ಟದ ಜೀವನವನ್ನು ನಡೆಸಲು ಬೇಕಾಗುವ ಸೌಲಭ್ಯಗಳನ್ನು ದೊರಕಿಸಿ ಕೊಡುವದು ಸರಕಾರದ ಎಲ್ಲಾ ಅಭಿವೃದ್ಧಿ ಕಾರ್ಯಕ್ರಮಗಳ ಗುರಿಯಾಗಿರಬೇಕು ಎಂದು ಸೂಚಿಸಿದ್ದಾರೆ.

1962ರ ಒಂದು ಸೆಮಿನಾರ್‌ನಲ್ಲಿ ದೇಶದ ಅನೇಕ ಅರ್ಥಶಾಸ್ತ್ರಜ್ಞರು, ರಾಜಕೀಯ ಮುಖಂಡರು ಮತ್ತು ಅನೇಕ ಸಾಮಾಜಿಕ ಹೋರಾಟಗಾರರು ಒಂದು ಹೊಸ ಅರ್ಥವನ್ನು ನೀಡುತ್ತಾ ದೇಶದಲ್ಲಿರುವ ಎಲ್ಲಾ ನಾಗರಿಕರಿಗೆ ಒಂದು ನಿರ್ದಿಷ್ಟ ಅವಧಿಯಲ್ಲಿ ಉತ್ತಮ ಜೀವನವನ್ನು ನಡೆಸಲು ಕನಿಷ್ಠಮಟ್ಟದ ಸೌಲಭ್ಯಗಳನ್ನು ದೊರಕಿಸಿ ಕೊಡುವದು. ಗ್ರಾಮೀಣ ಭಾಗದಲ್ಲಿ ಪ್ರತಿ ತಿಂಗಳ ಆದಾಯ ರೂಪಾಯಿ 20 ಮತ್ತು ನಗರ ಪ್ರದೇಶದಲ್ಲಿ ರೂಪಾಯಿ 25ಕ್ಕಿಂತ ಕಡಿಮೆ ಇರುವವರನ್ನು ಬಡವರೆಂದು ಪರಿಗಣಿಸಿ ಸಂವಿಧಾನದ ಪ್ರಕಾರ ಆರೋಗ್ಯದ ಮತ್ತು ಶಿಕ್ಷಣ ವೆಚ್ಚವನ್ನು ರಾಜ್ಯವು ವಹಿಸಿಕೊಳ್ಳಬೇಕು ಎಂದು ತಿಳಿಸಿತ್ತು. ಇದು ಅಭಿವೃದ್ದಿಯ ಲಾಭವನ್ನು ಪಡೆಯದೆ ಇರುವವರನ್ನು ಕೇಂದ್ರೀಕರಿಸಿಕೊಂಡಿರಬೇಕು ಎಂದು ಲೇಖಕರು ಉಲ್ಲೇಖಿಸಿದ್ದಾರೆ (ವೈದ್ಯನಾಥನ್, 2001).

ಮತ್ತೆ ಯೋಜನಾ ಆಯೋಗವು ಜುಲೈ 1977ರಲ್ಲಿ ಪ್ರೊಫೆಸರ್ ವೈ.ಕೆ.ಅಲಘರವರ ಅಧ್ಯಕ್ಷತೆಯಲ್ಲಿ 'ಪ್ರೊಜೆಕ್ಸನ್ ಆಫ್ ಮಿನಿಮಂ ನೀಡ್ಸ್ ಆ್ಯಂಡ್ ಎಫೆಕ್ಟೀವ್ಹ್ ಕನಜುಂಚನ್

ಡಿಮ್ಯಾಂಡ್' ಎಂದು ಒಂದು ಟಾಸಕ್ ಪೋರ್ಸ್‌ನ್ನು ರಚಿಸುತ್ತದೆ. ಈ ಸಮಿತಿಯು 1979 ಜನೇವರಿಯಲ್ಲಿ ತನ್ನ ವರದಿಯನ್ನು ಯೋಜನಾ ಆಯೋಗಕ್ಕೆ ಸಲ್ಲಿಸುತ್ತದೆ ಮತ್ತು ಯೋಜನಾ ಆಯೋಗವು ಅದೇ ತಿಂಗಳಿನಲ್ಲಿ ಸಮಿತಿಯ ಎಲ್ಲಾ ಶಿಫಾರಸ್ಸುಗಳನ್ನು ಅಂಗೀಕರಿಸುತ್ತದೆ. ಈ ಸಮಿತಿಯು ಅಂದಾಜು ಕ್ಯಾಲರಿ ತೆಗೆದುಕೊಳ್ಳುವ ಆಧಾರದ ಮೇಲೆ ದೇಶದ ಗ್ರಾಮೀಣ ಮತ್ತು ನಗರದ ಜನಸಂಖ್ಯೆಯಾಧರಿತ ಬಡತನದ ರೇಖೆಯನ್ನು ನಿರ್ಧರಿಸುತ್ತದೆ. 2400 ಕ್ಯಾಲರಿ ತಲಾ ಆದಾಯ ಪ್ರತಿ ದಿನ ಗ್ರಾಮೀಣ ಮತ್ತು 2100 ಕ್ಯಾಲರಿ ತಲಾ ಆದಾಯ ಪ್ರತಿ ದಿನ ನಗರ ಪ್ರದೇಶಕ್ಕೆ ನಿಗದಿಪಡಿಸಲಾಯಿತು. ಈ ಕ್ಯಾಲರಿಗಳನ್ನು ಆಧಾರವಾಗಿಟ್ಟುಕೊಂಡು ಗ್ರಾಮೀಣ ಮತ್ತು ನಗರ ಪ್ರದೇಶದಲ್ಲಿನ ಬಡತನ ರೇಖೆಯನ್ನು ನಿರ್ಧರಿಸಲಾಯಿತು. ಪ್ರತಿ ವರ್ಷದ ಬಡತನ ರೇಖೆಯು ಕ್ಯಾಲರಿಯು ಪ್ರತಿ ವರ್ಷದ ಬೆಲೆಯ ಮೇಲೆ ನಿರ್ಧರಿಸಲಾಗುತ್ತದೆ. ಪುನಃ ಯೋಜನಾ ಆಯೋಗವು ಬಡತನದ ಪ್ರಮಾಣ ಮತ್ತು ರೇಖೆಯನ್ನು ಪುನರ್ ಪರಿಶೀಲಿಸಲು ನುರಿತ ತಜ್ಞರ ಸಮಿತಿಯನ್ನು ಪ್ರೊಫೆಸರ್ ಲಕಡಾವಾಲಾರವರ ಅಧ್ಯಕ್ಷತೆಯಲ್ಲಿ 1989ರ ಸಪ್ಟೆಂಬರ್‌ನಲ್ಲಿ ರಚಿಸಲಾಯಿತು. ಈ ಸಮಿತಿಯು 1993ರಲ್ಲಿ ತನ್ನ ವರದಿಯನ್ನು ಸರಕಾರಕ್ಕೆ ಸಲ್ಲಿಸಿತ್ತು. ಆದರೆ ಸರಕಾರವು ಮಾರ್ಚ 1997ರಲ್ಲಿ ಈ ಸಮಿತಿಯ ವರದಿಯನ್ನು ಅಧಿಕೃತವಾಗಿ ಅಂಗೀಕರಿಸಿ ಬಡತನದ ರೇಖೆಯನ್ನು ಮತ್ತು ಪ್ರಮಾಣವನ್ನು ಘೋಷಣೆ ಮಾಡಲಾಯಿತು. ಈ ಸಮಿತಿಯು ಯಾವುದೇ ರೀತಿಯ ಬಡತನ ರೇಖೆಯನ್ನು ಹೇಳದ ಅಲಘ ಸಮಿತಿಯು ಹೇಳಿದ ಮಾನದಂಡವನ್ನೇ ಆಧಾರವಾಗಿಟ್ಟುಕೊಂಡು ಬೆಲೆಯ ಆಧಾರದ ಮೇಲೆ ಗ್ರಾಮೀಣ ಮತ್ತು ನಗರ ಪ್ರದೇಶ ಮತ್ತು ಆಯಾ ರಾಜ್ಯಗಳ ಅನುಸಾರವಾಗಿ ಬಡತನದ ರೇಖೆಯನ್ನು ಮರು ಸೃಷ್ಟಿಸಿತ್ತು.

ಇಷ್ಟಕ್ಕೆ ತೃಪ್ತಿ ಪಡದ ಕೇಂದ್ರ ಸರಕಾರವು ಮತ್ತೆ ಡಿಸೆಂಬರ್ 2005ರಲ್ಲಿ ಪ್ರೊಫೆಸರ್ ಸುರೇಶ ತೆಂಡೂಲಕರ್ ಅವರ ಅಧ್ಯಕ್ಷತೆಯಲ್ಲಿ ಒಂದು ನುರಿತ ತಜ್ಞರ ಸಮಿತಿಯನ್ನು ರಚಿಸುತ್ತದೆ. ಈ ಸಮಿತಿಯು 1993-94ರ ಎನ್‌ಎಸ್‌ಎಸ್‌ಒನ 50ನೇ ಸುತ್ತಿನ, 1999-2000ರ 55ನೇ ಸುತ್ತಿನ ಮತ್ತು 2004-05ರ 61ನೇ ಸುತ್ತಿನ ಗ್ರಾಹಕರ ವೆಚ್ಚದ ಮಾಹಿತಿಯನ್ನು ಬಳಸಿಕೊಂಡು ಲಕಡಾವಾಲ್ ಸಮಿತಿಯ ಕಾರ್ಯ ವಿಧಾನವನ್ನು ಬಳಸಿಕೊಂಡು ಒಂದು ಬಡತನದ ರೇಖೆಯನ್ನು ನೀಡಿತ್ತು. ಆದರೆ ಈ ಸಮಿತಿಯು ತನ್ನದೆ ಆದ ಯಾವುದೇ ರೀತಿಯ ಹೊಸ ವಿಧಾನವನ್ನು ಬಳಸಿಕೊಂಡಿಲ್ಲ ಎಂದು ಹೇಳಬಹುದು. ಈ ಸಮಿತಿಯ ಪ್ರಕಾರ ದೇಶದಲ್ಲಿ ಮತ್ತು ಎಲ್ಲಾ ರಾಜ್ಯಗಳಲ್ಲಿ ಜನಸಂಖ್ಯೆಯನ್ನು ಅವರ ಪ್ರತಿ ತಿಂಗಳ ತಲಾ ಆದಾಯದ ಮೇಲೆ ಬಡತನದ ರೇಖೆಯನ್ನು ನಿರ್ಧರಿಸಿದ್ದಾರೆ. ಈ ಸಮಿತಿಯ ಪ್ರಕಾರ 2004-05ರಲ್ಲಿ ಕರ್ನಾಟಕದ ಗ್ರಾಮೀಣ ಭಾಗದಲ್ಲಿ ರೂಪಾಯಿ 418ಕ್ಕಿಂತ ಕಡಿಮೆ ಇರುವವರನ್ನು, 2009-10ರಲ್ಲಿ ಇದು ರೂಪಾಯಿ

629 ಮತ್ತು 20110–12ರಲ್ಲಿ ಇದು ರೂಪಾಯಿ 902ಕ್ಕಿಂತ ಕಡಿಮೆ ತಿಂಗಳ ತಲಾ ಆದಾಯ ಇರುವವರನ್ನು ಬಡವರೆಂದು ಕರೆಯಬಹುದು ಎಂದು ಹೇಳಲಾಗಿದೆ. ಇನ್ನು ನಗರ ಪ್ರದೇಶದಲ್ಲಿ ಇದು ರೂಪಾಯಿ 588, 908 ಮತ್ತು 1089 ಅನುಕ್ರಮವಾಗಿ 2004–05, 2009–10 ಮತ್ತು 2011–12ರಲ್ಲಿ ತಿಂಗಳ ತಲಾ ಆದಾಯದ ಬಗ್ಗೆ ಸಮಿತಿಯು ಉಲ್ಲೇಖಿಸಿದೆ. ಇದನ್ನು ಪರಿಶೀಲಿಸಲು ಕೇಂದ್ರ ಸರಕಾರವು ಪ್ರೊಫೆಸರ್ ರಂಗರಾಜನ್ ರವರ ಅಧ್ಯಕ್ಷತೆಯಲ್ಲಿ ಒಂದು ಪುನರ್ ಪರಿಶೀಲನಾ ಸಮಿತಿಯನ್ನು ನೇಮಿಸಿತ್ತು. ಈ ಸಮಿತಿಯು ಕ್ಯಾಲರಿ, ಪ್ರೋಟಿನ್, ಕೊಬ್ಬಿನಾಂಶ ಮತ್ತು ದಿನದ ತಲಾ ಆದಾಯವನ್ನು ಪರಿಗಣಿಸಿಕೊಂಡು ಹೊಸ ರೀತಿಯ ಬಡತನದ ರೇಖೆಯನ್ನು ಗ್ರಾಮೀಣ, ನಗರ ಪ್ರದೇಶಗಳಿಗೆ ಬೇರೆ ಬೇರೆಯಾಗಿ ವಿಶ್ಲೇಷಿಸಿದೆ. ಈ ಸಮಿತಿಯ ಮತ್ತೊಂದು ವಿಶೇಷತೆ ಎಂದರೆ ವಯಸ್ಸು, ಲಿಂಗ ಮತ್ತು ಕೆಲಸದ ಆಧಾರದ ಮೇಲೆ ಕ್ಯಾಲರಿಯನ್ನು ಪರಿಗಣಿಸಿದೆ (ರಂಗರಾಜನ್, 2014).

ಚಿಬ್ಬಾರ (1986) ರವರು ಒಂದು ದಶಕದಲ್ಲಿ (1945 ರಿಂದ 1955) ಡೆಹರಾಡೂನ್ ಪಟ್ಟಣದಲ್ಲಿನ ಅಥವಾ ನಗರದಲ್ಲಿನ ಮಧ್ಯಮ ವರ್ಗದ ಜನರ ಉದ್ಯೋಗದ ವಿವರ ಮತ್ತು ಬದಲಾವಣೆಯನ್ನು ಕುರಿತು ಸಂಶೋಧನೆಯನ್ನು ಕೈಗೊಂಡಿದ್ದರು. ಈ ಅಧ್ಯಯನದಲ್ಲಿ ಆರ್ಥಿಕ ಮತ್ತು ಸಮಾಜಶಾಸ್ತ್ರದ ವ್ಯಾಪ್ತಿಯನ್ನು ಮೀರಿ ಕ್ಷೇತ್ರಕಾರ್ಯವನ್ನು ಕೈಗೊಂಡು ಸಮಾಜೋ–ಆರ್ಥಿಕ ಪ್ರಶ್ನಾವಳಿಯನ್ನು ಬಳಸಿಕೊಂಡು ಸಮೀಕ್ಷೆಯ ಮೂಲಕ ಮಾಹಿತಿಯನ್ನು ಸಂಗ್ರಹಿಸಲಾಗಿ ಮತ್ತು ಇದರ ಜೊತೆಗೆ ಗುಣಾತ್ಮಕ ವಿಧಾನದ ಕೇಸ್‌ಸ್ಟಡಿ ತಂತ್ರವನ್ನು ಆಳವಡಿಸಿಕೊಳ್ಳಲಾಗಿತ್ತು. ಕೇವಲ ಪರಿಣ್ಮಾತಕ ವಿಧಾನದ ಮೂಲಕ ಸಂಗ್ರಹಿಸಿದ ಮಾಹಿತಿಯ ಆಧಾರದ ಮೇಲೆ ಯಾವುದೇ ರೀತಿಯ ಸಂಬಂಧಗಳನ್ನು ಹೇಳಲು ಸಾಧ್ಯವಿಲ್ಲವೆಂಬುದನ್ನು ಅರಿತ ಸಂಶೋಧಕರು ಗುಣಾತ್ಮಕ ವಿಧಾನದಿಂದ ಪಡೆದ ಮಾಹಿತಿಗಳೊಂದಿಗೆ ವಿಶ್ಲೇಷಣೆಯನ್ನು ಮಾಡಿದ್ದಾರೆ. ಈ ಒಂದು ಸಂಶೋಧನೆಯು ಕೇವಲ ನಗರ ಪ್ರದೇಶಕ್ಕೆ ಮಾತ್ರ ಸೀಮಿತವಾಗಿದ್ದು ಇದರಿಂದ ಹಲವಾರು ಜಾತಿ ಮತ್ತು ವರ್ಗಗಳಿರುವ ಗ್ರಾಮೀಣ ಪ್ರದೇಶವನ್ನು ಕಡೆಗಣಿಸಲಾಗಿದೆ. ಒಬ್ಬ ವ್ಯಕ್ತಿಯು ಜಾತಿ ಪದ್ಧತಿಯಲ್ಲಿನ ಹಲವಾರು ವರ್ಗಗಳನ್ನು ದಾಟಿ ಮುಂದೆ ಬಂದಿರುವುದು ಮತ್ತು ಒಂದೇ ಭಾಷೆಯ ಪ್ರಾಂತದಲ್ಲಿ ಕೈಕೊಳ್ಳಲಾಗಿದೆ. ಸಂಶೋಧನೆಗೆ ಸಿದ್ಧಪಡಿಸಲಾದ ಪ್ರಶ್ನಾವಳಿಯನ್ನೂ ಎರಡು ಭಾಗಗಳನ್ನಾಗಿ ವಿಂಗಡಿಸಲಾಗಿತ್ತು ಮೊದಲನೆ ಭಾಗದಲ್ಲಿ– ಮಧ್ಯಮ ವರ್ಗದವರು ಜಾತಿ, ಶಿಕ್ಷಣ, ಕೌಟುಂಬಿಕ ಹಿನ್ನಲೆ ಮತ್ತು ಜೀವನ ಮಟ್ಟದ ವಿವರವನ್ನು, ಮತ್ತೊಂದರಲ್ಲಿ ಉದ್ಯೋಗಗಳ ರಚನೆ, ಬದಲಾವಣೆ, ಬದಲಾವಣೆಗೆ ಕಾರಣಗಳನ್ನು ಒಳಗೊಂಡಿತ್ತು. ಅಧ್ಯಯನದಲ್ಲಿ ಬರುವ ಎಲ್ಲ ಜಾತಿಗಳನ್ನು ಒಟ್ಟು 9 ಗುಂಪುಗಳನ್ನಾಗಿ ವಿಂಗಡಿಸಿದ್ದರೆ, ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ಖತ್ರಿ, ಕಯಾತ್ಸ್ ಇತರರು (ಹಿಂದೂಗಳಲ್ಲಿನ ಇತರೇ ಜಾತಿಗಳಾದ

ಕೀರದಾನ, ಅರೋರಾ, ಜಾಟ್ಸ್ ಮುಂತಾದವುಗಳು) ಹರಿಜನ, ಮುಸ್ಲಿಂ, ಕ್ರಿಶ್ಚಿಯನ್. ಜಾತಿಯತೆಯು ಭಾರತದ ಆರ್ಥಿಕತೆ ರಚನೆಯ ಮೇಲೆ ಮತ್ತು ಅಭಿವೃದ್ಧಿಯಲ್ಲಿ, ಏಣಿ-ಶ್ರೇಣಿಗಳ ರಚನೆಯಲ್ಲಿ ಬಹುಮಟ್ಟಿನ ಪರಿಣಾಮ ಬೀರಿದೆ. ಸಂಪ್ರದಾಯ, ಜಾತಿ ಮತ್ತು ವರ್ಗಾಧರಿತ ಉದ್ಯೋಗಗಳು ಹೊಸ ಆರ್ಥಿಕ, ಸಾಮಾಜಿಕ ಮತ್ತು ರಾಜಕೀಯ ಬದಲಾವಣೆಯ ಒತ್ತಡಕ್ಕೆ ಒಳಗಾಗುತ್ತವೆ ಎಂದು ಲೇಖಕರು ಅಭಿಪ್ರಾಯಪಟ್ಟಿದ್ದಾರೆ.

ಮುಖರ್ಜಿಯವರು (1999) "ಕಾಸ್ಟ ಇನ್ ಇಟಸೆಲಫ್, ಕಾಸ್ಟ ಮತ್ತು ಕ್ಲಾಸ್ ಆರ್ ಕಾಸ್ಟ ಇನ್ ಕ್ಲಾಸ್" ಎಂಬ ಲೇಖನದಲ್ಲಿ ಜಾತಿಯ ವರ್ಗೀಕರಣವನ್ನು 'ಶುದ್ಧ ಮತ್ತು ಅಶುದ್ಧ' ಮತ್ತು ಸಂಸ್ಕೃತಿಕ ಸಂಬಂಧಗಳ ಆಧಾರದ ಮೇಲೆ ನೋಡಲಾಗಿದೆ. ಬ್ರಿಟೀಷ ಆಡಳಿತದ ಭಾರತದಲ್ಲಿ ಜಮೀನ್ದಾರ, ದೊಡ್ಡ ಭೂ ಒಡೆಯರು, ಸಗಟು ವ್ಯಾಪಾರಸ್ಥರು, ಲೇವಾದೇವಿ ವ್ಯಾಪಾರಸ್ಥರು ಮುಂತಾದವರನ್ನು ಮೇಲ್ಜಾತಿಗೆ ಸೇರಿದವರೆಂದು ರೈತರನ್ನು, ಜಾತಿ ಆಧಾರಿತ ಕಸಬುದಾರರನ್ನು ಅಥವಾ ಕಲೆಗಾರರಾದ ಬಡಿಗತನ, ಕುಂಬಾರಿಕೆ, ಕಂಬಾರಿಕೆ, ಇತ್ಯಾದಿ, ಚಿಲ್ಲರೆ ವ್ಯಾಪಾರಸ್ಥರನ್ನು ಮಧ್ಯಮ ವರ್ಗಕ್ಕೆ ಸೇರಿದವರೆಂದು ಮತ್ತು ಸಣ್ಣ ಮತ್ತು ಅತಿಸಣ್ಣ ರೈತರನ್ನು ಮತ್ತು ಭೂರಹಿತ ಕಾರ್ಮಿಕರನ್ನು ಕೆಳಜಾತಿ ಮತ್ತು ಕೆಳವರ್ಗಕ್ಕೆ ಸೇರಿದವರೆಂದು ವಿಗಂಡಿಸಲಾಗಿತ್ತು. ಈ ರೀತಿಯಾಗಿ ವಸಾಹತುಶಾಹಿ ಭಾರತದಲ್ಲಿ ಜಾತಿ ವ್ಯವಸ್ಥೆಯು ವರ್ಗ ವ್ಯವಸ್ಥೆಯನ್ನಾಗಿ ಅರ್ಥೈಸಲಾಗಿತ್ತು ಎಂದು ಉಲ್ಲೇಖಿಸಿದ್ದಾರೆ. ಇನ್ನೂ ಮುಂದೆ ಹೋಗಿ ಎಲ್ಲಾ ಮೇಲ್ಜಾತಿಯರು ಮೇಲವರ್ಗಕ್ಕೆ ಸೇರಿದವರಲ್ಲ ಮತ್ತು ಎಲ್ಲಾ ಮಧ್ಯಮ ಜಾತಿಯವರು ಮಧ್ಯಮ ವರ್ಗಕ್ಕೆ ಸೇರಿದವರಲ್ಲ, ಎಲ್ಲಾ ಕೆಳಜಾತಿಯವರು ಕೆಳವರ್ಗಕ್ಕೆ ಸೇರಿದವರಲ್ಲ, ಎಲ್ಲ ಜಾತಿಯವರು ಎಲ್ಲ ವರ್ಗಗಳಲ್ಲಿರಬಹುದು, ರೈತರನ್ನು ಮತ್ತು ಜಾತಿ ಆಧಾರಿತ ಕಲೆಗಾರಿಕೆ ವೃತ್ತಿಪರರನ್ನು ಕೆಳಮಟ್ಟದಲ್ಲಿ ನೋಡಲಾಗಿದೆ ಮತ್ತು ಪ್ರಸ್ತುತದಲ್ಲಿ ಸಹ ಕೆಳ ದರ್ಜೆಯಲ್ಲಿ ನೋಡುತ್ತಿದ್ದಾರೆ ಎಂದು ವಿಶ್ಲೇಷಿಸಿದ್ದಾರೆ.

ಡ್ಯಾನಿಯಲ್ ಆ್ಯಂಡ್ ಆಲಿಸ್ ತ್ರೋನರ್, (1965) "ಟೈಪ್ಸ ಆಫ್ ಎಂಪ್ಲಾಯರ್ - ಲೇಬರ್ ರಿಲೆಷನಸಿಪ್ ಇನ್ ಇಂಡಿಯನ್ ಅಗ್ರಿಲಕ್ಚರ್" ಎಂಬ ಲೇಖನದಲ್ಲಿ ಭಾರತದಲ್ಲಿರುವ ಕೃಷಿ ಕೆಲಸಗಾರರನ್ನು ಈ ಕೆಳಗಿನಂತೆ ಗುಂಪುಗಳಾಗಿ ವಿಂಗಡಿಸುತ್ತಾರೆ. ಲೇಖಕರು ಕಾರ್ಮಿಕರನ್ನು ಪ್ರಮುಖವಾಗಿ ಎರಡು ಗುಂಪುಗಳಾಗಿ ವಿಂಗಡಿಸಿದ್ದಾರೆ. ಉಚಿತ ಕಾರ್ಮಿಕರು ಅಂದರೆ ಕಾರ್ಮಿಕರು ಕೆಲಸ ಮಾಡಿದಾಗ ಯಾವುದೇ ರೀತಿಯ ಹಣಕಾಸಿನ ಅಥವಾ ವಸ್ತುಗಳನ್ನು ಪಡೆಯುವುದಿಲ್ಲ. ಹಣ ಅಥವಾ ಯಾವುದೇ ಪ್ರತಿಫಲವನ್ನು ಪಡೆದು ಕೆಲಸ ಮಾಡುವುದು. ಉಚಿತವಲ್ಲದ ಕಾರ್ಮಿಕರನ್ನು ನಾಲ್ಕು ಗುಂಪುಗಳಾಗಿ ವಿಂಗಡಿಸುತ್ತಾರೆ. ಮೊದಲನೆಯದು ಒಂದು ವರ್ಷ ಅಥವಾ ಅದಕ್ಕಿಂತ ಹೆಚ್ಚು ಅವಧಿಗೆ ನಿಯುಕ್ತಿಗೊಂಡವರು. ಎರಡನೆಯದು

ಒಂದು ಬೆಳೆಯ ಅವಧಿಗೆ ಅಂದರೆ ರಾಬಿ ಅಥವಾ ಕಾರಿಫ್ ಋತುಮಾನಕ್ಕೆ ತೆಗೆದುಕೊಂಡವರು. ಮೂರನೆಯದು ಅಲ್ಪಾವಧಿಗೆ ಸಂಬಂಧಪಟ್ಟದ್ದು, ಬಿತ್ತುವ ಅಥವಾ ರಾಶಿಯ ಋತುಮಾನಕ್ಕೆ ಈ ಕಾರ್ಮಿಕರನ್ನು ತೆಗೆದುಕೊಂಡಿರುತ್ತಾರೆ. ನಾಲ್ಕನೆಯದು ದಿನಗೂಲಿ ಕೆಲಸಗಾರರು. ಮೊದಲನೆಯ ಪ್ರಕಾರದಲ್ಲಿ ಮತ್ತೆ ಮೂರು ಗುಂಪುಗಳಾಗಿ ವಿಂಗಡಿಸುತ್ತಾರೆ. ಇದರಲ್ಲಿ ಪೂರ್ಣಾವಧಿಯ ಒಂದು ವರ್ಷ ಅಥವಾ ಅದಕ್ಕಿಂತ ಹೆಚ್ಚಿನ ದಿನಗಳು ಭೂ ಒಡೆಯನಿಗೆ ಬೇಕಾದಾಗ ಕೆಲಸ ಮಾಡುವವರು, ಕೇವಲ ಕರೆದಾಗ (ಬೆಕ್ಕ್ ಆಂಡ್ ಕಾಲ್) ಬಂದು ಕೆಲಸ ಮಾಡುವವರು (ಇವರು ಕೇವಲ ಒಬ್ಬ ಭೂ ಒಡೆಯನಿಗೆ ಮಾತ್ರ ಸೀಮಿತವಾಗಿರುತ್ತಾರೆ, ಭೂ ಒಡೆಯನ ಒತ್ತಾಯ ಪೂರ್ವಕವಾಗಿ ಕೆಲಸ ಮಾಡುವವರು ಇಲ್ಲಿ ಕೆಲಸ ಮಾಡಿದಾಗ ಕೂಲಿಯನ್ನು ಪಡೆಯಬಹುದು ಅಥವಾ ಪಡೆಯದೆ ಇರಬಹುದು). ಈ ರೀತಿಯಾಗಿ ಸಂಶೋಧಕರು ಭಾರತದ ವ್ಯವಸಾಯ ಕ್ಷೇತ್ರದಲ್ಲಿ ಆಚರಣೆಯಲ್ಲಿರುವ ಕೃಷಿ ಕೆಲಸಗಾರರ ವರ್ಗಗಳನ್ನು ವಿಂಗಡಿಸಿದ್ದಾರೆ. ಈ ಪ್ರಕಾರಗಳು ಕಾಲ ಮತ್ತು ಹಣ ಪಡೆಯುವುದರ ಮೇಲೆ ನಿರ್ಧಾರವಾಗಿವೆ. ಈ ಎಲ್ಲಾ ಪ್ರಕಾರಗಳನ್ನು ಇಂದಿನ ಆಧುನೀಕರಣ ಮತ್ತು ಜಾಗತೀಕರಣ ಯುಗದಲ್ಲಿಯೂ ಸಹ ಭಾರತದ ಗ್ರಾಮೀಣ ಭಾಗದಲ್ಲಿ ಕಾಣಬಹುದಾಗಿದೆ.

ಹಂಮ್ಜಾ ಆಲ್ವಿ (1975) ರವರು ತಮ್ಮ ಲೇಖನ "ಇಂಡಿಯಾ ಆಂಡ್ ದಿ ಕೋಲೋನಿಯಲ್ ಮೋಡ ಆಫ್ ಪ್ರೊಡಕ್ಷನ" ದಲ್ಲಿ ಸ್ವಾತಂತ್ರ್ಯ ನಂತರದ ಎರಡು ದಶಕಗಳಲ್ಲಿ ಭಾರತದ ವ್ಯವಸಾಯ ಕ್ಷೇತ್ರದಲ್ಲಿ ಬಹಳ ನಿರ್ಣಾಯಕವಾದ ಊಳಿಗಮಾನ್ಯ ಸ್ಥಿತಿಯಿಂದ ಬಂಡವಾಳಶಾಹಿ ಪದ್ಧತಿಗೆ ಬದಲಾವಣೆಯಾಯಿತು ಆದರೆ ಈ ಬದಲಾವಣೆಯ ಜೊತೆಗೆ ಉತ್ಪಾದನೆ ವಿಧಾನ ಅಥವಾ ಪರಿಕರವಾದ ಭೂಮಿಯ ಪ್ರಶ್ನೆಯು ಬಹಳ ಪ್ರಮುಖವಾದ ಪಾತ್ರ ವಹಿಸುತ್ತದೆ. ಇದು ಭಾರತದ ರಾಜಕೀಯದಲ್ಲಿ ಬದಲಾವಣೆಯಾಗುತ್ತಿರುವ ಅಥವಾ ಉದಯಿಸುತ್ತಿರುವ ಹೊಸ ವರ್ಗದೊಂದಿಗೆ ಸಂಬಂಧವಿದೆ ಎಂದು ತಿಳಿಸುತ್ತದೆ. ಸ್ವತಂತ್ರ ಭಾರತದ ಎಲ್ಲಾ ರಾಜ್ಯಗಳಲ್ಲಿ ಕಾಂಗ್ರೆಸ್ ಪಕ್ಷವು ಪ್ರಬಲವಾದ ಆಡಳಿಡ ಪಕ್ಷವಾಗಿತ್ತು. ಆದ್ದರಿಂದ 1950ರ ದಶಕದ ಕೊನೆಯ ವರ್ಷಗಳಲ್ಲಿ ವ್ಯವಸಾಯಕ್ಕೆ ಸಂಬಂಧಪಟ್ಟ ಯೋಜನೆಗಳಲ್ಲಿ ಸ್ವಲ್ಪಮಟ್ಟಿಗೆ ಬದಲಾವಣೆ ಆಗತೊಡಗಿತ್ತು. ಸ್ವಾತಂತ್ರ ಪೂರ್ವದಲ್ಲಿ ಭಾರತೀಯ ರಾಷ್ಟ್ರೀಯ ಕಾಂಗ್ರೆಸ್ ಪಕ್ಷವು ದೊಡ್ಡ ಜಮಿನುದ್ದಾರರನ್ನು ಹೊರತುಪಡಿಸಿ ಸಮಾಜದಲ್ಲಿರುವ ಎಲ್ಲಾ ಮಧ್ಯಮ ಮತ್ತು ಕೆಳವರ್ಗಗಳನ್ನು ತನ್ನ ಬಿಗಿ ಹಿಡಿತದಲ್ಲಿ ಇಟ್ಟುಕೊಂಡಿತ್ತು ಎಕೆಂದರೆ ಇವರೆಲ್ಲರೂ ಬ್ರಿಟಿಷ ಆಡಳಿತದ ಜೊತೆಗೆ ಕೂಡಿಕೊಂಡಿದ್ದರು. ಆದರೆ ಕಾಂಗ್ರೆಸ್ ಪಕ್ಷದ ನಾಯಕತ್ವವು ಸಂಪೂರ್ಣವಾಗಿ ವೃತ್ತಿಪರ ಮಧ್ಯಮ ವರ್ಗದವರ ಕೈಯಲ್ಲಿತ್ತು ಏಕೆಂದರೆ ಮಧ್ಯಮ ವರ್ಗದವರಿಗೆ ಹೊಸದಾಗಿ ಹುಟ್ಟುಕೊಳ್ಳುತ್ತಿರುವ ಆರ್ಥಿಕವಾಗಿ ಸದೃಢವಾದ ಸಮುದಾಯದ ಬೆಂಬಲವಿತ್ತು. ಕಾಂಗ್ರೆಸ್ ನಾಯಕತ್ವವು ಹೊಸ ರಾಜಕೀಯ

ಕೊಂಡಿಗಳನ್ನು ಒತ್ತಾಯಪೂರ್ವಕವಾಗಿ ಸ್ವಾತಂತ್ರ್ಯಪೂರ್ವದಲ್ಲಿದ್ದ ಸ್ಥಳೀಯವಾಗಿ ಅಥವಾ ಕೆಳಮಟ್ಟದಲ್ಲಿ ಬಲಾಡ್ಯರಾಗಿದ್ದ ಅಧಿಕಾರವನ್ನು ಹೊಂದಿದ ವರ್ಗವನ್ನು ಉತೇಜಿಸಿತ್ತು. ಸ್ವಾತಂತ್ರ್ಯದ ನಂತರದ ಭಾರತದಲ್ಲಿ ಅನೇಕ ಭೂ ಒಡೆಯರು ಮತ್ತು ಜಮೀನುದಾರರು ಹಲವಾರು ಕಾಯಿದೆಗಳಿಂದ ಬಹಳ ಪ್ರಮುಖವಾಗಿ ಭೂಸುಧಾರಣೆಯಿಂದ ತಮ್ಮನ್ನು ತಾವು ರಕ್ಷಣೆ ಮಾಡಿಕೊಳ್ಳುವುದಕೋಸ್ಕರ ಕಾಂಗ್ರೆಸ್ ಪಕ್ಷವನ್ನು ಸೇರಿಕೊಂಡು ಚುನಾವಣೆಗಳನ್ನು ಎದುರಿಸಿ ನೀತಿ ನಿಯಮಗಳನ್ನು ರೂಪಿಸುವ ಶಾಸಕಾಂಗಕ್ಕೆ ಪ್ರವೇಶ ಪಡೆದರು. ಭೂ ಸುಧಾರಣೆ ಕಾಯಿದೆಯನ್ನು ತಮ್ಮ ಇಚ್ಛೆಗೆ ತಕ್ಕಂತೆ ರೂಪಿಸಿಕೊಂಡರು. ಇದು ರಾಷ್ಟ್ರೀಯ ಮಟ್ಟದಲ್ಲಿ ಅಲ್ಲದೆ ಇನ್ನು ಕೆಳ ಮಟ್ಟದಲ್ಲಿ ಗ್ರಾಮೀಣ ಭಾಗದಲ್ಲಿ ಬಲಾಢ್ಯರಾದವರ ಕೈಗೆ ಇನ್ನೂ ಹೆಚ್ಚಿನ ಅಧಿಕಾರವನ್ನು ಪಡೆಯಲು ಸಹಾಯಕವಾಯಿತು. ಭೂ ಸುಧಾರಣೆ ಕಾಯಿದೆಯಿಂದ ಆಗಬಹುದಾದ ನಷ್ಟವನ್ನು ತಪ್ಪಿಸಿಕೊಂಡರು ಮತ್ತು ಬಲಾಢ್ಯರು ಮತ್ತು ಭೂ ಒಡೆಯರು ಸೇರಿಕೊಂಡು ಒಂದು ಹೊಸ ವರ್ಗವನ್ನು ಸೃಷ್ಟಿಸಿಕೊಂಡರು ಎಂದು ಅಭಿಪ್ರಾಯ ಪಟ್ಟಿದ್ದಾರೆ.

ಈಶ್ವರನ್. ಕೆ. (1976)ರವರು ತಮ್ಮ ಸಂಶೋಧನೆಯನ್ನು ಧಾರವಾಡ ಜಿಲ್ಲೆಯಲ್ಲಿರುವ ಶಿವಪುರ ಎಂಬ ಗ್ರಾಮದಲ್ಲಿ 1961ರಲ್ಲಿ ಕೈಗೊಂಡಿದ್ದರು. ಈ ಗ್ರಾಮದಲ್ಲಿ ಜಾತಿ ಶ್ರೇಣಿ ಆಧಾರದ ಮೇಲೆ ವ್ಯವಸ್ಥಿತವಾಗಿರುವ 13 ಜಾತಿಗಳಲ್ಲಿ 40 ಉಪಜಾತಿಗಳಿದ್ದವು. ಪ್ರಬಲ ಜಾತಿಯಾದ ಲಿಂಗಾಯತರು ಬಹುಪಾಲು ಭೂ ಒಡೆಯರಾಗಿದ್ದರು. ಭೂ ರಹಿತರಾದ ಮುಸಲ್ಮಾನರು ಹಿಂದೂ ಮತ್ತು ಜೈನರ ನಡುವೆ ಸಮತೋಲನ ತರುವ ಪಾತ್ರವನ್ನು ವಹಿಸುತ್ತಿದ್ದರು. ಗ್ರಾಮದಲ್ಲಿ ಒಟ್ಟು 631 ಕುಟುಂಬಗಳಲ್ಲಿ ಶೇ.40%ರಷ್ಟು ಭೂರಹಿತರಾಗಿದ್ದರು. ಗ್ರಾಮದ ಅರ್ಥವ್ಯವಸ್ಥೆಯು ಮೂಲತ: ವ್ಯವಸಾಯ ಪ್ರಧಾನವಾಗಿತ್ತು ಈ ವ್ಯವಸಾಯಕ್ಕೆ ಅನುಕೂಲವಾಗಿರುವಂತೆ ಸಂಪ್ರದಾಯಿಕ ರೀತಿಯಲ್ಲಿ ಕಟ್ಟಿರುವ ಮನೆಗಳು ಮಾಲಿಕರ ಆರ್ಥಿಕ ವರ್ಗಕ್ಕೆ ಅನುಗುಣವಾಗಿದ್ದವು. ವ್ಯವಸಾಯಗಾರರನ್ನು ಅವರು ಹೊಂದಿರುವ ಭೂಮಿಯ ಆಧಾರದ ಮೇಲೆ ಮೇಲ್ಮಟ್ಟದವರು (25 ಎಕರೆ ಮತ್ತು ಹೆಚ್ಚಿನ ಭೂಮಿಯನ್ನು ಪಡೆದವರು), ಮಧ್ಯಮ ವರ್ಗದವರು (12–24 ಎಕರೆ ಭೂಮಿಯನ್ನು ಹೊಂದಿರುವವರು) ಮತ್ತು ಕೆಳವರ್ಗದವರು (12 ಎಕರೆಗಿಂತ ಕಡಿಮೆ ಭೂಮಿಯನ್ನು ಹೊಂದಿರುವವರು) ಎಂದು ಮೂರು ಗುಂಪುಗಳಾಗಿ ವಿಂಗಡಿಸಿದ್ದರು. ಇನ್ನು ಮಾರುಕಟ್ಟೆಯ ವಿಷಯಗಳನ್ನು ಗಮನಿಸಿದಾಗ ಹಾಲನ್ನು ಧಾರವಾಡದ ಹೋಟೆಲಗಳಿಗೆ ಮಾರುತ್ತಿದ್ದರು ಮತ್ತು ಈ ಮಾರಾಟವನ್ನು ಮಾಡಲು ಕೆಲವು ದಲಾಲರು ಗ್ರಾಮದಲ್ಲಿ ಇದ್ದರು. ಹಣ್ಣುಗಳನ್ನು ವಿಶೇಷವಾಗಿ ಮಾವಿನ ಹಣ್ಣುಗಳನ್ನು ದೂರದ ಮುಂಬಯಿಗೆ ಮಾರಾಟ ಮಾಡುತ್ತಿದ್ದರು. ಹೆಚ್ಚಿನ ಹಣ್ಣುಗಳು ಹುಬ್ಬಳಿ–ಧಾರವಾಡ ಮಾರುಕಟ್ಟೆಯಲ್ಲಿ ಮಾರಟವಾಗುತ್ತಿದ್ದವು. ಸಂಗ್ರಹಿಸಲ್ಪಟ್ಟ ಹಳೆಯ ದವಸ ಧಾನ್ಯಗಳನ್ನು ಸುಗ್ಗಿಯ

ಕಾಲದಲ್ಲಿ ಅವುಗಳನ್ನು ಪೇಟೆಯಲ್ಲಿ ಮಾರುತ್ತಿದ್ದರು ಮತ್ತು ಪ್ರತಿ ವಾರವೂ ಸಂತೆಯಲ್ಲಿ ದವಸ ಧಾನ್ಯಗಳನ್ನು ಸ್ವಲ್ಪ ಸ್ವಲ್ಪ ಮಾರಿ ಮನೆಗೆ ಅಗತ್ಯವಾಗಿ ಬೇಕಾಗುವ ಸಾಮಾನುಗಳನ್ನು ಕೊಳ್ಳುತ್ತಿದ್ದರು.

ಶ್ರೀನಿವಾಸನ್ (1976) ಜಾತಿಯ ಶ್ರೇಣೀಕರಣವನ್ನು ಜನರ ಆಹಾರ, ಉದ್ಯೋಗ, ಸಂಪ್ರದಾಯ ಮತ್ತು ಧರ್ಮಾಚರಣೆಯನ್ನು ಪ್ರಮುಖವಾಗಿ ಇಟ್ಟುಕೊಂಡು ಮೇಲ್ಜಾತಿ ಮತ್ತು ಕೆಳಜಾತಿಗಳೆಂದು ವಿಂಗಡಿಸಿದ್ದಾರೆ. ಇದಲ್ಲದೆ ಕುಂಟುಬಗಳು ಹೊಂದಿದ ಒಟ್ಟು ಭೂಮಿಯ ಆಧಾರದ ಮೇಲೆ ಶ್ರೇಣೀಕರಣಗಳನ್ನಾಗಿ ವಿಂಗಡಿಸುತ್ತಾರೆ. ಹೆಚ್ಚು ಭೂಮಿ ಹೊಂದಿದವರು ಮೇಲ್ವರ್ಗಕ್ಕೆ, ಕಡಿಮೆ ಭೂಮಿಯನ್ನು ಹೊಂದಿದವರು ಕೆಳವರ್ಗದವರೆಂದು ಮತ್ತು ಯಾವುದೇ ಭೂಮಿಯನ್ನು ಹೊಂದದೆ ಇರುವವರನ್ನು ಭೂರಹಿತ ಕಾರ್ಮಿಕರೆಂದು ಕರೆದಿದ್ದಾರೆ. ಹೆಚ್ಚಿನ ಭೂಮಿಯನ್ನು ಹೊಂದಿದವರು ಬ್ರಾಹ್ಮಣ ಮತ್ತು ಒಕ್ಕಲಿಗ ಜಾತಿಗೆ ಸೇರಿದವರು. ರೈತರು ಮತ್ತು ಭೂರಹಿತ ಕಾರ್ಮಿಕರೆಲ್ಲರೂ ಕೆಳಜಾತಿಗೆ ಸೇರಿದವರೆಂದು ಅಭಿಪ್ರಾಯಪಡುತ್ತಾರೆ. ರೈತರು ಭೂರಹಿತ ಕಾರ್ಮಿಕರನ್ನು ಮತ್ತು ಹಿಡುವಳಿದಾರರನ್ನು ಭೂ ಒಡೆಯರು ಯಾವ ರೀತಿಯಾಗಿ ಶೋಷಣೆಯನ್ನು ಮಾಡುತ್ತಿದ್ದರು ಎಂಬುದಕ್ಕೆ ಒಂದು ಉದಾಹರಣೆಯನ್ನು ನೀಡುತ್ತಾರೆ. ಭೂ ಒಡೆಯರಿಗೆ ಕೊಡಬೇಕಾದ ಬಾಡಿಗೆಯ ರೂಪದಲ್ಲಿರುವ ದವಸ ಧಾನ್ಯಗಳನ್ನು ರಾಶಿಯಾದನಂತರ ತೆಗೆದುಕೊಳ್ಳದೇ ಮಾರುಕಟ್ಟೆಯಲ್ಲಿ ಬೆಲೆ ಹೆಚ್ಚಳವಾದಾಗ ತೆಗೆದುಕೊಂಡು ಮಾರಾಟ ಮಾಡಿ ಹೆಚ್ಚಿನ ಲಾಭವನ್ನು ಮಾಡಿಕೊಳ್ಳುತ್ತಿದ್ದರು ಮತ್ತು ಒಂದು ವೇಳೆ ಬೆಲೆ ಹೆಚ್ಚಳವಾಗದಿದ್ದರೆ ಹಿಡುವಳಿದಾರಲ್ಲಿಯೇ ಸಂಗ್ರಹವಾಗಿಟ್ಟು ಅದಕ್ಕೆ ಏನಾದರೂ ಕ್ರಿಮಿ ಕೀಟಗಳು ತಗುಲಿ ನಷ್ಟವಾದರೆ ಅದನ್ನು ಸಹಿತ ಹಿಡುವಳಿದಾರರಿಂದಲೇ ಭರಿಸಿಕೊಳ್ಳತ್ತಿದ್ದರು ಮತ್ತು ಇದರಲ್ಲಿ ಒಂದು ದುರದುದ್ದೇಶ ಏನೆಂದರೆ ರಾಶಿಯಾದ ತಕ್ಷಣ ತೆಗೆದುಕೊಂಡರೆ ದವಸ ಧಾನ್ಯಗಳು ಸ್ವಲ್ಪ ಮಟ್ಟಿಗೆ ಹಸಿಯಾದ್ದುದರಿಂದ ಕಡಿಮೆ ಪ್ರಮಾಣದಲ್ಲಿರುತ್ತವೆ ಸ್ವಲ್ಪ ದಿನಗಳ ನಂತರ ತೆಗೆದುಕೊಂಡರೆ ದವಸ ಧಾನ್ಯಗಳು ಒಣಗಿ ಅವುಗಳು ಹೆಚ್ಚಿನ ಪ್ರಮಾಣದಲ್ಲಿ ಬರುತ್ತವೆ ಎಂದು ವಿವರಿಸಿದ್ದಾರೆ.

ಜಿ. ತಿಮ್ಮಯ್ಯಾ (1983) ರವರು ತಮ್ಮ ಲೇಖನ "ಕಾಸ್ಟ ಆಂಡ್ ಕ್ಲಾಸ ಇನ್ ಕರ್ನಾಟಕ" ರಾಜ್ಯದಲ್ಲಿನ ಜನರ ಸಾಮಾಜಿಕ ಮತ್ತು ರಾಜಕೀಯ ಸ್ಥಿತಿಗಳನ್ನು ಒಟ್ಟು ಮೂರು ಹಂತಗಳನ್ನಾಗಿ ವಿಂಗಡಿಸುತ್ತಾರೆ. ಮೊದಲನೆಯದಾಗಿ ಮೈಸೂರು ಸಂಸ್ಥಾನದಲ್ಲಿನ ಬ್ರಾಹ್ಮಣ ಸಾಮಾಜಿಕ, ಆರ್ಥಿಕ ಮತ್ತು ಆಡಳಿತಾತ್ಮಕ ಕ್ಷೇತ್ರಗಳಲ್ಲಿ ಹಿಡಿತದ ವಿರುದ್ಧ ಬ್ರಾಹ್ಮಣರೇತರು ಮಾಡಿದ ಹೋರಾಟ, ಎರಡನೆಯದು 1950ರಿಂದ ಪ್ರಾರಂಭಗೊಂಡ ರಾಜ್ಯ ಏಕೀಕರಣದ ಸಂದರ್ಭದಲ್ಲಿ ಬಲಾಢ್ಯ ಬ್ರಾಹ್ಮಣರೇತರ ಜಾತಿಗಳಾದ ಒಕ್ಕಲಿಗ ಮತ್ತು ಲಿಂಗಾಯತರ ಉದಯ, ಮೂರನೆಯದು 1970ರಲ್ಲಿ ಆದ ಬಲಾಢ್ಯರಲ್ಲದ ಬ್ರಾಹ್ಮಣರೇತರ ಹಿಂದುಳಿದ ಅಥವಾ ಅಲ್ಪ ಜಾತಿಗಳನ್ನು

ಒಟ್ಟುಗೂಡಿಸಿ ಒಕ್ಕಲಿಗ ಮತ್ತು ಬ್ರಾಹ್ಮಣರ ದಬ್ಬಾಳಿಕೆಯ ವಿರುದ್ಧ ದೇವರಾಜ ಅರಸರ ಹೋರಾಟದ ಕಾಲವೆಂದು ವಿಂಗಡಿಸುತ್ತಾರೆ. ಜಾತಿ ಮತ್ತು ವರ್ಗಗಳ ನಡುವಿನ ಸಂಬಂಧವನ್ನು ತಿಳಿದುಕೊಳ್ಳುವುದಕ್ಕೆ ವಿವಿಧ ಜಾತಿಯ ಗುಂಪುಗಳು ಮತ್ತು ಆದಾಯದ ವಿವಿಧ ಹಂತಗಳನ್ನು ಸಂಖ್ಯಾಶಾಸ್ತ್ರೀಯವಾಗಿ ನೋಡುವುದು ಮತ್ತು ಜಾತಿ ಮತ್ತು ಉದ್ಯೋಗದ ಸಂಬಂಧದಿಂದ ತಿಳಿದುಕೊಳ್ಳಬೇಕೆಂದು ಸಹ ಅಭಿಪ್ರಾಯಪಡುತ್ತಾರೆ. ಈ ಲೇಖನದಲ್ಲಿ ವರ್ಗವನ್ನು ವಿಶೇಷವಾಗಿ ಜನರು ತಿಳಿಸಿದ ತಮ್ಮ ವಾರ್ಷಿಕ ಆದಾಯದ ಮೇಲೆ ವಿಂಗಡಿಸಲಾಗಿದೆ. ಇದಕ್ಕೆ ಇವರು 1974–75ರಲ್ಲಿ ಐಸಾಕ್ ಸಂಸ್ಥೆಯವರು ಮಾಡಿದ ಸಮೀಕ್ಷೆಯ ಮಾಹಿತಿಯನ್ನು ಬಳಸಿಕೊಂಡು ಸಂಬಂಧಗಳನ್ನು ನೋಡಿದ್ದಾರೆ.

ಮೊದಲನೆಯದಾಗಿ ಲೇಖಕರು ಜಾತಿ ಮತ್ತು ಆದಾಯದ ಸಂಬಂಧವನ್ನು ಕಂಡುಕೊಳ್ಳುವುದಕ್ಕಾಗಿ ಹಿಂದೂ ಧರ್ಮವನ್ನು ಐದು ಸಮಾಜೋ–ಆರ್ಥಿಕ–ರಾಜಕೀಯ ಗುಂಪುಗಳನ್ನಾಗಿ ವಿಂಗಡಿಸಿದ್ದಾರೆ. ಒಂದು–ಆರ್ಥಿಕ–ಸಾಮಾಜಿಕವಾಗಿ ಇವರು ಯಾವುದೇ ರಾಜಕೀಯ ನಿರ್ಧಾರಗಳನ್ನು ತೆಗೆದುಕೊಳ್ಳುವಷ್ಟು ಸಂಖ್ಯೆಯನ್ನು ಹೊಂದಿರದ ಮತ್ತು ಬಲಾಢ್ಯರಾಗಿದ್ದ ಬ್ರಾಹ್ಮಣ ಜಾತಿಗಳು, ಎರಡು–ಆರ್ಥಿಕ–ಸಾಮಾಜಿಕವಾಗಿ ಬಲಾಢ್ಯರಾಗಿದ್ದು ಜನಸಂಖ್ಯೆಯಲ್ಲಿಯು ಕೂಡ ಪ್ರಬಲರಾಗಿ ರಾಜಕೀಯ ನಿರ್ಧಾರದಲ್ಲಿ ಪ್ರಮುಖವಾದ ನಿರ್ಧಾರವನ್ನು ನಿರ್ಧರಿಸಲು ಪರಿಣಾಮವನ್ನು ಬೀರುವ ಜಾತಿಗಳಾದ ಒಕ್ಕಲಿಗ, ರೆಡ್ಡಿ, ಲಿಂಗಾಯತ ಮತ್ತು ಕುಂಚಿಟಿಗ ಜಾತಿಗಳು, ಮೂರು ಆರ್ಥಿಕ–ಸಾಮಾಜಿಕವಾಗಿ ದುರ್ಬಲರಾಗಿದ್ದು ಮತ್ತು ಜನಸಂಖ್ಯೆಯಲ್ಲಿ ಕಡಿಮೆ ಇದ್ದು ರಾಜಕೀಯ ನಿರ್ಧಾರವನ್ನು ನಿರ್ಧರಿಸುವಷ್ಟು ಜನಸಂಖ್ಯೆಯು ಇರುವ ಜಾತಿಗಳಾದ ಕುರುಬ, ಬಣಜಿಗ, ಗೊಲ್ಲ, ದರ್ಜಿ, ನಾಯಕ, ಬೆಸ್ತ, ಅಕ್ಕಸಾಲಿಗರು, ಕಂಬಾರ, ಹಡಪದ, ಕುಂಬಾರ, ತಿಗಳ, ಗಾಣಿಗ ಮತ್ತು ನಾಯ್ಡು, ನಾಲ್ಕನೆಯದಾಗಿ ಆರ್ಥಿಕವಾಗಿ, ಸಾಮಾಜಿಕವಾಗಿ ಶೋಷಣೆಗೆ ಒಳಗಾಗಿರುವ ಜಾತಿಗಳು ಮತ್ತು ಇವರ ಸಂಖ್ಯೆಯು ರಾಜಕೀಯವಾಗಿ ಪ್ರಭಾವ ಬೀರುವಷ್ಟು ಇದ್ದರೂ ಕೂಡಾ ಅಸಹಾಯಕ ಜಾತಿಗಳಾದ ಪರಿಶಿಷ್ಟ ಪಂಗಡಗಳು ಮತ್ತು ಜಾತಿಗಳು, ಐದನೆಯದಾಗಿ ಇನ್ನಿತರ ರಾಜಕೀಯ, ಸಾಮಾಜಿಕ ಸ್ಥಿತಿಗತಿಗಳನ್ನು ನಿರ್ಧರಿಸಲು ಆಗದೆ ಇರುವ ಜಾತಿಗಳು. ಈ ರೀತಿಯಾಗಿ ಜಾತಿಗಳನ್ನು ಅವರ ಸಾಮಾಜಿಕ, ಆರ್ಥಿಕ ಮತ್ತು ರಾಜಕೀಯದಲ್ಲಿ ಪ್ರಭಾವ ಬೀರುವ ಸಂಖ್ಯೆ ಆಧಾರದ ಮೇಲೆ ವಿಂಗಡಿಸಿದ್ದಾರೆ. ಈ ರೀತಿಯಾಗಿ ವಿಂಗಡಣೆ ಮಾಡುವಾಗ ಅವರ ಆದಾಯಕ್ಕೆ ಅನುಗುಣವಾಗಿ ಒಟ್ಟು ಎಂಟು ಗುಂಪುಗಳನ್ನಾಗಿ ವಿಂಗಡಿಸಿದ್ದಾರೆ. ರೂಪಾಯಿ 0–250, 250–500, 500–800, 800–1000, 1000–1200, 1200–1500, 1500–3000 ಮತ್ತು 3000 ಕ್ಕಿಂತ ಹೆಚ್ಚಿನ ಆದಾಯಕ್ಕನುಗುಣವಾಗಿ ವಿಂಗಡಿಸಿ ವಿಶ್ಲೇಷಣೆ ಮಾಡಿದ್ದಾರೆ. ಹೆಚ್ಚಾಗಿ ಬ್ರಾಹ್ಮಣರು ಗ್ರಾಮೀಣ

ಮತ್ತು ನಗರ ಪ್ರದೇಶದಲ್ಲಿ 800-3000 ಸಾವಿರ ರೂಪಾಯಿವರೆಗಿನ ಆದಾಯದ ಗುಂಪಿಗೆ ಸೇರಿರುತ್ತಾರೆ. ಈ ಪ್ರಮಣವು ನಗರದಲ್ಲಿ ಹೆಚ್ಚಾಗಿದೆ. ಬಲಾಢ್ಯ ಜಾತಿಯಾಗಿದ್ದು ಕೂಡ ಈ ಗುಂಪಿನಲ್ಲಿ ಬಹಳಷ್ಟು ಜನರು ಬಡವರಾಗಿದ್ದಾರೆ, ಇವರ ಆದಾಯವು ರೂ.800/- ಕ್ಕಿಂತ ಕಡಿಮೆ ಇದೆ. ಕೊನೆಯ ಗುಂಪಿನವರು ಇವರಿಗಿಂತಲು ತೀರ ಬಡವರಾಗಿದ್ದಾರೆ ಎಂದು ಜಿ.ತಿಮ್ಮಯ್ಯ (1983)ರವರು ಅಭಿಪ್ರಾಯಪಡುತ್ತಾರೆ.

ಜಿ.ತಿಮ್ಮಯ್ಯ (1983)ರವರ ಪ್ರಕಾರ ಗ್ರಾಮೀಣ ಪ್ರದೇಶದ ಬ್ರಾಹ್ಮಣ ಜಾತಿಯಲ್ಲಿ ಯಾರೂ ಕೂಡ ದರಿದ್ರರಲ್ಲ ಅಥವಾ ಎಲ್ಲರಿಗೂ ಒಂದು ರೀತಿಯಾದ ಜೀವನ ಆಧಾರವಿದೆ. ಆದರೆ ನಗರ ಪ್ರದೇಶದಲ್ಲಿ ಶೇ.28ರಷ್ಟು ಜನರು ಬಲಾಢ್ಯರಾದ ಸಂಖ್ಯೆಯಲ್ಲಿ ಹೆಚ್ಚಿರುವ ಜಾತಿಗೆ ಸೇರಿದವರಲ್ಲಿ ಶೇ.50ರಷ್ಟು ಜನರು ಇನ್ನಿತರ ಜಾತಿಗಳಲ್ಲಿ ಗ್ರಾಮೀಣ ಭಾಗದಲ್ಲಿ ಜೀವನಕ್ಕೆ ಯಾವುದೇ ರೀತಿಯ ಜೀವನಾಧಾರವಿಲ್ಲದೆ ಜೀವನ ನಡೆಸುತ್ತಿದ್ದಾರೆಯೆಂದು ಲೇಖಕರು ಉಲ್ಲೇಖಿಸುತ್ತಾರೆ. ಆದ್ದರಿಂದ ಗ್ರಾಮೀಣ ಭಾಗದಲ್ಲಿ ಆರ್ಥಿಕ, ಸಾಮಾಜಿಕ ಮತ್ತು ರಾಜಕೀಯವಾಗಿ ಬಲಾಢ್ಯರಾದ ಜಾತಿಗಳು ಪ್ರಬಲವಾಗಿದ್ದು ನಗರ ಪ್ರದೇಶದಲ್ಲಿ ಸಂಖ್ಯೆಯಲ್ಲಿ ಕಡಿಮೆ ಇರುವ ಬ್ರಾಹ್ಮಣ ಜಾತಿಯವರು ಆರ್ಥಿಕವಾಗಿ ಬಲಾಢ್ಯರಾಗಿದ್ದಾರೆ ಎಂದು ಹೇಳುತ್ತಾರೆ. ಈ ರೀತಿಯಾಗಿ ವರ್ಗವು ಮತ್ತು ಜಾತಿಯ ಅಂತಸ್ತು ಕರ್ನಾಟಕದ ಗ್ರಾಮೀಣ ಮತ್ತು ನಗರ ಪ್ರದೇಶಗಳಲ್ಲಿ ಒಂದಕ್ಕೊಂದು ಸಂಬಂಧಗಳನ್ನು ಹೊಂದಿವೆ ಎಂದು ಈ ಮೇಲಿನ ಮಾಹಿತಿಯಿಂದ ವಿಶ್ಲೇಷಿಸುತ್ತಾರೆ. ಈ ಸಂಬಂಧವನ್ನು ಜಾತಿ ಮತ್ತು ಉದ್ಯೋಗದ ಆಧಾರದ ಮೇಲೆ ವಿವರಿಸುವುದರೊಂದಿಗೆ ಈ ಕೆಳಗಿನಂತೆ ಹೇಳುತ್ತಾರೆ. ಈಗಾಗಲೇ ಹೇಳಿದ ಐದು ಜಾತಿ-ವರ್ಗಗಳನ್ನು ವಿವಿಧ ಸಾಂಪ್ರದಾಯಿಕ ಕಸಬುಗಳೊಂದಿಗೆ ಸಂಬಂಧವಿದೆ ಎಂದು ಹೇಳುತ್ತಾ ನಗರ ಪ್ರದೇಶದಲ್ಲಿರುವ ಬ್ರಾಹ್ಮಣ ಜಾತಿಯವರು ಹೆಚ್ಚಿನವರು ವೃತ್ತಿಪರರು ಅಥವಾ ತಾಂತ್ರಿಕ ಅರ್ಹತೆಗಿಟ್ಟಿಸಿದವರು, ಬಲಾಢ್ಯರಾಗಿದ್ದು ಹೆಚ್ಚಿನ ಸಂಖ್ಯೆಯಲ್ಲಿರುವ ಜಾತಿಯವರು ಮತ್ತು ಬಲಾಢ್ಯರಲ್ಲದ ಸಂಖ್ಯೆಯಲ್ಲಿ ಕಡಿಮೆ ಇರುವ ಜಾತಿಗಳು ಸಾಗುವಳಿ ಮಾಡುವರು ಮತ್ತು ಕಾರ್ಮಿಕರಾಗಿದ್ದಾರೆ. ಶೋಷಣೆಗೆ ಒಳಗಾದ ಜಾತಿಯಲ್ಲಿ ಕೃಷಿ ಮತ್ತು ಕೃಷಿಯೇತರ ಕಾರ್ಮಿಕರಾಗಿದ್ದು ಆದರೂ ಕೂಡ ನಗರ ಪ್ರದೇಶದಲ್ಲಿ ಹೆಚ್ಚಿನ ಕಾರ್ಮಿಕರು ಎಲ್ಲಾ ರೀತಿಯಿಂದ ಬಲಾಢ್ಯ ಜಾತಿಯ ಗುಂಪಿಗೆ ಸೇರಿದವರು ಎಂದು ಲೇಖಕರು ಉಲ್ಲೇಖಿಸುತ್ತಾರೆ.

ಕೊನೆಯದಾಗಿ ಜಿ.ತಿಮ್ಮಯ್ಯ (1983)ರವರು ತಮ್ಮ ಲೇಖನದಲ್ಲಿ ಈ ಕೆಳಗಿನಂತೆ ಹೇಳುತ್ತಾರೆ, ಮೇಲ್ಜಾತಿಯವರು ಉನ್ನತ ಸ್ಥಾನಮಾನದ ಕೆಲಸವನ್ನು ಮಾಡುತ್ತಾರೆ ಮತ್ತು ಕೆಳಜಾತಿಯವರು ಕೆಳಮಟ್ಟದ ಕೆಲಸಗಳನ್ನು ಮಾಡುತ್ತಾರೆ ಎಂದು ಹೇಳುತ್ತಾ ಈ ರೀತಿಯಾಗಿ ಇರಲು ಕೆಳ ಜಾತಿಯವರಿಗೆ ಯಾವುದೇ ರೀತಿಯಾದ ತರಬೇತಿ ಮತ್ತು ಶಿಕ್ಷಣ ಇರುವುದಿಲ್ಲ ಎಂದು ಸಹ

ಉಲ್ಲೇಖಿಸುತ್ತಾರೆ. ಈ ಅಸಮಾನತೆಯನ್ನು ಹೋಗಲಾಡಿಸಬೇಕಾದರೆ ಗ್ರಾಮೀಣ ಮತ್ತು ನಗರ ಪ್ರದೇಶದಲ್ಲಿ ಆದಾಯ ಗಳಿಸುವ ಆಸ್ತಿಗಳ ಮೇಲೆ ಕಡಿವಾಣ ಹಾಕಿ ಸಾಮಾಜಿಕವಾಗಿ ಹಿಂದುಳಿದ ವರ್ಗಗಳಿಗೆ ಶಿಕ್ಷಣವನ್ನು ಕೊಡುವುದರ ಮೂಲಕ ಮತ್ತು ವೃತ್ತಿಪರ ಮತ್ತು ತಾಂತ್ರಿಕ ಹುದ್ದೆಗಳನ್ನು ಸಾಮಾಜಿಕವಾಗಿ ಹಿಂದುಳಿದ ಜಾತಿಯವರಿಗೆ ಮೀಸಲಿಡುವುದರ ಮೂಲಕ ಅವರ ಆರ್ಥಿಕ ಸ್ಥಿತಿಗತಿಗಳು ಸುಧಾರಿಸುತ್ತವೆ ಮತ್ತು ಪಾಲಿಸಿಗಳನ್ನು ರೂಪಿಸುವಾಗ ಈ ಎಲ್ಲಾ ಅಂಶಗಳನ್ನು ಗಮನದಲ್ಲಿಟ್ಟುಕೊಂಡು ಪಾಲಸಿಗಳನ್ನು ರೂಪಿಸಬೇಕೆಂದು ಲೇಖಕರು ತಮ್ಮ ಅಭಿಪ್ರಾಯವನ್ನು ವ್ಯಕ್ತಪಡಿಸುತ್ತಾರೆ.

ರಾಜಶೇಖರ್ (2005) ರವರು ತಮ್ಮ ಪುಸ್ತಕ "ಜಾತಿ: ರಾಷ್ಟ್ರದೊಳಗೊಂದು ರಾಷ್ಟ್ರ"ದಲ್ಲಿ ಈ ರೀತಿಯಾಗಿ ಹೇಳುತ್ತಾರೆ. ಭಾರತವೆಂಬುದೊಂದು ಜಾತಿಗಳ ದೇಶ, ಇಲ್ಲಿ ಅಗಣಿತ ಸಮಯದಿಂದಲೂ ಜಾತಿ ಅಸ್ತಿತ್ವದಲ್ಲಿದೆ. ಜಾತಿಯೆಂಬುವುದು ಮಾನಸಿಕ ವಿಷಯ ಹಾಗೂ ಮೇಲ್ಪದರದ್ದು. ಈ ಮೇಲ್ಪದರಿನ ಜಾತಿಯನ್ನು ಆರ್ಥಿಕ ಅಭಿವೃದ್ಧಿಯ ಮುಖಾಂತರ ತೊಡೆದು ಹಾಕಬಹುದೆಂದು ಎಲ್ಲಾ ರಾಜಕೀಯ ಪಕ್ಷಗಳ ನಾಯಕರು, ರಾಷ್ಟ್ರೀಯವಾದಿಗಳು, ಸಮಾಜವಾದಿಗಳು, ಕಮ್ಯುನಿಸ್ಟರು ಹಾಗೂ ಹಿಂದೂ ನಾಜಿಗಳು ನಂಬಿದ್ದರು ಮತ್ತು ಇತರರನ್ನು ನಂಬಿಸಿದ್ದರು. ನಮ್ಮ ಯೋಜನಾಕರ್ತರು ಹಾಗೂ ಆಳುವ ಜನ ಈ ನಂಬಿಕೆಯ ಆಧಾರದಲ್ಲಿ ನೂರಾರು "ಸಂಕ್ಷೇಮ ಕಾರ್ಯಕ್ರಮಗಳನ್ನು" ರೂಪಿಸಿ ಸಾವಿರಾರು ಕೋಟಿ ರೂಪಾಯಿಗಳನ್ನು ಅದರಲ್ಲಿ ಹೂಡಿದರು. ತಮ್ಮ ಮಾಧ್ಯಮ ಬಲ ಹಾಗೂ ಧನಬಲದಿಂದ ಸುಸಜ್ಜಿತರಾದ ಅವರು 'ಜಾತಿ' ಎಂಬುವುದರ ಸಾರ್ವಜನಿಕ ಪ್ರಸ್ತಾಪವೇ ಸಂಕುಚಿತವಾದ ಹಾಗೂ ರಾಷ್ಟ್ರ ವಿರೋಧಿಯಾದ ನಿಲುವು ಎಂಬಂತಹ ವಾತಾವರಣವನ್ನು ನಿರ್ಮಾಣ ಮಾಡಿದರು. ಯಾರನ್ನಾದರು ಆತನ ಜಾತಿಯ ಬಗ್ಗೆ ಕೇಳುವುದೆಂಬುವುದು 'ಅನಾಗರಿಕ' ಎಂದು ಅವರು ಹೇಳಿದರು. ತಮ್ಮ ಸಮಾಜವಾದಿ ಘೋಷಣೆಗಳಾದ ಭೂಸುಧಾರಣೆ, ರಾಷ್ಟ್ರೀಕರಣ, 20 ಅಂಶಗಳ ಕಾರ್ಯಕ್ರಮ, ಗರೀಬೀ ಹಠಾವೋ ಮತ್ತು ಆರ್ಥಿಕ ಕಾರ್ಯಕ್ರಮಗಳ ಮುಖಾಂತರ ಕೆಳವರ್ಗದವರನ್ನು ಮೂರ್ಖರನ್ನಾಗಿಸಿದ್ದರು ಎಂದು ಹೇಳಿರುತ್ತಾರೆ.

ದಾಂಡೇಕರ್ ಮತ್ತು ರಾಥ್ (1971) ರವರು ತಮ್ಮ ಲೇಖನ "ಪಾವರ್ಟಿ ಇನ್ ಇಂಡಿಯಾ ಡೈಮೇನ್ಸ್‌ಸ ಆಂಡ್ ಟ್ರೆಡ್ಸ್" ನಲ್ಲಿ ಗ್ರಾಮೀಣ ಭಾಗದಲ್ಲಿ ಕನಿಷ್ಠ ರೂಪಾಯಿ.180/- ಮತ್ತು ನಗರ ಪ್ರದೇಶದಲ್ಲಿ ರೂ.270/- ವಾರ್ಷಿಕ ತಲಾ ಆದಾಯವಿರುವವರನ್ನು ನಿಗದಿ ಪಡಿಸಿ 1960-61ರಲ್ಲಿ ಶೇ.40%ರಷ್ಟು ಗ್ರಾಮೀಣ ಹಾಗೂ ಶೇ.50/-ನಗರ ಜನಸಂಖ್ಯೆಯು ಬಡತನ ರೇಖೆಗಿಂತ ಕೆಳಗೆ ಇರುವವರು ಎಂದು ಅಂದಾಜು ಮಾಡಿದ್ದಾರೆ. ಇದು 1968-69ರಲ್ಲಿ ಕ್ರಮವಾಗಿ ರೂ.324/- ಮತ್ತು ರೂ.486/- ವಾರ್ಷಿಕ ತಲಾ ಆದಾಯದ ಮೇಲೆ ಲೆಕ್ಕಾ

ಹಾಕಿದ್ದಾರೆ. ಇದು ಕೂಡ ಶೇ.40% ಮತ್ತು ಶೇ.50/– ರಷ್ಟು ಗ್ರಾಮೀಣ ಮತ್ತು ನಗರ ಪ್ರದೇಶದಲ್ಲಿನ ಜನಸಂಖ್ಯೆಯು ಬಡತನ ರೇಖೆಗಿಂತ ಕೆಳಗಿದ್ದಾರೆ ಎಂದು ಹೇಳುತ್ತಾರೆ. ಇದರಿಂದ ಬಡತನ ರೇಖೆಗಿಂತ ಕೆಳಗಿರುವ ಜನರು ಸುಮಾರು 177ಮಿಲಿಯನ್ ಇದ್ದು ಬಡವರು 1968–69ರಲ್ಲಿ 215.5 ಮಿಲಿಯನ್ ವರೆಗೆ ಹೆಚ್ಚಾಗಿತ್ತು ಎಂದು ಅಭಿಪ್ರಾಯಪಟ್ಟಿದ್ದಾರೆ. ಇಲ್ಲಿ ಲೇಖಕರು ಜನರ ತಲಾ ಆದಾಯದ ಮೇಲೆ ಬಡತನ ರೇಖೆಯನ್ನು ವ್ಯಾಖ್ಯಾನಿಸಿದ್ದಾರೆ. ಕೇವಲ ತಲಾ ಆದಾಯ ಒಂದೇ ಬಡತನಕ್ಕೆ ಕಾರಣವಾಗಿರುವುದಿಲ್ಲ, ಸಾಂಪ್ರದಾಯಿಕ, ಜಾತಿ ಪದ್ಧತಿಯನ್ನು ಗಣನೆಗೆ ತಗೆದುಕೊಂಡಿಲ್ಲ. ಒಂದು ವೇಳೆ ಈ ಎಲ್ಲ ಆಂಶಗಳನ್ನು ಗಣನೆಗೆ ತೆಗೆದುಕೊಂಡರೆ ಇನ್ನೂ ಉತ್ತಮವಾದ ಬಡತನದ ವ್ಯಾಖ್ಯೆಯನ್ನು ನೀಡಬಹುದಾಗಿತ್ತು. ಆದ್ದರಿಂದ ಈ ಸಂಶೋಧನೆಯಲ್ಲಿ ಈ ಎಲ್ಲ ಅಂಶಗಳನ್ನು ಗಮನದಲ್ಲಿಟ್ಟುಕೊಂಡು ಸಂಶೋಧನೆಯನ್ನು ಮಾಡಲಾಗುತ್ತದೆ.

ಮಾರ್ಟಿನ್ ರೇನ್ (1970), ತಮ್ಮ "ಪ್ರಾಬ್ಲಮ್ ಇನ್ ದಿ ಡೆಫಿನೇಷನ್ ಆಂಡ್ ಮೆಜರಮೆಂಟ್ ಆಫ್ ಪಾವರ್ಟಿ" ಲೇಖನದಲ್ಲಿ ಬಡತನದ ವ್ಯಾಖ್ಯೆ ಮತ್ತು ಅಳತೆಯು ನಾವು ಉಪಯೋಗಿಸುವ ಅಥವಾ ಅಳವಡಿಸಿಕೊಳ್ಳುವ ವಿಚಾರದ ಮೇಲೆ ಅವಲಂಬಿತವಾಗಿದೆ. ಬಡತನವು ಜೀವನಾಧಾರ, ಅಸಮಾನತೆ ಅಥವಾ ಗೋಚರವಾಗಿ ಕಾಣುವ ಶೋಷಣೆಯ ರೂಪದಲ್ಲಿಯೂ ನೋಡಬಹುದು. ಬಡತನವನ್ನು ನೋಡಬೇಕಾದರೆ ಅಥವಾ ತಿಳಿದುಕೊಳ್ಳಬೇಕಾದರೆ ಬಡವರನ್ನು ದೂರವಿಟ್ಟು ಮತ್ತು ಬಡವರನ್ನು ವಿಶೇಷ ಗುಂಪಾಗಿ ಪರಿಗಣಿಸುವದರಿಂದ ತಿಳಿದುಕೊಳ್ಳಲು ಸಾಧ್ಯವಿಲ್ಲ. ಅದನ್ನು ಸಮಾಜದಲ್ಲಿರುವ ಎಲ್ಲ ವರ್ಗಗಳೊಂದಿಗೆ ಅವರ ಆದಾಯದಕ್ಕನುಗುಣವಾಗಿ ರಚಿತವಾಗಿರುತ್ತದೆ. ಆದ್ದರಿಂದ ಬಡತನವನ್ನು ಸಮಾಜದ ಅವಿಭಾಜ್ಯ ಅಂಗವೆಂದು ತಿಳಿದು ನೋಡಬೇಕು. ಆಗ ಮಾತ್ರ ಸಮಾಜದ ವಿವಿಧ ಹಂತದಲ್ಲಿರುವ ವಿವಿಧ ರೀತಿಯ ಬಡತನವನ್ನು ತಿಳಿದುಕೊಳ್ಳಲು ಸಾಧ್ಯ ಎಂದು ಲೇಖಕರು ಅಭಿಪ್ರಾಯ ಪಟ್ಟಿದ್ದಾರೆ.

ರಾಬರ್ಟ್ ಚೇಂಬರ್ಸ್ (2006) ರವರು ತಮ್ಮ ಲೇಖನದಲ್ಲಿ ಐದು ಹಂತಗಳಲ್ಲಿ ಬಡತನದ ಅರ್ಥವನ್ನು ಹೇಳುತ್ತಾ ಮತ್ತು ವಿಶ್ಲೇಷಣೆಯ ಪ್ರಾಮುಖ್ಯತೆಯನ್ನು ನಮಗೆ ನೆನಪಿಸುತ್ತಾರೆ. ನಾವು ಬಡತನದ ಬಗ್ಗೆ ಅಭಿಪ್ರಾಯಗಳನ್ನು ಪಡೆಯಬೇಕಾದರೆ ನಾವು ಅಭಿವೃದ್ಧಿಯಲ್ಲಿನ ಭಾಷೆಯ ಪರಿಕಲ್ಪನೆಗಳು ಮತ್ತು ಕ್ರಮಗಳನ್ನು ಬದಲಾಯಿಸುತ್ತವೆ ಎಂದು ಹೇಳುತ್ತಾರೆ. ಬಡತನದ ಅಭಿವೃದ್ಧಿಯ ಪ್ರವಾಹ ಮಾತುಗಾರಿಕೆಯ ಪ್ರಾಮುಖ್ಯತೆಗಳು ಸಾಲಗಾರರ ಮತ್ತು ದಾನಿಗಳಿಂದ ಪ್ರಭಾವಿಸಲ್ಪಟ್ಟಿದೆ. ಇದರಿಂದ ಕಡು ಬಡತನವನ್ನು ನಿರ್ಮೂಲನೆ ಮಾಡುವ ಸಹಸ್ರಮಾನದ ಮೊದಲನೆ ಉದ್ದೇಶವಾಗಿದೆ ಎಂದು ಪರಿಗಣಿಸಲಾಗುತ್ತಿದೆ. ಈ ರೀತಿಯಾದ ಬಡತನವನ್ನು ತಿಳಿದುಕೊಳ್ಳಬೇಕಾದರೆ ಬಡವರು ಎಂದರೇನು? ಯಾರು ಈ

ಪ್ರಶ್ನೆಯನ್ನು ಕೇಳುತ್ತಾರೆ? ಯಾರು ಈ ಪ್ರಶ್ನೆಗೆ ಉತ್ತರಿಸುತ್ತಾರೆ? ಎಂಬುದರ ಮೇಲೆ ನಿರ್ಧಾರವಾಗುತ್ತದೆ. ಲೇಖಕರು ಒಟ್ಟು ಐದು ಹಂತಗಳ ಅರ್ಥ ಕಲ್ಪನೆಯನ್ನು ನಮ್ಮ ಮುಂದಿಡುತ್ತಾರೆ. ಮೊದಲನೆಯದು ಆದಾಯದ ಬಡತನ ಅಥವ ಅನುಭೋಗದ ಬಡತನ. ಇದು ಅಧಿಕೃತವಾದ ಬದಲಿ ವ್ಯವಸ್ಥೆಯಾಗಿದೆ ಮತ್ತು ಬಡತನವನ್ನು ಅಳೆಯಲು ಕಡಿಮೆ ವಿಶ್ವಾಸಾರ್ಹವಲ್ಲ, ಬಹಳಷ್ಟು ಅರ್ಥಶಾಸ್ತ್ರಜ್ಞರು "ಬಡತನ" ಎಂಬ ಶಬ್ದವನ್ನು ಈ ದಿಶೆಯಲ್ಲಿ ಬಳಸುತ್ತಾರೆ. ಬಡತನದ ಅಳತೆ, ಮಾಪನ ಮತ್ತು ಹೋಲಿಕೆಯ ಚರ್ಚಾಸ್ಪದಕ್ಕೆ ಅಂತ್ಯವಿಲ್ಲದ ವ್ಯಾಪ್ತಿ ಒದಗಿಸುತ್ತದೆ ಎಂದು ಹೇಳುತ್ತಾರೆ. ಎರಡನೆಯದು ಆದಾಯದ ಜೊತೆಗೆ ವಸ್ತುಗಳ ಕೊರತೆ ಅಥವಾ ಬಯಕೆ. ಈ ಕೊರತೆಯು ಈ ವಸ್ತುಗಳನ್ನು ಒಳಗೊಂಡಿರಬಹುದು ಅವು ಕಡಿಮೆ ಸಂಪತ್ತು, ಕೊರತೆ ಅಥವಾ ಕೆಳಮಟ್ಟದ ಆಸ್ತಿಗಳಾದ ವಸತಿ, ಬಟ್ಟೆ, ಪೀಠೋಪಕರಣ, ಸಾರಿಗೆ, ರೇಡಿಯೋ ಅಥವಾ ದೂರದರ್ಶನ ಮುಂತಾದವುಗಳು. ಮೂರನೆಯ ಹಂತದ ಅರ್ಥವನ್ನು ವಸ್ತುಗಳ ಕೊರತೆಯನ್ನು ಪಡೆಯುವ ಸಾಮರ್ಥ್ಯದ ಕೊರತೆ ಅಥವ ಇಲ್ಲದಿರುವುದು. ಇದು ದೈಹಿಕ ಸಾಮರ್ಥ್ಯದ, ಮಾನವ ಕೌಶಲ್ಯದ ಬಗ್ಗೆ ಇರಬಹುದು ಮತ್ತು ಸಮಾಜದಲ್ಲಿರುವ ಮರ್ಯಾದೆ ಅಥವಾ ಅವುಗಳ ಕೊರತೆಯಿಂದ ಏನನ್ನು ಮಾಡಬಹುದು ಅಥವಾ ಏನನ್ನು ಮಾಡದೆ ಇರಬಹುದು. ನಾಲ್ಕನೆಯ ಹಂತದ ಅರ್ಥವನ್ನು ವಸ್ತುಗಳ ಕೊರತೆಯಿಂದಾಗಿ ಇನ್ನು ಹೆಚ್ಚು ವ್ಯಾಪಕವಾಗಿ ಬಹು ಆಯಾಮದಿಂದ ಅಥವಾ ಅನೇಕ ಪರಸ್ಪರ ಬಲವರ್ಧಕಗಳಾಗಿ ತೆಗೆದುಕೊಳ್ಳುತ್ತವೆ. ಈ ಮೇಲಿನ ನಾಲ್ಕು ಹಂತಗಳ ಬಡತನದ ಅರ್ಥವನ್ನು ಅಭಿವೃದ್ಧಿಯ ವೃತ್ತಿಪರರಿಂದ ಕಟ್ಟಲಾಗಿದೆ ಎಂದು ಲೇಖಕರು ಉಲ್ಲೇಖಿಸಿದ್ದಾರೆ. ಬಡತನ ಎಂಬ ಶಬ್ದವು ಇತರ ಭಾಷೆಗಳಿಗೆ ಅನುವಾದನೆಗೊಂಡಾಗ ವಿವಿಧ ಒಳಅರ್ಥವನ್ನು ಕೊಡುತ್ತದೆ. ಇದು ಕೆಳದರ್ಜೆ ಅಥವಾ ಮೇಲ್ಮಟ್ಟದ ಅಂಶಗಳನ್ನು ನಿರ್ಧರಿಸುವ ಒಂದು ಪದ ಅಥವಾ ಶಬ್ದ ಎಂದು ಹೇಳುತ್ತಾರೆ.

ರಾಬರ್ಟ್ ಚೆಂಬರ್ಸ್ (1988) ರವರು ಭಾರತದಲ್ಲಿ ಬಳಸಿದ ಬಡತನದ ವ್ಯಾಖ್ಯಾ ಅಥವಾ ಅರ್ಥ, ಸಂಶೋಧನೆ ಮತ್ತು ನಿಜಸ್ಥಿತಿಯ ಬಗ್ಗೆ ಬೆಳಕು ಚೆಲ್ಲಿದ್ದಾರೆ. ಈ ರೀತಿಯಾಗಿ ವಿವರಿಸುವಾಗ ಇವರು ಅದು ಭಾರತದಲ್ಲಿರಬಹುದು ಅಥವ ಬೇರೆ ಯಾವುದಾದರೂ ಕಡೆ ಆಗಿರಬಹುದು ವೃತ್ತಿಪರರು ಮತ್ತು ಬಡವರು ಬಡತನವನ್ನು ವಿವಿಧ ರೀತಿಯಾಗಿ ನೋಡುತ್ತಾರೆ. ವೃತ್ತಿಪರರು ಬಡತನವನ್ನು ಅನುಭೋಗದ ಅಥವಾ ಆದಾಯದ ಚಲನೆ ವಲನೆಗಳನ್ನು ಎಣಿಸುತ್ತಾರೆ. ಆದರೆ ಇದು ಇನ್ನೂ ಅನೇಕ ಆಯಾಮಗಳನ್ನು ಹೊಂದಿದೆ, ಬಡತನದ ಗ್ರಹಿಕೆಗಳು ಮತ್ತು ಆದ್ಯತೆಗಳು ಇನ್ನೂ ಹೆಚ್ಚಿನ ಅರ್ಹತೆಗಳನ್ನು ಸೂಚಿಸುತ್ತವೆ. ಅನುಭೋಗವು ಜೀವಂತ ಉಳಿದುಕೊಳ್ಳಲು, ಆಸ್ತಿಗಳು ಜೀವನ ಭದ್ರತೆಗಾಗಿ ಮತ್ತು ಸ್ವಾತಂತ್ರ್ಯವು ಆತ್ಮಗೌರವಕ್ಕಾಗಿ ಎಂದು

ಲೇಖಕರು ಅಭಿಪ್ರಾಯ ಪಡುತ್ತಾರೆ. ಸಾಮಾನ್ಯವಾದ ಸಂಶೋಧನೆಯಿಂದ ಬಡವರ ಬಗ್ಗೆ ಮತ್ತು ಅದರ ಆದ್ಯತೆಗಳ ಬಗ್ಗೆ ತಪ್ಪು ಗ್ರಹಿಕೆಯನ್ನು ಕೊಡುತ್ತಾರೆ. ಆದ್ದರಿಂದ ಹೊಸ ಹೊಸ ಅಥವಾ ವಿವಿಧ ವಿಧಾನಗಳಿಂದ ಹೊಸ ರೀತಿಯಾದ ಫಲಿತಾಂಶಗಳನ್ನು ಕಂಡುಕೊಳ್ಳಲು ಹೆಚ್ಚಿನ ಸಂಶೋಧನೆಯನ್ನು ಕೈಗೊಳ್ಳಬೇಕು ಎಂದು ತಮ್ಮ ಅಭಿಪ್ರಾಯವನ್ನು ವ್ಯಕ್ತಪಡಿಸುತ್ತಾರೆ.

ದೀಪಾ ನಾರಾಯಣ ಮತ್ತು ಇತರರು (2009) ಗ್ರಾಮೀಣ ಭಾರತದಲ್ಲಿನ ಬಡತನವನ್ನು 1995ರಿಂದ 2005ರ ದಶಕದಲ್ಲಿ ಭಾರತದ ನಾಲ್ಕು ರಾಜ್ಯಗಳಾದ ಆಂಧ್ರ ಪ್ರದೇಶ, ಆಸ್ಸಂ, ಉತ್ತರ ಪ್ರದೇಶ ಮತ್ತು ಪಶ್ಚಿಮ ಬಂಗಾಳದಲ್ಲಿನ ಬಡತನವನ್ನು ಅಭ್ಯಸಿಸಿದ್ದಾರೆ. ಇಲ್ಲಿ ಬಡತನಕ್ಕೆ ಒಳಗಾದವರು, ಬಿದ್ದವರು, ಬಡತನದಲ್ಲಿಯೇ ಇದ್ದವರು ಮತ್ತು ಬಡತನ ಅನುಭವಿಸದೇ ಬಡವರ ಜೊತೆ ಜೀವಿಸುವವರ ಕುರಿತು ಅಭ್ಯಾಸಿಸಲಾಗಿದೆ. ಇಲ್ಲಿ ತಜ್ಞರನ್ನು ಅಧಿಕಾರಿಗಳನ್ನು ಮತ್ತು ಬಲಪಂಥಿಯ ಹಾಗೂ ಎಡಪಂಥಿಯ ಅಭಿಪ್ರಾಯಗಳ ಜೊತೆಗೆ ನಂಬಿಕೆ, ಊಹೆಗಳನ್ನು ಗಣನೆಗೆ ತೆಗೆದುಕೊಂಡು ಶ್ರೀಮಂತರ, ಮಧ್ಯಮ ವರ್ಗದವರ ಮತ್ತು ಲೇಖಕರ ಪೂರ್ವಾಧರಿತ ಕಲ್ಪನೆಗಳೊಂದಿಗೆ ಬಡವರ ಮಾತುಗಳನ್ನು ಸಹ ತೆಗೆದುಕೊಂಡು ಲೇಖಕರು ಈ ಕೆಳಗಿನ ಅಭಿಪ್ರಾಯಗಳನ್ನು ಮಂಡಿಸುತ್ತಾರೆ. ಈ ಆಧ್ಯಯನವು ನಾಲ್ಕು ವಿಧಗಳಲ್ಲಿ ವಿಶಿಷ್ಟವಾಗಿದೆ. ಒಂದು ಒಂದೇ ಕುಟುಂಬಗಳನ್ನು ಒಂದು ಕಾಲಾವಧಿಗೆ ಅವರ ಬಡತನ ಸ್ಥಿತಿಯನ್ನು ಪರೀಕ್ಷಿಸಿದೆ. ಆದರೆ ಬಹಳಷ್ಟು ಅಧ್ಯಯನಗಳು ಕೇವಲ ಒಂದೇ ಅವಧಿಗೆ ಸಂಬಂಧಿಸಲಾಗಿರುತ್ತದೆ. ಎರಡು ಬಹಳಷ್ಟು ಅಧ್ಯಯನಗಳು ರಾಷ್ಟ್ರ, ರಾಜ್ಯ ಅಥವಾ ಜಿಲ್ಲಾ ಮಟ್ಟದಲ್ಲಿ ಮಾಡಿರುತ್ತಾರೆ. ಆದರೆ ಇದು ಸ್ಥಳೀಯವಾಗಿ ಹಳ್ಳಿಗಳನ್ನು ಮತ್ತು ವ್ಯಕ್ತಿಗಳ ಕುಟುಂಬಗಳನ್ನು ಒಳಗೊಂಡಿದೆ. ಮೂರು ಈ ಅಧ್ಯಯನವು ಜೀವನ ಕಥೆಗಳ ಮತ್ತು ಗುಂಪು ಚರ್ಚೆಯಿಂದ ಮಾಹಿತಿಯನ್ನು ಕಲೆಹಾಕಲಾಗಿದೆ. ಕೊನೆಯದಾಗಿ ಒಪನ್–ಎಂಡ್ ಅಪ್ರೋಚ್ ವಿಧಾನವನ್ನು ಬಳಸಿಕೊಂಡು ಇನ್‌ಡಕ್ಟ್ಟಿವ್ ಮೆತಡ್‌ದಿಂದ ವ್ಯವಸ್ಥಿತವಾಗಿ ಮಾಹಿತಿಯನ್ನು ಜೀವನ ಕಥೆಗಳ ಮತ್ತು ವ್ಯಕ್ತಿಗಳೊಂದಿಗೆ ಮಾಡಿದ ಚರ್ಚೆಯನ್ನು ಬಳಸಿಕೊಂಡು ಪರಿಮಾಣಾತ್ಮಕ ವಿಧಾನದಿಂದ ಕಲೆಹಾಕಿದ ಮಾಹಿತಿಯೊಂದಿಗೆ ವಿಶ್ಲೇಷಣೆ ಮಾಡಲಾಗಿದೆ. ಇಲ್ಲಿ ಜನರ ಪ್ರಕಾರ ಬಡತನ ಮತ್ತು ಅವರ ಬಡತನವನ್ನು ಆರ್ಥಿಕ, ಮಾನಸಿಕ, ಸಾಮಾಜಿಕ, ರಾಜಕೀಯ, ಸಾಂಸ್ಥಿಕ ಮತ್ತು ಸಮುದಾಯದ ಮಟ್ಟದಲ್ಲಿ ವಿಶ್ಲೇಷಣೆಗಳನ್ನು ಮಾಡಿ ಆಂಧ್ರ ಪ್ರದೇಶದ ಕಮಲಾಪುರ ಗ್ರಾಮದಲ್ಲಿನ ಪುರುಷರ ಗುಂಪು ಚರ್ಚೆಯಲ್ಲಿ ಸಮುದಾಯದವರೇ ಸೂಚಿಸಿದ ಬಡತನದ ರೇಖೆಯನ್ನು ಲೇಖಕರು ನಮ್ಮ ಮುಂದೆ ಮಂಡಿಸುತ್ತಾರೆ.

ಸಾಮಾನ್ಯವಾಗಿ ದೇಶ, ರಾಜ್ಯ ಮತ್ತು ಗ್ರಾಮಗಳಲ್ಲಿ ವಾಸಿಸುವ ಕುಟುಂಬಗಳನ್ನು, ಜನರನ್ನು ಅವರವರ ಆಸ್ತಿ ಮತ್ತು ಅವರು ಮಾಡುವ ಕೆಲಸದ ಮೇಲೆ ಅನೇಕ ಪ್ರಕಾರದ ಗುಂಪುಗಳನ್ನಾಗಿ

ಮಾಡಲಾಗುತ್ತದೆ. ಅದೇ ರೀತಿ (ದೀಪಾ ನಾರಾಯಣ ಮತ್ತು ಇತರರು, 2009)ರವರು ಗ್ರಾಮದಲ್ಲಿರುವ ಸಮುದಾಯದ ಜನಸಂಖ್ಯೆಯನ್ನು ಒಟ್ಟು ಆರು ಗುಂಪುಗಳಲ್ಲಿ ವಿಂಗಡಿಸುತ್ತಾರೆ.

1. **ಭೂ ಒಡೆಯರು:** ಈ ವರ್ಗದಲ್ಲಿ ಬೇರೆಯುವರಿಂದ ತಮ್ಮ ಜಮೀನಿನಲ್ಲಿ ಕೆಲಸ ಮಾಡಿಸಿಕೊಳ್ಳುವವರು ದೊಡ್ಡ ಪ್ರಮಾಣದ ಬಂಗಲೆಯನ್ನು ಹೊಂದಿರುವವರು ಗ್ರಾಮದಲ್ಲಿ ಮೇಲ್ಮಟ್ಟದ ಗೌರವವನ್ನು ಹೊಂದಿರುವರು.
2. **ದೊಡ್ಡ ರೈತರು:** ಪಿತ್ರಾರ್ಜಿತವಾಗಿ ಬಂದಿರುವ 15–25 ಎಕರೆ ಸ್ವಂತ ಭೂಮಿಯನ್ನು ಹೊಂದಿರುವರು ಮತ್ತು ನಾಲ್ಕರಿಂದ ಐದು ಮನೆಗಳು ಜೊತೆಗೆ ಮೋಟರ ಬೈಕ್‌ಗಳು, ಫ್ಯಾನುಗಳು ಮತ್ತು ದನಕರುಗಳನ್ನು ಹೊಂದಿರುವರು. ಹತ್ತಿ, ಮೆಣಸಿನಕಾಯಿ, ಸೋಯಾಬಿನ್, ಫಲವತ್ತಾದ ಭೂಮಿಯನ್ನು ಹೊಂದಿರುವ ಬ್ಯಾಂಕುಗಳು ಸಾಲವನ್ನು ಕೊಡುವ ಮತ್ತು ಮಕ್ಕಳಿಗೆ ಗುಣಮಟ್ಟದ ಶಿಕ್ಷಣವನ್ನು ಕೊಡುವ ಮತ್ತು ಯಾವುದೇ ರೀತಿಯಾದ ಕೆಲಸ ಮಾಡದೆ ಜೀವನ ಸಾಗಿಸುವರು.
3. **ಮಧ್ಯಮ ರೈತರು:** 5 ಎಕರೆ ಭೂಮಿಯನ್ನು ಹೊಂದಿರುವರು ಮತ್ತು ಕೆಲವೊಬ್ಬರು ಸರಕಾರಿ ನೌಕರಿಯನ್ನು ಹೊಂದಿರುವರು, ಸಿಮೆಂಟಿನಿಂದ ನಿರ್ಮಿತ ಸ್ವಂತ ಮನೆಯನ್ನು ಹೊಂದಿರುವರು. ದನಕರುಗಳು, ಟಿವಿ, ಫ್ಯಾನು, ಕೊಳವೆಬಾವಿ ಮತ್ತು ಮಲಗುವ ಮಂಚವನ್ನು ಹೊಂದಿರುವರು. ಒಳ್ಳೆಯ ಗುಣಮಟ್ಟದ ಅಕ್ಕಿಯನ್ನು ಉಪಯೋಗಿಸುವರು. ಮಹಿಳೆಯರು ಚಿನ್ನದ ಆಭರಣವನ್ನು ಧರಿಸುವವರು ಮತ್ತು ಮಕ್ಕಳನ್ನು ಉತ್ತಮವಾದ ಶಾಲೆಯಲ್ಲಿ ಸೇರಿಸಿರುವರು ಮತ್ತು ಬ್ಯಾಂಕುಗಳು ಸಾಲವನ್ನು ನೀಡುವವರನ್ನು ಕೊನೆಯ ಮೂರು ಗುಂಪುಗಳಲ್ಲಿ ಸಮುದಾಯದ ಕೆಳಸ್ತರದ ಕುಟುಂಬಗಳನ್ನು ಪ್ರತಿನಿಧಿಸುತ್ತವೆ.
4. **ಸಣ್ಣ ರೈತರು:** 3 ರಿಂದ 5 ಎಕರೆ ಸ್ವಂತ ಭೂಮಿಯನ್ನು ಹೊಂದಿದವರು, ಸ್ವಂತ ಮನೆ ಮತ್ತು ದನ ಕರುಗಳು ಹೊಂದಿರುವವರು ಆದರೆ ಯಾವುದೇ ಕೊಳವೆ ಬಾವಿಗಳು ಹೊಂದಿರುವದಿಲ್ಲ. ಇವರ ಜೀವನ ಬೀಳುವ ಮಳೆಯ ಪ್ರಮಾಣದ ಮೇಲೆ ಅವಲಂಬಿಸಿರುತ್ತದೆ. ಬರಗಾಲದಲ್ಲಿ ಪಟ್ಟಣಕ್ಕೆ ವಲಸೆ ಹೋಗುವರು ಅಥವಾ ಕೃಷಿ ಕೂಲಿ ಕಾರ್ಮಿಕರಾಗಿ ಕೆಲಸ ಮಾಡುವವರು. ಅಲ್ಪ ಪ್ರಮಾಣದ ಶಿಕ್ಷಣವನ್ನು ಪಡೆದವರು.
5. **ಸಣ್ಣ ಹಿಡುವಳಿಯನ್ನು ಹೊಂದಿರುವ ಕಾರ್ಮಿಕರು ಇವರು ಸಾಮಾನ್ಯವಾಗಿ ಕೆಳಜಾತಿ ಮತ್ತು ಪರಿಶಿಷ್ಟಜಾತಿಗೆ ಸೇರಿದವರಾಗಿದ್ದು,** ಇವರು 1 ರಿಂದ 2 ಎಕರೆ ಭೂಮಿಯನ್ನು ಹೊಂದಿರುತ್ತಾರೆ. ಇವರು ಹೊಂದಿದ ಭೂಮಿಯು ಫಲವತ್ತಾಗಿರುವುದಿಲ್ಲ ಮತ್ತು ಇವರು ಬೇರೆಯವರಲ್ಲಿ ಕೂಲಿಗಾಗಿ ಅಥವಾ ಜೀತದಾರರಾಗಿ ದುಡಿಯುವರು. ಇವರು ಅನಕ್ಷರಸ್ಥರಾಗಿರುತ್ತಾರೆ ಮತ್ತು ಪ್ರತಿಯೊಂದು ದಿವಸವು ಕಷ್ಟದಾಯಕವಾಗಿರುತ್ತದೆ. ಸರಿಯಾದ ವಸತಿ ವ್ಯವಸ್ಥೆ ಇರುವುದಿಲ್ಲ.

**6. ಭೂ ರಹಿತ ಕಾರ್ಮಿಕರು ಆಹಾರದ, ಬಟ್ಟೆ, ವಸತಿ ಕೊರತೆಯನ್ನು ಎದುರಿಸುವ** ಈ ಗುಂಪಿನವರಿಗೆ ದಿನಾಲೂ ದುಡಿಯಲು ಕೆಲಸವಿರುವುದಿಲ್ಲ. ತಿಂಗಳಲ್ಲಿ 12 ರಿಂದ 15 ದಿವಸ ಕೆಲಸದಲ್ಲಿ ನಿರತರಾಗಿರುವರನ್ನು ಅನಕ್ಷರಸ್ಥರನ್ನು ಬಡತನ ರೇಖೆಯ ಕೆಳಗಿನವರೆಂದು ವಿಂಗಡಿಸಿದ್ದಾರೆ.

ಯೋಜನೆಗಳು ಪ್ರತಿಯೊಂದು ಗ್ರಾಮಗಳಿಗನುಗುಣವಾಗಿ ನಿರ್ಮಿಸಬೇಕು ಮತ್ತು ಜನರ ಸಲಹೆ–ಸೂಚನೆಗಳನ್ನು ಪರಿಗಣಿಸಿ ಯೋಜನೆಗಳನ್ನು ಮಾಡಬೇಕು. ಸರ್ಕಾರದ ಬಡತನದ ರೇಖೆ ಮತ್ತು ಸಮುದಾಯದ ಬಡತನದ ರೇಖೆಯ ನಡುವೆ ಅಜಗಜಾಂತರ ವ್ಯತ್ಯಾಸವಿದೆ. ಈ ಮೇಲಿನ ಸಮುದಾಯದ ಬಡತನ ರೇಖೆಯಿಂದ ಶಿಕ್ಷಣ, ಅಧಿಕಾರ ಮತ್ತು ಉತ್ಪಾದನ ಪರಿಕರಗಳು, ಗ್ರಾಮದಲ್ಲಿನ ಮರ್ಯಾದೆ ಮತ್ತು ಆಧುನಿಕ ಸವಲತ್ತುಗಳನ್ನು ಹೊಂದಿರುವವರನ್ನು ಬಡತನ ರೇಖೆಯ ಮೇಲಿನವರೆಂದು ಮತ್ತು ಈ ಮೇಲಿನ ಸವಲತ್ತುಗಳನ್ನು ಹೊಂದದೆ ಇರುವವರನ್ನು ಬಡತನ ರೇಖೆಯ ಕೆಳಗಿನವರೆಂದು ವರ್ಗೀಕರಿಸುತ್ತಾರೆ.

ಎಂ. ಚಂದ್ರ ಪೂಜಾರಿ (2008) ರವರು "ರಾಜಕೀಯದ ಬಡತನ" ಎಂಬ ತಮ್ಮ ಕೃತಿಯಲ್ಲಿ ಸ್ವಾತಂತ್ರ್ಯ ನಂತರ ಇಲ್ಲಿಯವರೆಗೆ ಅಧಿಕಾರ ನಡೆಸಿದ ರಾಜಕೀಯ ಪಕ್ಷಗಳು ಬಡವರನ್ನು ಉದ್ಧಾರ ಮಾಡುತ್ತೇವೆ ಎಂದು ಪ್ರಣಾಳಿಕೆಗಳನ್ನು ಬಿಡುಗಡೆ ಮಾಡಿ ಬಡವರ ಮತಗಳನ್ನು ಪಡೆದು ಅಧಿಕಾರದ ಗದ್ದುಗೆಯನ್ನು ಏರಿ ಬಡವರನ್ನು ಸಂಪೂರ್ಣವಾಗಿ ಮರೆತುಬಿಟ್ಟಿವೆ. ಇದರ ಪ್ರತಿಫಲವಾಗಿ ಇಂದಿಗೂ ಸಹ ಸುಮಾರು ನಲವತ್ತು ಕೋಟಿಗಿಂತಲೂ ಹೆಚ್ಚಿನ ಜನರು ಊಟ, ಉದ್ಯೋಗ, ವಸತಿ, ಶಿಕ್ಷಣ ಮತ್ತು ಆರೋಗ್ಯದ ಸೇವೆಗಳಿಲ್ಲದೆ ನರಳುತ್ತಿದ್ದಾರೆಂದು ಉಲ್ಲೇಖಿಸುತ್ತಾರೆ. ಕೇವಲ ಚುನಾವಣೆ ಬಂದಾಗ ಮಾತ್ರ ರಾಜಕೀಯ ಪಕ್ಷಗಳಿಗೆ ಬಡವರು ನೆನಪಾಗುತ್ತಾರೆ ಇದಕ್ಕೆ ಇವರು ಕೊಡುವ ಕಾರಣ ಬಡ ಜನತೆ ಚುನಾವಣೆಯಲ್ಲಿ ಹೆಚ್ಚಿನ ಸಂಖ್ಯೆಯಲ್ಲಿ ಮತ್ತು ಸಕ್ರಿಯವಾಗಿ ಭಾಗವಹಿಸುತ್ತಾರೆ. ಅನೇಕ ರಾಜಕೀಯ ಪಕ್ಷಗಳು ಬಡತನವನ್ನು ಭೌತಿಕ ಸಂಗತಿಗಳ ಕೊರತೆಯ ರೂಪದಲ್ಲಿ ಅಂದರೆ ಆಹಾರದ ಕೊರತೆ, ವಸತಿ ಕೊರತೆ, ಬಟ್ಟೆಬರೆ ಕೊರತೆ, ಉದ್ಯೋಗ ಇಲ್ಲದಿರುವುದು, ಆರೋಗ್ಯದ ಕೊರತೆಗಳ ಆಧಾರದ ಮೇಲೆ ವ್ಯಾಖ್ಯಾನಿಸಿಕೊಂಡಿವೆ ಮತ್ತು ಕಣ್ಣಿಗೆ ಗೋಚರವಾಗದೇ ಇರುವ ಅನೇಕ ಸಂಗತಿಗಳು ಮರೆತು ಹೋಗಿವೆ ಮತ್ತು ಮರೆತುಹೋದ ವಿಷಯಗಳಿಂದ ಬಡತನದ ವಿವಿಧ ಅಯಾಮಗಳನ್ನು ಅರ್ಥ ಮಾಡಿಕೊಳ್ಳಲು ಸಹಾಯಕವಾಗುತ್ತವೆ ಎಂದು ಲೇಖಕರು ಉಲ್ಲೇಖಿಸುತ್ತಾರೆ. ರಾಜಕೀಯದ ಬಡತನವನ್ನು ಅರ್ಥಮಾಡಿಕೊಳ್ಳಬೇಕಾದರೆ ಬಡತನದ ವ್ಯಾಖ್ಯಾನ ಬಡತನ ನಿವಾರಣಾ ಕಾರ್ಯಕ್ರಮಗಳು, ದಿನನಿತ್ಯದ ಬದುಕಿನ ಅನ್ಯ ವ್ಯವಹಾರಗಳು, ಬಡತನ ಮುಂದುವರಿಕೆಯಲ್ಲಿ ಇಂತಹ ಅಸಮಾನ ವ್ಯವಹಾರಗಳ ಪಾತ್ರ ಮತ್ತು ಅಸಮಾನ ವ್ಯವಹಾರಗಳು ಮತ್ತು ರಾಜಕೀಯ ಪಕ್ಷಗಳ ಸಂಬಂಧ, ವಿವಿಧ ಕಾಲಘಟ್ಟಗಳಲ್ಲಿ ಆಡಳಿತ ನಡೆಸಿದ ರಾಜಕೀಯ ಪಕ್ಷಗಳು ಬಡತನವನ್ನು ವ್ಯಾಖ್ಯಾನಿಸಿಕೊಂಡಿರುವ ಬಗೆಗಳನ್ನು

ತಿಳಿದುಕೊಳ್ಳುವುದು ಅತಿ ಅವಶ್ಯಕವೆಂದು ಹೇಳುತ್ತಾರೆ. ಮುಂದುವರೆದು ಬಡವರ ಸಮಸ್ಯೆಗಳನ್ನು ಸುಧಾರಿಸಬೇಕಾದರೆ ಅವರ ಆದಾಯವನ್ನು ಹೆಚ್ಚಿಸುವಲ್ಲಿ ಸರ್ಕಾರಗಳು ಹಲವಾರು ಕಾರ್ಯಕ್ರಮಗಳನ್ನು ಹಾಕಿಕೊಂಡರೂ ಕೂಡ ಬಡವರ ಬದುಕು ಸುಧಾರಣೆಯಾಗಲಿಲ್ಲವೆಂದು ಹೇಳುತ್ತಾ ಭೂ ಸುಧಾರಣೆ ಕಾಯಿದೆಯಿಂದ ಪರಿಣಾಮವನ್ನು ಉದಾಹರಣೆಯೊಂದಿಗೆ ವಿವರಿಸುತ್ತಾರೆ. ಬಡತನವನ್ನು ವಿಶ್ಲೇಷಣೆ ಮಾಡುವಾಗ ಅದಕ್ಕೆ ಕಾರಣಗಳಾದ ಸಾಮಾಜಿಕ, ರಾಜಕೀಯ ಹಾಗೂ ಸಾಂಸ್ಕೃತಿಕ ಚೌಕಟ್ಟಿನ ನೆಲೆಯಿಂದ ದೂರ ಉಳಿದಿವೆ ಮತ್ತು ಬಡತನವನ್ನು ಆರ್ಥಿಕ ಕ್ಷೇತ್ರಕ್ಕೆ ಮಾತ್ರ ಸೀಮಿತಗೊಳಿಸಿ ನೋಡುವುದರಿಂದ ಬಡತನ ನಿವಾರಣೆ ಸಾದ್ಯವಿಲ್ಲ ಬಡತನವನ್ನು ನಿವಾರಿಸಬೇಕಾದರೆ ಸಾಮಾಜಿಕ, ರಾಜಕೀಯ, ಸಾಂಸ್ಕೃತಿಕ ಸಮಾನತೆ ಮತ್ತು ಸ್ವಾತಂತ್ರ್ಯದ ನಡುವಿರುವ ನೇರ ಸಂಬಂಧಗಳನ್ನು ತಿಳಿದುಕೊಂಡು ಅದಕ್ಕನುಗುಣವಾಗಿ ಯೋಜನೆಗಳು ನಿರ್ಮಿಸುವಂತಾಗಬೇಕೆಂದು ಅಭಿಪ್ರಾಯ ಪಡುತ್ತಾರೆ.

ಎನ್.ಸಿ. ಸಕ್ಸಸೇನಾ (2007) ರವರ "ರೂರಲ್ ಪಾವರ್ಟಿ ರಿಡಕ್ಷನ್ ತ್ರೂ ಸೇಂಟ್ರಲಿ ಸ್ಪಾನ್ಸರಡ್ ಸ್ಕಿಮ್ಸ್" ತಮ್ಮ ಲೇಖನದಲ್ಲಿ ಭಾರತದಲ್ಲಿಯ ಬಡತನದ ಚಿತ್ರಣವನ್ನು 1997-98 ಮತ್ತು 2005ರ ಅವಧಿಯಲ್ಲಿಯ ಕೆಲವೊಂದು ಬಡತನ ನಿವಾರಣಾ ಕಾರ್ಯಕ್ರಮಗಳನ್ನು ಆಯ್ಕೆ ಮಾಡಿಕೊಂಡು ಅವುಗಳನ್ನು ವಿಮರ್ಶೆ ಮಾಡುತ್ತಾ ಈ ಕೆಳಗಿನ ಅಭಿಪ್ರಾಯವನ್ನು ವ್ಯಕ್ತಪಡಿಸುತ್ತಾರೆ. ಬಡತನ ನಿವಾರಣಾ ಕಾರ್ಯಕ್ರಮಗಳು ಅವುಗಳ ರೂಪರೇಷೆಗಳನ್ನು ಬದಲಾಯಿಸಿದರೆ ಸಾಲದು ಜಿಲ್ಲಾ ಮಟ್ಟದಲ್ಲಿರುವ ಆಡಳಿತ ವರ್ಗವು ಸುಧಾರಿಸಬೇಕು. ಭಾರತದಲ್ಲಿಯ ಕಾರ್ಯಕ್ರಮಗಳ ಸಫಲತೆಯು ಸರಿಯಾದ ಫಲಾನುಭವಿಗಳ ಆಯ್ಕೆ, ಪಾರದರ್ಶಕತೆ, ಕ್ಷೇತ್ರ ಸಿಬ್ಬಂದಿಗಳ ಮೇಲ್ವಿಚಾರಣೆ ಮತ್ತು ಸಾಮಾಜಿಕ ಚಲನವಲನಗಳಿಂದ ಮಾತ್ರ ತಿಳಿದುಕೊಳ್ಳಬಹುದು. ಬಡತನದಿಂದ ಕೂಡಿದ ಜಿಲ್ಲೆಗಳಿಗೆ ಕಳೆದ ಹತ್ತು ವರ್ಷಗಳಲ್ಲಿ ಮೂರು ಪಟ್ಟು ಹೆಚ್ಚಿನ ಅನುದಾನ ಕೊಡಮಾಡಿದೆ. ಆದರೆ ಭಾರತದ ಸರ್ಕಾರವಾಗಲಿ ಅಥವಾ ದೇಣಿಗೆದಾರರಾಗಲಿ ಕೊಟ್ಟ ಅನುದಾನವನ್ನು ಬಳಸಿಕೊಳ್ಳುವ ಸಾಮರ್ಥ್ಯ ಮತ್ತು ಸರಿಯಾಗಿ ಬಳಕೆಯಾಗಿ ಉತ್ತಮ ಫಲಿತಾಂಶಗಳನ್ನು ಬಂದಿವೆಯೋ ಅಥವಾ ಇಲ್ಲವೋ ಎಂಬುವದನ್ನು ಯಾರೂ ಕೂಡಾ ಅಭ್ಯಸಿಸಲಿಲ್ಲ. ಭಾರತದಲ್ಲಿಯ ರಾಜ್ಯಗಳು ಅಧಿಕಾರ, ಆಶ್ರಯ, ಜಾತಿ, ವರ್ಗಾವಣೆ, ಹಣ, ಬಲಪ್ರಯೋಗ ಮತ್ತು ಅಪರಾಧಗಳನ್ನು ತಿಳಿದುಕೊಂಡವರಿಂದ ಆಡಳಿತಕ್ಕೊಳಪಟ್ಟಿವೆ. ಆದ್ದರಿಂದ ವೃತ್ತಿಪರತೆಯು, ನಿರ್ದಿಷ್ಟ ಗುರಿ ಪಾರದರ್ಶಕತೆ, ಸಂಸ್ಥೆಗಳನ್ನು ಕಟ್ಟುವದು ಮತ್ತು ಜನರನ್ನು ಸ್ವಾವಲಂಬಿಗಳನ್ನಾಗಿ ಮಾಡುವುದು ಇವರಿಗೆ ಅನ್ಯ ವಿಷಯಗಳಾಗಿ ಕಾಣುತ್ತವೆ. ಸದ್ಯ ಭಾರತ ಸರ್ಕಾರವು ಮೂರು ಲಕ್ಷ ಕೋಟಿಗಿಂತಲೂ ಹೆಚ್ಚಿನ ಹಣವನ್ನು ಎಲ್ಲಾ ರಾಜ್ಯಗಳಿಗೆ ವರ್ಗಾವಣೆ ಮಾಡುತ್ತದೆ. ಒಂದು ವೇಳೆ ಈ ಮೂರು ಲಕ್ಷ ಕೋಟಿ

ರೂಪಾಯಿಯ ಶೇ.10% ಹಣವನ್ನು ಉತ್ತಮ ಆಡಳಿತದಿಂದ ಕಾರ್ಯಕ್ರಮಗಳನ್ನು ರೂಪಿಸಿದರೆ ರಾಜ್ಯಗಳ ಸಾಧನೆಯು ದ್ವಿಗುಣಗೊಳ್ಳುವುದರಲ್ಲಿ ಅನುಮಾನವಿಲ್ಲವೆಂದು ಅಭಿಪ್ರಾಯ ವ್ಯಕ್ತಪಡಿಸುತ್ತಾರೆ.

ಸುಂದರಂ ಮತ್ತು ಸುರೇಶ ತೆಂಡೂಲ್ಕರರವರು (2003) ತಮ್ಮ "ಪಾವರ್ಟಿ ಅಮಂಗ್ ಸೋಸಿಯಲ್ ಆಂಡ್ ಎಕನಾಮಿಕ್ ಗ್ರೂಪ್ಸ್ ಇನ್ ಇಂಡಿಯಾ ಇನ್ 1990" ಲೇಖನದಲ್ಲಿ ರಾಷ್ಟ್ರೀಯ ಸಮಿಕ್ಷಾ ಮಾದರಿ ಸಂಸ್ಥೆಯು ನಡೆಸಿದ 50ನೇಯ (1993–94) ಮತ್ತು 55ನೇಯ (1999–2000) ಅನುಭೋಗದ ವೆಚ್ಚದ ಸಮೀಕ್ಷೆಯ ಮಾಹಿತಿಯನ್ನು ಬಳಸಿಕೊಂಡು ಭಾರತದ ಗ್ರಾಮೀಣ ಮತ್ತು ನಗರ ಪ್ರದೇಶದಲ್ಲಿನ ಬಡತನದ ಮಟ್ಟ ಮತ್ತು ಬದಲಾವಣೆಯನ್ನು ಸಾಮಾಜಿಕ ಮತ್ತು ಆರ್ಥಿಕ ಅಂಶಗಳನ್ನು ಒಟ್ಟುಗೂಡಿಸಿ ಈ ಲೇಖನದಲ್ಲಿ ಪರೀಕ್ಷಿಸಿದ್ದಾರೆ. ಸಾಮಾಜಿಕ ಮತ್ತು ಆರ್ಥಿಕ ಸಮೂಹ ಅಥವಾ ವರ್ಗಗಳಲ್ಲಿ ಪರಿಶಿಷ್ಟ ಜಾತಿ ಪರಿಶಿಷ್ಟ ಪಂಗಡದವರು ಗ್ರಾಮೀಣ ಮತ್ತು ಬಡತನದ ರೇಖೆಗಿಂತ ಸ್ವಲ್ಪ ಮಟ್ಟಿಗೆ ಹೆಚ್ಚಿಗೆ ಇರುವುದರಿಂದ ಇವರು ಬಡತನದ ಬಹಳಷ್ಟು ಹೆಚ್ಚಿನ ಮಟ್ಟಿಗೆ ಬಡತನಕ್ಕೆ ತುತ್ತಾಗುವ ಅವಕಾಶ ಹೆಚ್ಚಾಗಿರುತ್ತದೆ. ಆರ್ಥಿಕ ಸಮುದಾಯದಲ್ಲಿ ಗ್ರಾಮೀಣದಲ್ಲಿರುವ ಕೃಷಿ ಕಾರ್ಮಿಕ ಕುಟುಂಬಗಳು ಮತ್ತು ನಗರ ಪ್ರದೇಶದಲ್ಲಿರುವ ಇತರೆ ಕಾರ್ಮಿಕರ ಕುಟುಂಬಗಳು ಹೆಚ್ಚಿನ ಪ್ರಮಾಣದಲ್ಲಿ ಬಡತನಕ್ಕೆ ಸಂಬಂಧಪಟ್ಟ ಸೂಚಿಗಳನ್ನು ಹೊಂದಿವೆ. ಇನ್ನೂ ಬಡತನದ ಬದಲಾವಣೆಯು ಪರಿಶಿಷ್ಟ ಜಾತಿ ಕೃಷಿ ಕಾರ್ಮಿಕ ಕುಟುಂಬಗಳಲ್ಲಿ ಮತ್ತು ಕ್ಯಾಶುವಲ ಮತ್ತು ಕಾರ್ಮಿಕರ ಕುಟುಂಬದಲ್ಲಿ ಕಡಿಮೆಯಾಗಿದ್ದನ್ನು ಗುರುತಿಸಿದ್ದಾರೆ. ಆದರೆ ಪರಿಶಿಷ್ಟ ಪಂಗಡದ ಸಮುದಾಯದಲ್ಲಿ ಈ ಬದಲಾವಣೆಯು ತೃಪ್ತಿಕರವಾಗಿಲ್ಲ ಎಂದು ಲೇಖಕರು ಅಭಿಪ್ರಾಯ ಪಟ್ಟಿದ್ದಾರೆ.

ಮಧುರಾ ಸ್ವಾಮಿನಾಥನ್ (2010) ರವರು ತಮ್ಮ ಲೇಖನ "ದಿ ನ್ಯೂ ಪಾವರ್ಟಿ ಲೈನ್: ಎ ಮೆಥಡೊಲೊಜಿ ಡಿಪ್ಲಿ ಫ್ಲಾಡ್" ನಲ್ಲಿ ಸುರೇಶ ತೆಂಡೂಲ್ಕರ್‌ರವರ ನೇತೃತ್ವದಲ್ಲಿ ಬಡತನವನ್ನು ಅಂದಾಜಿಸಲು ಕಾರ್ಯವಿಧಾನವನ್ನು ಸೂಚಿಸಲು ನೇಮಿಸಿದ ತಜ್ಞರ ಸಮಿತಿಯ ವರದಿಯ ಬಗ್ಗೆ ಚರ್ಚಿಸಿದ್ದಾರೆ. ಹೀಗೆ ಚರ್ಚಿಸುತ್ತಾ ತಜ್ಞರ ಸಮಿತಿಯು ಈಗಾಗಲೇ ಚಾಲ್ತಿಯಲ್ಲಿರುವ ಬಡತನದ ರೇಖೆಯೇ ಗ್ರಾಮೀಣ ಮತ್ತು ನಗರ ಪ್ರದೇಶಕ್ಕೆ ಶಿಫಾರಸ್ಸು ಮಾಡಿದೆ ಎಂದು ಲೇಖಕರು ತಮ್ಮ ಅಭಿಪ್ರಾಯ ವ್ಯಕ್ತಪಡಿಸುತ್ತಾರೆ ಮತ್ತು ಈ ಶಿಫಾರಸ್ಸಿಗೆ ಮೂಲ ಕಾರಣಗಳು ಅವಧಿಯಲ್ಲಾದ ಸಂಖ್ಯಾಶಾಸ್ತ್ರದ ಸ್ಥಿರತೆ ಮತ್ತು ಸಾಮಾನ್ಯವಾಗಿ ಒಪ್ಪಿಗೆಯಾಗುವಂತ ಬಡತನ ರೇಖೆಯನ್ನು ಹೇಳಲಾಗಿದೆ. ಕಳೆದ ಕೆಲವು ವರ್ಷಗಳಿಂದ ಭಾರತದ ಮೇಲೆ ಬಡತನದ ರೇಖೆಯು ನಿರ್ಧರಿಸುವ ಅಂಶಗಳನ್ನು ಬದಲಾಯಿಸಲು ಒತ್ತಡವಿದೆ ಎಂದು ಲೇಖಕರು ಉಲ್ಲೇಖಿಸುತ್ತಾರೆ. ಪ್ರಸ್ತುತದ ಬಡತನದ ರೇಖೆಯು ಒಟ್ಟು ಕುಟುಂಬಗಳು ಮತ್ತು ಒಟ್ಟು ಬಡವರನ್ನು ಕೆಳಮಟ್ಟದಲ್ಲಿ ಅಂದಾಜಿಸಿ ತೋರಿಸಲಾಗಿದೆ ಇದರ ಪರಿಣಾಮವಾಗಿ ನೂರಾರು

ದಶಲಕ್ಷ ಬಡ ಕುಟುಂಬಗಳು ಅಭಿವೃದ್ಧಿಯ ಕಾರ್ಯಕ್ರಮಗಳಿಂದ ವಂಚಿತಗೊಳ್ಳುತ್ತವೆ. ಹೀಗೆ ವಂಚಿತಗೊಂಡವರು ಪೌಷ್ಠಿಕತೆಯಿಂದ ಮತ್ತು ಸಾರ್ವಜನಿಕ ವಿತರಣಾ ವ್ಯವಸ್ಥೆಯಿಂದ ದೂರ ಉಳಿಯುತ್ತಾರೆ. ಪ್ರಸ್ತುತ ಬಡತನ ರೇಖೆಯು ಕ್ರೀ.ಶ.1973–74ರಲ್ಲಿ ನಡೆಸಿದ ಗ್ರಾಹಕ ವರ್ತನೆಯ ಸಮೀಕ್ಷೆ ಆಧರಿಸಿ ಅನುಭೋಗದ ಸರಾಸರಿ ಮತ್ತು ದಿನ ಪ್ರತಿ ವ್ಯಕ್ತಿಗೆ 2100 ಕ್ಯಾಲೋರಿಗಳು ನಗರ ಪ್ರದೇಶ ಮತ್ತು 2400 ಕ್ಯಾಲೋರಿಗಳು ಪೌಷ್ಠಿಕ ಆಹಾರವನ್ನು ತೆಗೆದುಕೊಳ್ಳುವವರನ್ನು, ಇತರೆ ಸೂಚಕಗಳಾದ ಆರೋಗ್ಯ, ಶಿಕ್ಷಣ ಮತ್ತು ಇತರ ಮೂಲಭೂತ ಅವಶ್ಯಕತೆಗಳ ಮೇಲೆ ಕೇಂದ್ರೀಕರಿಸಿದೆ. ಕೇವಲ ಆಹಾರ ಬಳಕೆಯ ಮೇಲೆ ಕೇಂದ್ರೀಕೃತವಾಗಿದೆ ಮತ್ತು ಇದು ಬಹಳ ಕಡಿಮೆ ಮಟ್ಟದಲ್ಲಿದೆ ಎಂದು ಟೀಕೆಗೊಳಪಟ್ಟಿತ್ತು ಎಂದು ಲೇಖಕರು ಪ್ರತಿಪಾದಿಸಿದರು.

ಎಂ.ಚಂದ್ರ ಪೂಜಾರಿ (2012) ರವರ ವಿಜಯ ಕರ್ನಾಟಕ ದಿನಪತ್ರಿಕೆಯಲ್ಲಿ ಪ್ರಕಟವಾದ ಲೇಖನ "ಅಭಿವೃದ್ಧಿ ಮತ್ತು ಬಡತನ ನಿವಾರಣೆ"ದಲ್ಲಿ ಎಲ್ಲ ಅಭಿವೃದ್ಧಿ ಕಾರ್ಯಕ್ರಮಗಳ ಉದ್ದೇಶ ಬಡತನ ನಿವಾರಣೆ ಆದರೆ ಉದ್ದೇಶಗಳು ಎರಡು ವಿಧವಾಗಿರುತ್ತವೆ. ಒಂದು ನೇರವಾಗಿದ್ದರೆ ಮತ್ತೊಂದು ಪರೋಕ್ಷವಾಗಿರುತ್ತವೆ. ಈಗಿರುವ ಬಡತನ 70 ಮತ್ತು 80ರ ದಶಕದ ಪ್ರಮಾಣದಲ್ಲಿ ಇದ್ದರೂ ಸಂಪೂರ್ಣ ನಿವಾರಣೆಯಾಗಿಲ್ಲ, ನಮ್ಮ ಸಮಾಜದ ಮೂರನೇ ಒಂದಕ್ಕಿಂತ ಸ್ವಲ್ಪ ಹೆಚ್ಚು ಕುಟುಂಬಗಳು ಮೂರು ಹೊತ್ತಿನ ಊಟಕ್ಕೆ ಪರದಾಡುತ್ತವೆ. ಅರ್ಜುನ್ ಸೇನ್ ಗುಪ್ತಾ ಸಮಿತಿಯ ವರದಿಯನ್ನು ಉಲ್ಲೇಖಿಸುತ್ತಾ ಶೇ 77 ರಷ್ಟು ಜನರ ದಿನದ ಆದಾಯ 20 ರೂಪಾಯಿಗಳಿಗಿಂತಲೂ ಕಡಿಮೆ ಇದೆ ಮತ್ತು ಶೇ 50ರಷ್ಟು ಬಡವರಿದ್ದಾರೆಂದು ಹೇಳಲು ಪುರಾವೆಗಳಿವೆ ಎಂದು ಅಭಿಪ್ರಾಯಪಟ್ಟಿದ್ದಾರೆ. ಮುಂದುವರೆದು ಬಡತನವನ್ನು ಕೇವಲ ಆರ್ಥಿಕ ಸಮಸ್ಯೆಯೆಂದು ವಿಂಗಡಿಸಲಾಗಿದೆ ಮತ್ತು ಇದು ಆರ್ಥಿಕ ಬೆಳವಣಿಗೆಗೆ ಮಹತ್ವ ನೀಡಿದೆ. ಆದರೆ ಬಡತನ ಕೇವಲ ಆರ್ಥಿಕ ಸಮಸ್ಯೆಯಲ್ಲ ಇದು ಸಮಾನತೆಯ ಸಮಸ್ಯೆ ಎಂದು ಲೇಖಕರು ಅಭಿಪ್ರಾಯಪಟ್ಟಿದ್ದಾರೆ.

ಸಿ.ಎ.ಕೆ. ಯಸೂದಿಯಾ (2007) ರವರು, ತಮ್ಮ ಲೇಖನ "ಪಾವರ್ಟಿ ಎಲಿವೆಷನ ಪ್ರೋಗ್ರಾಮ್ಸ ಇನ್ ಇಂಡಿಯಾ: ಎ ಸೋಶಿಯಲ್ ಆಡಿಟ" ದಲ್ಲಿ ಲೇಖಕರು ಬಡತನ ಕಡಿಮೆಯಾಗುವದರಲ್ಲಿ ಆರ್ಥಿಕ ಸುಧಾರಣೆಯ ನಂತರದ ಪಾತ್ರ ಮತ್ತು ಆರ್ಥಿಕ ಸುಧಾರಣೆಯ ಪೂರ್ವದಲ್ಲಿರುವ ಬಡತನವನ್ನು ತಗ್ಗಿಸುವ ಕಾರ್ಯಕ್ರಮಗಳ ಸಾಮಾಜಿಕ ಪರಿಶೋಧನೆಯ ಮೂಲಕ ಪರಾಮರ್ಶಿಸಲಾಗಿದೆ. ಆರ್ಥಿಕ ಸುಧಾರಣೆಯು ಎಲ್ಲರಿಗೂ ಸಮನಾಗಿ ತಲುಪಿಲ್ಲ. ಕೆಲವರು ಹಿಂದಿದ್ದರೆ ಮತ್ತೆ ಕೆಲವರನ್ನು ಸಂಪೂರ್ಣವಾಗಿ ಮರೆತು ಬಿಟ್ಟಿದೆ. ಇದಕ್ಕೆ ಹಲವಾರು ಕಾರಣಗಳಿವೆ, ಒಂದು ಬಲವಾದ ಕಾರಣವೆಂದರೆ ಆಧುನಿಕ ಆರ್ಥಿಕತೆಯ ಪ್ರಗತಿಯು ಕಾರ್ಮಿಕರಿಂದ ಕೂಡಿರದೆ ಯಂತ್ರಗಳಿಂದ ಕೂಡಿದೆ, ಇದರಿಂದ ಉದ್ಯೋಗ ಕ್ಷೇತ್ರದಲ್ಲಿ ಸಾಕಷ್ಟು

ಪ್ರಮಾಣದಲ್ಲಿ ಉದ್ಯೋಗಗಳನ್ನು ಸೃಷ್ಟಿಸುತ್ತಿಲ್ಲ ಮತ್ತು ಕೆಲವೊಂದು ಸಮಯದಲ್ಲಿ ಇರುವ ಕಾರ್ಮಿಕರನ್ನು ತೆಗೆದುಹಾಗಿ ಹೊಸ ಆಧುನಿಕ ಯಂತ್ರಗಳಿಂದ ಆರ್ಥಿಕ ಪ್ರಗತಿಯನ್ನು ಸಾಧಿಸಲಾಗುತ್ತದೆ. ದೇಶದ 1/3 ರಷ್ಟು ಜನಸಂಖ್ಯೆ ಈಗಲೂ ಸಹ ಅನಕ್ಷರಸ್ಥೆಯಿಂದ ಕೂಡಿದೆ. ಅನೇಕ ಅಕ್ಷರಸ್ಥರಲ್ಲಿ ಇಂದಿನ ಆಧುನಿಕ ಅರ್ಥವ್ಯವಸ್ಥೆಯಲ್ಲಿ ದುಡಿಯುವ ಕೌಶಲ್ಯಗಳಲ್ಲಿ ಈಗಿನ ಶಿಕ್ಷಣವು ಆರ್ಥಿಕತೆಗೆ ತಕ್ಕಂತೆ ಬದಲಾವಣೆಯಾಗಿಲ್ಲ. ಗ್ರಾಮೀಣ ಭಾರತದಲ್ಲಿರುವ ವ್ಯವಸಾಯಗಾರರು ಆಧುನಿಕ ತಂತ್ರಜ್ಞಾನಕ್ಕೆ ತಕ್ಕಂತೆ ಅವರ ಭೂಮಿ ಮತ್ತು ಉತ್ಪಾದನೆಯಲ್ಲಿ ಬದಲಾವಣೆಯಾಗಿಲ್ಲ. ಇದರಿಂದ ಇವರು ನಗರ ಪ್ರದೇಶಗಳಿಗೆ ವಲಸೆ ಹೋಗುತ್ತಾರೆ. ಆದರೆ ಅಲ್ಲಿ ಅವರಿಗೆ ಕೆಲಸ ಮಾಡಲು ಯಾವುದೇ ತರಹದ ವೃತ್ತಿ ಕೌಶಲ್ಯ ಇರುವುದಿಲ್ಲ. ದೇಶದಲ್ಲಿರುವ ಬಡತನ ರೇಖೆಯ ಕೆಳಗಿರುವ ಕುಟುಂಬಗಳಿಗೆ ಸರಕಾರದಿಂದ ಹೆಚ್ಚಿನ ಸಹಾಯ ಅಥವಾ ನೆರವಿನ ಕಾರ್ಯಕ್ರಮಗಳನ್ನು ಹಾಕಿಕೊಂಡಿದೆ.

ಬಡತನ ನಿವಾರಣೆಯ ಯೋಜನೆಗಳನ್ನು ಒಟ್ಟು ಐದು ಪ್ರಕಾರಗಳಾಗಿ ವಿಂಗಡಿಸಿದ್ದಾರೆ. 1. ಸ್ವ ಉದ್ಯೋಗದ ಕಾರ್ಯಕ್ರಮಗಳು, 2. ಕೂಲಿ ಉದ್ಯೋಗದ ಕಾರ್ಯಕ್ರಮಗಳು, 3. ಆಹಾರ ಭದ್ರತೆಯ ಕಾರ್ಯಕ್ರಮಗಳು, 4. ಸಾಮಾಜಿಕ ಭದ್ರತೆಯ ಕಾರ್ಯಕ್ರಮಗಳು, 5. ನಗರದ ಬಡತನವನ್ನು ತಗ್ಗಿಸುವ ಕಾರ್ಯಕ್ರಮಗಳು. ಹೀಗೆ ಈ ಎಲ್ಲಾ ಕಾರ್ಯಕ್ರಮಗಳನ್ನು ಸಾಮಾಜಿಕ ಪರಿಶೋಧನೆಗೆ ಒಳಪಡಿಸಿ ಲೇಖಕರು ಈ ಕೆಳಗಿನ ಅಭಿಪ್ರಾಯಗಳನ್ನು ವ್ಯಕ್ತಪಡಿಸುತ್ತಾರೆ. ದುರಾದೃಷ್ಟವೆಂದರೆ ಈಗಿನ ತೀವ್ರವಾಗಿ ಬೆಳೆಯುತ್ತಿರುವ ಆರ್ಥಿಕ ಪ್ರಗತಿಯಲ್ಲಿ ಸಾಮಾಜಿಕ ಕ್ಷೇತ್ರಗಳ ಅಭಿವೃದ್ಧಿಗಾಗಿ ವ್ಯಯಿಸುವ ಒಟ್ಟು ಹಣದ ಪ್ರಮಾಣವು ತೀವ್ರವಾಗಿ ಕಡಿಮೆಯಾಗಿದೆ. ಆರ್ಥಿಕ ಪ್ರಗತಿಯ ಫಲವು ಸಮುದಾಯದ ಎಲ್ಲ ವರ್ಗಗಳಿಗೆ ಮುಟ್ಟಿದರೆ ಅವರ ಜೀವನ ಮಟ್ಟ ಸುಧಾರಿಸುವುದರಿಂದ ಆರೋಗ್ಯದಲ್ಲಿ ಸುಧಾರಣೆ, ಉದ್ಯೋಗದ ಕೌಶಲ್ಯ ಮತ್ತು ಜನರ ಕೊಂಡುಕೊಳ್ಳುವ ಶಕ್ತಿ ವೃದ್ಧಿಸಿದ್ದರೆ ದೇಶದ ಆರ್ಥಿಕ ಹೂಡಿಕೆಯು ಹೆಚ್ಚಾಗುತ್ತದೆ. ಬಡತನದ ಚರ್ಚೆಯು ಕೇವಲ ಆರ್ಥಿಕ ತಜ್ಞರ ಪ್ರಮುಖ ವಿಷಯವಾಗಿದೆ. ಇದು ಆದಾಯ, ಖರ್ಚು ಮತ್ತು ಪೌಷ್ಟಿಕತೆಯ ಆಹಾರದ ಮೇಲೆ ವ್ಯಾಖ್ಯಾನಿಲ್ಪಡುತ್ತದೆ. ಬಡತನದ ಸಾಮಾಜಿಕ ಆಯಾಮವು ಸಂಪೂರ್ಣವಾಗಿ ನಗಣ್ಯವಾಗಿದೆ. ವ್ಯಕ್ತಿ/ಕುಟುಂಬ/ಗುಂಪಿನ ಅಂಚಿನ ಅಥವಾ ಕೆಳಸ್ತರದ ಜನರ ಬೇಕು ಬೇಡಿಕೆಗಳನ್ನು ಸಂಪೂರ್ಣವಾಗಿ ಈಡೇರಿಸಿಲ್ಲ. ದೇಶವು ಆರ್ಥಿಕ ಪ್ರಗತಿಯನ್ನು ಪಡೆದುಕೊಳ್ಳಬೇಕಾದರೆ ಸಮಾಜದ ಅಂಚಿನಲ್ಲಿರುವ ಜನರ ಏಳಿಗೆಯಿಂದ ಮಾತ್ರ ಸಾಧ್ಯ. ಆರ್ಥಿಕ ಪ್ರಗತಿಯ ಕಾರ್ಯ ವಿಧಾನವು ಶಿಕ್ಷಣ ಮತ್ತು ಆರೋಗ್ಯದ ಸೇವೆಗಳು ಸಮುದಾಯದ ಎಲ್ಲ ಜನರಿಗೆ ತ್ವರಿತ ಗತಿಯಲ್ಲಿ ಪಡೆಯುವಂತಾಗಬೇಕು ವಿಶೇಷವಾಗಿ ಸಮುದಾಯದ ಅಂಚಿನಲ್ಲಿರುವ ಪ್ರಜೆಗಳಿಗೆ ಬಡತನ ತಗ್ಗಿಸುವ ಕಾರ್ಯಕ್ರಮಗಳ ಲಾಭ

ದೊರಕುವಂತಾಗಬೇಕು. ಅಜ್ಞಾನ ಮತ್ತು ಬಡತನ ಮತ್ತು ಅನಾರೋಗ್ಯ ಮತ್ತು ಬಡತನದ ನಡುವೆ ಸ್ಪಷ್ಟವಾದ ಮತ್ತು ನಿಖರವಾದ ಸ್ಥಾಪಿತ ಸಂಬಂಧಗಳಿವೆ. ಜನರು ಬಡತನದಿಂದ ಅನಾರೋಗ್ಯಕ್ಕೆ ತಳ್ಳಲ್ಪಡುತ್ತಾರೆ ಮತ್ತು ಬಡವರು ತಮ್ಮ ಗುಣಮಟ್ಟದ ಆರೋಗ್ಯವನ್ನು ಕಾಪಾಡಿಕೊಳ್ಳಲು ಸರಿಯಾದ ಸಂಪನ್ಮೂಲಗಳಿಲ್ಲ ಇದಕ್ಕಾಗಿ ಇವರು ಸಾಲಮಾಡಿ ಆರೋಗ್ಯದ ಆರೈಕೆಯನ್ನು ಪಡೆದುಕೊಳ್ಳಬೇಕಾಗುತ್ತದೆ. ಈ ರೀತಿ ಆರೋಗ್ಯಕ್ಕಾಗಿ ಮಾಡಿದ ಸಾಲವು ಬಡತನಕ್ಕೆ ತಳ್ಳಲ್ಪಟ್ಟಿರುವುದರ ಕುರಿತು ಅನೇಕ ಸಂಶೋಧನೆಯಾಗಿವೆ. ಆದ್ದರಿಂದ ಬಡತನವು ಕೇವಲ ಆರ್ಥಿಕ ಆಯಾಮದಿಂದ ಕೂಡಿರದೆ ಹಲವಾರು ಅಯಾಮಗಳಿಂದ ಕೂಡಿದ ಅಸಾಧರಣ ಮತ್ತು ಬಹಳ ಕ್ಲಿಷ್ಟಕರವಾದ ಅಂಶವಾಗಿದೆ. ಆದ್ದರಿಂದ ಬಡತನವನ್ನು ತಗ್ಗಿಸುವ ಕಾರ್ಯಕ್ರಮಗಳು ಬಹಳ ವಿಶಾಲವಾದ ಸಾಮಾಜಿಕ ಮತ್ತು ಆರ್ಥಿಕ ದೃಷ್ಟಿಕೋನಗಳಿಂದ ಕೂಡಿರಬೇಕೆಂದು ಲೇಖಕರು ಅಭಿಪ್ರಾಯವನ್ನು ವ್ಯಕ್ತಪಡಿಸುತ್ತಾರೆ.

ಅಮಿತಾ ಶಾ (2002) ರವರ ವಿವಿಧ ಅನುಷಂಗಿಕ ಮೂಲಗಳಿಂದ ಮಾಹಿತಿಗಳನ್ನು ಕಲೆಹಾಕಿ ಈ ಒಂದು ಲೇಖನವನ್ನು ಭಾರತದಲ್ಲಿರುವ ಒಣಭೂಮಿ ಪ್ರದೇಶ ಮತ್ತು ಅರಣ್ಯ ಆಧಾರಿತ ಪ್ರದೇಶಗಳಾಗಿ ವಿಂಗಡಿಸಿ ರಾಜ್ಯವಾರು ಮತ್ತು ರಾಜ್ಯದಲ್ಲಿನ ಪ್ರಾದೇಶಿಕವಾಗಿ ಮಾಹಿತಿಯನ್ನು ವಿಶ್ಲೇಷಿಸಿದ್ದಾರೆ. ಈ ರೀತಿಯಾಗಿ ವಿಶ್ಲೇಷಿಸಿದ ಮಾಹಿತಿಯನ್ನು ಕರ್ನಾಟಕಕ್ಕೆ ಸಂಬಂಧಪಟ್ಟಂತೆ ಈ ಕೆಳಗಿನಂತೆ ವಿಶ್ಲೇಷಿಸುತ್ತಾರೆ. ಕರ್ನಾಟಕದಲ್ಲಿ ಶೇ.68ರಷ್ಟು ಬಡವರು ಒಣ ಭೂ ಪ್ರದೇಶ ಕೇಂದ್ರಿಕೃತರಾಗಿದ್ದಾರೆ ಮತ್ತು ಇದು ಕರಾವಳಿ ಪ್ರದೇಶದಲ್ಲಿ ಶೇ.9.4ರಷ್ಟು ಈಶಾನ್ಯ ಒಳನಾಡಿನಲ್ಲಿ ಶೇ.13.7 ರಷ್ಟು ದಕ್ಷಿಣ ಒಳನಾಡಿನಲ್ಲಿ ಶೇ.29.46ರಷ್ಟು ಹಾಗೂ ಉತ್ತರ ಒಳನಾಡಿನಲ್ಲಿ ಶೇ.37.68ರಷ್ಟು ಬಡಕುಂಟುಂಬಗಳಿವೆ ಎಂದು ಅಭಿಪ್ರಾಯ ವ್ಯಕ್ತಪಡಿಸಿಮುಂದಿನ ಅಭಿವೃದ್ಧಿ ಯೋಜನೆಗಳು ಬಡವರು ಮತ್ತು ಕಡುಬಡವರನ್ನು ದೃಷ್ಠಿಯಲ್ಲಿ ಇಟ್ಟುಕೊಂಡು ಸರ್ವತೋಮುಖ ಅಭಿವೃದ್ಧಿಯಲ್ಲಿ ಗೆಲುವು ಸಾಧಿಸಬಹುದೆಂದು ತಮ್ಮ ನಿಲುವನ್ನು ವ್ಯಕ್ತಪಡಿಸುತ್ತಾರೆ.

ಯು.ಎನ್.ಡಿ.ಪಿ. (2008) ಗುಲಬರ್ಗಾ ಜಿಲ್ಲೆ ಮಾನವ ಅಭಿವೃದ್ಧಿ ವರದಿ ಪ್ರಕಾರ ಬಡತನವು ಬಡವರಿಗೆ ಎರಗಿರುವ ಶಾಪವಾಗಿದೆ. ಜನರ ಎಲ್ಲಾ ಸಮಸ್ಯೆಗಳ ಮೂಲವೆಂದರೆ ಬಡತನ. ಗುಲಬರ್ಗಾ ಜಿಲ್ಲೆಯಲ್ಲಿ ಶೇ.22ರಷ್ಟು ಕುಟುಂಬಗಳು ಬಿ.ಪಿ.ಎಲ್. ಕುಟುಂಬಗಳಾಗಿವೆ. ಬಡತನದ ರೇಖೆಯ ಕೆಳಗೆ ಜೀವಿಸುತ್ತಿರುವ ಜನರ ಪ್ರಮಾಣ ಶೇ.26.8. ಇಲ್ಲಿ ಜನರ ವರಮಾನದ ಆಧಾರದ ಮೇಲೆ ಬಡತನವನ್ನು ಗುರುತಿಸಲಾಗಿದೆ. ಅದರ ಮಾಹಿತಿ ದೊರೆಯದೆ ಇದ್ದಾಗ ಅನ್ಯ ವಿಧಾನಗಳನ್ನು ಬಳಸಿ ಬಡತನವನ್ನು ಗುರುತಿಸಲಾಗಿದೆ. ಇಲ್ಲಿ ಅತ್ಯಂತ ಕಚ್ಚಾ ವಿಧಾನವನ್ನು ಬಳಸಿ ಬಡತನದ ಸೂಚ್ಯಂಕವನ್ನು ಮಾಪನ ಮಾಡಲಾಗಿದೆ. ಇಲ್ಲಿ ಒಟ್ಟು 5

ಸೂಚಿಗಳಾದ ಅನಕ್ಷರಸ್ಥರ ಪ್ರಮಾಣ, ದುಡಿಮೆಗಾರರಲ್ಲದವರ ಪ್ರಮಾಣ, ಒಟ್ಟು ಪ್ರಧಾನ ದುಡಿಮೆಗಾರರಲ್ಲಿ ಕೂಲಿಕಾರರ ಪ್ರಮಾಣ, ಅಪ್ರಧಾನ ದುಡಿಮೆಗಾರರ ಪ್ರಮಾಣ ಮತ್ತು ಬಡತನದ ರೇಖೆ ಕೆಳಗಿರುವ ಕುಟುಂಬಗಳ ಪ್ರಮಾಣಗಳನ್ನು ಬಳಸಿ ಬಡತನದ ಸೂಚ್ಯಂಕಗಳನ್ನು ಲೆಕ್ಕ ಹಾಕಲಾಗಿದೆ. ಗುಲಬರ್ಗ ಜಿಲ್ಲೆಯು ಕಳೆದ 40ವರ್ಷಗಳಿಂದಲೂ ಹಿಂದುಳಿದಿರುವ ಸ್ಥಿತಿಯಲ್ಲೇ ಮುಂದುವರೆದಿದೆ. ಅಭಿವೃದ್ಧಿಯು ತುಂಬಾ ಕೆಳಮಟ್ಟದಲ್ಲಿದೆ. ಭೂರಹಿತ ಕೃಷಿ ಕೂಲಿಕಾರರ ಪ್ರಮಾಣ ತುಂಬಾ ಅಗಾಧವಾಗಿದೆ. ಅತ್ಯಂತ ಕೆಳ ಮಟ್ಟದಲ್ಲಿರುವ ಕೃಷಿ–ಕೂಲಿ ಮತ್ತು ಒಣ ಭೂಮಿ ಬೇಸಾಯದಲ್ಲಿ ದುಡಿಮೆ ಅವಕಾಶಗಳು ವರ್ಷದಲ್ಲಿ ಕೆಲವು ತಿಂಗಳ ಮಾತ್ರ ಇರುವುದರಿಂದ ಬಡತನ ಇಲ್ಲಿ ಅನಿವಾರ್ಯವಾಗಿಬಿಟ್ಟಿದೆ ಎಂದು ವ್ಯಕ್ತಪಡಿಸಲಾಗಿದೆ.

ಶಿವಕುಮಾರಸ್ವಾಮಿ (2012) ರವರು ತಮ್ಮ ಲೇಖನದಲ್ಲಿ ರಾಜ್ಯದಲ್ಲಿ ಗುರಿಗೊಳಿಸಲಾದ ವಿತರಣಾ ವ್ಯವಸ್ಥೆಯು ರಾಜ್ಯಮಟ್ಟ, ಜಿಲ್ಲಾ ಮಟ್ಟ ಮತ್ತು ತಾಲ್ಲೂಕು ಮಟ್ಟದಲ್ಲಿ ಕಾರ್ಯನಿರ್ವಹಿಸುತ್ತಿದೆ. ಆಹಾರ ಧಾನ್ಯಗಳನ್ನು ನೋಂದಾಯಿಸಿದ ಸಗಟುದಾರರು ಭಾರತೀಯ ಆಹಾರ ನಿಗಮದಿಂದ ತೆಗೆದುಕೊಂಡು ನಂತರ ತಾಲ್ಲೂಕು ಮಟ್ಟದ ದಾಸ್ತಾನಿನಲ್ಲಿ ಸಂಗ್ರಹಿಸಿಟ್ಟು ನ್ಯಾಯಬೆಲೆ ಅಂಗಡಿಗಳ ಮೂಲಕ ಅವುಗಳನ್ನು ಬಡಜನರಿಗೆ ಹಾಗೂ ಪಡಿತರ ಚೀಟಿದಾರರಿಗೆ ಸಹಾಯಧನದ ದರದಲ್ಲಿ ವಿತರಿಸುವ ಉದ್ದೇಶವನ್ನು ಹೊಂದಿತ್ತು. ಆದರೆ ಈ ವ್ಯವಸ್ಥೆಯು ಬಡಜನರ ಆಹಾರ ಭದ್ರತೆಯನ್ನು ಮತ್ತು ಆಹಾರ ಧಾನ್ಯಗಳ ವಿತರಣೆಯಲ್ಲಿ ಪಾರದರ್ಶಕತೆಯನ್ನು ಕಾಯ್ದುಕೊಳ್ಳುವಲ್ಲಿ ವಿಫಲವಾಯಿತು ಮತ್ತು ಇದು ಹೆಚ್ಚು ವ್ಯಾಪಕವಾಗಿರದೆ ನಗರವಾಸಿಗಳ ಪರವಾಗಿದೆ ಎಂದು ಲೇಖಕರು ತಮ್ಮ ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದಾರೆ.

ಎಂ.ಚಂದ್ರ ಪೂಜಾರಿ (2017)ರವರ "ಮಾರುಕಟ್ಟೆ ಅಭಿವೃದ್ಧಿ ಮತ್ತು ಪ್ರಜಾಪ್ರಭುತ್ವ" ಎಂಬ ಲೇಖನದಲ್ಲಿ ತೊಂಬತ್ತರ ದಶಕದ ನಂತರದಲ್ಲಿ ಅಧಿಕೃತವಾಗಿ ನಮ್ಮ ದೇಶದಲ್ಲಿ ನಿಯೋ ಲಿಬರಲ್ ಅಥವಾ ಉದಾರೀಕರಣ, ಖಾಸಗೀಕರಣ, ಜಾಗತೀಕರಣ ನೀತಿಗಳು ಬಹಳ ಯಶಸ್ವಿಯಾಗಿವೆ. ಜನರ ಖರೀದಿಸುವ ಶಕ್ತಿ ಮತ್ತು ಅವರು ಅನುಭವಿಸುವ ಸರಕು ಸೇವೆ ಅಥವಾ ಉತ್ಪಾದನಾ ಪರಿಕರಗಳ ನಡುವೆ ನೇರ ಸಂಬಂಧ ಕಲ್ಪಿಸಲಾಗಿದೆ. ಬಡವರಲ್ಲದವರು ಮಾರುಕಟ್ಟೆಯಲ್ಲಿ ದರ ಹೆಚ್ಚಿದ್ದರೂ ಸಹ ಖರೀದಿ ಮಾಡಿ ತಮ್ಮ ಜೀವನವನ್ನು ಸಾಗಿಸುತ್ತಾರೆ ಆದರೆ ಬಡವರು ಸರಕಾರ ಕೊಡುವ ಕಾರ್ಯಕ್ರಮಗಳ ಮೇಲೆ ಮಾತ್ರ ಅವಲಂಬಿತರಾಗಿದ್ದಾರೆ. ಇದರಿಂದ ಬಡವರು ತೀರ ಬಡವರಾಗಿ ಮತ್ತು ಉಳ್ಳವರು ತಮ್ಮ ಸಂಪತ್ತನ್ನು ಹೆಚ್ಚಿಗೆ ಮಾಡಿಕೊಳ್ಳುವಲ್ಲಿ ನಿರತರಾಗಿದ್ದಾರೆ. ಒಟ್ಟಾರೆಯಾಗಿ, ನಮ್ಮ ಸಮಾಜವನ್ನು ಒಂದು ಪಿರಮಿಡ್ ಆಕೃತಿಯಲ್ಲಿ ರೂಪಿಸುವಲ್ಲಿ ನಿಯೋ ಲಿಬರಲ್ ಆರ್ಥಿಕ ನೀತಿಗಳು ತಮ್ಮ ಗುರಿಗಳನ್ನು ಯಶಸ್ವಿಯಾಗಿ ಮುಟ್ಟಿವೆ ಎಂದು ಲೇಖಕರು ಉಲ್ಲೇಖಿಸಿದ್ದಾರೆ.

ಏನೇ ಆದರೂ ಸಹ ಎಷ್ಟೇ ಸಮಿತಿಗಳನ್ನು ರಚಿಸಿದರೂ ಸಹ ಎಲ್ಲವೂ ಅರ್ಥಶಾಸ್ತ್ರದ ಸುತ್ತಮುತ್ತಲೇ ಗಿರಕಿ ಹೊಡೆಯುತ್ತವೆ. ಈ ಎಲ್ಲಾ ಸಮಿತಿಗಳು ಒಂದು ಬಡತನ ರೇಖೆಯ ಕೆಳಗಿನ ಕುಟುಂಬಕ್ಕೆ ಒಂದು ತಿಂಗಳಿಗೆ ಅಥವಾ ವರ್ಷಕ್ಕೆ ಬೇಕಾಗುವ ಆಹಾರ, ಆರೋಗ್ಯದ ಖರ್ಚು, ಶಿಕ್ಷಣದ ಖರ್ಚು, ಕುಡಿಯುವ ನೀರಿನ ಖರ್ಚು ಮತ್ತು ಇನ್ನಿತರವಾಗಿ ಒಂದು ಕುಂಟುಬವನ್ನು ನಡೆಸಿಕೊಂಡು ಹೋಗಲು ಬೇಕಾಗುವ ವಸ್ತುಗಳನ್ನು ಮರೆತು ಸಂಖ್ಯಾಶಾಸ್ತ್ರೀಯವಾಗಿ ಪರಿಗಣಿಸಿವೆ ಹೊರತಾಗಿ ಸಾಮಾಜಿಕ ಅಂಶಗಳನ್ನು ಪರಿಗಣನೆಗೆ ತೆಗೆದುಕೊಂಡಿಲ್ಲ ಎಂದು ಹೇಳಬಹುದು. ಬಡತನ, ಬಡವರು ಮತ್ತು ಅವರ ಕುಟುಂಬಗಳನ್ನು ಆಧರಿಸಿ ನಡೆದ ಕೆಲವೊಂದು ಸಂಶೋಧನೆಗಳು, ವರದಿ ಮತ್ತು ಸರಕಾರದ ವರದಿಗಳನ್ನು ವಿಶ್ಲೇಷಿಸಿ ಕೆಲವೊಂದು ಪ್ರಶ್ನೆಗಳನ್ನು ಎತ್ತಲಾಗಿದೆ.

ಈ ಒಂದು ಅಧ್ಯಯನವು ಮೇಲಿನ ಸಮಸ್ಯೀಕರಣದ ಆಧಾರದ ಮೇಲೆ ಕೆಳಕಂಡ ಸಂಶೋಧನಾ ಪ್ರಶ್ನೆಗಳನ್ನು ಗುರುತಿಸಲಾಗಿದೆ. ಈ ಪ್ರಶ್ನೆಗಳು ಸಂಶೋಧನೆಗೆ ಮುನ್ನುಡಿಯಾಗಿವೆ. ಈಗಿನ ಆಧುನೀಕರಣ ಯುಗದಲ್ಲಿಯೂ ಸಹ ಪ್ರಾಚೀನಕಾಲದಿಂದ ಆಚರಣೆಯಲ್ಲಿರುವ ಜಾತಿ ಪದ್ಧತಿಯನ್ನು ಆಧರಿಸಿ ಮತ್ತು ಆಯಾ ಜಾತಿಯ ಕುಟುಂಬವನ್ನು ಹೊಂದಿರುವ ಭೂಮಿಯ ಪ್ರಮಾಣದ ಮೇಲೆ ಅವರನ್ನು ಕೆಳವರ್ಗ ಮತ್ತು ಮೇಲ್ವರ್ಗಗಳೆಂದು ವಿಂಗಡಿಸಿದ್ದಾರೆ. ಆದ್ದರಿಂದ ಸರಕಾರವು ಈಗಾಗಲೇ ಗುರುತಿಸಿದ ಹಲವಾರು ಸಮಿತಿಗಳಿಂದ ಬಡತನ ರೇಖೆಯ ಕೆಳಗಿನ ಕುಟುಂಬಗಳು ಎಂದು ಕರೆಯಿಸಿಕೊಳ್ಳುವ ಕುಟುಂಬಗಳ ಸಾಮಾಜಿಕ ಮತ್ತು ಆರ್ಥಿಕ ಹಿನ್ನಲೆ ಎನು? ಸರ್ಕಾರವು ಈ ಕುಟುಂಬಗಳ ಯೋಗಕ್ಷೇಮಕ್ಕಾಗಿ ಯಾವ ಯಾವ ಯೋಜನೆಗಳನ್ನು ಹಾಕಿಕೊಂಡಿದೆ? ಈ ಕುಟುಂಬಗಳ ಬೇಡಿಕೆ ಈಡೇರಿಸುವಲ್ಲಿ ಸರ್ಕಾರ ಮತ್ತು ಮಾರುಕಟ್ಟೆಗಳು ಎಷ್ಟರ ಮಟ್ಟಿಗೆ ತಮ್ಮ ಪಾತ್ರವನ್ನು ನಿರ್ವಹಿಸುತ್ತಿವೆ? ಬೇಡಿಕೆ ಮತ್ತು ಪೂರೈಕೆಗಳು ವಸತಿ, ಶಿಕ್ಷಣ, ಆರೋಗ್ಯ ಮತ್ತು ಕುಡಿಯುವ ನೀರಿನ ವಿಷಯಗಳಲ್ಲಿ ಯಾವ ರೀತಿಯಾಗಿ ವಿಭಿನ್ನವಾಗಿವೆ? ಕುಟುಂಬಗಳು ಸರಕಾರದ ಮೇಲೆ ಮತ್ತು ಮಾರುಕಟ್ಟೆಯ ಮೇಲೆ ಎಷ್ಟರ ಮಟ್ಟಿಗೆ ಅವಲಂಬಿಸಿವೆ? ಬಡತನಕ್ಕೆ ಸಂಬಂಧಿಸಿದ ಹಲವು ಅಂಶಗಳನ್ನು ತಿಳಿದುಕೊಳ್ಳುವುದು ಈ ಒಂದು ಸಂಶೋಧನೆಯು ಬಹಳ ಪ್ರಮುಖವಾಗಿದೆ ಎಂದು ಹೇಳಬಹುದು.

**ಅಧ್ಯಯನದ ಉದ್ದೇಶಗಳು**

ಜಾತಿ, ವರ್ಗ ಮತ್ತು ಮಾರುಕಟ್ಟಯ ಸಂಬಂಧವನ್ನು ಅರ್ಥ ಮಾಡಿಕೊಳ್ಳುವುದು ಈ ಅಧ್ಯಯನದ ಮುಖ್ಯ ಉದ್ದೇಶ. ಅಧ್ಯಯನ ನಿರ್ದಿಷ್ಟ ಉದ್ದೇಶಗಳು ಇಂತಿವೆ.

1. ಬಡತನ ರೇಖೆಯ ಕೆಳಗಿರುವ ಕುಟುಂಬಗಳ ಕ್ಷೇಮಾಭಿವೃದ್ಧಿಗಾಗಿ ಸರಕಾರವು ಹಾಕಿಕೊಂಡಿರುವ ಯೋಜನೆಗಳನ್ನು ಅಭ್ಯಸಿಸುವುದು.
2. ಬಡತನ ರೇಖೆಯ ಕೆಳಗಿರುವ ಕುಟುಂಬಗಳ ಸಾಮಾಜಿಕ ಮತ್ತು ಆರ್ಥಿಕ ಸ್ಥಿತಿಗಳನ್ನು ತಿಳಿದುಕೊಳ್ಳುವುದು.
3. ಬಡ ಕುಟುಂಬಗಳ ಆಹಾರ, ಆರೋಗ್ಯ, ಶಿಕ್ಷಣ, ಕುಡಿಯುವ ನೀರು ಮತ್ತು ಶೌಚಾಲಯದ ಅನುಭೋಗಗಳ ಬೇಡಿಕೆ ಮತ್ತು ಪೂರೈಕೆಗಳನ್ನು ನಿಭಾಯಿಸುವಲ್ಲಿ ಸರಕಾರದ ಮತ್ತು ಮಾರುಕಟ್ಟೆಯ ಪಾತ್ರವನ್ನು ಪರೀಕ್ಷಿಸುವುದು.
4. ಈಗಿರುವ ಸರಕಾರದ ಬಡತನ ನಿವಾರಣೆಯ ಯೋಜನೆಗಳು ಇನ್ನೂ ಉತ್ತಮವಾಗಿ ಜನರನ್ನು ತಲುಪಿ ಅವರ ಜೀವನ ಮಟ್ಟ ಸುಧಾರಣೆಗೆ ಸಲಹೆಗಳನ್ನು ನೀಡುವುದು.

**ಅಧ್ಯಯನದ ವಿಧಾನ:**

ಪ್ರಸ್ತುತ ಅಧ್ಯಯನ ವಿಧಾನವು ಎಂಪಿರಿಕಲ್ ಮಾದರಿಯ ಅಧ್ಯಯನವಾಗಿದೆ. ಅಧ್ಯಯನಕ್ಕೆ ಪೂರಕವಾಗಿ ಉದ್ದೇಶಗಳನ್ನು ವಿಶ್ಲೇಷಣೆಗೆ ಒಳಪಡಿಸಲು ಹಲವು ರೀತಿಯ ಮಾಹಿತಿಯ ಅಗತ್ಯವಿದೆ. ಒಂದು ಭಾರತ ಸರಕಾರವು ಕಾಲಕ್ಕೆ ತಕ್ಕಂತೆ ಬಡತನವನ್ನು ರಾಷ್ಟ್ರ ಮತ್ತು ರಾಜ್ಯ ಮಟ್ಟದಲ್ಲಿ ಅಂದಾಜಿಸಿ ಬಡತನವನ್ನು ಲೆಕ್ಕ ಹಾಕುವ ಸಮಿತಿಗಳ ವರದಿಗಳು. ಸರಕಾರವು ಈ ಸಮಿತಿಗಳು ನೀಡಿರುವ ವರದಿಗಳನ್ನು ಆಧರಿಸಿ ಬಡತನ ರೇಖೆಯ ಕೆಳಗಿನ ಕುಟುಂಬಗಳ ಕಲ್ಯಾಣಕ್ಕಾಗಿ ಹಾಕಿಕೊಡಿರುವ ಬಡತನ ನಿವಾರಣೆಯ ಕಾರ್ಯಕ್ರಮಗಳ ಅಧ್ಯಯನ. ಪ್ರಸ್ತುತ ಅಧ್ಯಯನವು ತೌಲನಿಕ ಸಂಶೋಧನೆ ಆಗಿರುವುದರಿಂದ ಕರ್ನಾಟಕದ ಹಿಂದುಳಿದ ಪ್ರದೇಶವಾದ ಹೈದ್ರಾಬಾದ–ಕರ್ನಾಟಕದ ಕಲಬುರಗಿ ಜಿಲ್ಲೆಯ ಕೊಂಕೊನಳ್ಳಿ ಮತ್ತು ಮುಂಬೈ–ಕರ್ನಾಟಕದ ಧಾರವಾಡ ಜಿಲ್ಲೆಯ ನಿಗದಿ ಗ್ರಾಮಗಳನ್ನು ಅಧ್ಯಯನಕ್ಕೆ ಆಯ್ಕೆಮಾಡಿಕೊಳ್ಳಲಾಯಿತು. ಆಯ್ಕೆ ಮಾಡಿಕೊಂಡ ಗ್ರಾಮಗಳಲ್ಲಿನ ಬಡತನ ರೇಖೆಯ ಕೆಳಗಿರುವ ಒಟ್ಟು ಕುಟುಂಬಗಳ ಪಟ್ಟಿಯಿಂದ ಆಧ್ಯಯನಕ್ಕೆ ಬೇಕಾದ ಕುಟುಂಬಗಳನ್ನು ಆಯ್ಕೆ ಮಾಡಿಕೊಳ್ಳಲಾಯಿತು. ಬಡತನ ರೇಖೆಯ ಕೆಳಗಿರುವ ಕುಟುಂಬಗಳ ಕುರಿತಾಗಿರುವದರಿಂದ ಈ ಅಧ್ಯಯನಕ್ಕೆ ಪ್ರಾಥಮಿಕ ಮತ್ತು ಅನುಷಂಗಿಕ ಮೂಲಕ ಮಾಹಿತಿಯನ್ನು ವಿವಿಧ ಗ್ರಂಥಾಲಯಗಳಿಗೆ ಭೇಟಿ ನೀಡಿ ಪ್ರಕಟಿತ ಮತ್ತು ಅಪ್ರಕಟಿತ ವರದಿಗಳು, ಸಂಶೋಧನೆಯ ಪ್ರಬಂಧಗಳನ್ನು, ಆನ್‌ಲೈನ್ ಪತ್ರಿಕೆಗಳಲ್ಲಿನ ಲೇಖನಗಳನ್ನು, ದಿನ ಪತ್ರಿಕೆಯ ವರದಿಗಳನ್ನು ಮತ್ತು ಅಂತರಜಾಲ ತಾಣದಿಂದ ಸಂಶೋಧನೆಗೆ ಅವಶ್ಯವಿರುವ ಮಾಹಿತಿಯನ್ನು ಸಂಗ್ರಹಿಸಲಾಯಿತು.

ಮೊದಲನೆಯ ಉದ್ದೇಶಕ್ಕನುಗುಣವಾಗಿ ಅನುಷಂಗಿಕ ವಿಧಾನಗಳಾದ ಪ್ರಕಟಿತ ಮತ್ತು ಅಪ್ರಕಟಿತ ವರದಿಗಳು, ಲೇಖನಗಳು, ಸರಕಾರದ ದಾಖಲೆಗಳು, ಸಂಶೋಧನೆಯ ಲೇಖನಗಳು,

ಸರಕಾರವು ಬಡವರ ಯೊಗಕ್ಷೇಮಕ್ಕಾಗಿ ಜಾರಿ ಮಾಡಿದ ಯೋಜನೆಯ ವರದಿಗಳು ಮತ್ತು ವಿವಿಧ ಸಮಿತಿಗಳು ಬಡತನ ರೇಖೆಯನ್ನು ನಿರ್ಧರಿಸಲು ಮಾಡಿರುವ ಶಿಫಾರಸ್ಸು ವರದಿಗಳನ್ನು ಬಳಸಿಕೊಳ್ಳಲಾಗಿದೆ. ಎರಡು ಮತ್ತು ಮೂರನೇಯ ಉದ್ದೇಶಗಳನ್ನು ಈಡೇರಿಸುವುದಕ್ಕಾಗಿ ಪ್ರಾಥಮಿಕ ವಿಧಾನಗಳಾದ ಗುಣಾತ್ಮಕ ಮತ್ತು ಪರಿಮಾಣಾತ್ಮಕ ತಂತ್ರಗಳನ್ನು ಬಳಸಿಕೊಂಡು ಸಂಶೋಧನೆಯ ಪ್ರದೇಶದಲ್ಲಿನ ಬಡತನ ರೇಖೆಯ ಕೆಳಗಿರುವ ಕುಟುಂಬಗಳನ್ನು ಸಂದರ್ಶಿಸಿ ಉದ್ದೇಶಕ್ಕನುಗುಣವಾಗಿ ಮಾಹಿತಿಯನ್ನು ಕಲೆಹಾಕಲಾಗಿದೆ. ಕ್ಷೇತ್ರಕಾರ್ಯದಲ್ಲಿ ಗ್ರಾಮೀಣ ಮತ್ತು ನಗರ ಪ್ರದೇಶದಲ್ಲಿನ ವಿವಿಧ ಜಾತಿ ಮತ್ತು ವರ್ಗಗಳ ಜನರನ್ನು ಭೆಟ್ಟಿಯಾಗಿ ಪ್ರಶ್ನಾವಳಿ ಮೂಲಕ ಅವರು ಹೊಂದಿರುವ ಪರಿಕರಗಳು, ಭೂಮಿ, ಆದಾಯದ ಮೂಲ, ಒಟ್ಟು ಆದಾಯ, ಪ್ರಮುಖ ಸಾಮಾಜಿಕ ಮತ್ತು ಆರ್ಥಿಕ ಸೂಚ್ಯಾಂಕಗಳು, ಮಾರುಕಟ್ಟೆ ನಡುವಳಿಕೆಗಳು, ಅನುಭೋಗಕ್ಕಾಗಿ ಮಾಡುವ ಖರ್ಚು ಎಷ್ಟು ಮತ್ತು ಸ್ಥಳೀಯವಾಗಿ ಲಭ್ಯವಿರುವ ಅಂಗಡಿಗಳ ಮೇಲೆ ಎಷ್ಟರ ಮಟ್ಟಿಗೆ ಅವಲಂಬಿತರಾಗಿದ್ದಾರೆ ಮತ್ತು ಎಷ್ಟು ಖರೀದಿಯನ್ನು ಮಾಡಿದ್ದಾರೆ ಎಂಬುದನ್ನು ತಿಳಿದುಕೊಳ್ಳಬಹುದು. ಕೊನೆಯ ಉದ್ದೇಶಕ್ಕಾಗಿ ಸಂಶೋಧನೆಯ ಫಲಿತಗಳನ್ನು ನೀಡಲಾಗಿದೆ.

ಗ್ರಾಮ ಪಂಚಾಯತಿಯಲ್ಲಿ ಬರುವ ಆಯಾ ಗ್ರಾಮಗಳಲ್ಲಿರುವ ನ್ಯಾಯಬೆಲೆ ಅಂಗಡಿಯ ಮೂಲಕ ದವಸ ಧಾನ್ಯಗಳ ವಿತರಣೆಯ ಹೊಣೆ ಹೊತ್ತಿರುವ ಸಂಘಗಳಿಂದ ಆಯ್ಕೆಯಾದ ಗ್ರಾಮಗಳಲ್ಲಿರುವ ಕಲಬುರಗಿಯಲ್ಲಿ 148 ಕುಟುಂಬಗಳನ್ನು ಭೇಟಿಯಾದರೆ ಅದರಲ್ಲಿ 116 ಕುಟುಂಬಗಳು ಬಡತನ ರೇಖೆಯ ಕೆಳಗಿನ ಕುಟುಂಬಗಳಾಗಿವೆ. ಇದರಲ್ಲಿ 22 ಕುಟುಂಬಗಳು ಅಂದರೆ ಶೇಕಡಾ 14.86ರಷ್ಟು (22/148*100) ಬಡವರಲ್ಲದೆ ಬಡತನ ರೇಖೆಯ ಕೆಳಗಿನ ಪಡಿತರ ಚೀಟಿಗಳನ್ನು ಪಡೆದು ಸರಕಾರವು ಬಡವರಿಗಾಗಿ ನೀಡಿರುವ ಸೌಲಭ್ಯಗಳನ್ನು ಪಡೆದುಕೊಳ್ಳುತ್ತಿದ್ದಾರೆ. ಇದನ್ನು ಆ ಕುಟುಂಬಗಳು ಹೊಂದಿರುವ ಭೂಮಿ ಮತ್ತು ಇನ್ನಿತರೆ ಪರಿಕರಗಳನ್ನು ಹೊಂದಿರುವುದರ ಮೇಲೆ ವಿಂಗಡಿಸಲಾಗಿದೆ. ಇನ್ನುಳಿದ 10 ಪಡಿತರ ಚೀಟಿಗಳು ಅಂದರೆ ಶೇಕಡಾ 6.75ರಷ್ಟು (10/148*100) ಕುಟುಂಬಗಳು ಒಂದಕ್ಕಿಂತ ಹೆಚ್ಚಿನ ಪಡಿತರ ಚೀಟಿಗಳನ್ನು ಹೊಂದಿರುವ ಕುಟುಂಬಗಳಾಗಿವೆ. ಆದ್ದರಿಂದ ಒಟ್ಟಾರೆ ಈ 32 ಕುಟುಂಬಗಳನ್ನು ವಿಶ್ಲೇಷಣೆಯ ಸಮಯದಲ್ಲಿ ಪರಿಗಣಿಸಲಾಗಿಲ್ಲ. ಈ ಸಂಶೋಧನೆಯ ವಿಶ್ಲೇಷಣೆಯು ಕಲಬುರಗಿಯ ಕೊಂಕನಳ್ಳಿಯಲ್ಲಿನ 116 ಕುಟುಂಬಗಳಿಗೆ 110 ಕುಟುಂಬಗಳಿಗೆ ಸೀಮಿತವಾಗಿದೆ. ಅದೇ ರೀತಿ ಧಾರವಾಡದ ನಿಗದಿಯಲ್ಲಿ 146 ಕುಟುಂಬಗಳಿಂದ ಮಾಹಿತಿಯನ್ನು ಸಂಗ್ರಹಿಸಲಾಯಿತು ಇದರಲ್ಲಿ 110 ಕುಟುಂಬಗಳು ಬಡತನ ರೇಖೆಯ ಕೆಳಗಿನವು ಈ ಒಂದು ಸಂಶೋಧನೆಗೆ ಆಯ್ಕೆಯಾಗಿವೆ. ಇದರಲ್ಲಿ 19 ಕುಟುಂಬಗಳು ಅಂದರೆ ಶೇಕಡಾ 13.01ರಷ್ಟು (19/146*100)

ಕುಟುಂಬಗಳು ಬಡವರಲ್ಲದೆ ಬಡತನ ರೇಖೆಯ ಕೆಳಗಿನ ಪಡಿತರ ಚೀಟಿಗಳನ್ನು ಪಡೆದು ಸರಕಾರವು ಬಡವರಿಗಾಗಿ ನೀಡಿರುವ ಸರಕಾರಿ ಸವಲತ್ತುಗಳನ್ನು ಪಡೆದುಕೊಳ್ಳುತ್ತಿದ್ದಾರೆ. ಇನ್ನುಳಿದ 17 ಕುಟುಂಬಗಳು ಅಂದರೆ ಶೇಕಡಾ 11.64ರಷ್ಟು ಕುಟುಂಬಗಳು ಒಂದಕ್ಕಿಂತ ಹೆಚ್ಚಿನ ಪಡಿತರ ಚೀಟಿಗಳನ್ನು ಹೊಂದಿರುತ್ತವೆ. ಎಲ್ಲಾ ಕುಟುಂಬಗಳಿಂದ ಸಂಶೋಧನೆಯ ಪ್ರಶ್ನಾವಳಿಯನ್ನು ಬಳಸಿಕೊಂಡು ಮಾಹಿತಿಯನ್ನು ಕಲೆಹಾಕಲಾಗಿದೆ. ಕ್ಷೇತ್ರಕಾರ್ಯದ ಸಮಯದಲ್ಲಿ ಬಿಪಿಎಲ್ ಕುಟುಂಬಗಳ ಪಟ್ಟಿಯನ್ನು ಪಡೆಯಲಾಯಿತು. ಬಿಪಿಎಲ್ ಕುಟುಂಬಗಳನ್ನು ಒಟ್ಟು ಸೇರಿಸಿ ಅಧ್ಯಯನಕ್ಕೆ ಬೇಕಾಗಿರುವ ಒಟ್ಟು ಕುಟುಂಬಗಳನ್ನು ಸಂಖ್ಯಾಶಾಸ್ತ್ರೀಯ ವಿಧಾನವನ್ನು ಅಳವಡಿಸಿಕೊಂಡು **ವ್ಯವಸ್ಥಿತ ಯಾದೃಚ್ಛಿಕ ಮಾದರಿ** (Systematic Random Sample)ಯ ಮೂಲಕ ಆಯ್ಕೆಮಾಡಿಕೊಳ್ಳಲಾಯಿತು. ನಂತರದಲ್ಲಿ ಆಯ್ಕೆಯಾದ ಕುಟುಂಬಗಳನ್ನು ಪ್ರಶ್ನಾವಳಿಯ ಮೂಲಕ ಸಂದರ್ಶಿಸಿ ಸಂಶೋಧನಕ್ಕೆ ಬೇಕಾದ ಮಾಹಿತಿಯನ್ನು ಕಲೆಹಾಕಲಾಯಿತು. ಇದಕ್ಕೂ ಮೊದಲು ಮಾರ್ಗದರ್ಶಕರೊಂದಿಗೆ ಚರ್ಚಿಸಿ ಕ್ಷೇತ್ರಕಾರ್ಯಕ್ಕೆ ಮೂಲ ಸಾಧನವಾದ ಪ್ರಶ್ನಾವಳಿಯನ್ನು ಸಿದ್ಧಗೊಳಿಸಿಕೊಂಡು ಧಾರವಾಡ ಜಿಲ್ಲೆಯ ಬೆನಕಟ್ಟಿ ಎಂಬ ಗ್ರಾಮಕ್ಕೆ ಹೋಗಿ ಪ್ರಶ್ನಾವಳಿಯನ್ನು ಪೂರ್ವ–ಪರೀಕ್ಷೆಗೆ (Pre-test) ಒಳಪಡಿಸಲಾಯಿತು. ತದನಂತರದಲ್ಲಿ ಪೂರ್ವ–ಪರೀಕ್ಷೆಯ ಸಂದರ್ಭದಲ್ಲಿ ಬಂದ ಮಾಹಿತಿಯನುಗುಣವಾಗಿ ಪ್ರಶ್ನಾವಳಿಯನ್ನು ಬದಾವಣೆಗೊಳಪಡಿಸಿ ಪೂರ್ಣ ಪ್ರಮಾಣದ ಕ್ಷೇತ್ರಕಾರ್ಯವನ್ನು ಕಲಬುರಗಿ ಜಿಲ್ಲೆಯ ಕೊಂಕನಳ್ಳಿ ಮತ್ತು ಧಾರವಾಡ ಜಿಲ್ಲೆಯ ನಿಗದಿ ಎಂಬ ಗ್ರಾಮಗಳಲ್ಲಿ ಕ್ಷೇತ್ರಕಾರ್ಯವನ್ನು ಕೈಗೊಂಡು ಮಾಹಿತಿಯನ್ನು ಕಲೆಹಾಕಲಾಗಿದೆ.

**ಕುಟುಂಬಗಳನ್ನು ಆಯ್ಕೆಮಾಡಿಕೊಳ್ಳಲು ಅಳವಡಿಸಿಕೊಂಡ ಸೂತ್ರ ಮತ್ತು ವಿಶ್ಲೇಷಣೆ:** ಗ್ರಾಮದಲ್ಲಿರುವ ಒಟ್ಟು ಬಿಪಿಎಲ್ ಕುಟುಂಬಗಳನ್ನು ನನ್ನ ಅಧ್ಯಯನಕ್ಕೆ ಬೇಕಾದ ಕುಟುಂಬಗಳ ಸಂಖ್ಯೆಯಿಂದ ಭಾಗಿಸಿದಾಗ ಬರುವ (ಉತ್ತರವನ್ನು) ಅಂತರ ಅಥವ ಇಂಟರವೆಲ್‌ವನ್ನು ತೆಗೆದುಕೊಂಡು ಗ್ರಾಮದ ಒಂದು ಮೂಲೆಯಲ್ಲಿಯ ಎಡ ಭಾಗದಲ್ಲಿನ ಬಿಪಿಎಲ್ ಮನೆಯನ್ನು ಆಯ್ಕೆಮಾಡಿಕೊಂಡು ಗಡಿಯಾರ (Clock wise direction) ತಿರುಗುವ ಹಾಗೆ ವ್ಯವಸ್ಥಿತವಾಗಿ ಒಂದೇ ದಿಕ್ಕಿನಲ್ಲಿ ಬರುವ ಕುಟುಂಬಗಳನ್ನು ಆಯ್ಕೆಮಾಡಿಕೊಂಡು ಸಂಶೋಧಕರ ಭೇಟಿಯ ಸಮಯದಲ್ಲಿ ಲಭ್ಯವಿದ್ದ ಕುಟುಂಬದ 18 ವರ್ಷಕ್ಕಿಂತ ಹೆಚ್ಚಿನ ವಯಸ್ಸಿನ ಸದಸ್ಯರಿಂದ ಪ್ರಶ್ನೆಗಳನ್ನು ಕೇಳಿ ಮಾಹಿತಿಯನ್ನು ಪಡೆಯಲಾಯಿತು. ಈ ಒಂದು ಪ್ರಕ್ರೀಯೆಯು ಕೊನೆಯ ಮನೆಯವರೆಗೂ ಕಾಯ್ದುಕೊಂಡು ಹೋಗಲಾಯಿತು. ಕೇತ್ರಕಾರ್ಯದ ಜೊತೆಗೆ ಮಾಹಿತಿ ಕಲೆಹಾಕಿದ ಪ್ರಶ್ನಾವಳಿಗಳನ್ನು ತೆಗೆದುಕೊಂಡು ಮುಕ್ತವಾದ ಅಥವ ಮುಚ್ಚಲ್ಪಟ್ಟಿರುವ ಪ್ರಶ್ನೆಗಳಿಗೆ ಸಂಕೇತಗಳನ್ನು ಕೊಡುತ್ತಾ ಅವುಗಳನ್ನು ಎಸ್ಪಿಎಸ್‌ಎಸ್ ಮತ್ತು ಎಂಎಸ್ ಎಕ್ಸೆಲ್‌ನಲ್ಲಿ ದಾಖಲಿಸಿ ಮಾಹಿತಿಯನ್ನು

ದಾಖಲಿಸಿ ಏಕಾಂಶ, ಮತ್ತು ತುಲನಾತ್ಮಕ ವಿಶ್ಲೇಷಣೆಯನ್ನು ಕೈಗೊಳ್ಳಲಾಗಿದೆ. ಪರಿಮಾಣತ್ಮಾಕದ ಮಾಹಿತಿಯೊಂದಿಗೆ ಕ್ಷೇತ್ರಕಾರ್ಯವನ್ನು ಮಾಡುವಾಗ ಕೆಲವೊಂದು ಗುಣಾತ್ಮಕ ವಿಧಾನಗಳಾದ ಗ್ರಹಿಕೆ, ಕುಟುಂಬಗಳೊಂದಿಗಿನ ಚರ್ಚೆಯ ಮೂಲಕ ಸಂಗ್ರಹಿಸಿದ ಮಾಹಿತಿಯನ್ನು ಸೇರಿಸಿ ವಿಶ್ಲೇಷಣೆಯನ್ನು ಮಾಡಲಾಗಿದೆ.

**ಅಧ್ಯಯನದ ಮಿತಿಗಳು**

ಪ್ರಸ್ತುತ ಮಹಾ ಪ್ರಬಂಧವು ಕೆಲವು ಮಿತಿಗಳನ್ನು ಒಳಗೊಂಡಿದೆ. ಈ ಒಂದು ಸಂಶೋಧನೆಯ ಕ್ಷೇತ್ರಕಾರ್ಯಕ್ಕಾಗಿ ಕಲಬುರಗಿ ಜಿಲ್ಲೆಯ ಕೊಂಕನಳ್ಳಿ ಮತ್ತು ಧಾರವಾಡ ಜಿಲ್ಲೆಯ ನಿಗದಿ ಗ್ರಾಮಗಳಲ್ಲಿ ಮಾತ್ರ ಸಮೀಕ್ಷೆಯನ್ನು ಕೈಗೊಂಡಿರುವುದರಿಂದ ಅಧ್ಯಯನದ ಫಲಿತಗಳು ಕೇವಲ ಈ ಎರಡು ಗ್ರಾಮಗಳಿಗೆ ಮಾತ್ರ ಸೀಮಿತವಾಗಿರುತ್ತವೆ. ಈ ಎರಡು ಗ್ರಾಮಗಳಲ್ಲಿ 2011 ರಿಂದ 2013ರ ಅವಧಿಯಲ್ಲಿ ಕ್ಷೇತ್ರಕಾರ್ಯವನ್ನು ಕೈಗೊಳ್ಳಲಾಗಿತ್ತು. ಆದ್ದರಿಂದ ಸಂಗ್ರಹಿಸಿದ ಮಾಹಿತಿಯು ಮೇಲೆ ಹೇಳಿದ ಅವಧಿಗೆ ಮಾತ್ರ ಸಂಬಂಧಿಸಿರುತ್ತದೆ. ಸಂಶೋಧಕರ ಸೀಮಿತ ಅವಧಿ ಮತ್ತು ಸಂಪನ್ಮೂಲಗಳ ಕೊರತೆಯ ಹಿನ್ನೆಲೆಯಲ್ಲಿ ಕಲಬುರಗಿ ಜಿಲ್ಲೆಯ ಕೊಂಕನಳ್ಳಿ ಗ್ರಾಮದಲ್ಲಿ 116 ಮತ್ತು ಧಾರವಾಡ ಜಿಲ್ಲೆಯ ನಿಗದಿಯಲ್ಲಿ 110 ಬಡತನ ರೇಖೆಯ ಕೆಳಗಿನ ಕುಟುಂಬಗಳನ್ನು ಸಂದರ್ಶಿಸಿ ಉದ್ದೇಶಗಳಿಗನುಗುಣವಾಗಿ ಮಾಹಿತಿಯನ್ನೇ ಕಲೆಹಾಕಲಾಗಿದೆ. ಅಲ್ಲದೆ ಇದೊಂದು ತುಲಾನಾತ್ಮಕ ಅಧ್ಯಯನವಾಗಿದೆ. ಒಟ್ಟಾರೆಯಾಗಿ ಪ್ರಸ್ತುತ ಅಧ್ಯಯನವು ಎಂಪೆರಿಕಲ್ ಅಧ್ಯಯನವಾಗಿರುವುದರಿಂದ ಸಂಗತಿಗಳು ಕ್ಷೇತ್ರದಲ್ಲಿಯ ಮತ್ತು ಸೈದ್ಧಾಂತಿಕ ಮಾಹಿತಿಯನ್ನೆ ಅವಲಂಬಿಸಿರುತ್ತದೆ. ಅಧ್ಯಯನ ಕ್ಷೇತ್ರದಲ್ಲಿ ಕ್ಷೇತ್ರಕಾರ್ಯದ ಸಮಯದಲ್ಲಿ ಕುಟುಂಬದ ಸದಸ್ಯರು ಕೊಟ್ಟಿರುವ ಮಾಹಿತಿಯ ನಿಖರತೆಯ ಆಧಾರದ ಮೇಲೆ ಸಂಶೋಧನಾ ವಿಷಯದ ಫಲಿತಗಳು ವಿಶ್ಲೇಷಣೆಯಾಗುತ್ತವೆ. ಏಕೆಂದರೆ ಕುಟುಂಬದ ಚರ ಮತ್ತು ಸ್ಥಿರ ಆಸ್ತಿಗಳು, ಕುಟುಂಬದ ಆದಾಯದ ಮತ್ತು ಮುಂತಾದ ಕುಟುಂಬಕ್ಕೆ ಸಂಬಂಧಿಸಿದ ವಿಷಯಗಳ ಬಗ್ಗೆ ಕೇಳುವಾಗ ಅವರು ಕೊಟ್ಟಿರುವ ಮಾಹಿತಿಯನ್ನು ಆಧರಿಸಿ ವಿಶ್ಲೇಷಣೆಯನ್ನು ಮಾಡಲಾಗಿದೆ. ಆದರೆ ಈ ರೀತಿಯ ಮಾಹಿತಿ ನೀಡುವುದರ ವಿಷಯಗಳು ಅಧ್ಯಯನದ ಮಿತಿಯಾಗಿದೆ. ಬಡತನ ರೇಖೆಯ ಕೆಳಗಿನ ಕುಟುಂಬಗಳ ವಸ್ತುಸ್ಥಿತಿಯನ್ನು ಕಂಡುಕೊಳ್ಳುವಾಗ ಕ್ಷೇತ್ರಕಾರ್ಯದ ಸಮಯದಲ್ಲಿ ಕುಟುಂಬದ ಸದಸ್ಯರು ನೀಡಿದ ಮಾಹಿತಿಯನ್ನೇ ಅವಲಂಬಿಸಲಾಗಿದೆ.

**ಅಧ್ಯಾಯಗಳ ರಚನೆ**

ಈ ಅಧ್ಯಯನದ ಮಹಾಪ್ರಬಂಧವು ಒಟ್ಟು ಆರು ಅಧ್ಯಾಯಗಳನ್ನು ಒಳಗೊಂಡಿರುತ್ತದೆ. ಅವುಗಳನ್ನು ಈ ಕೆಳಗಿನಂತೆ ವಿನ್ಯಾಸಗೊಳಿಸಲಾಗಿದೆ.

**ಪ್ರಸ್ತಾವನೆ–** ಇದರಲ್ಲಿ ಅಧ್ಯಯನದ ಉದ್ದೇಶ, ವಿಧಾನ, ಅಧ್ಯಯನ ಮಿತಿಗಳು ಮತ್ತು ಅಧ್ಯಾಯಗಳ ವಿನ್ಯಾಸವನ್ನು ಒಳಗೊಂಡಿರುತ್ತದೆ.

**ಅಧ್ಯಾಯ ಒಂದು–** ಈ ಅಧ್ಯಾಯದಲ್ಲಿ ಜಾತಿ, ವರ್ಗ, ಮಾರುಕಟ್ಟೆ, ಬಡವರು ಮತ್ತು ಬಡತನ ರೇಖೆಯ ಕೆಳಗಿರುವ ಕುಟುಂಬಗಳ ಕುರಿತು ಅಂತರಾಷ್ಟ್ರೀಯ, ದೇಶೀಯ ಮತ್ತು ರಾಜ್ಯಮಟ್ಟದಲ್ಲಿ ಈ ಹಿಂದೆ ಆದಂತಹ ಸಂಶೋಧನೆಗಳನ್ನು ಚರ್ಚಿಸಲಾಗಿದೆ.

**ಅಧ್ಯಾಯ ಎರಡು–**ಅಧ್ಯಯನ ಕೈಗೊಂಡ ಜಿಲ್ಲೆಗಳ ಕ್ಷೇತ್ರ ಪರಿಚಯವನ್ನು ಈ ಅಧ್ಯಾಯದಲ್ಲಿ ವಿವರಿಸಲಾಗುವದು. ಅಧ್ಯಯನ ಕೈಗೊಂಡ ಜಿಲ್ಲೆಗಳ ಸಾಮಾಜಿಕ, ಜನಸಂಖ್ಯೆ, ಲಿಂಗಾನುಪಾತ, ರಾಜಕೀಯ, ಶೈಕ್ಷಣಿಕ ಸವಲತ್ತುಗಳು, ಭೌಗೋಳಿಕ ಲಕ್ಷಣಗಳನ್ನು ಮತ್ತು ಆರ್ಥಿಕ ವಿವರಗಳನ್ನು ನೋಡಬಹುದಾಗಿದೆ.

**ಅಧ್ಯಾಯ ಮೂರು–** ಈ ಅಧ್ಯಾಯದಲ್ಲಿ ಕೇಂದ್ರ ಸರಕಾರವು ಬಡತನವನ್ನು ಲೆಕ್ಕಹಾಕಲು ಕಾಲಾನುಕ್ರಮದಲ್ಲಿ ನೇಮಿಸಿದ ಸಮಿತಿಗಳ ಸಂಕ್ಷಿಪ್ತವಾಗಿ ವಿವರಿಸಿ ಕರ್ನಾಟಕ ಮತ್ತು ಭಾರತದಲ್ಲಿರುವ ಒಟ್ಟು ಜನಸಂಖ್ಯೆಯಲ್ಲಿ ಬಡತನ ರೇಖೆಯ ಕೆಳಗಿರುವ ಕುಟುಂಬಗಳು ಮತ್ತು ಜನಸಂಖ್ಯೆಯನ್ನು ವಿವರಿಸುತ್ತದೆ. ಇದಲ್ಲದೆ ಸಮಿತಿಗಳು ನೀಡಿದ ವರದಿಯ ಆಧಾರದ ಮೇಲೆ ಬಡತನ ನಿವಾರಣೆಗಾಗಿ ಸರಕಾರವು ಹಾಕಿಕೊಂಡಿರುವ ಯೋಜನೆಗಳನ್ನು ಆಹಾರ, ಸಾಮಾನ್ಯ ಆರೋಗ್ಯ, ಶಿಕ್ಷಣ, ವಸತಿ, ಕುಡಿಯುವ ನೀರು ಮತ್ತು ಶೌಚಾಲಯದ ಸೌಕರ್ಯಗಳನ್ನು ದೃಷ್ಟಿಯಲ್ಲಿಟ್ಟುಕೊಂಡು ವಿರ್ಮಶಾತ್ಮಕವಾಗಿ ವಿಶ್ಲೇಷಿಸಲಾಗಿದೆ.

**ಅಧ್ಯಾಯ ನಾಲ್ಕು –** ಈ ಒಂದು ಅಧ್ಯಾಯದಲ್ಲಿ ಅಧ್ಯಯನ ಕೈಗೊಂಡ ಗ್ರಾಮಗಳಲ್ಲಿನ ಬಡತನ ರೇಖೆಯ ಕೆಳಗಿನ ಕುಟುಂಬಗಳ ಸಾಮಾಜಿಕ ಮತ್ತು ಆರ್ಥಿಕ ಗುಣ ಲಕ್ಷಣಗಳನ್ನು ಕ್ಷೇತ್ರ ಕಾರ್ಯದಿಂದ ಕಲೆಹಾಕಿದ ಅಂಕಿ–ಅಂಶಗಳ ಮೂಲಕ ವಿಶ್ಲೇಷಿಸಲಾಗಿದೆ. ಕಲಬುರಗಿ ಮತ್ತು ಧಾರವಾಡ ಜಿಲ್ಲೆಗಳಲ್ಲಿನ ರಾಜಕೀಯ, ಆರ್ಥಿಕ, ಸಾಮಾಜಿಕ ಮತ್ತು ಜನಗಣತಿಯ ಪ್ರಕಾರ ಜನಸಂಖ್ಯೆಯ ವಿವರಣೆಯನ್ನು ತಿಳಿದುಕೊಳ್ಳಲಾಗಿದೆ.

**ಅಧ್ಯಾಯ ಐದು–**ಈ ಅಧ್ಯಾಯದಲ್ಲಿ ಬಡತನ ರೇಖೆಯ ಕೆಳಗಿರುವ ಕುಟುಂಬಗಳಿಗೆ ಆಹಾರ, ಆರೋಗ್ಯ, ಶಿಕ್ಷಣ, ವಸತಿ, ಕುಡಿಯುವ ನೀರು ಮತ್ತು ಶೌಚಾಲಯಗಳ ಬೇಡಿಕೆ ಮತ್ತು ಪೂರೈಕೆಗಳನ್ನು ಪೂರೈಸುವಲ್ಲಿ ಸರಕಾರ ಮತ್ತು ಮುಕ್ತ ಮಾರುಕಟ್ಟೆಯ ಪಾತ್ರವನ್ನು ವಿವರಿಸುವುದಾಗಿದೆ. ಇದರಲ್ಲಿ ಸರಕಾರವು ಸಾರ್ವಜನಿಕ ಆಹಾರ ವಿತರಣಾ ವ್ಯವಸ್ಥೆಯ, ಸರಕಾರಿ ಆಸ್ಪತ್ರೆಗಳ, ಸರಕಾರಿ ಶಾಲೆಗಳು, ಮನೆಗಳನ್ನು ಕಟ್ಟಿಸಿಕೊಳ್ಳಲು ಅವರಿಗೆ ಕೊಡುತ್ತಿರುವ ಸಹಾಯಧನ ಮತ್ತು ಅವುಗಳ ಪ್ರಮಾಣ, ಬೆಲೆ ಎಷ್ಟು ಮತ್ತು ಕುಟುಂಬಗಳಿಗೆ ಸರಕಾರವು

ಕೊಡುತ್ತಿರುವ ಪದಾರ್ಥಗಳು/ಸೇವೆಗಳು ಸರಿ ಹೋಗುತ್ತದೆಯೆ ಅಥವಾ ಕಡಿಮೆ ಬೀಳುತ್ತದೆಯೆ ಎಂಬುದನ್ನು ಈ ಒಂದು ಅಧ್ಯಾಯದಲ್ಲಿ ವಿಶ್ಲೇಷಿಸಲಾಗಿದೆ.

**ಅಧ್ಯಾಯ ಆರು**–ಈ ಅಧ್ಯಾಯದಲ್ಲಿ ಅಧ್ಯಯನದ ಫಲಿತಾಂಶಗಳು, ಅಧ್ಯಯನದ ವಸ್ತುವಿಗೆ ಸಂಬಂಧಿಸಿದ ಸಮಸ್ಯೆಗಳು ಮತ್ತು ಅದಕ್ಕೆ ಸೂಕ್ತ ಪರಿಹಾರ ಮತ್ತು ಸಲಹೆಗಳನ್ನು ಚರ್ಚಿಸಲಾಗಿದೆ. ಅಧ್ಯಾಯದಲ್ಲಿ ಈಗಿರುವ ಮತ್ತು ಮುಂಬರುವ ಕಾರ್ಯಕ್ರಮಗಳಿಗೆ ಸಲಹೆಗಳನ್ನು ನೀಡಲಾಗಿದೆ. ಕೊನೆಯಲ್ಲಿ ಸಮಾರೋಪ ಮತ್ತು ಈ ಅಧ್ಯಯನಕ್ಕೆ ಬಳಸಿಕೊಳ್ಳಲಾದ ಆಕರ ಪುಸ್ತಕಗಳು ಮತ್ತು ಲೇಖನಗಳ ಪಟ್ಟಿಯನ್ನು ಲಗತ್ತಿಸಲಾಗಿದೆ.

**ಕೊನೆಟಿಪ್ಪಣಿಗಳು**


1. ಬೇಟಲೆ, ಅಂದ್ರೆ (1996) *ಕಾಸ್ಟ್, ಕ್ಲಾಸ್ ಆ್ಯಂಡ್ ಪಾವ್ವರ್: ಚೇಜಿಂಗ್ ಪ್ಯಾರ್ಟನ್ಸ ಆಫ್ ಸ್ಟ್ರಾಟಿಫೀಕೆಷನ್ಸ್ ಇನ್ ತಂಜಾವೂರ್ ವ್ಹಿಲ್ಲೇಜ್.* ಆರ್ಕ್ಸಫರ್ಡ ಯುನಿವರಸಿಟಿ ಪಬ್ಲಿಕೇಷನ್ಸ್. ದೆಹಲಿ.

2. ದುಬೆ, ಎಸ್.ಸಿ., (1990) *ಇಂಡಿಯನ್ ಸೊಸೈಟಿ,* ನ್ಯಾಷನಲ್ ಬುಕ್ ಟ್ರಸ್ಟ್, ನ್ಯೂ ದೆಹಲಿ.

3. ಶ್ರೀನಿವಾಸ, ಎಮ್.ಎನ್.(1962ಅ) *ವಿಲ್ಲೇಜ್ಡ್ ಸ್ಟಡಿಸ್ ಆ್ಯಂಡ್ ದೇರ್ ಸಿಗ್ನಿಫಿಕನ್ಸ್, ಇದರಲ್ಲಿ: ಕಾಸ್ಟ್ ಇನ್ ಮಾರ್ಡನ್ ಇಂಡಿಯಾ ಆ್ಯಂಡ್ ಅದರ್ ಎಸ್ಸೆಜ್,* ಮೀಡಿಯಾ ಪ್ರಮೋಟರ್ಸ್ ಆ್ಯಂಡ್ ಪಬ್ಲಿಷರ್ಸ್, ಬಾಂಬೆ.

4. ಶ್ರೀನಿವಾಸ, ಎಮ್.ಎನ್. (1962ಬ) *ಕಾಸ್ಟ್ ಇನ್ ಮಾರ್ಡನ್ ಇಂಡಿಯಾ ಆ್ಯಂಡ್ ಅದರ್ ಎಸ್ಸೆಜ್,* ಮೀಡಿಯಾ ಪ್ರಮೋಟರ್ಸ್ ಆ್ಯಂಡ್ ಪಬ್ಲಿಷರ್ಸ್, ಬಾಂಬೆ.

5. ಶ್ರೀನಿವಾಸ, ಎಮ್.ಎನ್. (1984) *"ಸಮ್ ರಿಫ್ಲೆಕ್ಷನ್ಸ ಆನ್ ದಿ ನೇಚರ್ ಆಫ್ ಕಾಸ್ಟ್ ಹೈರಾರಕಿ". ಕಾಂಟ್ರಿಬ್ಯೂಶನ್ಸ್ ಟೂ ಇಂಡಿಯನ್ ಸೋಶಿಯೋಲಾಜಿ,* (18)2, ಪು: 151–167.

6. ಶ್ರೀನಿವಾಸ, ಎಮ್.ಎನ್. (1989) *ದಿ ಕೊಎಸ್ಸಿವ್ ರೋಲ್ ಆಫ್ ಸಂಸಕೃಟಾಯಿಜೆಸನ್ ಆ್ಯಂಡ್ ಅದರ್ ಎಸ್ಸೆಜ್.*ಆರ್ಕ್ಸಫರ್ಡ್ ಯುನಿವರಸಿಟಿ ಪ್ರೆಸ್, ನವದೆಹಲಿ.

7. ಶ್ರೀನಿವಾಸ, ಎಮ್.ಎನ್. (1966ಎ) *ಸೋಶಿಯಲ್ ಚೆಂಜ್ ಇನ್ ಮಾರ್ಡನ್ ಇಂಡಿಯಾ.* ಓರಿಯಂಟ್ ಲಾಂಗ್ಮನ್, ದೆಹಲಿ.

8. ಟಿ.ಆರ್. ಚಂದ್ರಶೇಖರ್, (2008) *ಕರ್ನಾಟಕದಲ್ಲಿ ಪ್ರಾದೇಶಿಕ ಅಸಮಾನತೆ ಮತ್ತು ಉನ್ನತ ಅಧಿಕಾರ ಸಮಿತಿ,* ವಿದ್ಯಾರಣ್ಯ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

17. ಯು.ಎನ್.ಡಿ.ಪಿ. (2011) *ಯು.ನ್.ಡಿ.ಪಿ.ಯ ಅಂತರ್ಜಾಲದಿಂದ ದಿನಾಂಕ 17.11.2011* ರಂದು ಪಡೆಯಲಾಗಿದೆ.

18. ಸಿ.ಎ.ಕೆ. ಎಸೂದಿಯಾ (2007) *ಪಾವರ್ಟಿ ಎಲಿವೇಷನ ಪ್ರೋಗ್ರಾಮ್ಸ ಇನ್ ಇಂಡಿಯಾ: ಎ ಸೋಶಿಯಲ್ ಆಡಿಟ.* ದಿ ಇಂಡಿಯನ್ ಜರ್ನಲ್ ಆಫ್ ಮೆಡಿಕಲ್ ರಿಸರ್ಚ್ 126, ಪುಟ – 364 ರಿಂದ 373.

19. ಎ. ವೈದ್ಯನಾಥನ್ (2001) *"ಪಾವರ್ಟಿ ಆ್ಯಂಡ್ ಪಾಲಿಸಿ", ಎಕನಾಮಿಕಲ್ ಆ್ಯಂಡ್ ಪೊಲಿಟಿಕಲ್ ವ್ಹೀಕ್ಲಿ,* ಸಂಪುಟ–36 ನಂ.21, ಪುಟ–1807–1822.

20. ರಂಗರಾಜನ್, ಸಿ. (2014) ಬಡತನವನ್ನು ಪುನರ್ ಪರಿಶೀಲಿಸಲು ಕೇಂದ್ರ ಸರಕಾರವು ನೇಮಿಸಿದ ರಂಗರಾಜನ್ ವರದಿ.

21. ಮುಳಗುಂದ ಈ.ಚ. (2010) *ಭಾರತೀಯ ಸಮಾಜ ರಚನೆ ಮತ್ತು ಪರಿವರ್ತನೆ.* ಸೃಷ್ಟಿ ಪ್ರಕಾಶನ, ಧಾರವಾಡ.

22. ವೈ.ಪಿ.ಚಿಬ್ಬರ್, (1968) *ಪ್ರಾಂ ಕಾಸ್ಟ್ ಟು ಕ್ಲಾಸ್, ಎ ಸ್ಟಡಿ ಆಫ್ ದ ಇಂಡಿಯನ್ ಮಿಡಲ್ ಕ್ಲಾಸಸ್,* ನವದೆಹಲಿ.

23. ಡ್ಯಾನಿಯಲ್ ಆಂಡ್ ಆಲಿಸ್ ತ್ರೋನರ್, (1965). *ಟೈಪ್ಸ ಆಫ್ ಎಂಪ್ಲಾಯರ್ – ಲೆಬರ್ ರಿಲೇಷನಸಿಪ್ ಇನ್ ಇಂಡಿಯನ್ ಅಗ್ರಿಲಕ್ಚರ್* ಬೈ ಇಂಡಿಯನ್ ಜರ್ನಲ್ ಆಫ್ ಅಗ್ರಿಕಲ್ಚರಲ್ ಎಕನಾಮಿಕ್ಸ, ಸಂಪುಟ 12, ಸಂಚಿಕೆ.2 ಪುಟ –287–302.

24. ಈಶ್ವರನ್, ಕೆ. (1976) *ಗ್ರಾಮೀಣ ಭಾರತದಲ್ಲಿ ಸಂಪ್ರದಾಯ ಮತ್ತು ಆರ್ಥಿಕ ವ್ಯವಸ್ಥೆ.* ಕರ್ನಾಟಕ ವಿಶ್ವವಿದ್ಯಾಲಯ ಧಾರವಾಡ.

25. ಶ್ರೀನಿವಾಸನ್, ಎಂ.ಎನ್. (1976) *ದಿ ರಿಂಮ್ಮೆಬರ್ಡ ವಿಲೇಜ,* ಆಕ್ಸಫರ್ಡ ಯುನಿವರ್ಸಿಟಿ ಪ್ರೆಸ್, ನ್ಯೂ ದಿಲ್ಲಿ.

26. ರಾಜಶೇಖರ್, ವಿ.ಟಿ. (2005) *ಜಾತಿ: ರಾಷ್ಟ್ರದೊಳಗೊಂದು ರಾಷ್ಟ್ರ,* ಬುಕ್ಸ್ ಫಾರ್ ಚೇಂಜ್, ಬೆಂಗಳೂರು.

27. ಮಾರ್ಟಿನ್ ರೇನ್ (1970), *ಪ್ರಾಬ್ಲಮ್ ಇನ್ ದಿ ಡೆಫಿನೇಷನ್ ಆಂಡ್ ಮೇಜರಮೆಂಟ ಆಫ್ ಪಾವರ್ಟಿ,* ಸಂಪಾದಕರು: ಟೌನ್‌ಸೆಂಡ್ ಪೀಟರ್, ದಿ ಕಾಸೆಪ್ಟ ಆಫ್ ಪಾವರ್ಟಿ ಹೆನೆಮನ್ ಎಜುಕೇಶನಲ್ ಬುಕ್ಸ, ಲಂಡನ, ಪುಟ 16 ರಿಂದ 63.

28. ದಾಂಡೇಕರ್ ಮತ್ತು ರಾಥ್ (1971) *"ಪಾವರ್ಟಿ ಇನ್ ಇಂಡಿಯಾ ಡೈಮೇನ್ಸ್‌ಸ ಆಂಡ್ ಟ್ರೆಡ್ಸ್" ಎಕನಾಮಿಕ ಆಂಡ್ ಪೊಲಿಟಿಕಲ್ ವೀಕ್ಲೀ,* ಸಂಪುಟ.6, ಸಚಿಂಕೆ.8.

29. ಎಂ. ಚಂದ್ರ ಪೂಜಾರಿ (2008) *ರಾಜಕೀಯದ ಬಡತನ,* ಸಿದ್ಧಾರ್ಥ ಪ್ರಕಾಶನ ಹೊಸಪೇಟೆ.

30. ಅಮಿತ್ ಶಾ (2002) *ಸ್ಪೆಷಿಯಲ್ ಪಾವರ್ಟಿ ಟ್ರಾಪ್ಸ್* ಇನ್ *ರೂರಲ್ ಇಂಡಿಯಾ: ಆನ್ ಎಕ್ಸಪ್ಲನೇಡರಿ ಅನಲಿಸ್ಸ್ ಆಫ್ ದಿ ನೇಚರ ಆಫ್ ದಿ ಕಾಜಸ್ಸ,* ಜರ್ನಲ ಆಫ ಸೋಷಿಯಲ್ ಆಂಡ್ ಎಕನಾಮಿಕ ಡೆವಲಪ್‌ಮೆಂಟ್ – ಜುಲೈ – ಡಿಸೆಂಬರ 2002 ಸಂಪುಟ 4 ಸಂಚಿಕೆ–2, ಪುಟ – 123 ರಿಂದ 147.

31. ದೀಪಾ ನಾರಾಯಣ, ಬಿನಾಯಕ್ ಸೆನ್ ಮತ್ತು ಕಾಟೆ ಹುಲ್ (2009) *ಮೂವ್ವಿಂಗ್ ಔಟ್ ಆಫ್ ಪಾವರ್ಟಿ ಇನ್ ಇಂಡಿಯಾ: ಯಾನ್ ಓವ್ಹ್‌ರ್‌ವ್ಹಿವ್,* ಜಾಗತಿಕ ಬ್ಯಾಂಕ್

32. ಮಧುರಾ ಸ್ವಾಮಿನಾಥನ್ (2010) *"ದಿ ನ್ಯೂ ಪಾವರ್ಟಿ ಲೈನ್: ಎ ಮೆಥೊಡೊಲೊಜಿ ಡಿಪ್ಲಿ ಫ್ಲಾಡ್"* ಇಂಡಿಯನ್ *ಜರ್ನಲ್ ಆಫ್ ಹುಮನ್ ಡೆವ್ಹಲಪ್ಮೆಂಟ್,* ಸಂಪುಟ.4, ಸಂಚಿಕೆ.1. ಪುಟ: 121–125.

33. ರಾಬರ್ಟ್ ಚೇಂಬರ್ಸ್ (1988) *ಪಾವರ್ಟಿ ಇನ್ ಇಂಡಿಯಾ; ಕಾಸ್ಸೆಪ್ಟ್, ರಿಸರ್ಚ್ ಆಂಡ್ ರಿಯಾಲಿಟಿ ಡಿಸಕಷನ್ ಪೇಪರ* – 241 – ಐಡಿಎಸ್.

34. ಜಿ. ತಿಮ್ಮಯ್ಯಾ (1983) *ಕಾಸ್ಟ ಆಂಡ್ ಕ್ಲಾಸ ಇನ್ ಕರ್ನಾಟಕ. ಸೊಶಿಯಲ್ ಸೈಂಟಿಸ್ಟ,* ಸಂಪುಟ; 11, ಸಂಚಿಕೆ:117, ಪುಟ; 31 ರಿಂದ 37.

35. ಸಿ.ಎ.ಕೆ. ಎಸೂದಿಯಾ (2007) *ಪಾವರ್ಟಿ ಎಲಿವೆಷನ ಪ್ರೋಗ್ರಾಮ್ಸ ಇನ್ ಇಂಡಿಯಾ: ಎ ಸೋಶಿಯಲ್ ಆಡಿಟ. ದಿ ಇಂಡಿಯನ್ ಜರ್ನಲ್ ಆಫ್ ಮೆಡಿಕಲ್ ರಿಸರ್ಚ್* 126, ಪುಟ – 364–373.

36. ಎನ್.ಸಿ. ಸಕ್ಸೇನಾ (2007) *ರೂರಲ್ ಪಾವರ್ಟಿ ರಿಡಕ್ಷನ್ ತ್ರೂ ಸೆಂಟ್ರಲಿ ಸ್ಪಾನ್ಸರ್ಡ ಸ್ಕೀಮ್ಸ್* –, ಪುಟ 381–389ರ ವರೆಗೆ.

37. ಕೆ. ಸುಂದರಂ, ಸುರೇಶ ತೆಂಡೂಲ್ಕರ್ (1990) *ಪಾವರ್ಟಿ ಅಮಂಗ್ ಸೋಸಿಯಲ್ ಆಂಡ್ ಎಕನಾಮಿಕ್ ಗ್ರೂಪ್ಸ್ ಇನ್ ಇಂಡಿಯಾ ಇನ್ 1990, ಇ.ಪಿ.ಡಬ್ಲೂ. ವಾಲೂಮ–38,* ನಂ.50, 2003, ಪುಟ 5263–5276.

38. ಸುಬ್ರತಾ ಮುಖರ್ಜಿ, ಸ್ಲಿಮ್ ಹಾದ್ದಡ ಮತ್ತು ಡಿ.ನಾರಾಯಣ (2011) *ಸೋಷಿಯಲ್ ಕ್ಲಾಸ್ ರಿಲೇಟೆಡ್ ಇನ್‌ಇಕ್ವಾಲಿಟಿಸ್ ಇನ್ ಹೌಸ್‌ಹೋಲ್ಡ್ ಹೆಲ್ತ್ ಎಕ್ಸ್ಪೆಂಡಿಚರ್ ಆ್ಯಂಡ್ ಎಕೊನೊಮಿಕ್ ಬರ್ಡನ್: ಎವ್ಹಿಡೆನ್ಸ್ ಫ್ರಮ್ ಕೇರಳ, ಸೌತ್ ಇಂಡಿಯಾ, ಇಟರ್‌ನ್ಯಾಶನಲ್ ಜರ್ನಲ್ ಫಾರ್ ಈಕ್ವಿಟಿ ಇನ್ ಹೆಲ್ತ್,* 10:1

39. ಶಿವಕುಮಾರಸ್ವಾಮಿ (2012) *ಸಾರ್ವಜನಿಕ ವಿತರಣಾ ಪದ್ದತಿ, ಯೋಜನೆ* ಮಾಸ ಪತ್ರಿಕೆ, ಸಂಪುಟ 28 ಸಂಚಿಕೆ 2.

40. ಚಂದ್ರ ಪೂಜಾರಿ ಎಂ. (2012) *ಅಭಿವೃದ್ಧಿ ಮತ್ತು ಬಡತನ ನಿವಾರಣೆ,* ಡಿಸೆಂಬರ್, *ವಿಜಯ ಕರ್ನಾಟಕ* ದಿನ ಪತ್ರಿಕೆ

41. ಚಂದ್ರ ಪೂಜಾರಿ, ಎಂ, (2013) *ಅಭಿವೃದ್ಧಿ ಮತ್ತು ಚುನಾವಣೆ ಗೆಲುವು,* ಜನೆವರಿ 11ರ *ವಿಜಯ ಕರ್ನಾಟಕದಲ್ಲಿ* ಪ್ರಕಟವಾದ ಲೇಖನ.

42. ಚಂದ್ರ ಪೂಜಾರಿ, ಎಂ (2014) *'ಬಡತನ ಮತ್ತು ರಾಜಕೀಯ',* ಗಾಯತ್ರಿ ಪ್ರಕಾಶನ, ಬಳ್ಳಾರಿ.

43. ಚಂದ್ರ ಪೂಜಾರಿ, ಎಂ (2017) *'ನಿಯೋಲಿಬರಲ್ ಅಭಿವೃದ್ಧಿ',* ಲಡಾಯಿ ಪ್ರಕಾಶನ, ಗದಗ.

44. ದೇಶಪಾಂಡೆ ಅಶ್ವಿನಿ (2011) *'ದಿ ಗ್ರಾಮರ್ ಆಫ್ ಕಾಸ್ಟ–ಎಕೋನೊಮಿಕ್ ಡಿಸ್ಕ್ರಿಮಿನೇಶನ್ ಇನ್ ಕಂಟೆಂಪರರಿ ಇಂಡಿಯಾ',* ಆಕ್ಸಫರ್ಡ್ ಯುನಿವರಸಿಟಿ ಪ್ರೆಸ್, ನವದೆಹಲಿ.



## ಅಧ್ಯಾಯ ೧

# ಬಡತನ, ಜಾತಿ, ವರ್ಗ ಮತ್ತು ಮಾರುಕಟ್ಟೆ

**ಪೀಠಿಕೆ**

ಬಡತನ, ಜಾತಿ, ವರ್ಗ ಮತ್ತು ಮಾರುಕಟ್ಟೆಯ ನಡುವಿನ ಸಂಬಂಧವನ್ನು ಅಧ್ಯಯನ ಮಾಡುವ ಮುಖ್ಯ ಉದ್ದೇಶ ಇಟ್ಟುಕೊಂಡು ಈ ಮಹಾಪ್ರಬಂಧವನ್ನು ರಚಿಸಲಾಗಿದೆ. ಸಂಬಂಧವನ್ನು ತಿಳಿದುಕೊಳ್ಳಲು ಈಗಾಗಲೇ ಅಗಿರುವ ಅಧ್ಯಯನಗಳನ್ನು ಕೂಲಂಕಷವಾಗಿ ವಿಶ್ಲೇಷಣೆಯನ್ನು ಮಾಡಲಾಗಿದೆ. ಇದರಲ್ಲಿ ಬಡತನ, ಜಾತಿ, ವರ್ಗ ಮತ್ತು ಮಾರುಕಟ್ಟೆಯನ್ನು ಒಟ್ಟಾಗಿ ಸೇರಿಸಿಕೊಂಡು ಅಧ್ಯಯನಗಳು ಆಗಿರುವುದು ಬಹಳ ಕಡಿಮೆ. ಆದ್ದರಿಂದ ಈ ಒಂದು ಅಧ್ಯಾಯದಲ್ಲಿ ಬಡತನ, ಜಾತಿ, ವರ್ಗ ಮತ್ತು ಮಾರುಕಟ್ಟೆಯ ಮೇಲೆ ಬಿಡಿ ಬಿಡಿಯಾಗಿ ಅನೇಕ ಅಧ್ಯಯನಗಳು ನಡೆದಿವೆ. ಈ ಒಂದು ಅಧ್ಯಾಯದಲ್ಲಿ ಅಂತರಾಷ್ಟ್ರೀಯ, ರಾಷ್ಟ್ರೀಯ ಮತ್ತು ಕರ್ನಾಟಕದಲ್ಲಿ ನಡೆದಿರುವ ಅಧ್ಯಯನಗಳ ವಿಮರ್ಶೆಯನ್ನು ಮಾಡಲಾಗಿದೆ.

**ಬಡತನ**

ಸಾಮಾನ್ಯವಾಗಿ ಬಡತನ ಎಂದರೆ ಒಂದು ನಿರ್ದಿಷ್ಟ ಪ್ರಮಾಣದಲ್ಲಿ ಸಮಾಜ ಅಥವಾ ಸಮುದಾಯ ಸ್ವೀಕರಿಸುವ ಹಂತದವರೆಗೆ ಒಂದು ಕುಟುಂಬಕ್ಕೆ ಅಥವಾ ಒಬ್ಬ ವ್ಯಕ್ತಿಗೆ ಬೇಕಾಗುವ ಆಸ್ತಿ, ಸರಕುಗಳ ಮತ್ತು ಆದಾಯದ ಪ್ರಮಾಣದಲ್ಲಿನ ಕೊರತೆ (ಮೇರಿಯನ್ ವೆಬಸ್ಟರ್ ಶಬ್ದಕೋಶ, 2013). ಒಬ್ಬ ವ್ಯಕ್ತಿಯು ಹೊಂದಿರುವ ವಸ್ತುಗಳಲ್ಲಿ ಅಥವಾ ಹಣಕಾಸಿನ ಅಲಭ್ಯತೆ ಅಥವಾ ಬೇಕಾಗಿರುವದಕ್ಕಿಂತಲೂ ಕಡಿಮೆ ಹೊಂದಿರುವುದು ಎಂದು ವ್ಯಾಖ್ಯಾನಿಸಬಹುದು. ಒಟ್ಟಾರೆಯಾಗಿ ಹೇಳುವುದಾದರೆ ಒಬ್ಬ ವ್ಯಕ್ತಿಯು ತನ್ನ ದಿನದ ಹೊಟ್ಟೆ ತುಂಬಿಸಿಕೊಳ್ಳಲು ಬೇಕಾದ ಆಹಾರ ಪದಾರ್ಥಗಳು, ದಾಹ ನೀಗಿಸಿಕೊಳ್ಳಲು ಶುದ್ಧವಾದ ಕುಡಿಯುವ ನೀರು, ದಣಿವಾದಾಗ ವಿಶ್ರಾಂತಿ ತೆಗೆದುಕೊಳ್ಳಲು ಒಂದು ಮನೆ, ಆರೋಗ್ಯ ಹದಗೆಟ್ಟಾಗ ಸುಧಾರಿಸಿಕೊಳ್ಳುವ ಸಲುವಾಗಿ ಔಷಧಿಯನ್ನು ತೆಗೆದುಕೊಳ್ಳುವ ಶಕ್ತಿ ಇಲ್ಲದೆ ಇರುವುದು, ಶಿಕ್ಷಣದ ಕೊರತೆ, ಉತ್ಪಾದನಾ ಪರಿಕರಗಳು ಇಲ್ಲದೆ ಇರುವದು ಮತ್ತು ಜೀವನ ಸಾಗಿಸಲು ಅತಿ ಅವಶ್ಯಕವಾಗಿ ಬೇಕಾಗಿರುವ ವಸ್ತುಗಳನ್ನು ಹೊಂದಿರದೆ ಇರುವುದನ್ನು ಬಡತನ ಎಂದು ಹೇಳಬಹುದು. ಬಡತನವು ಒಂದು ಬಹುಮುಖಿ ಪರಿಕಲ್ಪನೆಯಾಗಿದ್ದು, ಸಾಮಾಜಿಕ, ಆರ್ಥಿಕ ಮತ್ತು ರಾಜಕೀಯ ಅಂಶಗಳಿಂದ ಕೂಡಿರುತ್ತದೆ. ಅಂತರಾಷ್ಟ್ರೀಯ ಮಟ್ಟದಲ್ಲಿ ಬಡತನವನ್ನು ಎರಡು ವಿಧವಾಗಿ ವಿಂಗಡಿಸುತ್ತಾರೆ, ಒಂದು ಬದುಕಲು ಮೂಲಭೂತ ಸೌಕರ್ಯಗಳ ಕೊರತೆಯಿಂದ ಬಳಲುತ್ತಿರುವ ಒಂದು ರೀತಿಯ ಬಡತನ ಇದಕ್ಕೆ ಆಂಗ್ಲ ಭಾಷೆಯಲ್ಲಿ ಅಬ್ಸೋಲ್ಯೂಟ್ ಪಾವರ್ಟಿ (Absolute

poverty) ಎಂದು ಕರೆದರೆ ಸ್ಥಳೀಯವಾಗಿ ಕಡು ಬಡವರು ಎಂದು ಕರೆಯಬಹುದು. ಇನ್ನೊಂದು ರೀತಿಯ ಬಡತನವು ಯಾವಾಗ ಒಂದು ಕುಟುಂಬದ ಆದಾಯವು ಮತ್ತು ಸಾರ್ವತ್ರಿಕವಾಗಿ ಸಮಾಜವು ವ್ಯಾಖ್ಯಾನಿಸಿದ ಸಾಮಾನ್ಯ ಜೀವನ ಮಟ್ಟವು ಕೆಳಗಿದ್ದರೆ ಅದನ್ನು ರಿಲೇಟಿವ್ ಪಾವರ್ಟಿ (Relative poverty) ಎಂದು ಕರೆಯುತ್ತಾರೆ.

ಒಂದನೆಯ ವಿಧದ ಬಡತನವು ಕಾಲಾನಂತರದಲ್ಲಿ ಮತ್ತು ದೇಶಗಳ ನಡುವೆ ಸ್ಥಿರವಾಗಿರುತ್ತದೆ ಮತ್ತು ಇದು ಒಂದು ರೀತಿಯ ಪ್ರಮಾಣವನ್ನು ಸೂಚಿಸುತ್ತದೆ. ವಿಶ್ವ ಬ್ಯಾಂಕ್ ಪ್ರಥಮವಾಗಿ 1990ರಲ್ಲಿ ಒಂದು ದಿನಕ್ಕೆ ಒಂದು ಡಾಲರ್‌ಗಿಂತ ಕಡಿಮೆ ಆದಾಯ ಇರುವವರನ್ನು ಬಡವರೆಂದು ಗುರುತಿಸಲಾಯಿತ್ತು. ಇದರಿಂದ ಪ್ರಪಂಚದಲ್ಲಿರುವ ಎಲ್ಲಾ ದೇಶಗಳಲ್ಲಿನ ಜನರನ್ನು ಬಡವರು ಮತ್ತು ಬಡವರಲ್ಲದವರು ಎಂದು ವಿಂಗಡಿಸಲಾಯಿತ್ತು. ಆದರೆ 2008ರಲ್ಲಿ ವಿಶ್ವ ಬ್ಯಾಂಕ್ ದಿನಕ್ಕೆ 1.25 ಡಾಲರ್‌ಗಿಂತ ಕಡಿಮೆ ಆದಾಯ ಇರುವವರನ್ನು ಬಡವರೆಂದು ಮರು ವ್ಯಾಖ್ಯಾನಿಸಿತ್ತು. ಇದು ಪುನಃ 2015ರಲ್ಲಿ 1.90 ಡಾಲರ್‌ಗೆ ಏರಿಸಿತ್ತು. ಇದರಿಂದ ಈ ಒಂದು ಅವಧಿಯಲ್ಲಿ ಬಡತನದ ಪ್ರಮಾಣದಲ್ಲಿಯೂ ಕೂಡ ಹೆಚ್ಚು ಕಡಿಮೆಯಾಗಿತ್ತು. ಎರಡನೆಯ ವಿಧದ ಬಡತನವು ಸಾಮಾಜಿಕವಾಗಿ ನಿರ್ಧರಿಸುತ್ತದೆ ಮತ್ತು ಸುತ್ತಮುತ್ತಲಿನ ಪರಿಸರದ ಮೇಲೆ ಅವಲಂಬಿತವಾಗಿರುತ್ತದೆ. ಆದ್ದರಿಂದ ಈ ಬಡತನವು ಹೆಚ್ಚಾಗಿ ಆದಾಯದ ಅಸಮತೋಲನದಿಂದ ಕೂಡಿರುತ್ತದೆ. ಈ ವಿಧಾನವು ಅತಿ ಮುಂದುವರೆದ ದೇಶಗಳಲ್ಲಿನ ಬಡತನದ ಪ್ರಮಾಣವನ್ನು ಅಳತೆ ಮಾಡಲು ಹೆಚ್ಚಾಗಿ ಬಳಸುತ್ತಾರೆ (ರಾಫೆಲ್ ಡೆನ್ನಿಸ್, 2005, 2008, 2009 ಮತ್ತು 2013) ಎಂದು ಉಲ್ಲೇಖಿತವಾಗಿರುತ್ತದೆ.

**ಜಾಗತಿಕ ಬಡತನ**

ವಿಶ್ವ ಬ್ಯಾಂಕ್‌ವು ಪ್ರಪಂಚದ ವಿವಿಧ ಭಾಗದಲ್ಲಿರುವ ದೇಶಗಳನ್ನು ಒಟ್ಟು ಆರು ಭಾಗಗಳಾಗಿ ವಿಂಗಡಿಸಿ 1981 ರಿಂದ 2008ರ ವರೆಗಿನ ಬಡತನದ ಪ್ರತಿಶತವನ್ನು ಕೆಳಗಿನ ಕೋಷ್ಟಕ 1ರಲ್ಲಿ ಸವಿವರವಾಗಿ ವಿಶ್ಲೇಷಿಸಲಾಗಿದೆ. ಕೋಷ್ಟಕ ಒಂದರ ಪ್ರಕಾರ ದಿನಕ್ಕೆ ಒಂದು ಡಾಲರ್‌ಕ್ಕಿಂತ ಕಡಿಮೆ ಇರುವವರು 1990ರಲ್ಲಿ ಅತಿ ಹೆಚ್ಚಿನ ಬಡವರ ಪ್ರತಿಶತವು ಸಬ್–ಸಹರನ್ ಆಫ್ರಿಕಾದಲ್ಲಿ ಶೇಕಡಾ 46.07ರಷ್ಟು ಇದ್ದರೆ ದಕ್ಷಿಣ ಏಷ್ಯಾದಲ್ಲಿ ಇದು ಶೇಕಡಾ 35.04ರೊಂದಿಗೆ ಇದು ಪ್ರಪಂಚದಲ್ಲಿ ಎರಡನೆಯ ಸ್ಥಾನದಲ್ಲಿದೆ. ಅಂದರೆ ಪ್ರಪಂಚದ ಬಡವರಲ್ಲಿ ಶೇಕಡಾ 76ಕ್ಕಿಂತ ಹೆಚ್ಚಿನವರು ಸಬ್–ಸಹರನ್ ಆಫ್ರಿಕಾ ಮತ್ತು ದಕ್ಷಿಣ ಏಷ್ಯಾ ಭಾಗದಲ್ಲಿ ಕಂಡು ಬರುತ್ತಾರೆ ಎಂದು ವಿಶ್ವ ಬ್ಯಾಂಕ್ 1990ರಲ್ಲಿಯೆ ತಿಳಿಸಿದೆ. ಆದರೆ ಇದು 2008ರಲ್ಲಿಯೂ ಕೂಡ ಅದೇ ಪರಿಸ್ಥಿತಿಯಲ್ಲಿ ಮುಂದುವರೆದುಕೊಂಡು ಬಂದಿದೆ ಎಂದು ಹೇಳಬಹುದು. ಇದರಲ್ಲಿ ಒಂದೇ ವ್ಯತ್ಯಾಸವನ್ನು ಕಾಣ ಬಹುದಾಗಿದೆ ಸಬ್–ಸಹರನ್ ಆಫ್ರಿಕಾದಲ್ಲಿ ಶೇಕಡಾ 47.5ರಷ್ಟು ಬಡವರಿದ್ದರೆ ದಕ್ಷಿಣ ಏಷ್ಯಾದಲ್ಲಿ ಇದು ಶೇಕಡಾ 36ರಷ್ಟು ಇದೆ ಎಂದು ವಿಶ್ವ

ಬ್ಯಾಂಕ್ ತನ್ನ ವರದಿಯಲ್ಲಿ ಉಲ್ಲೇಖಿಸಿದೆ. 1990 ರಿಂದ 2008ರ ಅವಧಿಯಲ್ಲಿ ಈ ಎರಡು ಭಾಗದಲ್ಲಿ ತಲಾ ಶೇಕಡಾ ಒಂದರಂತೆ ಹೆಚ್ಚಾಗಿದು ಕಂಡು ಬರುತ್ತದೆ. ಹೆಚ್ಚಾಗಿ ಕಂಡು ಬರುವುದಕ್ಕೆ ಮೂಲ ಕಾರಣ ಬಡತನವನ್ನು ಅಳೆಯುವ ಮಿತಿಯನ್ನು ಹೆಚ್ಚಿಗೆ ಮಾಡಿರುವದರಿಂದ ಎಂದು ಹೇಳಬಹುದು.

**ಕೋಷ್ಟಕ – 1.1**

**ಪ್ರಪಂಚದಲ್ಲಿನ ಒಟ್ಟು ಪ್ರತಿಶತ ಬಡವರ ಜನಸಂಖ್ಯೆ**

| ಪ್ರದೇಶ | ದಿನಕ್ಕೆ 1 ಡಾಲರ್ | | | ದಿನಕ್ಕೆ 1.25 ಡಾಲರ್ | |
|---|---|---|---|---|---|
| | **1990** | **2002** | **2004** | **1981** | **2008** |
| ಪೂರ್ವ ಏಷ್ಯಾ ಮತ್ತು ಫೆಸಿಫಿಕ್ ದೇಶಗಳು | 15.40% | 12.33% | 9.07% | 77.2% | 14.3% |
| ಯುರೋಪ್ ಮತ್ತು ಮಧ್ಯ ಏಷ್ಯಾ | 3.60% | 1.28% | 0.95% | 1.9% | 0.5% |
| ಲ್ಯಾಟಿನ್ ಅಮೇರಿಕಾ ಮತ್ತು ಕೆರಿಬಿಯನ್ | 9.62% | 9.08% | 8.64% | 11.9% | 6.5% |
| ಮಧ್ಯ ಪೂರ್ವ ಮತ್ತು ಉತ್ತರ ಆಫ್ರಿಕಾ | 2.08% | 1.69% | 1.47% | 9.6% | 2.7% |
| ದಕ್ಷಿಣ ಏಷ್ಯಾ | 35.04% | 33.44% | 30.84% | 61.1% | 36% |
| ಸಬ್–ಸಹರನ್ ಆಫ್ರಿಕಾ | 46.07% | 42.63% | 41.09% | 51.5% | 47.5% |
| ಪ್ರಪಂಚ | ಮಾಹಿತಿ ಇಲ್ಲ | | | 52.2% | 22.4% |

ಮಾಹಿತಿಯ ಮೂಲ: * ವಿಶ್ವ ಬ್ಯಾಂಕ್ (2007) ಹ್ಯೂಮನ್ ಡೆವಲಪ್ಮೆಂಟ್ ಇಂಡಿಕೇಟರ್ಸ್ ರಿಜನಲ್ ಟೇಬಲ್ಸ್.
* ವಿಶ್ವ ಬ್ಯಾಂಕ್ (2011) ವಿಶ್ವಬ್ಯಾಂಕ್ 2011ರ ಬಡತನದ ಕುರಿತು ವರದಿ.
* ಚನ್ನಕ್ಕಿ ಹೆಚ್. ಆರ್. ಮತ್ತು ರಾಧಾ ಜಿ. ಮಣ್ಣೂರ್ (2016) *"ದಕ್ಷಿಣ ಭಾರತ ಮತ್ತು ಕರ್ನಾಟಕ ರಾಜ್ಯದಲ್ಲಿನ ತಳ ಸಮುದಾಯದಲ್ಲಿರುವ ಬಡತನದ ಕುರಿತು ಒಂದು ವಿಶ್ಲೇಷಣೆ", ಹೊಸತು–ಸಂಪುಟ–18–ಸಂಚಿಕೆ–3, ಪುಟ–25–29.*

## ಭಾರತ ಮತ್ತು ಕರ್ನಾಟಕ ರಾಜ್ಯದಲ್ಲಿನ ಬಡತನ

ಭಾರತ ಸರಕಾವು ದೇಶದಲ್ಲಿನ ಬಡವರನ್ನು ಲೆಕ್ಕ ಹಾಕಲು ಹಲವಾರು ಸಮಿತಿಗಳನ್ನು ರಚಿಸಿದೆ. ಸಮಿತಿಗಳು ಕೊಟ್ಟ ಸಲಹೆ ಸೂಚನೆಗಳನ್ನು ಆಧಾರವಾಗಿಟ್ಟುಕೊಂಡು ದೇಶದಲ್ಲಿರುವ ಬಡವರ ಪ್ರಮಾಣವನ್ನು ಯೋಜನಾ ಅಯೋಗವು ಪ್ರಕಟಿಸುತ್ತದೆ. ಇದಕ್ಕಾಗಿ ಇಲ್ಲಿಯವರೆಗೆ ಸರಕಾರವು ನೇಮಿಸಿದ ಸಮಿತಿಗಳ ಬಗ್ಗೆ ಸಂಕ್ಷಿಪ್ತವಾಗಿ ಮುಂದಿನ ಅಧ್ಯಾಯಗಳಲ್ಲಿ ವಿವರಿಸಲಾಗಿದೆ. ಕಾಲಕ್ಕೆ ತಕ್ಕಂತೆ ಸಮಿತಿಗಳು ಕೊಟ್ಟಿರುವ ಸಲಹೆ ಸೂಚನೆಗಳನ್ನು ಪರಿಗಣನೆಗೆ ತೆಗೆದುಕೊಂಡು ಯೋಜನಾ ಆಯೋಗವು ಕೇಂದ್ರ ಸರಕಾರಕ್ಕೆ ಒಂದು ನಿರ್ದಿಷ್ಟವಾದ ಕಾರ್ಯಸೂಚಿಯನ್ನು ಒದಗಿಸುತ್ತದೆ.

ದೇಶವು ಕ್ರೀ.ಶ. 1947ರಲ್ಲಿ ಬ್ರಿಟೀಷರಿಂದ ಮುಕ್ತಿಯನ್ನು ಪಡೆದು ಒಂದು ಸ್ವತಂತ್ರ ದೇಶವಾಗಿ ಉದಯವಾಯಿತ್ತು. ಆಗ ಆಧಿಕಾರಕ್ಕೆ ಬಂದ ಸರಕಾರವು ದೇಶದಲ್ಲಿರುವ ಕಡಿಮೆ ಮಟ್ಟದ ಸಾಕ್ಷರತೆ, ಬಡತನ ಮತ್ತು ಇನ್ನಿತರ ಅಭಿವೃದ್ಧಿ ವಿಷಯಗಳಿಗೆ ಸಂಬಂಧಿಸಿದ ಅನೇಕ ಅಭಿವೃದ್ಧಿ ಕಾರ್ಯಕ್ರಮಗಳನ್ನು ಹಾಕಿಕೊಂಡು ಭಾರತದ ಒಕ್ಕೂಟದಲ್ಲಿರುವ ಎಲ್ಲಾ ರಾಜ್ಯಗಳು ಒಂದೇ ದಶಕದಲ್ಲಿ ಕಾರ್ಯಕ್ರಮಗಳನ್ನು ಹಾಕಿಕೊಂಡರೂ ಸಹ ಕೆಲವೊಂದು ರಾಜ್ಯಗಳು

ತಾವುಗಳು ಆಚರಣೆಗೆ ತಂದ ಕಾರ್ಯಕ್ರಮಗಳನ್ನು ಅತ್ಯಂತ ಯಶಸ್ವಿಯಾಗಿ ಗುರಿ ಮುಟ್ಟಿದ್ದರೆ ಇನ್ನೂ ಕೆಲವು ರಾಜ್ಯಗಳು ನಿಗದಿತ ಗುರಿಗಳನ್ನು ಮುಟ್ಟಲು ಸಾಧ್ಯವೇ ಆಗಿಲ್ಲ ಎಂದು ಹೇಳಬಹುದು. ಇದಕ್ಕೆ ಮೂಲ ಕಾರಣ ಆಯಾ ರಾಜ್ಯಗಳಲ್ಲಿ ಅಧಿಕಾರಕ್ಕೆ ಏರಿದ ರಾಜಕೀಯ ಪಕ್ಷಗಳು ಮತ್ತು ರಾಜಕೀಯ ನಾಯಕರ ಇಚ್ಛಾಶಕ್ತಿ ಎಂದು ಹೇಳಿದರೆ ತಪ್ಪಾಗಕ್ಕಿಲ್ಲ.

ನಕ್ಷೆ ಮತ್ತು ಕೋಷ್ಟಕ ಎರಡರಲ್ಲಿ ತಿಳಿಸಿರುವಂತೆ ಭಾರತ ಮತ್ತು ಕರ್ನಾಟಕ ರಾಜ್ಯದಲ್ಲಿರುವ ಒಟ್ಟು ಜನಸಂಖ್ಯೆಯಲ್ಲಿ ಬಡತನ ರೇಖೆಯ ಕೆಳಗಿರುವ ಒಟ್ಟು ಪ್ರತಿಶತವನ್ನು ವಿಶ್ಲೇಷಿಸಲಾಗಿದೆ. ನಕ್ಷೆಯಲ್ಲಿ ನಮೂದಿಸಿದಂತೆ ಕರ್ನಾಟಕ ರಾಜ್ಯದೊಂದಿಗೆ ದಕ್ಷಿಣ ರಾಜ್ಯಗಳಾದ ಆಂಧ್ರ ಪ್ರದೇಶ, ಕೇರಳ ಮತ್ತು ತಮಿಳುನಾಡಿನೊಂದಿಗೆ 1973–74 ರಿಂದ 2004–05ರ ಅವಧಿಯಲ್ಲಿನ ದತ್ತಾಂಶಗಳನ್ನು ತುಲನಾತ್ಮಕವಾಗಿ ವಿಶ್ಲೇಷಿಸಲಾಗಿದೆ. ಇದಕ್ಕಾಗಿ ಯೋಜನಾ ಆಯೋಗ ಮತ್ತು ಎನ್‌ಎಸ್‌ಎಸ್‌ಓ 61ನೇ ಸುತ್ತಿನ ದತ್ತಾಂಶಗಳನ್ನು ಬಳಸಿಕೊಳ್ಳಲಾಗಿದೆ.

ದೇಶದಲ್ಲಿ 1973–74ರಲ್ಲಿ ಶೇಕಡಾ 54.88ರಷ್ಟು ಜನಸಂಖ್ಯೆಯು ಬಡತನ ರೇಖೆಯ ಕೆಳಗಿದ್ದರೆ ಇದು 2004–05ರಲ್ಲಿ ಶೇಕಡಾ 21.08ಕ್ಕೆ ಇಳಿಕೆಯಾಗಿದೆ. ಅಂದರೆ ಸುಮಾರು ಈ ಮೂವತ್ತು ವರ್ಷಗಳ ಅವಧಿಯಲ್ಲಿ ಶೇಕಡಾ 33.8ರಷ್ಟಿನ (54.88–21.08) ಜನಸಂಖ್ಯೆಯು ಬಡತನ ರೇಖೆಯನ್ನು ಮೀರಿ ತಮ್ಮ ತಲಾ ಆದಾಯವನ್ನು ಹೆಚ್ಚಿಸಿಕೊಂಡಿರಬಹುದು ಅಥವಾ ಜೀವನ ಮಟ್ಟವನ್ನು ಸುಧಾರಿಸಿಕೊಂಡಿರಬಹುದು ಎಂದು ಅಂದಾಜಿಸಬಹುದು. ಆದರೂ ಕೂಡ ಕೇಂದ್ರ ಸರಕಾರಗಳು ಮತ್ತು ರಾಜ್ಯ ಸರಕಾರಗಳ ಬಡತನ ನಿವಾರಣೆಯ ಕಾರ್ಯಕ್ರಮಗಳಲ್ಲಿ ಯಾವುದೇ ರೀತಿಯ ಇಳಿಕೆಯಾಗಿಲ್ಲ ಬದಲಾಗಿ ಇನ್ನೂ ಹೆಚ್ಚಿನ ಪ್ರಮಾಣದಲ್ಲಿ ಏರಿಕೆಯಾಗುತ್ತಿವೆ. ಈ ಎಲ್ಲಾ ಬಡತನ ನಿವಾರಣೆಯ ಕಾರ್ಯಕ್ರಮಗಳು ಜನರಿಗೆ ಇನ್ನೂ ಕಡು ಬಡತನಕ್ಕೆ



ದೂಡುತ್ತಿವೆ ಹೊರತಾಗಿ ಅವರನ್ನು ಬಡತನದಿಂದ ಮೇಲೆತ್ತುವ ಕೆಲಸ ಮಾಡುವಲ್ಲಿ ಸೋತಿವೆ ಎಂದು ಹೇಳಬಹುದು. ಇನ್ನು ದಕ್ಷಿಣದ ರಾಜ್ಯಗಳಲ್ಲಿನ ಬಡತನ ರೇಖೆಯ ಕೆಳಗಿನ ಜನಸಂಖ್ಯೆಯ ಬಗ್ಗೆ ಹೇಳುವುದಾದರೆ ಕ್ರಮವಾಗಿ ಕರ್ನಾಟಕದಲ್ಲಿ ಶೇಕಡಾ 54.47, ತಮಿಳನಾಡಿನಲ್ಲಿ ಶೇಕಡಾ 54.94, ಕೇರಳ 59.79 ಮತ್ತು ಆಂಧ್ರ ಪ್ರದೇಶದಲ್ಲಿ ಶೇಕಡಾ 48.86ರಷ್ಟು ಜನಸಂಖ್ಯೆಯು 1973–74ರಲ್ಲಿ ಬಡತನ ರೇಖೆಯ ಕೆಳಗಿದ್ದರೆ 2004–05ರಲ್ಲಿ ಇದು ಕ್ರಮವಾಗಿ ಶೇಕಡಾ 17.4ರಷ್ಟು ಕರ್ನಾಟಕದಲ್ಲಿ ಶೇಕಡಾ 17.8ರಷ್ಟು ತಮಿಳನಾಡಿನಲ್ಲಿ, ಶೇಕಡಾ 11.4ರಷ್ಟು ಕೇರಳದಲ್ಲಿ ಮತ್ತು ಶೇಕಡಾ 11.1ರಷ್ಟು ಆಂಧ್ರ ಪ್ರದೇಶದಲ್ಲಿ ಇಳಿಕೆಯಾಗಿರುವದು ಕಂಡು ಬರುತ್ತದೆ. ಆದರೆ ಕೇರಳವನ್ನು ತೆಗೆದುಕೊಂಡರೆ 1973–74ರಲ್ಲಿ ದಕ್ಷಿಣದ ರಾಜ್ಯಗಳಲ್ಲೆ ಅಧಿಕ ಪ್ರಮಾಣದ ಬಡವರನ್ನು ಹೊಂದಿತ್ತು ಆದರೆ ಇದು 2004–05ರಲ್ಲಿ ದಕ್ಷಿಣದ ಎಲ್ಲಾ ರಾಜ್ಯಗಳಿಗಿಂತ ಕಡಿಮೆ ಪ್ರಮಾಣದ ಬಡವರನ್ನು ಹೊಂದಿದ ರಾಜ್ಯವಾಗಿ ಆಂಧ್ರ ಪ್ರದೇಶದೊಂದಿಗೆ ಸರಿಸಮಾನವಾಗಿದೆ. ಆದರೆ ಕರ್ನಾಟಕವು 1973–74ರಲ್ಲಿ ಕೇರಳಗಿಂತ ಕಡಿಮೆಯ ಬಡವರನ್ನು ಹೊಂದಿತ್ತು ಆದರೆ ಇದು 2004–05ರಲ್ಲಿ ಕೇರಳಗಿಂತ ಹೆಚ್ಚಿನ ಪ್ರಮಾಣದಲ್ಲಿ ಬಡವರನ್ನು ಹೊಂದಿದೆ. ಅಂದರೆ ಕೇರಳ ರಾಜ್ಯ ಸಾಧಿಸಿದ ಪ್ರಗತಿಯನ್ನು ಸಾಧಿಸುವಲ್ಲಿ ಕರ್ನಾಟಕ ರಾಜ್ಯವು ವಿಫಲವಾಗಿದೆ ಎಂದು ಹೇಳಬಹುದು. ಆದರ ನಕ್ಷೆ ಮತ್ತು ಕೋಷ್ಟಕದಿಂದ ಒಂದು ಅಂಶ ತಿಳಿದು ಬರುವುದೇನೆಂದರೆ ದಕ್ಷಿಣದ ಎಲ್ಲಾ ರಾಜ್ಯಗಳು ದೇಶದಲ್ಲಿರುವ ಸರಾಸರಿ ಬಡವರಿಗಿಂತ ಕಡಿಮೆಯ ಪ್ರಮಾಣದ ಬಡವರನ್ನು ಹೊಂದಿರುವುದು ತಿಳಿದು ಬರುತ್ತದೆ. ಅತಿ ಹೆಚ್ಚಿನ ಬಡತನದಿಂದ ಇರುವ ಜನಸಂಖ್ಯೆಯನ್ನು ತಮಿಳನಾಡಿನಲ್ಲಿ ಕಾಣಬಹುದಾಗಿದೆ.

**ಕೋಷ್ಟಕ – 1.2**

**ದೇಶ ಮತ್ತು ದಕ್ಷಿಣ ರಾಜ್ಯಗಳಲ್ಲಿರುವ ಶೇಕಡಾವಾರು ಬಡವರ ಜನಸಂಖ್ಯೆ**

| ವರ್ಷ | ಆಂಧ್ರ ಪ್ರದೇಶ | ಕರ್ನಾಟಕ | ಕೇರಳ | ತಮಿಳನಾಡು | ಒಟ್ಟು ಭಾರತ |
|---|---|---|---|---|---|
| 1973–74 | 48.86 | 54.47 | 59.79 | 54.94 | 54.88 |
| 1977–78 | 39.31 | 48.78 | 52.22 | 54.79 | 51.32 |
| 1983 | 28.91 | 38.24 | 40.42 | 51.66 | 44.48 |
| 1987–88 | 25.86 | 37.53 | 31.79 | 43.39 | 38.86 |
| 1993–94 | 22.19 | 33.16 | 25.43 | 35.03 | 35.97 |
| 1999–2000 | 15.77 | 20.04 | 12.72 | 21.12 | 26.1 |
| 2004–05* | 15.8 | 25.0 | 15.0 | 22.5 | 27.5 |
| 2004–05** | 11.1 | 17.4 | 11.4 | 17.8 | 21.8 |
| *ಏಕರೂಪ ಉಲ್ಲೇಖಿತ ಕಾಲಾವಧಿ ** ಮಿಶ್ರ ಉಲ್ಲೇಖಿತ ಕಾಲಾವಧಿ | | | | | |

ಮಾಹಿತಿಯ ಮೂಲ: ಯೋಜನಾ ಆಯೋಗ, ಭಾರತ ಸರಕಾರ ಮತ್ತು 2004 ಮತ್ತು 2005 ರಲ್ಲಿ ನಡೆದ ಎನ್‌ಎಸ್‌ಎಸ್‌ಓನ 61ನೇ ಸುತ್ತಿನ ದತ್ತಾಂಶಗಳು.

ಈ ಮೇಲೆ ಹೇಳಿದ ಬಡತನದ ಜನಸಂಖ್ಯೆಯನ್ನು ಆಯಾ ಜನರ ತಲಾ ಮಾಸಿಕ ಆದಾಯದಿಂದ ಅಂದಾಜಿಸಿ ಹೇಳಲಾಗುತ್ತದೆ. ಆದ್ದರಿಂದ ದೇಶ ಮತ್ತು ದಕ್ಷಿಣದ ರಾಜ್ಯಗಳಲ್ಲಿರುವ ಜನರ ತಲಾ ಮಾಸಿಕ ಆದಾಯವನ್ನು ನಕ್ಷೆ ಮತ್ತು ಕೋಷ್ಟಕ 2ರಲ್ಲಿ ವಿವರಿಸಿದಂತೆ ನಗರ ಮತ್ತು ಗ್ರಾಮೀಣ ಪ್ರದೇಶಗಳಿಗನುಗುಣವಾಗಿ 2009-10ರಲ್ಲಿರುವಂತೆ ಚರ್ಚಿಸಲಾಗಿದೆ. ದೇಶದ ಗ್ರಾಮೀಣ ಭಾಗದಲ್ಲಿರುವ ಜನರ ಮಾಸಿಕ ತಲಾ ಆದಾಯವು ರೂಪಾಯಿ 672ಕ್ಕಿಂತ ಕಡಿಮೆ ಇರುವವರನ್ನು ಬಡತನ ರೇಖೆಯ ಕೆಳಗಿರುವವರೆಂದು ಪರಿಗಣಿಸಲಾಗಿದೆ. ಆದರೆ ನಗರ ಪ್ರದೇಶದಲ್ಲಿನ ಇದು ರೂಪಾಯಿ 859ಕ್ಕಿಂತ ಕಡಿಮೆ ಇರುವವರನ್ನು ಬಡವರೆಂದು ಪರಿಗಣಿಸಲಾಗಿದೆ.

ದಕ್ಷಿಣದ ರಾಜ್ಯಗಳಲ್ಲಿನ ಮಾಸಿಕ ತಲಾ ಆದಾಯವನ್ನು ತೆಗೆದುಕೊಂಡರೆ ಕರ್ನಾಟಕದಲ್ಲಿನ ಗ್ರಾಮೀಣ ಭಾಗದಲ್ಲಿರುವ ಜನಸಂಖ್ಯೆಯು ಅತಿ ಕಡಿಮೆಯ ಅಂದರೆ ರೂಪಾಯಿ 629.4ಕ್ಕಿಂತ ಕಡಿಮೆ ತಲಾ ಮಾಸಿಕ ಆದಾಯ ಹೊಂದಿರುವವರನ್ನು ಬಡತನ ರೇಖೆಯ ಕೆಳಗಿನವರು ಎಂದು ಹೇಳಲಾಗುತ್ತದೆ, ಆದರೆ ಇದು ಕೇರಳದಲ್ಲಿ 775 ರೂಪಾಯಿ, ಆಂಧ್ರಪ್ರದೇಶದಲ್ಲಿ 693 ರೂಪಾಯಿ ಮತ್ತು ತಮಿಳನಾಡಿನಲ್ಲಿ 639 ರೂಪಾಯಿಕ್ಕಿಂತ ಕಡಿಮೆ ತಲಾ ಮಾಸಿಕ ಆದಾಯ ಇರುವವರನ್ನು ಪರಿಗಣಿಸಲಾಗಿದೆ. ತುಲನೆ ಮಾಡಿ ನೋಡಿದಾಗ ಕರ್ನಾಟಕಕ್ಕಿಂತ ಕೇರಳ ಹೆಚ್ಚು ಮತ್ತು ತಮಿಳನಾಡಿನಲ್ಲಿ ಕಡಿಮೆ ರೂಪಾಯಿಯ ತಲಾ ಆದಾಯವಿರುವವರನ್ನು ಪರಿಗಣಿಸಿರುವುದು ಗೋಚರಿಸುತ್ತದೆ. ಇನ್ನು ಒಂದು ಅಂಶ ಬಹಳ ಪ್ರಮುಖವಾಗಿರುವುದು ತಮಿಳನಾಡಿನಲ್ಲಿ ಎಲ್ಲಾ ರಾಜಕೀಯ ಪಕ್ಷಗಳು ಚುನಾವಣೆಯ ಸಮಯದಲ್ಲಿ ಕೊಟ್ಟ ಮತ್ತು ಕೊಡುತ್ತಿರುವ ಸೌಲಭ್ಯಗಳು ಕೇರಳ ಮತ್ತು ಆಂಧ್ರ ಪ್ರದೇಶ ರಾಜ್ಯಗಳಲ್ಲಿ ಕಾಣಸಿಗುವುದಿಲ್ಲ. ಆದರೂ ಕೂಡ ಅಲ್ಲಿನ ತಲಾ ಮಾಸಿಕ ಆದಾಯವು ಈ ಎರಡು ರಾಜ್ಯಗಳಿಗಿಂತ ಕಡಿಮೆ ಇದೆ. ಆದರೆ ದಕ್ಷಿಣದಲ್ಲಿ ಕೇರಳ ಮತ್ತು ಆಂಧ್ರ ಪ್ರದೇಶವನ್ನು ಹೊರತುಪಡಿಸಿದರೆ ಉಳಿದ ಎಲ್ಲಾ ರಾಜ್ಯಗಳ ಗ್ರಾಮೀಣ ಪ್ರದೇಶದ ಜನರ ಮಾಸಿಕ ತಲಾ ಆದಾಯವು ಕಡಿಮೆ ಕಂಡು ಬರುತ್ತದೆ.



**ಕೋಷ್ಟಕ – 1.3**

**ಬಡತನವನ್ನು ನಿರ್ಧರಿಸುವ ಮಾಸಿಕ ತಲಾ ಆದಾಯ**

| ರಾಜ್ಯಗಳು | ತಲಾ ಮಾಸಿಕ ಆದಾಯ (ರೂ.) | |
|---|---|---|
| | ಗ್ರಾಮೀಣ ಪ್ರದೇಶ | ನಗರ ಪ್ರದೇಶ |
| ಆಂಧ್ರ ಪ್ರದೇಶ | 693.8 | 926.4 |
| ಕರ್ನಾಟಕ | 629.4 | 908.0 |
| ಕೇರಳ | 775.3 | 830.7 |
| ತಮಿಳನಾಡು | 639.0 | 800.8 |
| ಒಟ್ಟು ಭಾರತ | 672.8 | 859.6 |

ಮಾಹಿತಿಯ ಮೂಲ: 2009–10ರ ಯೋಜನಾ ಆಯೋಗದ ವರದಿ, ಭಾರತ ಸರಕಾರ.

ನಗರ ಪ್ರದೇಶದ ತಲಾ ಆದಾಯವು ಗ್ರಾಮೀಣಕ್ಕಿಂತ ಹೆಚ್ಚಿನ ಪ್ರಮಾಣದಲ್ಲಿ ಇರುವವರನ್ನು ಬಡವರೆಂದು ಗಣನೆಗೆ ತೆಗೆದುಕೊಳ್ಳಲಾಗಿದೆ. ಏಕೆಂದರೆ ಇವರಿಗೆ ಕೆಲಸದ ಅವಕಾಶಗಳು ಹೆಚ್ಚು ಇದ್ದು ಅವರ ಆದಾಯದ ಪ್ರಮಾಣದಲ್ಲಿ ಗ್ರಾಮೀಣ ಭಾಗದವರಿಗಿಂತ ಹೆಚ್ಚಿರುತ್ತದೆ. ದಕ್ಷಿಣ ಭಾರತದಲ್ಲಿ ಆಂಧ್ರ ಪ್ರದೇಶದಲ್ಲಿ ಪ್ರತಿ ತಿಂಗಳಿಗೆ ರೂಪಾಯಿ 926ಕ್ಕಿಂತ ಹೆಚ್ಚಿದ್ದರೆ ಅವರು ಬಡವರಲ್ಲ ಇದು ದಕ್ಷಿಣದ ಇತರೆ ರಾಜ್ಯಗಳಿಗೆ ಸಂಬಂಧಿಸಿದಂತೆ ವಿಶ್ಲೇಷಿಸುವುದಾದರೆ ಪ್ರತಿ ತಿಂಗಳು ಕರ್ನಾಟಕದಲ್ಲಿ 908 ರೂಪಾಯಿ, ಕೇರಳ ಮತ್ತು ತಮಿಳನಾಡಿನಲ್ಲಿ ಕ್ರಮವಾಗಿ 830 ಮತ್ತು 800 ರೂಪಾಯಿಕ್ಕಿಂತ ಹೆಚ್ಚಿನ ಆದಾಯವನ್ನು ಹೊಂದಿದ್ದರೆ ಅವರನ್ನು ಬಡತನ ರೇಖೆಗಿಂತ ಮೇಲಿನವರು ಅಥವಾ ಉಳ್ಳವರು ಎಂದು ಪರಿಗಣಿಸಲಾಗುತ್ತದೆ. ಅದಕ್ಕಿಂತ ಕಡಿಮೆ ಮಾಸಿಕ ಆದಾಯವನ್ನು ಹೊಂದಿರುವ ಜನಸಂಖ್ಯೆಯನ್ನು ಬಡವರೆಂದು ಅಂದಾಜಿಸಲಾಗುತ್ತದೆ.

ಇಲ್ಲಿ ಒಂದು ಅಂಶ ತಿಳಿದುಬರುವುದೇನೆಂದರೆ ದಕ್ಷಿಣ ರಾಜ್ಯಗಳ ಗ್ರಾಮೀಣ ಭಾಗದಲ್ಲಿರುವ ಬಡವರ ಜನಸಂಖ್ಯೆಯ ಮಾಸಿಕ ತಲಾ ಆದಾಯವು ಅತಿ ಕಡಿಮೆ ಇರುವುದು ಕರ್ನಾಟಕದಲ್ಲಿ ಮತ್ತು ಇದು ನಗರ ಪ್ರದೇಶದಲ್ಲಿನ ಜನರ ಮಾಸಿಕ ಆದಾಯವು ಕೇರಳ ಮತ್ತು ತಮಿಳನಾಡು ರಾಜ್ಯಗಳಿಗಿಂತ ಹೆಚ್ಚು ಇದ್ದರೂ ನೆರೆಯ ಇನ್ನೊಂದು ರಾಜ್ಯವಾದ ಆಂಧ್ರ ಪ್ರದೇಶಕ್ಕಿಂತ ಕಡಿಮೆ ಇರುವುದು ಕಂಡು ಬರುತ್ತದೆ. ಅಂದರೆ ಕರ್ನಾಟಕದ ಗ್ರಾಮೀಣ ಪ್ರದೇಶದಲ್ಲಿನ ಹೆಚ್ಚು ಜನರು ದಕ್ಷಿಣದ ಇತರೆ ರಾಜ್ಯಗಳಲ್ಲಿನ ಜನರಿಗಿಂತ ಕಡಿಮೆ ತಲಾ ಆದಾಯವನ್ನು ಹೊಂದಿದ್ದಾರೆ.

ಇಲ್ಲಿಯವರೆಗೆ ದೇಶ ಮತ್ತು ದಕ್ಷಿಣದ ರಾಜ್ಯಗಳಲ್ಲಿನ ಬಡವರ ಪ್ರತಿಶತ ಮತ್ತು ಅಲ್ಲಿಯ ಗ್ರಾಮೀಣ ಮತ್ತು ನಗರ ಪ್ರದೇಶದಲ್ಲಿನ ಜನಸಂಖ್ಯೆ ಮಾಸಿಕ ತಲಾ ಆದಾಯವನ್ನು

ಚರ್ಚಿಸಲಾಯಿತ್ತು. ಮುಂದಿನ ನಕ್ಷೆ 3 ಮತ್ತು ಕೋಷ್ಟಕ 1.4ರಲ್ಲಿ 1983 ರಿಂದ 2004–05 ರಲ್ಲಿನ ದೇಶದಲ್ಲಿರುವ ಬಡತನ ರೇಖೆಯ ಕೆಳಗಿರುವ ಜನಸಂಖ್ಯೆಯನ್ನು ಸಾಮಾಜಿಕ ಪಂಗಡಗಳ ಅನುಸಾರವಾಗಿ ವಿವರಿಸಲಾಗಿದೆ. ಕೋಷ್ಟಕ ಮತ್ತು ನಕ್ಷೆಯ ಪ್ರಕಾರ 1983ರಲ್ಲಿ ಒಟ್ಟು ಜನಸಂಖ್ಯೆಯಲ್ಲಿ ಶೇಕಡಾ 46.5ರಷ್ಟು ಜನಸಂಖ್ಯೆಯು ಬಡತನ ರೇಖೆಯ ಕೆಳಗಿದ್ದು 2004–05ರಲ್ಲಿ ಇದು ಶೇಕಡಾ 28ಕ್ಕೆ ಇಳಿದಿದೆ. ಪರಿಶಿಷ್ಟ ಜಾತಿಗೆ ಸೇರಿದ ಜನಸಂಖ್ಯೆಯು 1983ರಲ್ಲಿ ಶೇಕಡಾ 59ರಷ್ಟು ಜನರು ಬಡವರಾಗಿದ್ದರೆ ಇದು 2004–05ರಲ್ಲಿ ಶೇಕಡಾ 37.1ಕ್ಕೆ ಇಳಿಕೆಯಾಯಿತ್ತು. ಪರಿಶಿಷ್ಟ ಪಂಗಡದಲ್ಲಿ ಶೇಕಡಾ 3.9ರಷ್ಟು ಇದ್ದ ಬಡವರ 2004–05ರಲ್ಲಿ ಶೇಕಡಾ 44.07ಕ್ಕೆ ಇಳಿಕೆಯಾಗಿದ್ದರೂ ಪರಿಶಿಷ್ಟ ಜಾತಿಯಲ್ಲಾದಷ್ಟು ಗಣನೀಯವಾದ ಇಳಿಕೆಯನ್ನು ಕಾಣಲಿಲ್ಲ ಎಂದು ಹೇಳಬಹುದು.

**ಕೋಷ್ಟಕ – 1.4**

**ದೇಶದಲ್ಲಿರುವ ಬಡವರ ಜನಸಂಖ್ಯೆ ಸಾಮಾಜಿಕ ಪಂಗಡವಾರು**

| ಪಂಗಡಗಳು/ವರ್ಷ | 1983ರಲ್ಲಿ ಪ್ರತಿಶತ | 1993–94ರಲ್ಲಿ ಪ್ರತಿಶತ | 2004–05ರಲ್ಲಿ ಪ್ರತಿಶತ |
|---|---|---|---|
| ಒಟ್ಟು ಜನಸಂಖ್ಯೆ | 46.5 | 37.2 | 28.0 |
| ಪರಿಶಿಷ್ಟ ಜಾತಿ | 59.0 | 48.6 | 37.1 |
| ಪರಿಶಿಷ್ಟ ಪಂಗಡ | 63.9 | 50.6 | 44.7 |
| ಒಟ್ಟು ಹಿಂದೂಗಳು | 47.0 | 36.8 | 28.0 |
| ಮುಸ್ಲಿಮರು | 51.2 | 45.2 | 33.0 |
| ಇತರೆ ಅಲ್ಪಸಂಖ್ಯಾತರು | 30.2 | 26.8 | 17.9 |

ಮಾಹಿತಿಯ ಮೂಲ: ಸುಖದೇವ್ ಥೋರಟ್ ರವರು ಭಾರತದ ಆರ್ಥಿಕ ಸಂಘದ ವಾರ್ಷಿಕ ಸಭೆಯಲ್ಲಿ ತಮ್ಮ ಅಧ್ಯಕ್ಷೀಯ ಭಾಷಣದಲ್ಲಿ ಮಂಡಿಸಿದ ಲೇಖನ How Socially Inclusive Has Growth Been?

ದೇಶದಲ್ಲಿರುವ ಧರ್ಮವಾರು ಹೇಳುವುದಾದರೆ 1983ರಲ್ಲಿ ಶೇಕಡಾ 47ರಷ್ಟು ಹಿಂದೂಗಳಲ್ಲಿನ ಜನಸಂಖ್ಯೆಯು ಬಡತನ ರೇಖೆಯ ಕೆಳಗಿನ ಜೀವನ ನಡೆಸುತ್ತಿದ್ದರು. ಆದರೆ ಇದು 2004–05ರಲ್ಲಿ ಶೇಕಡಾ 28ಕ್ಕೆ ಇಳಿಕೆಯಾಯಿತ್ತು. ಆದರೆ ಮುಸ್ಲಿಮರಲ್ಲಿ 1983 ಶೇಕಡಾ 51.2ರಷ್ಟು ಬಡತನ ರೇಖೆಯ ಕೆಳಗಿರುವವರ ಸಂಖ್ಯೆ 2004–05 ರಲ್ಲಿ ಶೇಕಡಾ 33ಕ್ಕೆ ಇಳಿದಿದ್ದರೂ ಸಹ ಧರ್ಮಗಳ ಆಧಾರದ ಮೇಲೆ ಹೇಳುವುದಾದರೆ ಮುಸ್ಲಿಂರಲ್ಲಿಯೇ ಅತಿ ಹೆಚ್ಚಿನ ಜನಸಂಖ್ಯೆಯು ಬಡತನ



ರೇಖೆಯ ಕೆಳಗಿದ್ದಾರೆ ಎಂದು ತಿಳಿದು ಬರುತ್ತದೆ. ಇತರೆ ಅಲ್ಪಸಂಖ್ಯಾತರಲ್ಲಿ 1983ರಲ್ಲಿ ಶೇಕಡಾ 30.2ರಷ್ಟು ಇದ್ದ ಬಡವರ ಜನಸಂಖ್ಯೆಯು 2004–05ರಲ್ಲಿ ಶೇಕಡಾ 17.9ಕ್ಕೆ ಇಳಿದಿದೆ. ಇದು ಹಿಂದೂ ಮತ್ತು ಮುಸ್ಲಿಂ ಸಮುದಾಯಕ್ಕಿಂತ ಕಡಿಮೆ ಪ್ರಮಾಣದ ಬಡವರನ್ನು ಹೊಂದಿದೆ. 2004–05ರಲ್ಲಿ ದೇಶದಲ್ಲಿರುವ ಬಡತನ ರೇಖೆಯ ಕೆಳಗಿರುವ ಜನಸಂಖ್ಯೆಯಲ್ಲಿ ಅತಿ ಹೆಚ್ಚಿನವರು ಪರಿಶಿಷ್ಟ ಪಂಗಡದವರಲ್ಲಿ ಕಂಡು ಬರುತ್ತಾರೆ. ಆದ್ದರಿಂದ ಅಧಿಕಾರ ನಡೆಸುವ ಎಲ್ಲಾ ಸರಕಾರಗಳು ಇವರಿಗಾಗಿ ಕೆಲವೊಂದು ವಿಶೇಷ ಬಡತನ ನಿವಾರಣ ಕಾರ್ಯಕ್ರಮಗಳನ್ನು ಹಾಕಿಕೊಂಡಿರುತ್ತವೆ.

ನಕ್ಷೆ 4 ಮತ್ತು ಕೋಷ್ಟಕದಲ್ಲಿ ಮೇಲೆ ಚರ್ಚಿಸಿದ ಅಂಕಿ ಅಂಶಗಳನ್ನು ಕರ್ನಾಟಕ ರಾಜ್ಯ ಮತ್ತು ದಕ್ಷಿಣ ಭಾರತದ ಇತರೆ ರಾಜ್ಯಗಳಲ್ಲಿರುವ ಸಾಮಾಜಿಕ ಪಂಗಡಗಳನ್ನು 1993–94 ರಿಂದ 2011–12ರವರೆಗೆ ಇದ್ದ ಬಡತನದ ಬಗ್ಗೆ ಚರ್ಚಿಸಲಾಗಿದೆ. ಇದನ್ನು ಕರ್ನಾಟಕ, ದಕ್ಷಿಣದ ಇತರೆ ರಾಜ್ಯಗಳು ಮತ್ತು ದೇಶದಲ್ಲಿರುವ ಬಡತನದ ಪ್ರತಿಶತದೊಂದಿಗೆ ಹೋಲಿಕೆ ಮಾಡಿ ವಿಶ್ಲೇಷಿಸಲಾಗಿದೆ. ಮೊದಲನೆಯದಾಗಿ ಪರಿಶಿಷ್ಟ ಪಂಗಡದ ಬಗ್ಗೆ ಹೇಳುವುದಾದರೆ 1993–94ರಲ್ಲಿ ಶೇಕಡಾ 64ರಷ್ಟು ಇದ್ದ ಬಡವರ ಸಂಖ್ಯೆ2011–12ರಲ್ಲಿ ಇದು ಶೇಕಡಾ 43ಕ್ಕೆ ಇಳಿದಿದೆ. ಇದು ಪರಿಶಿಷ್ಟ ಜಾತಿಯವರಲ್ಲಿ 1993–94ರಲ್ಲಿ ಶೇಕಡಾ 69 ರಿಂದ 2011–12ರಲ್ಲಿ ಶೇಕಡಾ 29ಕ್ಕೆ ಇಳಿಕೆಯಾಗಿದೆ. ಇನ್ನು ಒಟ್ಟಾರೆಯಾಗಿ ಎಲ್ಲಾ ಪಂಗಡಗಳ ಬಗ್ಗೆ ಹೇಳುವುದಾದರೆ 1993–94ರಲ್ಲಿ ಶೇಕಡಾ 46ರಷ್ಟು ಇದ್ದ ಬಡವರ ಸಂಖ್ಯೆ 2011–12ರಲ್ಲಿ ಶೇಕಡಾ 22ಕ್ಕೆ ಕುಸಿಯಿತ್ತು. ಇದರಿಂದ ಬಹಳ ಸ್ಪಷ್ಟವಾಗಿ ತಿಳಿದು ಬರುವುದೇನೆಂದರೆ ಅತಿ ಹೆಚ್ಚಿನ ಪ್ರಮಾಣದ ಬಡವರು ಪರಿಶಿಷ್ಟ ಜಾತಿ, ಪಂಗಡ ಮತ್ತು ಇತರೆ ಹಿಂದುಳಿದವರಲ್ಲಿ ಇದ್ದಾರೆ. ಇಲ್ಲಿ ಇತರೆ ಹಿಂದುಳಿದ ಜಾತಿ ಅಥವಾ ವರ್ಗಗಳಿಗೆ ಸಂಬಂಧಿಸಿದ ಬಡತನದ ಮಾಹಿತಿಯ ಕೊರತೆ ಎದ್ದು ಕಾಣುತ್ತದೆ.

**ಕೋಷ್ಟಕ – 1.5**

**ಕರ್ನಾಟಕ ಮತ್ತು ಇತರೆ ರಾಜ್ಯಗಳಲ್ಲಿನ ಬಡವರ ಜನಸಂಖ್ಯೆಯ ಪ್ರತಿಶತ ಶೇಕಡಾವಾರು**

| ರಾಜ್ಯಗಳು | ಪರಿಶಿಷ್ಟ ಪಂಗಡ | | | | ಪರಿಶಿಷ್ಟ ಜಾತಿ | | | | ಎಲ್ಲಾ ಪಂಗಡಗಳು | | | |
|---|---|---|---|---|---|---|---|---|---|---|---|---|
| | 1993-94 | 2004-05 | 2009-10 | 2011-12 | 1993-94 | 2004-05 | 2009-10 | 2011-12 | 1993-94 | 2004-05 | 2009-10 | 2011-12 |
| ಆಂಧ್ರ ಪ್ರದೇಶ | 57 | 59 | 38 | 23 | 62 | 40 | 25 | 13 | 45 | 30 | 21 | 9 |
| ಕರ್ನಾಟಕ | 69 | 51 | 24 | 32 | 69 | 54 | 34 | 33 | 50 | 34 | 24 | 21 |
| ಕೇರಳ | 37 | 54 | 21 | 39 | 51 | 31 | 27 | 16 | 32 | 20 | 12 | 8 |
| ತಮಿಳನಾಡು | 47 | 42 | 14 | 26 | 64 | 49 | 29 | 19 | 45 | 31 | 17 | 12 |
| ಒಟ್ಟು ಭಾರತ | 64 | 60 | 46 | 43 | 61 | 51 | 41 | 29 | 46 | 38 | 30 | 22 |

ಮಾಹಿತಿಯ ಮೂಲ: ಅರವಿಂದ ಪನಗರಿಯಾ ಮತ್ತು ವಿಶಾಲ ಮೋರೆ (2013) 'ಪಾವರ್ಟಿ ಬೈ ಸೋಶಿಯಲ್, ರೀಲಿಜಿಯಸ್ ಆ್ಯಂಡ್ ಎಕಾನಾಮಿಕ್ ಗ್ರೂಪ್ಸ್ ಇನ್ ಇಂಡಿಯಾ ಅಮಾಂಗ್ ಆ್ಯಂಡ್ ಇಟ್ಸ್ ಲಾರ್ಜ ಸ್ಟೇಟ್ಸ್ 1993–94 ರಿಂದ 2011–12, ಎಸ್‌ಆಯ್‌ಪಿಎ–ಆಯ್‌ಎಸ್‌ಈಆರ್‌ಪಿ, ಕೋಲಂಬಿಯಾ ಯುನವರಸಿಟಿ, ವರ್ಕಿಂಗ್ ಪೇಪರ್ ನಂ.2013–02, ಪುಟ–1–46.

ದೇಶದಲ್ಲಿ ಅತಿ ಹೆಚ್ಚಿನ ಸಂಖ್ಯೆಯಲ್ಲಿರುವ ಹಿಂದುಳಿದ ಮತ್ತು ಅಲ್ಪಸಂಖ್ಯಾತರ ಬಡತನದ ಬಗ್ಗೆ ಯಾವುದೇ ರೀತಿಯ ಮಾಹಿತಿಯ ಲಭ್ಯತೆ ಇಲ್ಲ. ಇದಕ್ಕೆ ಮೂಲ ಕಾರಣ ಆಯಾ ವರ್ಗಗಳಿಗೆ ಸಂಬಂಧಿಸಿದ ಬಡತನ, ಆರೋಗ್ಯ, ಶಿಕ್ಷಣ ಮತ್ತು ಇತರೆ ಸಾಮಾಜಿಕ ಆರ್ಥಿಕತೆಯ ದತ್ತಾಂಶಗಳ ಕೊರತೆಯು ಎದ್ದು ಕಾಣುತ್ತದೆ. ದೇಶ ಮತ್ತು ಎಲ್ಲಾ ರಾಜ್ಯಗಳಲ್ಲಿ ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡ ಮತ್ತು ಇತರೆ ವರ್ಗ ಅಥವಾ ಜಾತಿಗಳ ಮಾಹಿತಿ ಎಂದು ಒಟ್ಟು ಮೂರು ವರ್ಗಗಳ ಮಾಹಿತಿಯು ದೊರಕುತ್ತದೆ. ಹಿಂದುಳಿದ ವರ್ಗಗಳ ಮಾಹಿತಿಯು ಇತರೆ ಮತ್ತು ಸಾಮಾನ್ಯ ವರ್ಗದೊಂದಿಗೆ ಕೂಡಿಸಿ ಹೇಳುವ ಅಥವಾ ವಿಶ್ಲೇಷಣೆಯನ್ನು ಕೈಗೊಳ್ಳುವ ಪರಿಪಾಠವಿದೆ. ಈ ರೀತಿಯಾದಾಗ ಅತಿ ಹೆಚ್ಚಿನ ಸಂಖ್ಯೆಯಲ್ಲಿರುವ ಹಿಂದುಳಿದ ಮತ್ತು ಅಲ್ಪಸಂಖ್ಯಾತರ ಹಿತಾಸಕ್ತಿಗಳನ್ನು ಕಡೆಗಣಿಸಿದಂತೆ ಆಗುತ್ತದೆ. ಇದು ಈ ವರ್ಗಗಳಿಗೆ ವಿಶೇಷವಾದ ಕಾರ್ಯಕ್ರಮಗಳನ್ನು ರೂಪಿಸುವಲ್ಲಿ ದತ್ತಾಂಶಗಳ ಕೊರತೆಯಾಗುತ್ತದೆ. ಇದರನ್ವಯ ದೇಶ ಮತ್ತು ದಕ್ಷಿಣ ರಾಜ್ಯಗಳಲ್ಲಿನ ಎಲ್ಲಾ ಸಾಮಾಜಿಕ ಪಂಗಡಗಳಲ್ಲಿ ದೇಶದಲ್ಲಿ 1993–94ರಲ್ಲಿ ಶೇಕಡಾ 46ರಷ್ಟು ಜನರು ಬಡವರಾಗಿದ್ದರೆ 2011–12ರಲ್ಲಿ ಇದು ಶೇಕಡಾ 22ಕ್ಕೆ ಇಳಿಕೆಯಾಯಿತ್ತು. ಇನ್ನು ದಕ್ಷಿಣ ಭಾರತದಲ್ಲಿ 1993–94ರಲ್ಲಿ ಆಂಧ್ರ ಪ್ರದೇಶದಲ್ಲಿ ಶೇಕಡಾ 45, ಕರ್ನಾಟಕದಲ್ಲಿ ಶೇಕಡಾ 50ರಷ್ಟು, ಕೇರಳದಲ್ಲಿ ಶೇಕಡಾ 32ರಷ್ಟು, ತಮಿಳನಾಡಿನಲ್ಲಿ ಶೇಕಡಾ 45ರಷ್ಟು ಜನರು ಬಡತನದಿಂದ ಬಳಲುತ್ತಿದ್ದರೆ 2011–12ರಲ್ಲಿ ಇದು ಕ್ರಮವಾಗಿ ಶೇಕಡಾ 9ಕ್ಕೆ ಆಂಧ್ರ ಪ್ರದೇಶದಲ್ಲಿ, ಶೇಕಡಾ 21ಕ್ಕೆ ಕರ್ನಾಟಕದಲ್ಲಿ, ಶೇಕಡಾ 8ಕ್ಕೆ ಕೇರಳದಲ್ಲಿ ಮತ್ತು ಶೇಕಡಾ 12ಕ್ಕೆ ತಮಿಳನಾಡಿನಲ್ಲಿ ಇಳಿಕೆಯಾಗಿರುವುದು ಕಂಡು ಬರುತ್ತದೆ. ಒಟ್ಟಾರೆಯಾಗಿ ಹೇಳುವುದಾದರೆ ದಕ್ಷಿಣ ಭಾರತದಲ್ಲಿ 1993–94ರಲ್ಲಿ ಮತ್ತು 2011–12ರಲ್ಲಿಯೂ ಅತಿ ಹೆಚ್ಚಿನ ಬಡವರು ಕರ್ನಾಟಕದಲ್ಲಿಯೆ ಹೆಚ್ಚಿದೆ.



ಆದರೆ ಇತರೆ ದಕ್ಷಿಣ ಭಾರತದ ಎಲ್ಲಾ ರಾಜ್ಯಗಳಲ್ಲಿ ಶೇಕಡಾ 12ಕ್ಕಿಂತ ಕಡಿಮೆಯ ಜನರು ಬಡವರಾಗಿದ್ದಾರೆ. 1993–94ರಲ್ಲಿ ದಕ್ಷಿಣದ ಎಲಾ ರಾಜ್ಯಗಳು ಕೇರಳವನ್ನು ಹೊರತು ಪಡಿಸಿ ಶೇಕಡಾ 45ರಿಂದ 50ರಷ್ಟು ಜನರು ಬಡವರಾಗಿದ್ದರು. ಆದರೆ 2011–12ರಲ್ಲಿ ಎಲಾ ರಾಜ್ಯಗಳು ಕರ್ನಾಟಕವನ್ನು ಹೊರತು ಪಡಿಸಿ ಶೇಕಡಾ 12ಕ್ಕಿಂತ ಕಡಿಮೆಯ ಬಡವರನ್ನು ಹೊಂದಿವೆ. ದಕ್ಷಿಣದ ಭಾರತದ ಇತರೆ ರಾಜ್ಯಗಳಲ್ಲಿ ಬಡವರ ಸಂಖ್ಯೆ ಕಡಿಮೆಯಾಗಿರುವಾಗ ಕರ್ನಾಟಕದಲ್ಲಿ ಬಡವರ ಇಳಿಕೆಯ ಪ್ರಮಾಣ ಅತ್ಯಂತ ಕಡಿಮೆಯಾಗಿದೆ. ಇದರರ್ಥ ಕರ್ನಾಟಕ ಸರಕಾರವು ಹಾಕಿಕೊಂಡ ಬಡತನ ನಿವಾಹರಣೆಯ ಕಾರ್ಯಕ್ರಮಗಳು ಅವುಗಳ ಗುರಿಯನ್ನು ಮುಟ್ಟುವಲ್ಲಿ ವಿಫಲವಾಗಿವೆ ಎಂದು ಅಂದಾಜಿಸಬಹುದು.

ಎಲ್ಲಾ ರಾಜ್ಯಗಳಲ್ಲಿ ಒಂದೇ ದಶಕದಲ್ಲಿ ಪ್ರಾರಂಭವಾದ ಬಡತನ ನಿವಾರಣೆಯ ಕಾರ್ಯಕ್ರಮಗಳ ಲಾಭಗಳು ಸಹ ಎಲ್ಲಾ ರಾಜ್ಯಗಳು ಒಂದು ಅವಧಿಯಲ್ಲಿ ತಲುಪಬೇಕಾಗಿತ್ತು ಆದರೆ ಕೇರಳವನ್ನು ಒಂದು ಹೊರತು ಪಡಿಸಿ ಉಳಿದ ರಾಜ್ಯಗಳು ತಾವೇ ನಿಗದಿಪಡಿಸಿಕೊಂಡ ಗುರಿಗಳನ್ನು ಮುಟ್ಟಲು ವಿಫಲವಾಗಿವೆ. ಅದಕ್ಕೆ ಮೂಲ ಕಾರಣ ಆಯಾ ರಾಜ್ಯಗಳಲ್ಲಿರುವ ವಿವಿಧ ರೀತಿಯ ಪಕ್ಷಗಳ ಸರಕಾರಗಳು ಮತ್ತು ರಾಜಕೀಯ ನಾಯಕರ ಇಚ್ಛಾಶಕ್ತಿಯ ಕೊರತೆ. ಏಕೆಂದರೆ ಈ ಎಲ್ಲಾ ನಾಯಕರ ರಾಜಕೀಯದ ಶಕ್ತಿ ಮತ್ತು ಯುಕ್ತಿ ಅಡಗಿರುವುದೇ ಈ ಬಡವರ ಮೇಲೆ. ಅವರಿಗೋಸ್ಕರ ಹಲವಾರು ಕಾರ್ಯಕ್ರಮಗಳನ್ನು ರಚಿಸಿ ಚುನಾವಣೆಯ ಸಮಯದಲ್ಲಿ ಪ್ರಣಾಳಿಕೆಗಳನ್ನು ಬಿಡುಗಡೆಗೊಳಿಸಿ ಅವರ ಓಟುಗಳನ್ನು ಪಡೆದು ಅಧಿಕಾರವನ್ನು ಪಡೆದ ಮೇಲೆ ಅವರನ್ನು ಸಂಪೂರ್ಣವಾಗಿ ಕಡೆಗಣಿಸುತ್ತಾರೆ. ಕೇರಳದಲ್ಲಿ ಅತಿ ಹೆಚ್ಚು ಬಾರಿ ಎಡರಂಗ ನೇತೃತ್ವದ ಸರಕಾರಗಳು ಅಧಿಕಾರ ನಡೆಸಿರುವದು ಕಾರಣವಿರಬಹುದೇ ಎಂಬ ಊಹೆ ಎಲ್ಲರಲ್ಲಿ ಹುಟ್ಟುತ್ತದೆ. ಆದರೆ ಈ ಊಹೆಯನ್ನು ಎಲ್ಲರೂ ಒಪ್ಪಿಕೊಳ್ಳುವುದಿಲ್ಲ. ಏಕೆಂದರೆ ಇದಕ್ಕೆ ಪಕ್ಷ ರಾಜಕಾರಣ ಮತ್ತು ಪ್ರಾದೇಶಿಕವಾಗಿ ವಿಭಿನ್ನವಾಗಿರುವ ಕೆಲವೊಂದು ಸೂಚಕಗಳು. ದೇಶದಲ್ಲಿರುವ ಎಲ್ಲಾ ರಾಜ್ಯಗಳು ತಮ್ಮಲ್ಲಿರುವ ಕಾರ್ಯಕ್ರಮಗಳನ್ನು ಸರಿಯಾದ ನಿರ್ವಹಣೆಯನ್ನು ಮಾಡಿ ಜಾರಿಗೊಳಿಸಿದರೆ ಎಲ್ಲಾ ರಾಜ್ಯಗಳು ಕೇರಳದ ಮಾದರಿಯಲ್ಲಿ ಅಭಿವೃದ್ಧಿಯನ್ನು ಸಾಧಿಸಬಹುದು ಎಂದು ಹೇಳಬಹುದು (ಚನ್ನಕ್ಕಿ ಹೆಚ್.ಆರ್. ಮತ್ತು ರಾಧಾ ಜಿ.ಮಣ್ಣೂರ್, 2016).

ಪ್ರಸ್ತುತ ಅಧ್ಯಯನದಲ್ಲಿ ಜಾತಿ, ವರ್ಗ, ಮಾರುಕಟ್ಟೆ ಮತ್ತು ಬಡತನಕ್ಕೆ ಸಂಬಂಧಪಟ್ಟ ಅಧ್ಯಯನಗಳನ್ನು, ಸಂಶೋಧನೆಗಳನ್ನು ವಿಮರ್ಶಾತ್ಮಕವಾಗಿ ನೋಡುವ ಒಂದು ಪ್ರಯತ್ನವನ್ನು ಇಲ್ಲಿ ಮಾಡಲಾಗಿದೆ. ಭಾರತದಲ್ಲಿ ಸಾಕಷ್ಟು ಸಮಾಜಶಾಸ್ತ್ರ ತಜ್ಞರು, ಮಾನವಶಾಸ್ತ್ರ ತಜ್ಞರು ಆರ್ಥಿಕ ತಜ್ಞರು, ಕೃಷಿ ತಜ್ಞರು ಜಾತಿ, ವರ್ಗಗಳ ಕುರಿತು ಸಂಶೋಧನೆಯನ್ನು ಕೈಗೊಂಡಿದ್ದಾರೆ. ಆದರೆ ಜಾತಿ ಮತ್ತು ವರ್ಗದ ಜೊತೆಗೆ ಮಾರುಕಟ್ಟೆಯನ್ನು ಸೇರಿಸಿ ಕೈಗೊಂಡಿರುವ ಸಂಶೋಧಕರ

ಸಂಖ್ಯೆ ತುಂಬಾ ವಿರಳ. ಅದರಲ್ಲಿಯೂ ಇದನ್ನು ಬಡವರ ಕುರಿತು ಸಂಶೋಧನೆ ಮಾಡಿದವರು ತುಂಬಾ ವಿರಳವೆಂದು ಹೇಳಬಹುದು. ಆದ್ದರಿಂದ ಇಲ್ಲಿಯವರೆಗೆ ಜಾತಿ, ವರ್ಗ, ಮಾರುಕಟ್ಟೆ ಮತ್ತು ಬಡತನ ಮತ್ತು ಬಡವರ ಕುರಿತು ಬಿಡಿ ಬಿಡಿಯಾಗಿ ಕೈಗೊಂಡಿರುವ ಸಂಶೋಧನೆಗಳನ್ನು ಸಮಸ್ಯೀಕರಣಗೊಳಪಡಿಸಿದೆ.

**ಜಾತಿ**

ಇಂಗ್ಲೀಷಿನ ಜಾತಿ ಎಂಬ ಪದವು ಸ್ಪ್ಯಾನಿಷ್ ಭಾಷೆಯ 'ಕಾಸ್ಟಾ' ಎಂಬ ಪದದಿಂದ ಉತ್ಪತ್ತಿಯಾಗಿದೆ. ಆ ಭಾಷೆಯಲ್ಲಿ 'ಕಾಸ್ಟಾ' ಎಂದರೆ 'ಜನಾಂಗ' 'ಬುಡಕಟ್ಟು' 'ಉತ್ಪತ್ತಿಯ ತಳಿ'. ಅನುವಂಶೀಯತೆ ಅಂದರೆ, ವಂಶಾನುಗತ ಗುಣಗಳನ್ನು ಪಡೆದಿರುವ ಗುಂಪು ಎಂಬ ಅರ್ಥ ಕೊಡುತ್ತದೆ. ಪೋರ್ಚುಗೀಸರು ಭಾರತಕ್ಕೆ ಬಂದಾಗ ಇಲ್ಲಿನ ಜಾತಿ ಸಮೂಹಗಳನ್ನು ಸೂಚಿಸಲು ಅವರು 'ಕಾಸ್ಟಾ' ಎಂಬ ಪದವನ್ನು ಉಪಯೊಗಿಸಿದರು. ಇದೇ ಪದವನ್ನು ಬ್ರಿಟೀಷರು ಕಾಸ್ಟಾ ಎಂದು ಕರೆದರು. ಈ ರೀತಿಯಾಗಿ ಭಾರತದ ಜಾತಿ ಎಂಬ ಪದವು ಕಾಸ್ಟಾ ಎಂಬ ಹೆಸರಿನಲ್ಲಿ ಪಾಶ್ಚಾತ್ಯದ ಶಬ್ದಕೋಶವನ್ನು ಪ್ರವೇಶಿಸಿತು. ಗಾರ್ಸಿಯಾ ಡಿ.ಒರ್ಟಾ ರವರು 1563ರ ಸುಮಾರಿಗೆ ಈ ಪದವನ್ನು ಮೊದಲ ಬಾರಿಗೆ ಉಪಯೋಗಿಸಿದ್ದರು. ಜಾತಿಯನ್ನು ಕುರಿತಂತೆ ನಿಖರ ಮತ್ತು ಸಂಕ್ಷಿಪ್ತ ವ್ಯಾಖ್ಯಾ ಕೊಡುವುದು ಕಷ್ಟ. ಏಕೆಂದರೆ ಅದು ಬಹು ಸಂಕೀರ್ಣವಾದದ್ದು ಮತ್ತು ಅದರ ಆಯಾಮಗಳು ಹಲವಾರು. ಸ್ವತಃ ಘುರ್ಯೆಯವರು ಜಾತಿಯನ್ನು ವ್ಯಾಖ್ಯಾನಿಸುವ ಯಾವುದೇ ಪ್ರಯತ್ನಗಳು ಅದು ಹೊಂದಿರುವ ಸಂಕೀರ್ಣತೆಯಿಂದ ವಿಫಲವಾಗುವ ಸಾಧ್ಯತೆಗಳಿವೆಯೆಂದು ಬರೆದಿರುತ್ತಾರೆ. ಜಾತಿ ಪದ್ಧತಿಯು ಭಾರತೀಯ ಸಮಾಜದಲ್ಲಿ ಆಳವಾಗಿ ಬೇರು ಬಿಟ್ಟ ಮತ್ತು ದೀರ್ಘಕಾಲದಿಂದ ಅಸ್ತಿತ್ವದಲ್ಲಿರುವ ಸಾಮಾಜಿಕ ಸಮಸ್ಯೆಯಾಗಿದೆ. ವಿವಿಧ ಕಾಲಘಟ್ಟಗಳು ಒಡ್ಡಿದ ಸವಾಲುಗಳನ್ನು ಅದು ಸಮರ್ಥವಾಗಿ ಎದುರಿಸಿದೆ. ವಿಲ್ಸನ್ ರವರ ಪ್ರಕಾರ "ಜಾತಿಯು ಎಲ್ಲಾ ಸಂಬಂಧಗಳಲ್ಲಿ ಮತ್ತು ಜೀವನದ ಪ್ರತಿಯೊಂದು ಘಟನೆಗಳಲ್ಲಿ ಮಧ್ಯ ಪ್ರವೇಶಿಸುತ್ತದೆ (ಉಲ್ಲೇಖ, ಮುಳಗುಂದ, 2010).

ಡಿ.ಎನ್.ಮುಜುಮದಾರ್ ಮತ್ತು ಟಿ.ಎನ್.ಮದನ್ ರವರ ಪ್ರಕಾರ "ಜಾತಿಯು ಒಂದು ಮುಚ್ಚಿದ (ನಿರ್ಬಂಧಿತ) ಸಮೂಹ". ಸಿ.ಎಚ್.ಕೂಲೆ ರವರ ಪ್ರಕಾರ "ವರ್ಗವನ್ನು ಸ್ವಲ್ಪ ಮಟ್ಟಿಗೆ ಕಟ್ಟುನಿಟ್ಟಾಗಿ ಅನುವಂಶೀಯವಾದರೆ ಅದನ್ನು ನಾವು ಜಾತಿ ಎಂದು ಕರೆಯಬಹುದು" ಎಸ್.ವಿ.ಕೇಲ್ಕರ್ ರವರು "ಜಾತಿ ಈ ಎರಡು ಲಕ್ಷಣಗಳನ್ನು ಹೊಂದಿದ ಸಮೂಹವಾಗಿದೆ. ಇದರಲ್ಲಿ ಯಾರು ಹುಟ್ಟುತ್ತಾರೋ ಅವರಿಗೆ ಮಾತ್ರ ಅದರ ಸದಸ್ಯತ್ವವು ಸಿಗುತ್ತದೆ ಮತ್ತು ಹಾಗೆ ಹುಟ್ಟಿದವರೆಲ್ಲ ಅದರ ಸದಸ್ಯರಾಗುತ್ತಾರೆ. ಈ ಸಮೂಹದ ಹೊರಗಡೆ ವಿವಾಹವಾಗದಂತೆ ಸದಸ್ಯರನ್ನು ಕಠೋರವಾದ ಸಾಮಾಜಿಕ ನಿಯಮಗಳಿಂದ ನಿರ್ಬಂಧಿಸಲಾಗಿರುತ್ತದೆ" ಎ.ಡಬ್ಲ್ಯೂ.ಗ್ರೀನ್‌ರವರ ಪ್ರಕಾರ "ಅಂತಸ್ತುಗಳ ಏಣಿ–ಶ್ರೇಣಿಯಲ್ಲಿ ಲಂಬ ಚಲನೆಯು

ತಾತ್ವಿಕವಾಗಿಯೂ ಸಂಬಂಧವಿರುವ ಸಾಮಾಜಿಕ ಸ್ತರವಿನ್ಯಾಸದ ಒಂದು ವ್ಯವಸ್ಥೆಯೆ ಜಾತಿ" ಎಂದಿದ್ದಾರೆ (ಉಲ್ಲೇಖ, ಮುಳಗುಂದ, 2010). ಅಂಬೇಡ್ಕರ್‌ರವರು "ಜಾತಿ ವ್ಯವಸ್ಥೆ ಒಂದು ಶ್ರಮ ವಿಭಜನೆ ಎಂದು ಮತ್ತು ಅದು ಸಾರ್ವತ್ರಿಕವಾದ ಸಾಮಾಜಿಕ ರಚನೆ ಎಂದು ಅದನ್ನು ಸಮರ್ಥಿಸಿಕೊಳ್ಳುವ ಪ್ರತಿಗಾಮಿ ವಾದಗಳ ವಿರುದ್ಧವಾಗಿ ಜಾತಿ ಎಂಬ ಕೌರ್ಯಪೂರ್ಣ ಮತ್ತು ಭಾರತದ ಸಾಮಾಜಿಕ ಪ್ರಗತಿಯ ಹಾದಿಯಲ್ಲಿನ ಬಂಡೆಗಲ್ಲಿನ ವ್ವವಸ್ಥೆಗೆ ಹೋಲಿಸಿದ್ದಾರೆ (ಉಲ್ಲೇಖ, ಜಿ.ಎನ್ ನಾಗರಾಜ್, 2018).

**ಬಡತನ ರೇಖೆಯ ಕೆಳಗಿನ ಕುಟುಂಬಗಳು**

ಸರಕಾರವು ಕಾಲಕ್ಕೆ ತಕ್ಕಂತೆ ನೀಡುವ ಪಡಿತರ ಚೀಟಿಗಳನ್ನು ಹೊಂದಿರುವ ಕುಟುಂಬಗಳನ್ನು ಮಾತ್ರ ಪ್ರಸ್ತುತ ಅಧ್ಯಯನಕ್ಕೆ ಬಳಸಿಕೊಳ್ಳಲಾಗಿದೆ. ಪಡಿತರ ಚಿಟಿಗಳಲ್ಲಿ ಒಟ್ಟು ಮೂರು ಪ್ರಕಾರ ಇರುತ್ತವೆ. ಅದರಲ್ಲಿ ಕಡು ಬಡವರಿಗಾಗಿ ಕೊಡ ಮಾಡುವ ಅಂತ್ಯೋದಯ ಅನ್ನಪೂರ್ಣ ಪಡಿತರ ಚೀಟಿ, ಬಡತನ ರೇಖೆಯ ಕೆಳಗಿರುವ ಪಡಿತರ ಚೀಟಿ ಮತ್ತು ಬಡತನದ ಮೇಲಿರುವ ಪಡಿತರ ಚೀಟಿ. ಇಲ್ಲಿ ಅಂತ್ಯೋದಯ ಅನ್ನಪೂರ್ಣ ಪಡಿತರ ಚೀಟಿ ಮತ್ತು ಬಡತನ ರೇಖೆಯ ಕೆಳಗಿರುವ ಪಡಿತರ ಚೀಟಿಯನ್ನು ಹೊಂದಿರುವ ಕುಟುಂಬಗಳನ್ನು ಮಾತ್ರ ಪರಿಗಣಿಸಲಾಗಿರುತ್ತದೆ. ಇದನ್ನು ಬಿಟ್ಟು ಬೇರೆ ಪಡಿತರ ಚೀಟಿಗಳನ್ನು ಹೊಂದಿರುವ ಕುಟುಂಬಗಳನ್ನು ಅಧ್ಯಯನದಿಂದ ಕೈಬಿಡಲಾಗಿದೆ. ಆದರೆ ಈ ಒಂದು ಅಧ್ಯಯನದಲ್ಲಿ ಕೇವಲ ಬಡತನ ರೇಖೆಯ ಕೆಳಗಿನ ಕುಟುಂಬಗಳನ್ನು ಮಾತ್ರ ಪರಿಗಣಿಸಲಾಗಿದೆ.

ನಮ್ಮ ದೇಶದಲ್ಲಿ ಶತ ಶತಮಾನಗಳಿಂದ ಸಮಾಜದಲ್ಲಿ ಜಾತಿ ಎಂಬ ವಿಂಗಡಣೆ ಪ್ರತಿನಿತ್ಯದ ಆಚರಣೆ ಮತ್ತು ಬದುಕಿನಲ್ಲಿ ಬರುತ್ತದೆ. ಆದ್ದರಿಂದ ಅಂಬೇಡ್ಕರ್ ಅವರು ಈ ಒಂದು ಜಾತಿ ವ್ಯವಸ್ಥೆಯ ಬಗ್ಗೆ ಆಳವಾದ ಅಧ್ಯಯನವನ್ನು ನಡೆಸಿದ್ದರು. ಈ ಜಾತಿ ವ್ಯವಸ್ಥೆಯಿಂದ ತುಳಿತಕ್ಕೆ ಒಳಗಾಗಿರುವ ಸಮುದಾಯಗಳನ್ನು ಮೇಲೆತ್ತಲೂ ಅವರ ಮುಖಂಡತ್ವದಲ್ಲಿ ರಚನೆಯಾದ ಸಂವಿಧಾನದ ಮುಖಾಂತರ ಸಮಾನತೆಯನ್ನು ಕೊಡಲು ಪ್ರಯತ್ನಿಸಿದ್ದಾರೆ. ಆದರೆ ಅವರು ಹೇಳಿದ ಸಮಾನತೆಯನ್ನು ಪಡೆಯಲು ಹಲವಾರು ರೀತಿಯ ಅಡೆತಡೆಗಳಿವೆ ಮತ್ತು ಜಾತಿಯಿಂದ ತುಳಿತಕ್ಕೊಳಗಾದ ಎಲ್ಲ ಸಮುದಾಯಗಳು ರಾಜಕೀಯ, ಶೈಕ್ಷಣಿಕ, ಸಾಮಾಜಿಕ ಮತ್ತು ಇನ್ನಿತರೆ ಕ್ಷೇತ್ರಗಳಲ್ಲಿ ನಿರೀಕ್ಷಿಸಿದಷ್ಟು ಪ್ರಗತಿಯಾಗಿಲ್ಲ. ಮತ್ತೆ ಈ ಎಲ್ಲ ಜಾತಿಗಳನ್ನು ಅವರು ಹೊಂದಿರುವ ಕೆಲಸ, ಶಿಕ್ಷಣ, ಆದಾಯ, ರಾಜಕೀಯ ಮತ್ತು ಆಸ್ತಿಯನ್ನು ಮೂಲವಾಗಿಟ್ಟುಕೊಂಡು ಅನೇಕ ವರ್ಗಗಳನ್ನಾಗಿ ವಿಂಗಡಿಸುತ್ತೇವೆ.

ವರ್ಗಗಳ ಕುರಿತು ಅನೇಕ ಸಂಶೋಧಕರು ಅಭಿಪ್ರಾಯ ವ್ಯಕ್ತಪಡಿಸಿದರೆ ಫ್ಲೋಟೋರವರ ಪ್ರಕಾರ ಮಾನವ ತಾನು ಹೊಂದಿದ ನೈಸರ್ಗಿಕ ಶಕ್ತಿಯನ್ನು ಆಧಾರವಾಗಿ ಇಟ್ಟುಕೊಂಡು 3

ವರ್ಗಗಳಾಗಿ ವಿಂಗಡಿಸಲ್ಪಡುತ್ತಾನೆ. ಅವುಗಳು ಕಾರ್ಮಿಕರ ಆಡಳಿತ ಮತ್ತು ಮಿಲಿಟರಿ ಸೇವೆ ಮಾಡುವವರು, ರಾಜ್ಯಭಾರ ಮಾಡುವವರು ಈ ವರ್ಗಗಳು ಎಲ್ಲಾ ಕಾಲದಲ್ಲಿ ಮತ್ತು ಎಲ್ಲಾ ರೀತಿಯ ಸಮಾಜಗಳಲ್ಲಿ ಕಾಣಬಹುದು ಎಂದು ವಾದಿಸಿದ್ದಾರೆ. ಮ್ಯಾಕ್ಸ್ ವೆಬ್ಬರರವರು ವರ್ಗಗಳನ್ನು ಮೂರು ಗುಂಪುಗಳಾಗಿ ವಿಂಗಡಿಸಿದ್ದಾರೆ. 1. ಆಸ್ತಿವಂತರ ವರ್ಗ (ಪ್ರಾಪರ್ಟಿ ಕ್ಲಾಸಸ್) 2. ಅಕ್ವಿಜಿಷನ ಕ್ಲಾಸಸ್ ಮತ್ತು 3. ಸೋಸಿಯಲ್ ಕ್ಲಾಸಸ್. ಕಾಲ್‌ಮಾರ್ಕ್ಸ್‌ರ ಪ್ರಕಾರ ವರ್ಗಗಳನ್ನು ಆರ್ಥಿಕತೆಯ ದೃಷ್ಟಿಯಿಂದ ವಿಂಗಡಿಸಿದ್ದಾರೆ. ಯಾವುದೇ ಸಾಮಾಜಿಕ ಸಂಗತಿಯೂ ಕೂಡ ಆರ್ಥಿಕತೆಯ ಮೇಲೆ ನಿರ್ಧರಿತವಾಗುತ್ತದೆ. *Marx distinguishes one class from another on the basis of two criteria: ownership of the means of production and control of the labor power of others. From this, Marx states "Society as a whole is more and more splitting up into two great hostile camps, into two great classes directly facing each other": I. Capitalists, or bourgeoisie, own the means of production and purchase the labor power of others; II. Workers, or proletariat, do not own any means of production or the ability to purchase the labor power of others. Rather, they sell their own labor power; Class is thus determined by property relations, not by income or status. These factors are determined by distribution and consumption, which mirror the production and power relations of classes; iii. A small, transitional class known as the petite bourgeoisie own sufficient means of production but do not purchase labor power; iv. The "dangerous class", or Lumpenproletariat, "the social scum, that passively rotting mass thrown off by the lowest layers of the old society."* ಇಲ್ಲಿ ಶ್ರೀಮಂತರು ಉತ್ಪಾದನೆಯ ಮೂಲಗಳ ಮಾಲಿಕರಾಗುತ್ತಾರೆ. ಉಳಿದವರು ಬಡಕಾರ್ಮಿಕರಾಗುತ್ತಾರೆ ಎಂದು ಮಾರ್ಕ್ಸರವರು ಸ್ಪಷ್ಟಪಡಿಸುತ್ತಾರೆ (ಚಿಬ್ಬರ್, 1986).

ಒಟ್ಟೋ ಬ್ಲೂಮೆ (1970) ಲೇಖಕರು "ದಿ ಪಾವರ್ಟಿ ಆಫ್ ಓಲ್ಡ್ ಪೀಪಲ್ ಇನ್ ಅರ್ಬನ ಆ್ಯಂಡ್ ರೂರಲ್ ಏರಿಯಾಸ್" ಈ ಲೇಖನವನ್ನು ಬರೆಯುವ ಸಮಯದಲ್ಲಿ ಎಲ್ಲ ಕಾಲಕ್ಕೆ ಮತ್ತು ಎಲ್ಲ ಪ್ರದೇಶಗಳಿಗೆ ಅನ್ವಯವಾಗುವ ಬಡತನದ ವ್ಯಾಖ್ಯ ಇರಲಿಲ್ಲ ಆದ್ದರಿಂದ ಅವರು ಸಾಂಪ್ರದಾಯಿಕ ಊಹೆಯಿಂದ ಈ ಕೆಳಗಿನಂತೆ ವಿವರಿಸುತ್ತಾರೆ. ಒಬ್ಬ ವ್ಯಕ್ತಿಯು ತನ್ನ ಜೀವನಾಧಾರಕ್ಕೆ ಬೇಕಾಗುವ ಅವಶ್ಯಕತೆಗಿಂತ ಕಡಿಮೆ ಸಂಪನ್ಮೂಲ ಹೊಂದಿದ್ದು ಅದು ಪ್ರಬಲ ಸಮುದಾಯದಿಂದ ಅಕನಾಲೆಜಮೆಂಟ್ ಆಗಿರಬೇಕು.

ಈಶ್ವರನ್ ಮತ್ತು ಇತರರು (2009) ತಮ್ಮ ಲೇಖನದಲ್ಲಿ ಭಾರತದಲ್ಲಿ ಬಡತನ ಬೆಳೆದ ಬಗ್ಗೆಯನ್ನು ಕೃಷಿಯು ಕೂಲಿ ಮತ್ತು ಉದ್ಯೋಗದ ಮುಖಾಂತರ ಪರೀಕ್ಷಿಸಿದ್ದಾರೆ. ಬಹಳಷ್ಟು ಕಛೇರಿಗಳ ದಾಖಲೆಗಳಲ್ಲಿ ಮತ್ತು ಶೈಕ್ಷಣಿಕ ಕ್ಷೇತ್ರದಲ್ಲಿ ಬಡತನದ ಪ್ರಮಾಣವು ಅಭ್ಯಸಿಸುವುದು

ಪ್ರಮುಖವಾದ ವಿಷಯವಾಗಿದೆ. ಈ ಲೇಖನದಲ್ಲಿ ಲೇಖಕರು ರಾಷ್ಟ್ರೀಯ ಸಮೀಕ್ಷೆ ಮಾದರಿ ಸಂಸ್ಥೆಯ 1983ರ ಕಾಲೆಂಡರ ವರ್ಷದ 1993-94ರ, 1999-2000 ಮತ್ತು 2004-2005ರ ಕೃಷಿ ವರ್ಷ ಅಂದರೆ ಜುಲೈ ದಿಂದ ಜೂನ್‌ರಲ್ಲಿ ಸಮಿಕ್ಷೇಯ ಮೂಲಕ ಗ್ರಾಮೀಣ ಮತ್ತು ನಗರ ಪ್ರದೇಶಗಳಲ್ಲಿ ಸಂಗ್ರಹಿಸಿದ ಮಾಹಿತಿಯನ್ನು ಬಳಸಿಕೊಂಡು ಈ ಕೆಳಗಿನ ಅಭಿಪ್ರಾಯಗಳನ್ನು ಮಂಡಿಸಿದ್ದಾರೆ. 2004-05ರ ಅನುಭೋಗದ ವೆಚ್ಚದ ಮಾಹಿತಿಯಿಂದ ಹೇಳುವುದೇನೆಂದರೆ ಪರಿಗಣಿತವಲ್ಲದ ಕ್ಷೇತ್ರದ ಕೆಲಸದಿಂದ ಬರುವ ಆದಾಯದ ಮೇಲೆಯೇ ಅವಲಂಬಿತವಾಗಿರುವವರು ಶೇಕಡ 50ಕ್ಕಿಂತ ಹೆಚ್ಚಿನ ಕುಟುಂಬವು ಬಡತನ ರೇಖೆಯಲ್ಲಿ ಬರುತ್ತವೆ. ಶೇಕಡ 32 ರಷ್ಟು ಜನಸಂಖ್ಯೆಯು ರೈತರ ವರ್ಗಕ್ಕೆ ಸೇರಿದವರಾಗಿದ್ದಾರೆ. ಆದ್ದರಿಂದ ಕೈಯಿಂದ ಕೆಲಸಮಾಡುವ ಕಾರ್ಮಿಕರು ಕುಟುಂಬಗಳು ಮತ್ತು ಬಡತನಕ್ಕೆ ಬಹಳ ಬಲವಾದ ಸಂಬಂಧವಿದೆ ಎಂದು ಲೇಖಕರು ಅಭಿಪ್ರಾಯ ಪಡುತ್ತಾರೆ. ಮುಂದುವರೆದು ಭಾರತದಲ್ಲಿ ದೊಡ್ಡ ಪ್ರಮಾಣದ ಎಂಪಿರಿಕಲ್ ಮಾಹಿತಿಗಳು ಸಹ ಬಡತನ ಮತ್ತು ಕೃಷಿ ಕೂಲಿಯೊಂದಿಗೆ ಸಂಬಂಧವಿದೆ ಎಂದು ದೃಡಪಟ್ಟಿವೆ ಎಂದು ಲೇಖಕರು ಉಲ್ಲೇಖಿಸಿದ್ದಾರೆ ಮತ್ತು ಇದು ಪ್ರಾದೇಶಿಕವಾಗಿ ಬಹಳ ಗಟ್ಟಿಯಾಗಿದೆ ಎಂದು ಸಹ ಹೇಳುತ್ತಾರೆ. ಈ ಆರ್ಥಿಕತೆಯಲ್ಲಿ ಬಡವರೆಂದರೆ ಯಾವುದೇ ತರಹದ ಆಸ್ತಿ-ಪಾಸ್ತಿ ಇಲ್ಲದವರು ವಿಶೇಷವಾಗಿ ಗ್ರಾಮೀಣ ಭಾಗದಲ್ಲಿರುವ ಭೂರಹಿತ ಕೃಷಿ ಕೂಲಿ ಕಾರ್ಮಿಕರು, ಏಕೆಂದರೆ ಕೃಷಿಯಲ್ಲಿ ನಿರತರಾಗಿರುವ ಕಾರ್ಮಿಕರು ಕೇವಲ ಒಂದು ಋತುಮಾನಕ್ಕೆ ಮಾತ್ರ ದುಡಿಯುತ್ತಾರೆ ಮತ್ತು ಇದರಿಂದ ಬಂದ ಆದಾಯವನ್ನು ವರ್ಷಪೂರ್ತಿ ಕುಟುಂಬ ನಿರ್ವಹಣೆಗೆ ವ್ಯಯಿಸುತ್ತಾರೆ. ಕೆಲವೊಂದು ಸಮಯದಲ್ಲಿ ದಿನಕ್ಕೆ ಎರಡು ಅಥವಾ ಒಂದು ಊಟಕ್ಕೆ ಅಥವಾ ಕೆಲವೊಂದು ದಿವಸ ಯಾವುದೇ ಊಟವಿಲ್ಲದೆ ದಿನ ಕಳೆಯುತ್ತಾರೆ ಎಂಬುವುದು ನನ್ನ ಅಭಿಪ್ರಾಯ. ಒಂದು ವೇಳೆ ಕೃಷಿಯಲ್ಲಿಯೂ ನಿರಂತರವಾಗಿ ಕೆಲಸದಲ್ಲಿದ್ದರೆ ಅವರ ಆದಾಯ ಹೆಚ್ಚಾಗಿ ಸ್ವಲ್ಪಮಟ್ಟಿನ ಬಡತನವನ್ನು ಕಡಿಮೆ ಮಾಡಬಹುದೆಂದು ಹೇಳುತ್ತಾರೆ. ಕೊನೆಯದಾಗಿ ಲೇಖಕರು ವ್ಯವಸಾಯ ಕ್ಷೇತ್ರದಲ್ಲಿ ಕಾರ್ಮಿಕರನ್ನು ಬಳಸಿಕೊಂಡು ಕೃಷಿ ವಲಯವನ್ನು ಸುಧಾರಿಸುವುದರ ಜೊತೆಗೆ ಕಾರ್ಮಿಕರ ಜೀವನ ಮೌಲ್ಯವನ್ನು ಹೆಚ್ಚಿಸಬಹುದೆಂದು ಲೇಖಕರು ಅಭಿಪ್ರಾಯ ವ್ಯಕ್ತಪಡಿಸುತ್ತಾರೆ. ಇಲ್ಲಿ ಲೇಖಕರು ಅನುಷಂಗಿಕ ಮಾಹಿತಿಗಳನ್ನು ಬಳಸಿಕೊಂಡು ತಮ್ಮ ಅಭಿಪ್ರಾಯವನ್ನು ತಿಳಿಸುತ್ತಾರೆ. ಇದರ ಜೊತೆಗೆ ಪ್ರಾಥಮಿಕ ಮಾಹಿತಿಯೊಂದಿಗೆ ವಿಶ್ಲೇಷಣೆ ಮಾಡಿದರೆ ಇನ್ನೂ ಹೆಚ್ಚಿನ ಸಲಹೆ ಸೂಚನೆಗಳನ್ನು ಕೊಡಬಹುದಾಗಿತ್ತು.

ದಂತವಾಲಾ, ಎಂ.ಎಲ್. (1987) "ರೂರಲ್ ಆಸೆಟ್ಸ ಡಿಷ್ಟ್ರಿಬೂಷನ್ ಆಂಡ ಕಾಂಪೋಜೆಷನ ಆಫ್ ಲೇಬರ ಫೋರ್ಸ" ಎಂಬ ಲೇಖನದಲ್ಲಿ ಗ್ರಾಮೀಣ ಪ್ರದೇಶದಲ್ಲಿರುವ ಜನರ ಸಾಮಾಜಿಕ, ಆರ್ಥಿಕ ಮತ್ತು ರಾಜಕೀಯ ಜೀವನವು ಮತ್ತು ಸಮುದಾಯದಲ್ಲಿನ ಸಂಬಂಧಗಳು ಅವರು ಹೊಂದಿರುವ ಭೂಮಿಯ ಮೇಲೆ ನಿರ್ಧಾರಿತವಾಗುತ್ತದೆ. ಆದರೆ ಈ

ಭೂಮಿ ಎಲ್ಲರಿಗೂ ಸರಿ ಸಮಾನವಾಗಿ ಹಂಚಿಕೆಯಾಗಿಲ್ಲ. ಭೂ ಸುಧಾರಣೆ ಕಾಯಿದೆ ಆದಾಗಲೂ ಸಹ ಈ ಅಸಮಾನತೆ ಅಥವಾ ತಾರತಮ್ಯ ಹೋಗಲಾಡಿಸಲು ವಿಫಲವಾಗಿದೆ. ಭಾರತ ಸರಕಾರ ಮತ್ತು ಯೋಜನಾ ಆಯೋಗವು ಈ ಅಸಮಾನತೆಯನ್ನು ಹೋಲಾಡಿಸಲು ಯಾವುದೇ ರೀತಿಯ ಪ್ರಯತ್ನ ಮಾಡಿಲ್ಲ, ಆದ್ದರಿಂದ ಈ ಒಂದು ವಿಷಯದ ಕುರಿತು ಹೆಚ್ಚಿನ ರೀತಿಯಲ್ಲಿ ಸಂಶೋಧನೆಯಾಗಬೇಕಿದೆಯೆಂದು ಒತ್ತಿ ಹೇಳಿದ್ದಾರೆ. ಇವರು ಭಾರತಿಯ ರಿಜರ್ವ ಬ್ಯಾಂಕ ಹೂಡಿಕೆ ಸಮೀಕ್ಷೆ ಮತ್ತು ರಾಷ್ಟ್ರೀಯ ಮಾದರಿ ಆಯ್ಕೆ ಸಂಸ್ಥೆಯ ಹಲವಾರು ಸುತ್ತಿನ ಮಾಹಿತಿಗಳನ್ನು ಬಳಸಿಕೊಂಡು ಈ ಮೇಲಿನ ತೀರ್ಮಾನಕ್ಕೆ ಬರುತ್ತಾರೆ.

ಅನಿರುದ್ಧ ಕೃಷ್ಣ (2004) ರವರು "ಎಸ್ಕೇಪಿಂಗ್ ಪಾವರ್ಟಿ ಆ್ಯಂಡ್ ಬಿಕಮಿಂಗ್ ಪೊವರ್: ಹೂ ಗೇನ್ಸ್, ಹೂ ಲಾಸ್ಟ್ ಆ್ಯಂಡ್ ವೈ?" ಎಂಬ ತಮ್ಮ ಲೇಖನವನ್ನು ಆರ್ಥಿಕ ಪ್ರಗತಿ ಮತ್ತು ಬಡತನದ ನಡುವೆ ಇರುವ ಸಂಬಂಧವನ್ನು ತಿಳಿದುಕೊಳ್ಳುವ ಉದ್ದೇಶವನ್ನು ಗಮನದಲ್ಲಿಟ್ಟುಕೊಂಡು ರಾಜಸ್ಥಾನದ ಉತ್ತರದಲ್ಲಿರುವ ಐದು ಜಿಲ್ಲೆಗಳಲ್ಲಿನ ಅಂದಾಜು 1100 ಜನಸಂಖ್ಯೆಯಿಂದ ಕೂಡಿರುವ, ಶೇಕಡ 90ಕ್ಕಿಂತ ಹೆಚ್ಚಿನವರು ಕೃಷಿಯನ್ನೇ ಮೂಲ ವೃತ್ತಿಯನ್ನಾಗಿ ಮಾಡುತ್ತಿರುವ, ಭೂ ಹಿಡುವಳಿಯು ಅತಿ ಚಿಕ್ಕದಾಗಿದ್ದು, ಕಳೆದ ಮೂರು ವರ್ಷಗಳಲ್ಲಿ ಭೂಮಿಯ ಇಳುವರಿ ಕಡಿಮೆಯಾಗಿರುವ ಮತ್ತು ಮಳೆಯ ಅಭಾವ ತೀವ್ರವಾಗಿರುವ ಮತ್ತು ಸತತವಾಗಿ ಬರಗಾಲಕ್ಕೆ ತುತ್ತಾಗುತ್ತಿರುವ 35 ಗ್ರಾಮಗಳಲ್ಲಿ ಈ ಅಧ್ಯಯನವನ್ನು ಕೈಗೊಂಡಿದ್ದಾರೆ. ಈ ಅಧ್ಯಯನವನ್ನು ಪೂರ್ಣಗೊಳಿಸಲು ಗ್ರಾಮದಲ್ಲಿರುವ ಜನರನ್ನು ಸಂದರ್ಶನದ ಮೂಲಕ ಬಡವರನ್ನು ಗುರುತಿಸಲು ಹೇಳದೆ ಬಡತನಕ್ಕೆ ಮೂಲ ಕಾರಣಗಳನ್ನು ಹೇಳುವಂತೆ ಪ್ರೇರೇಪಿಸಲಾಯಿತು. ಆದ್ದರಿಂದ ಈ ಅಧ್ಯಯನದಲ್ಲಿ ಕಳೆದ 25 ವರ್ಷಗಳಲ್ಲಿ ಗ್ರಾಮಗಳಲ್ಲಿರುವ ಕುಟುಂಬಗಳು ಸಾಧಿಸಿರುವ ಪ್ರಗತಿಯನ್ನು ತಿಳಿದುಕೊಳ್ಳಲು ವಿವಿಧ ಹಂತದ ಚಟುವಟಿಕೆಯ ವಿಧಾನವನ್ನು ಕೈಗೊಳ್ಳಲಾಯಿತ್ತು. ಈ ವಿಧಾನದಲ್ಲಿ ಗ್ರಾಮದಲ್ಲಿರುವ ಎಲ್ಲಾ ಜಾತಿಯ, ಧರ್ಮದ ಹಿರಿಯರನ್ನು ಗ್ರಾಮದಲ್ಲಿರುವ ಕುಟುಂಬಗಳ ಅಭಿವೃದ್ಧಿಯ ಬಗ್ಗೆ ಕೇಳಲಾಯಿತ್ತು. ಎಲ್ಲಾ 35 ಗ್ರಾಮಗಳಲ್ಲಿರುವ ಮಹಿಳೆಯರೊಂದಿಗೆ ಗುಂಪು ಚರ್ಚೆಗಳನ್ನು ಸಹ ಕೈಗೊಳ್ಳಲಾಯಿತ್ತು. ಈ ಎಲ್ಲಾ ವಿಧಾನಗಳಿಂದ ಕೆಳಗಿನ ನಾಲ್ಕು ಕಾರಣದಿಂದಾಗಿ ಬಡತನ ಕಾಣಬಹುದೆಂದು ವಿವರಿಸಿದ್ದಾರೆ. ಊಟಕ್ಕಾಗಿ ಆಹಾರವನ್ನು ಖರೀದಿಸುವುದು, ಮಕ್ಕಳಿಗೆ ಶಾಲೆಗೆ ಕಳುಹಿಸುವುದು, ಮನೆಯ ಹೊರಗೆ ಧರಿಸುವ ಬಟ್ಟೆಗಳನ್ನು ಖರೀದಿಸುವುದು ಮತ್ತು ಮಾಡಿರುವ ಸಾಲವನ್ನು ಕಂತುಗಳಲ್ಲಿ ಮರುಪಾವತಿಸುವದು. ಈ ನಾಲ್ಕು ಹಂತಗಳು ಎಲ್ಲಾ ಗ್ರಾಮಗಳಲ್ಲಿ ಸಮವಾಗಿದ್ದು ಈ ಹಂತಗಳನ್ನು ದಾಟಿದರೆ ಅವರು ಬಡವರಲ್ಲ ಎಂಬ ತೀರ್ಮಾನಕ್ಕೆ ಬರಲಾಯಿತ್ತು.

ಒಂದು ವೇಳೆ ಈ ಹಂತಗಳಲ್ಲಿರುವ ಎಲ್ಲಾ ಕುಟುಂಬಗಳನ್ನು ಬಡ ಕುಟುಂಬ ಎಂದು ತೀರ್ಮಾನಕ್ಕೆ ಬಂದು ಇವುಗಳ ಮೇಲ್ಮಟ್ಟದ ಹಂತಗಳಾದ ಕೃಷಿ ಭೂಮಿಯನ್ನು

ಅಭಿವೃದ್ಧಿ ಪಡಿಸುವುದು, ಸ್ವಂತ ಮನೆಯನ್ನು ಸುಧಾರಿಸುವುದು, ಮಕ್ಕಳ ಮದುವೆಗೆ ಪ್ರಮುಖವಾದ ಚಿನ್ನಾಭರಣಗಳನ್ನು, ಮನೆಗೆ ಅವ್ಯಶವಿರುವ ಸಾಮಾನುಗಳಾದ ಟೀವಿ/ಟೇಪ್ ರೆಕಾರ್ಡರ್, ಮೋಟರ್ ಸೈಕಲ್, ರೆಫ್ರಿಜೆಟರ್‌ಗಳನ್ನು ಖರೀದಿಸುವುದು. ಈ ರೀತಿಯಾಗಿ ಎಲ್ಲಾ ಗ್ರಾಮಗಳಲ್ಲಿಯ ಕುಟುಂಬಗಳನ್ನು ಬಡವರು ಮತ್ತು ಉಳ್ಳವರೆಂದು ವಿಂಗಡಿಸಲಾಯಿತ್ತು. ಇದರ ನಂತರದ ತಂತ್ರ ಈ ಎಲ್ಲಾ ಕುಟುಂಬಗಳ ಕಳೆದ 25 ವರ್ಷಗಳ ಹಿಂದಿನ ಆರ್ಥಿಕ ಸ್ಥಿತಿಗತಿಗಳನ್ನು ತಿಳಿದುಕೊಳ್ಳುವುದು. ಇದು ಮೊದಲು ಶ್ರೀಮಂತರಿದ್ದು ಬಡತನಕ್ಕೆ ಒಳಗಾದವರನ್ನು ಮತ್ತು ಬಡತನದಿಂದ ತಪ್ಪಿಸಿಕೊಂಡವರನ್ನು ತಿಳಿದುಕೊಳ್ಳಲು ಸಹಾಯಕವಾಗುತ್ತದೆ. ಆದ್ದರಿಂದ ಗ್ರಾಮಗಳಲ್ಲಿರುವ ಕುಟುಂಬಗಳನ್ನು ನಾಲ್ಕು ಗುಂಪುಗಳಾಗಿ ವಿಂಗಡಿಸಿದ್ದಾರೆ. ಮೊದಲನೆಯದು–25 ವರ್ಷಗಳ ಹಿಂದೆ ಬಡವರು ಮತ್ತು ಈಗಲೂ ಬಡವರು ಇವರು ಬಡವರಾಗಿಯೇ ಇದ್ದವರು, ಎರಡನೆಯದು–25 ವರ್ಷಗಳ ಹಿಂದೆ ಬಡವರು ಮತ್ತು ಈಗ ಬಡವರಲ್ಲ, ಇವರು ಬಡತನದಿಂದ ತಪ್ಪಿಸಿಕೊಂಡವರು, ಮೂರನೆಯದು–25 ವರ್ಷಗಳ ಹಿಂದೆ ಬಡವರಲ್ಲ ಮತ್ತು ಈಗ ಬಡವರಾಗಿದ್ದಾರೆ, ನಾಲ್ಕನೆಯದು–25 ವರ್ಷಗಳ ಹಿಂದೆ ಬಡವರಲ್ಲ ಮತ್ತು ಈಗಲೂ ಬಡವರಲ್ಲ ಇವರು ಬಡವರಾಗಿಯೇ ಇಲ್ಲ, ಈ ಹಂತಗಳನ್ನು ತಿಳಿದುಕೊಳ್ಳಲು 1500 ಕುಟುಂಗಳ ಸದಸ್ಯರನ್ನು ಸಂದರ್ಶಿಸಲಾಗಿದೆ. ಈ ಒಂದು ಸಂಶೋಧನೆಯ ವಿಧಾನಗಳನ್ನು ಅಳವಡಿಸಿಕೊಂಡು ಲೇಖಕರು ಕೆಳಗಿನ ತೀರ್ಮಾನಕ್ಕೆ ಬರುತ್ತಾರೆ. ಬಡತನ ಎಂಬ ವಿಷಯವು ಬಹಳ ಕ್ಲಿಷ್ಟ ಮತ್ತು ಸಂಕೀರ್ಣವಾಗಿದೆ. ಇದನ್ನು ತಿಳಿದುಕೊಳ್ಳಬೇಕಾದರೆ ಯಶಸ್ವಿಯಾದ ಮತ್ತು ಯಶಸ್ವಿಯಾಗದೆ ಇರುವ ತಂತ್ರಗಳನ್ನು ತಿಳಿದುಕೊಳ್ಳುವುದು ಬಹಳ ಪ್ರಮುಖವಾಗಿದೆ. ಈ ರೀತಿಯಾದ ಅಂಶಗಳನ್ನು ಅರಿತಮೇಲೆಯೇ ಬಡತನಕ್ಕೆ ಸಂಬಂಧಪಟ್ಟ ನೀತಿ, ಯೋಜನೆಗಳನ್ನು ರೂಪಿಸಬೇಕೆಂದು (ಅನಿರುದ್ಧ ಕೃಷ್ಣ, 2004) ತಿಳಿದುಬರುತ್ತದೆ.

ಪವಾರ ಆರ್ ಜಗನ್ನಾಥರಾವ್ ಮತ್ತು ವಿಜಯ ಬಿ. ಪಾಟೀಲ (1975) ರವರು ತಮ್ಮ ಲೇಖನ "ಮೇಜರಮೆಂಟ್ ಆಫ್ ರೂರಲ್ ಸರಪ್ಲಸ್ಸ್ ಏಟ್ ದಿ ಮೈಕ್ರೋ ಲೆವಲ ಇನ್ ದಿ ಶುಗರ ಫ್ಯಾಕ್ಟರಿ ಏರಿಯಾಸ್ ಆಫ್ ದಿ ಮಹಾರಾಷ್ಟ್ರಾ ಸ್ಟೇಟ್" ಈ ಸಂಶೋಧನೆಯು ಮಹಾರಾಷ್ಟ್ರ ರಾಜ್ಯದ ಸಾಂಗ್ಲಿಯಲ್ಲಿಯ ರೈತರ ಸಹಕಾರ ಸಕ್ಕರೆ ಖಾರಕಾನೆಯ ಪ್ರದೇಶದಲ್ಲಿ ಬರುವ ಕಬ್ಬು ಬೆಳೆಗಾರರ ಮೇಲೆ ಕೇಂದ್ರೀಕೃತವಾಗಿದೆ. ರ್‍ಯಾಂಡಮ್ ಸ್ಯಾಂಪಲ್ ಮೂಲಕ ಕಬ್ಬು ಬೆಳೆಯುವ ನಾಲ್ಕು ಹಳ್ಳಿಗಳನ್ನು ಆಯ್ಕೆ ಮಾಡಿಕೊಂಡು ಬೆಳೆಗಾರರನ್ನು ಮೂರು ಗುಂಪುಗಳಾಗಿ ಅಥವಾ ವರ್ಗಗಳಾಗಿ ವಿಂಗಡಿಸಿದರು. ಸಣ್ಣ, ಮಧ್ಯಮ ಮತ್ತು ದೊಡ್ಡ ರೈತರೆಂದು ಅವರು ಹೊಂದಿರುವ ಭೂಮಿಯ ಮೇಲೆ ವಿಂಗಡಿಸಲಾಗಿದೆ. ಸಣ್ಣ (2 ಎಕರೆಗಿಂತ ಕಡಿಮೆ) ಮಧ್ಯಮ (2 ರಿಂದ 4) ದೊಡ್ಡ (4 ಎಕರೆ ಗಿಂತ ಹೆಚ್ಚು) ರೈತರೆಂದು ವರ್ಗೀಕರಿಸಲಾಗಿತ್ತು ಒಟ್ಟು 72 ರೈತರನ್ನು ಆಯ್ಕೆ ಮಾಡಿಕೊಳ್ಳಲಾಗಿ. ಆದಾಯದ ಮೂಲ, ಖರ್ಚು, ಉಳಿತಾಯ ಮತ್ತು ಹೂಡಿಕೆಯ

ಬಗ್ಗೆ ಮಾಹಿತಿಯನ್ನು ಕಲೆಹಕಲಾಗಿದ್ದು, ಈ ಎಲ್ಲ ಮಾಹಿತಿಯನ್ನು ಕ್ರಿ.ಶ.1972–73 ರಲ್ಲಿ ಸಂಗ್ರಹಿಸಲಾಗಿದೆ. ಕೃಷಿಯಿಂದ ಬರುವ ಆದಾಯದಲ್ಲಿ ಕುಟುಂಬ ನಿರ್ವಹಣೆಯ ಖರ್ಚಿಗಾಗಿ ಸಣ್ಣ ರೈತರು ಒಟ್ಟು ಶೇ. 46.87ರಷ್ಟು ಆದರೆ ದೊಡ್ಡ ರೈತರು ಉಳಿದ ಹಣವನ್ನು ಭೂಮಿ ಖರೀದಿಗಾಗಿ, ಸಾಮಗ್ರಿ ಖರೀದಿಗಾಗಿ ಅಥವಾ ಇನ್ನಾವುದೇ ಕೃಷಿ ಸುಧಾರಣೆಗಾಗಿ ಖರ್ಚುಮಾಡಿರುತ್ತಾರೆ. ಆದರೆ ಕೃಷಿಯಿಂದ ಯಾವುದೆ ತರಹದ ಆದಾಯ ಅಥವಾ ಉಳಿತಾಯವನ್ನು ಪಡೆಯದೆ ಇರುವ ರೈತರು ಇವುಗಳಿಂದ ವಂಚಿತರಾಗಿರುತ್ತಾರೆ. ಈ ಸಂಶೋಧನೆಯಿಂದ ಸಂಶೋಧಕರು ಈ ಕೆಳಗಿನ ತೀರ್ಮಾನವನ್ನು ಮುಂದಿಡುತ್ತಾರೆ, ರೈತರು ಹೊಂದಿರುವ ಭೂಮಿ ಹೆಚ್ಚಾಗಿದ್ದರೆ ಅವರ ಬೆಳೆಯುವ ಬೆಳೆ ಹೆಚ್ಚಾಗಿ ಹೆಚ್ಚಿನ ಪ್ರಮಾಣದಲ್ಲಿ ಉಳಿತಾಯವನ್ನು ಮಾಡಿಕೊಂಡು ತಮ್ಮ ಏಳಿಗೆಯನ್ನು ಸಾಧಿಸಿಕೊಂಡು ಸ್ವಾವಲಂಬಿಗಳಾಗಬಹುದು. ಈ ಸಂಶೋಧನೆಯು ಕೇವಲ ವಾಣಿಜ್ಯ ಬೆಳೆಯಾದ ಕಬ್ಬು ಬೆಳೆಯುವ ರೈತರ ಮೇಲೆ ಕೇಂದ್ರಿಕೃತವಾಗಿದೆ ಮತ್ತು ಸಣ್ಣ, ಮಾಧ್ಯಮ ಮತ್ತು ದೊಡ್ಡ ರೈತರನ್ನು ಜಾತಿ ಆಧಾರವಾಗಿಟ್ಟುಕೊಂಡು ನೋಡಿದರೆ ಯಾವ ಜಾತಿಯವರು, ಯಾವ ವರ್ಗದವರು ಹೆಚ್ಚಾಗಿ ಲಾಭಗಳಿಸಿಕೊಳ್ಳುತ್ತಾರೆ ಎಂಬುದನ್ನು ತಿಳಿದುಕೊಳ್ಳಬಹುದಾಗಿತ್ತು ಮತ್ತು ಇದರಿಂದ ಕೃಷಿ ಯೋಜನೆ ರೂಪಿಸಲು ಅನುಕೂಲವಾಗುತ್ತದೆ ಎಂದು ಹೇಳಬಹುದು. 

ನೈಯರ ಕುಸುಮ (1961) ತಮ್ಮ ಪುಸ್ತಕದಲ್ಲಿ ಭಾರತದಲ್ಲಿರುವ ಎಲ್ಲಾ ರಾಜ್ಯಗಳಿಲ್ಲಿ (ಜಮ್ಮು ಮತ್ತು ಕಾಶ್ಮೀರ, ತ್ರಿಪುರಾ ಮತ್ತು ಅಂಡಮಾನ ಮತ್ತು ನಿಕೋಬಾರ ದ್ವೀಪಗಳನ್ನು ಹೊರತುಪಡಿಸಿ) ಸಂಚರಿಸಿ ಪ್ರತಿಯೊಂದು ರಾಜ್ಯದಲ್ಲಿ ಮೂರು ಅಥವಾ ನಾಲ್ಕು ಅಥವಾ ಅದಕ್ಕಿಂತ ಹೆಚ್ಚಿನ ಜಿಲ್ಲೆಯಲ್ಲಿ ಸಂಚರಿಸಿ ಸ್ವಾತಂತ್ರ್ಯದ ನಂತರದಲ್ಲಿ ಆದ ಬದಲಾವಣೆಯನ್ನು ತಿಳಿದುಕೋಳ್ಳಲು ಈ ಅಭ್ಯಾಸವನ್ನು ಕೈಗೆತ್ತಿಕೊಂಡಿದ್ದರು. ತಮಿಳುನಾಡಿನ ತಂಜಾವೂರು ಜಿಲ್ಲೆಯ ಅಗವಮನಗುಡಿ ಗ್ರಾಮದಲ್ಲಿ ಒಬ್ಬ ವ್ಯಕ್ತಿಯು ಕೇವಲ ಒಂದು ಎಕರೆ ಭೂಮಿಯನ್ನು ಹೊಂದಿದ್ದರೂ, ಅದನ್ನು ಅವನು ಉಳುಮೆಯನ್ನು ಮಾಡಲು ಹೊಲಕ್ಕೆ ಹೋಗುವುದಿಲ್ಲ ಮತ್ತು ಇವರಿಗೆ 'ಮೀರಾಸದಾರರು' ಎಂದು ಕರೆಯಲ್ಪಡುತ್ತಾರೆ ಮತ್ತು "ಜಂಟಲ್ ಮ್ಯಾನ್ ಫಾರ್ಮರ್ಸ್ ಎನ್ನುತ್ತಾರೆ. ಭೂ ರಹಿತ ಕಾರ್ಮಿಕರಿಗೆ ಪನ್ನಿಯಾರ್ಸ್ ಎಂದು ಕರೆಯುತ್ತಾರೆ. ತಂಜಾವೂರಿನಲ್ಲಿ ಯಾರೂ ಕೂಡ ತಾವು ಹೊಂದಿರುವ ಜೀತದಾಳುಗಳಿಂದ ದುಡಿಯುವುದಿಲ್ಲ ಹೊರತಾಗಿ ಎಲ್ಲ ಒಕ್ಕಲುತನದ ಕೆಲಸವನ್ನು ಕೂಲಿಕಾರರಿಂದ ಮಾಡಿಸಿಕೊಳ್ಳುತ್ತಾರೆ. ಕೆಲವೊಬ್ಬರು ವಂಶಪಾರಂಪರ್ಯವಾಗಿ ಒಂದೇ ಕುಟುಂಬಕ್ಕೆ ದುಡಿಯುವವರು ಇದ್ದಾರೆ. ಈ ಹಳ್ಳಿಯಲ್ಲಿ ಒಬ್ಬ 400 ಮೀರಾಸದಾರರು ಇದ್ದು ಕೇವಲ ಶೇ.10% ರಷ್ಟು ಮಾತ್ರ ತಾವು ಹೊಂದಿದ ಭೂಮಿಯಲ್ಲಿ ಉಳುಮೆಯನ್ನು ಮಾಡುತ್ತಾರೆ. ಅದು ಕೂಡ ಕೂಲಿಕಾರರಿಂದ ಇನ್ನುಳಿದ ಶೇ 90%ರಷ್ಟು ಭೂಮಿಯನ್ನು ಭೂ ಹಿಡುವಳಿದಾರರಿಗೆ ಬಾಡಿಗೆ ಕೊಡಲಾಗಿದೆ. ಬಹಳಷ್ಟು ಭೂಹಿಡುವಳಿದಾರರು ತಮ್ಮ ಸಲುವಾಗಿ

ಕೆಲಸ ಮಾಡುವುದಿಲ್ಲ. ಈ ಗ್ರಾಮದಲ್ಲಿ ಒಟ್ಟು ಮೂರು ವಿಧದ ವರ್ಗಗಳಿವೆ. ಈ ಮೂರು ವರ್ಗಗಳು 1804 ರಿಂದ ಜಾರಿಯಲ್ಲಿದ್ದ ರೈತವಾರಿ ಪದ್ಧತಿಯಲ್ಲಿದ್ದ ವರ್ಗಗಳೇ ಇಲ್ಲಿರುವವರೆಗೆ ಜಾರಿಯಲ್ಲದ್ದೆವು. ಅವು ಮೇಲ್ಭಾಗದಲ್ಲಿ ಭೂ ಒಡೆಯರು, ಇವರ ಕೆಳಗೆ ಭೂ ಹಿಡುವಳಿದಾರರು ಕೊನೆಯದಾಗಿ ಭೂರಹಿತ ಕಾರ್ಮಿಕರು. ಈ ಕೆಲವು ಸಂದಂರ್ಭದಲ್ಲಿ ಲೇಖಕರು ಕೆಳವರ್ಗದ ಗ್ರಾಮಸ್ಥರನ್ನು ಪ್ರಶ್ನೆಯನ್ನು ಕೇಳಿದಾಗ ಅವರು ಉತ್ತಸಿದ ಉತ್ತರದಲ್ಲೇ ಅಸಮಾನತೆಯನ್ನು ಕಾಣಬಹುದು. *"Allthough it is the mirasdar duty and responsibility to repair and desilt irrigation channels, we have to do it free of cost. They are not doing it. Even, if they take two-third of the produces. They show no interest. They come one week before harvest; make an assessment and demand their share. Many mirasdars do not even know the location of their fields" (p.29)* ಈ ರೀತಿಯಾದ ಅಸಮಾನತೆಯನ್ನು ದೇಶದ ಎಲ್ಲ ಕಡೆ ಕಾಣಬಹುದಾಗಿದೆ ಮತ್ತು ಈ ರೀತಿ ಬಡತನದಿಂದ ಬಡವರು ಶೋಷಣೆಗೆ ಒಳಗಾಗುತ್ತಿದ್ದರು ಎಂದು ಊಹಿಸಬಹುದು.

ಮೂರ್ತಿ ಸಿ.ಎಸ್. (1979) "ಇಫೆಕ್ಟ ಆಫ್ ಟೆಕ್ನೋಲೊಜಿಕಲ ಚೇಂಜ ಆನ್ ದಿ ಎಕ್ಸಟೆಂಟ ಆಫ್ ಟೆನ್ನಸ್ಸಿ ಆ್ಯಂಡ್ ಆನ್ ಕಾಂಪೊಜಿಷನ ಆಫ್ ಟೆನೆಂಟ್ಸ; ಎ ಕೇಸ್ ಸ್ಟಡಿ ಇನ್ ಟೂ ಡೆಲ್ಟಾ ವಿಲೇಜಸ್." ಈ ಅಧ್ಯಯನವು 1979ರಲ್ಲಿ ಆಂಧ್ರ ಪ್ರದೇಶದ ಪೂರ್ವ ಮತ್ತು ಪಶ್ಚಿಮ ಗೋದಾವರಿ ಜಿಲ್ಲೆಗಳ ಎರಡು ಹಳ್ಳಿಗಳಲ್ಲಿ ಭೂ ಹಿಡುವಳಿಯ ಪ್ರಮಾಣ ಎಷ್ಟರ ಮಟ್ಟಿಗೆ ಇದೆ ಮತ್ತು ಭೂ ಹಿಡುವಳಿದಾರರು ಯಾವ ರೀತಿಯ ರಚನೆಯನ್ನು ಹೊಂದಿದ್ದಾರೆ ಎಂಬುದನ್ನು ತಿಳಿದುಕೊಳ್ಳಲು ಕೈಗೊಳ್ಳಲಾಗಿತ್ತು. ಈ ಸಂಶೋಧನೆಯಿಂದ ತಿಳಿದುಬುರುವುದೇನೆಂದರೆ ಭೂ ಹಿಡುವಳಿಯ ಮೇಲೆ ತಂತ್ರಜ್ಞಾನವು ಯಾವುದೇ ರೀತಿಯಾದ ಪರಿಣಾಮ ಬೀರಿಲ್ಲ ಮತ್ತು ಜಮೀನುದಾರರಿಂದ ಭೂ ರಹಿತ ಹಿಡುವಳಿದಾರರು ಅನೇಕ ರೀತಿಯ ಶೋಷಣೆಗೆ ಒಳಗಾಗುತ್ತಿದ್ದರು ಎಂದು ಲೇಖಕರು ಅಭಿಪ್ರಾಯ ವ್ಯಕ್ತಪಡಿಸಿದ್ದಾರೆ.

ಬಾಲಮುರಳಿ ನಟರಾಜನ್ (2005) ರವರು ತಮ್ಮ ಲೇಖನದಲ್ಲಿ ಭಾರತದಲ್ಲಿ ಮಾನವಶಾಸ್ತ್ರಜ್ಞರು ಜಾತಿ ಮತ್ತು ವರ್ಗಗಳ ಮೇಲೆ ಆದ ಕೆಲವೊಂದು ಸೈದ್ಧಾಂತಿಕ ಸಂಶೋಧನೆಗಳನ್ನು ಉಲ್ಲೇಖಿಸುತ್ತಾ ಭಾರತದ ಜಾತಿ ಮತ್ತು ವರ್ಗಗಳು ರಾಜಕೀಯ ಮತ್ತು ಆರ್ಥಿಕ ವಿಷಯಗಳಿಗೆ ಸಂಬಂಧಿಸಿದಂತೆ ಅಧ್ಯಯನ ಕೈಗೊಳ್ಳುವಲ್ಲಿ ಮಾನವಶಾಸ್ತ್ರವು ದುರ್ಬಲವಾಗಿದೆ ಎಂದು ಹೇಳುತ್ತಾ ಎಲ್ಲಾ ಜಾತಿಗಳಲ್ಲಿ ಆರ್ಥಿಕತೆಯ ವ್ಯತ್ಯಾಸವನ್ನು ಕಾಣಬಹುದಾಗಿದೆ. ಎಲ್ಲ ಜಾತಿಯವರು ಸಮಾಜದಲ್ಲಿ ಅಸ್ಥಿತ್ವದಲ್ಲಿರುವ ಎಲ್ಲ ವರ್ಗಗಳಲ್ಲಿ ಕಾಣಬಹುದಾಗಿದೆ ಮತ್ತು ಬಂಡವಾಳಶಾಹಿ ರೈತರು ಹೆಚ್ಚಾಗಿ ಮೇಲ್ಜಾತಿಗೆ ಸಂಬಂಧಿಸಿದ್ದವ

ರಾಗಿರುತ್ತಾರೆ. ಮೇಲ್ಜಾತಿಯವರು ಎಲ್ಲ ವರ್ಗದಲ್ಲಿ ಹಂಚಿಕೆಯಾಗಿದ್ದರೆ ಮತ್ತು ಕೆಳ ವರ್ಗದವರು ಎಲ್ಲಾ ಜಾತಿಗಳಲ್ಲಿ ಹಂಚಿಕೆಯಾಗಿದ್ದಾರೆ ಎಂದು ಹೇಳುತ್ತಾರೆ.

ಫಾಕ್ಸ್ (1967) ಉತ್ತರ ಭಾರತದ ನಗರ ಮಾರುಕಟ್ಟೆಯಲ್ಲಿ ಕುಟುಂಬ ಜಾತಿ ಮತ್ತು ವಾಣಿಜ್ಯಶಾಸ್ತ್ರದ ಕುರಿತು ಅಭ್ಯಸಿಸುತ್ತಾ ಈ ಕೆಳಗಿನ ಒಂದು ಅಭಿಪ್ರಾಯಗಳನ್ನು ವ್ಯಕ್ತಪಡಿಸುತ್ತಾರೆ. ಇವರು ಆರು ಪ್ರಕಾರದ ವರ್ಗಗಳನ್ನಾಗಿ ವಿಂಗಡಿಸಿ ಅದನ್ನು ಕೆಲವು ತಮ್ಮ ಜಾತಿ ಆಧಾರಿತ ಅಂಗಡಿಗಳಿಂದ ವಿಭಜನೆಗಳನ್ನು ಮಾಡುತ್ತಾರೆ. ಈ ಒಂದು ಮಾರುಕಟ್ಟೆಯಲ್ಲಿ ಸಾಂಪ್ರದಾಯಿಕತೆಯಿಂದ ಒಂದು ಜಾತಿಯಾಧಾರಿತ ವ್ಯಾಪಾರಸ್ಥರು ತಮ್ಮ ದೀರ್ಘಕಾಲದ ಪ್ರಯತ್ನದಿಂದ ಮಾರುಕಟ್ಟೆಯನ್ನು ಮುನ್ನೆಡೆಸುತ್ತಿದ್ದಾರೆ.

ಪ್ರಸಾದ (1968) ರವರು ತಮ್ಮ ಪುಸ್ತಕವಾದ "ಸೋಶೀಯೋ ಏಕನಾಮಿಕ್ ಸ್ಟಡೀ ಆಫ್ ಅರ್ಬನ್ ಮಿಡಲ್ ಕ್ಲಾಸಸ್"ದಲ್ಲಿ ಅವರು ಮಧ್ಯಮ ವರ್ಗವು ಒಂದು ದೇಶದ ಆರ್ಥಿಕತೆಯಲ್ಲಿ ಬಹಳ ಪ್ರಮುಖವಾದ ವರ್ಗವೆಂದು ಅಭಿಪ್ರಾಯ ಪಟ್ಟಿದ್ದಾರೆ. ಆದ್ದರಿಂದ ಈ ಒಂದು ಸಂಶೋಧನೆಯನ್ನು ರೂ.150/– ರಿಂದ ರೂ.750/– ಆದಾಯದಿಂದ ಕೂಡಿದ ಮಧ್ಯಮ ವರ್ಗಗಳ ಕುರಿತು ಸಂಶೋಧನೆಯನ್ನು ಕೈಗೊಳ್ಳಲಾಗಿತ್ತು. ಈ ಅಧ್ಯಯನದಲ್ಲಿ 500 ಮಧ್ಯಮ ಕುಟುಂಬಗಳನ್ನು ಉತ್ತರ ಪ್ರದೇಶದಲ್ಲಿನ ದೊಡ್ಡ ನಗರಗಳಾದ ಕಾನ್ಪುರ್, ಆಗ್ರಾ, ವಾರಣಾಸಿ, ಅಲಹಾಬಾದ ಮತ್ತು ಲಕ್ನೋ ನಗರಗಳಿಂದ ಆಯ್ಕೆ ಮಾಡಿಕೊಂಡು ಸಮೀಕ್ಷೆಯ ಮೂಲಕ ಪ್ರತಿ ನಗರಗಳಿಂದ ನೂರು ಕುಟುಂಬಗಳನ್ನು ಸಂದರ್ಶಿಸಲಾಗಿತ್ತು. ಈ ಕುಟುಂಬಗಳನ್ನು ಸಂಬಂಧಪಟ್ಟ ಪಟ್ಟಣಗಳ ನಗರಪಾಲಿಕೆಗಳಿಂದ ಪಡೆದು 1959–60 ಕ್ಷೇತ್ರಕಾರ್ಯವನ್ನು ಕೈಗೊಳ್ಳಲಾಗಿತ್ತು. ಸಂಶೋಧನೆಯಲ್ಲಿ ಆರ್ಥಿಕತೆಗೆ ಸಂಬಂಧಪಟ್ಟ ಆದಾಯ, ಖರ್ಚು, ಸಾಲದ ಸ್ಥಿತಿ, ವಸತಿ, ಉದ್ಯೋಗದ ಮಾದರಿ, ಶಿಕ್ಷಣ ಮುಂತಾದವುಗಳ ಮಾಹಿತಿಯನ್ನು ತೆಗೆದುಕೊಂಡು ಸಾಮಾಜಿಕ ಮಾಹಿತಿಗಳಾದ ವೈವಾಹಿತ ಸ್ಥಿತಿ, ವರದಕ್ಷಿಣೆ ಪದ್ಧತಿ, ಧಾರ್ಮಿಕ ಆಚರಣೆ ಮುಂತಾದವುಗಳನ್ನು ತೆಗೆದುಕೊಂಡು ಡೆಮೊಗ್ರಾಫಿ ಮಾಹಿತಿಯೋಂದಿಗೆ ವಿಶ್ಲೇಷಣೆಯನ್ನು ಮಾಡಲಾಗಿತ್ತು. ಮಧ್ಯಮ ವರ್ಗಗಳನ್ನು ಕೆಳಮಧ್ಯಮ ವರ್ಗ(ರೂ.150/– ರಿಂದ ರೂ.299/–), ಮಧ್ಯಮ ಮಧ್ಯಮ ವರ್ಗ (ರೂ.300/– ರಿಂದ ರೂ.499/–) ಮತ್ತು ಮೇಲ್ ಮಧ್ಯಮ ವರ್ಗ (ರೂ.500/– ರಿಂದ ರೂ.750/–) ಎಂದು ಕುಟುಂಬಗಳ ಆದಾಯದ ಮೇಲೆ ವರ್ಗಗಳನ್ನು ವಿಂಗಡಿಸಲಾಗಿದೆ. ಈ ರೀತಿಯಾಗಿ ಕಲೆಹಾಕಿದ ಮಾಹಿತಿಯನ್ನು ನಗರ ಮತ್ತು ವರ್ಗಗಳನುಸಾರವಾಗಿ ವಿಶ್ಲೇಷಣೆಯನ್ನು ಮಾಡಲಾಗಿದೆ.

ಮಧ್ಯಮ ವರ್ಗಗಳ ಗಳಿಸಿದ ಆದಾಯಗಳನ್ನು ವಸತಿ, ಬೆಳಕು, ಶಿಕ್ಷಣ, ಆಹಾರ, ಎಣ್ಣೆ, ಮನೆಗೆಲಸ ಮಾಡುವರ ಕೂಲಿಗಾಗಿ, ಬಟ್ಟೆ, ವೈದ್ಯಕೀಯ ವೆಚ್ಚ, ಧಾರ್ಮಿಕ ಕಾರ್ಯಕ್ರಮಗಳಿಗಾಗಿ ಮತ್ತು ಇನ್ನಿತ್ತರ ಸೌಲಭ್ಯಗಳನ್ನು ಪಡೆಯುವದಕ್ಕಾಗಿ ಖರ್ಚು ಮಾಡುತ್ತಾರೆ.

ಈ ಮೇಲಿನ ಮೂರು ಮಧ್ಯಮ ವರ್ಗದವರು ಆಧಾಯದ ಶೇ.48.60%, ಶೇ.40.81% ಮತ್ತು ಶೇ.33.35% ರಷ್ಟು ಹಣವನ್ನು ಆಹಾರಕ್ಕಾಗಿ ಖರ್ಚುಮಾಡುತ್ತಾರೆ. ಈ ಆದಾಯ ಸರಿಹೋಗದೆ ಇದ್ದಾಗ ಗೆಳೆಯರು ಮತ್ತು ಸಂಬಂಧಿಕರಲ್ಲಿ ಸಾಲವನ್ನು ಪಡೆಯುತ್ತಾರೆ. ಈ ರೀತಿಯಾಗಿ ಪಡೆದ ಸಾಲವು ತಿಂಗಳ ಖರ್ಚಿಗಾಗಿ, ಮದುವೆಗಾಗಿ, ಆರೋಗ್ಯಕ್ಕಾಗಿ, ಶಿಕ್ಷಣಕ್ಕಾಗಿ, ವಸತಿ ಮತ್ತು ಇನ್ನಿತರ ಖರ್ಚುಗಳಿಗಾಗಿ ವ್ಯಯಿಸುತ್ತಾರೆ ಎಂದು ಲೇಖಕರು ಅಭಿಪ್ರಾಯ ಪಟ್ಟಿದ್ದಾರೆ. ಮುಂದುವರೆದು ಲೇಖಕರು ಸಮಾಜದಲ್ಲಿ ಮಧ್ಯಮ ವರ್ಗದವರು ಬಹಳ ಪ್ರಮುಖವಾದ ಪಾತ್ರವನ್ನು ವಹಿಸುತ್ತಾರೆ ಎಂದು ಉಲ್ಲೇಖಿಸಿದ್ದಾರೆ.

ಕಾಪಡಿಯ ಕೆ. ಕರೀನ (1997) ಯವರು ತಮಿಳುನಾಡಿನ ತಿರುಚಿ ಜಿಲ್ಲೆಯ ಗ್ರಾಮೀಣ ಪ್ರದೇಶ ಹಿಂದುಳಿದ ಮಹಿಳೆ ಜಾತಿ, ವರ್ಗಗಳ ಮತ್ತು ಉದ್ಯೋಗವನ್ನು ಮಾರುಕಟ್ಟೆಯ ಸದವಕಾಶಗಳ ಕುರಿತು ಸಂಶೋಧನೆಯನ್ನು ಮಾಡಿದ್ದಾರೆ. ಈ ಸಂಶೋಧನೆಯಲ್ಲಿ ಜಾತಿ, ವರ್ಗ ಮತ್ತು ಲಿಂಗಗಳ ನಡುವಿನ ಸಂಬಂಧ ಕುರಿತು ಈ ರೀತಿಯಾಗಿ ವ್ಯಾಖ್ಯಾನಿಸಿದ್ದಾರೆ. ಕೆಳಜಾತಿಯವರಿಗೆ ಮಾರುಕಟ್ಟೆಗಳಲ್ಲಿ ಉದ್ಯೋಗ, ಆದಾಯ, ರಾಜಕೀಯ ಮತ್ತು ಸಾಮಾಜಿಕ ಬಡತನಕ್ಕೆ ಸಂಬಂಧಪಟ್ಟ ಅವಕಾಶಗಳನ್ನು ನಿರಾಕರಿಸಲಾಗುತ್ತದೆ. ಈ ಅಸಮಾನತೆಯು ಗಂಡು ಮತ್ತು ಹೆಣ್ಣು ಎಂಬ ಭೇದಕ್ಕನುಗುಣವಾಗಿ ಲಿಂಗಗನುಗುಣವಾಗಿ ವಿಭಿನ್ನವಾಗಿರುತ್ತದೆ.

ರಾಜಶೇಖರ ಭಾಸೂ (2011) ರವರು ಅಶ್ವಿನಿ ದೇಶಪಾಂಡೆ ರವರು ಬರೆದ "ದಿ ಗ್ರಾಮರ ಆಫ್ ಕಾಸ್ಟ- ಎಕನಾಮಿಕಲ್ ಡಿಸಕ್ರಿಮಿನೇಶನ ಇನ್ ಕಾಟೆಂಪ್ರರಿ ಇಂಡಿಯಾ" ಪುಸ್ತಕವನ್ನು ವಿಶ್ಲೇಷಿಸುತ್ತಾ ಈ ಕೆಳಗಿನ ಅನಿಸಿಕೆಗಳನ್ನು ವ್ಯಕ್ತಪಡಿಸುತ್ತಾರೆ. ಲೇಖಕರು ಸಮಾಜದಲ್ಲಿಯ ಅಸಮಾನತೆಯು ಜಾತಿ ಮತ್ತು ಉದ್ಯೋಗಗಳ ನಡುವಿನ ಸಂಬಂಧದೊಂದಿಗೆ ನೋಡಿದ್ದಾರೆ. 1990ರಲ್ಲಿ ಭಾರತದಲ್ಲಿಯ ಅನೇಕ ದಲಿತ ಚಳುವಳಿಗಾರರು ದೇಶದಲ್ಲಿರುವ ಜಾತಿ ಪದ್ಧತಿಯು, ಪಾಶ್ಚಿಮಾತ್ಯ ದೇಶಗಳಲ್ಲಿರುವ ವರ್ಣಭೇದ ಪದ್ದತಿಯೊಂದಿಗೆ ಹೋಲಿಸಿದ್ದಾರೆ ಮತ್ತು ದರ್ಬನ್ ಸಮ್ಮೇಳನಕ್ಕಿಂತ ಮೊದಲು ಭಾರತದಲ್ಲಿ ದಲಿತ ಬುದ್ಧಿಜೀವಿಗಳ ಜಾತಿ ಮತ್ತು ವರ್ಣಭೇದವು ಬಹುತೇಕವಾಗಿ ಒಂದೇ ತರಹದ್ದಾಗಿತ್ತು ಎಂದು ಭಾವಿಸಿಕೊಂಡಿದ್ದರು. ಬಹಳ ಹಿಂದೇ ಅನೇಕ ಸಮಾಜ ಶಾಸ್ತ್ರಜ್ಞರು ಭಾರತದಲ್ಲಿ ಜಾತಿ ವ್ಯವಸ್ಥೆಯು ಬಹಳ ಪ್ರಬಲವಾಗಿದೆ ಎಂದು ಹೇಳಿದ್ದಾರೆ ಮತ್ತು ಇದು ಶುದ್ಧತೆ ಮತ್ತು ಮಲಿನತೆಯ ದೃಷ್ಟಿಯಿಂದ ಎಂದು ಉಲ್ಲೇಖಿಸಿದ್ದರೆ ಅಶ್ವಿನಿ ದೇಶಪಾಂಡೆ (2014)ಯವರು ತಮ್ಮ ಪುಸ್ತಕದಲ್ಲಿ ಅಸಮಾನತೆ ಮತ್ತು ಬಡತನವನ್ನು ಆರ್ಥಿಕತೆಯ ಸಮಾನತೆ ತತ್ವವನ್ನು ತಿಳಿದುಕೊಳ್ಳಲು ಜಾತಿಯು ಪ್ರಮುಖವಾದ ಗುಂಪು ಎಂದು ಪ್ರತಿಪಾದಿಸಿದ್ದಾರೆ. ಇನ್ನು ಜಾತಿ ವರ್ಗಗಳ ಬಗ್ಗೆ ಹೇಳುವುದಾದರೆ ಕೆಳಜಾತಿಯವರು ಕಡಿಮೆ ಸಂಬಂಧ ಮತ್ತು ಕಡಿಮೆ ಪ್ರತಿಷ್ಠಿತ ಉದ್ಯೋಗಗಳನ್ನು ಪಡೆದಿದ್ದಾರೆ ಮತ್ತು ಮೇಲ್ಜಾತಿಯವರು ಆಧುನಿಕ ಉದ್ಯೋಗಗಳನ್ನು ಪಡೆವುದರಲ್ಲಿ ಯಶಸ್ವಿಯಾಗಿದ್ದಾರೆಯೆಂದು ಉಲ್ಲೇಖಿಸುತ್ತಾರೆ.

ಸುಬ್ರತಾ ಮುಖರ್ಜಿ ಮತ್ತು ಇತರರು (2011) "ಸೋಷಿಯಲ್ ಕ್ಲಾಸ್ ರಿಲೇಟೆಡ್ ಇನ್‌ಇಕ್ವಾಲಿಟಿಸ್ ಇನ್ ಹೌಸ್‌ಹೋಲ್ಡ್ ಹೆಲ್ತ್ ಎಕ್ಸ್‌ಪೆಂಡಿಚರ್ ಆಯಿಂಡ್ ಎಕೊನೊಮಿಕ್ ಬರ್ಡನ್: ಎವ್ವಿಡೆನ್ಸ್ ಫ್ರಮ್ ಕೇರಳ, ಸೌತ್ ಇಂಡಿಯಾ" ಎಂಬ ಲೇಖನದಲ್ಲಿ ಜಾತಿಯಾಧಾರಿತ ಅಸಮಾನತೆಯ ಕುಟುಂಬಗಳು ಆರೋಗ್ಯಕ್ಕಾಗಿ ಮಾಡಿದ ಸ್ವಂತ ಖರ್ಚನ್ನು ತಿಳಿದುಕೊಳ್ಳುವ ದೃಷ್ಟಿಯಿಂದ ಭಾರತದ ಕೇರಳ ರಾಜ್ಯದ ಕೊಂತಾದ ಪಂಚಾಯಿತಿನ 543 ಕುಟುಂಬಗಳನ್ನು 2003–04ರಲ್ಲಿ 12 ತಿಂಗಳ ಒಂದು ಫಲಕ (ಫ್ಯಾನಲ್) ಸಮೀಕ್ಷೆಯ ವಿಧಾನದ ಮೂಲಕ ಸಂದರ್ಶಿಸಿ ಆರೋಗ್ಯ ಬಳಕೆಯ ಬಗ್ಗೆ ಮಾಹಿತಿಯನ್ನು ಸಂಗ್ರಹಿಸಲಾಯಿತ್ತು. ಈ ಮಾಹಿತಿಯನ್ನು ಬಳಸಿಕೊಂಡು ಕುಟುಂಬಗಳಿಗೆ ಆರೋಗ್ಯದ ಅವಶ್ಯಕತೆ ಮತ್ತು ಬಳಕೆ ಮಾಡಿಕೊಂಡ ವಿಧಗಳನ್ನು ಗಣನೆಗೆ ತೆಗೆದುಕೊಂಡು ತಲಾ ಆದಾಯದನುಸಾರವಾಗಿ ಆರೋಗ್ಯಕ್ಕಾಗಿ ಮಾಡುವ ಸ್ವಂತ ಖರ್ಚನ್ನು ವಿವಿಧ ಜಾತಿಗಳ ಕುಟುಂಬಗಳಿಗನುಸಾರವಾಗಿ ವಿಶ್ಲೇಷಣೆಯನ್ನು ಮಾಡಲಾಗಿದೆ. ಇವರು ಜಾತಿಯಾಧಾರಿತ ಆರೋಗ್ಯದ ಖರ್ಚಿನ ಅಸಮಾನತೆಯನ್ನು ಬಹು ಉದ್ದೇಶಿತ ಹಿಂಜರಿಕೆಯ ವಿಧಾನವನ್ನು ಬಳಸಿಕೊಂಡು ನೋಡಲಾಗಿದೆ. ಆರೋಗ್ಯದ ಖರ್ಚಿನ ಹೊರೆಯನ್ನು ಗೊತ್ತು ಮಾಡಲು ಆರೋಗ್ಯಕ್ಕಾಗಿ ಹೆಚ್ಚಿನ ಖರ್ಚನ್ನು ಮಾಡುವ ಕುಟುಂಬಗಳು ಮತ್ತು ಈ ರೀತಿಯಾದ ಆರೋಗ್ಯದ ಖರ್ಚನ್ನು ನಿಭಾಯಿಸುವ ಆದಾಯದ ಮೂಲಗಳ ಬಗ್ಗೆ ವಿಶ್ಲೇಷಣೆ ಮಾಡುತ್ತಾ ಈ ಕೆಳಗಿನಂತೆ ತಮ್ಮ ನಿಲುವನ್ನು ವ್ಯಕ್ತಪಡಿಸುತ್ತಾರೆ. ಹೆಚ್ಚಿನ ಆರೋಗ್ಯದ ಅವಶ್ಯಕತೆಯನ್ನು ಹೊಂದಿರುವ ಕುಟುಂಬಗಳ ಆರೋಗ್ಯ ವೆಚ್ಚದ ಬೇಡಿಕೆಯು ಸಹ ಹೆಚ್ಚಾಗಿರುತ್ತದೆ ಇದರಿಂದ ಈ ಕುಟುಂಬಗಳು ಹೆಚ್ಚು ಅನಾನುಕೂಲತೆಯನ್ನು ಹೊಂದಿರುತ್ತವೆ. ಸಾಮಾನ್ಯವಾಗಿ ಹೆಚ್ಚು ಆರೋಗ್ಯದ ಬೇಡಿಕೆಯನ್ನು ಹೊಂದಿರುವ ಕುಟುಂಬಗಳು ಆರೋಗ್ಯದ ಮೇಲೆ ಹೆಚ್ಚಿಗೆ ವೆಚ್ಚ ಮಾಡುವ ಅಪಾಯದಲ್ಲಿವೆ. ಆಸ್ಪತ್ರೆಗೆ ದಾಖಲಾಗುವ ಖರ್ಚು ವಿಶೇಷವಾಗಿ ಹಿಂದುಳಿದ ಜಾತಿ ಕುಟುಂಬಗಳ ಮೇಲೆ ಅತ್ಯಂತ ಕೆಟ್ಟ ರೀತಿಯ ಪರಿಣಾಮ ಬೀರುತ್ತದೆ. ಆದ್ದರಿಂದ ಹಿಂದುಳಿದ ಜಾತಿ ಕುಟುಂಬಗಳಿಗೆ ವಿಶೇಷ ರೀತಿಯ ಹೆಚ್ಚಿನ ಖರ್ಚನ್ನು ನಿಭಾಯಿಸುವ ಕಾರ್ಯಕ್ರಮಗಳ ಅವಶ್ಯಕತೆಯಿದೆ. ಏಕೆಂದರೆ ಭಾರತದಲ್ಲಿ ಖಾಸಗಿ ಆರೋಗ್ಯದ ವೆಚ್ಚ ಮತ್ತು ಜನರು ತಮ್ಮ ಸ್ವಂತ ಹಣವನ್ನು ಹೆಚ್ಚಿನ ಪ್ರಮಾಣದಲ್ಲಿ ವ್ಯಯಿಸುತ್ತಿದ್ದಾರೆ ಇದು ಬಡತನ ರೇಖೆಯ ಕೆಳಗಿರುವ ಕುಟುಂಬಗಳ ಮೇಲೆ ಹೆಚ್ಚಿನ ಹಣಕಾಸಿನ ಹೊರೆಗೆ ಕಾರಣವಾಗುತ್ತದೆ.

ಸಂತೋಷ ಮೆಹ್ರೊತ್ರಾ (2010) ರವರು ತಮ್ಮ ಲೇಖನ "ಇನ್ಟ್ರೊಡುಸಿಂಗ್ ಕಂಡಿಷನಲ್ ಕ್ಯಾಷ ಟ್ರಾನ್ಸಫರ್ ಇನ್ ಇಂಡಿಯಾ: ಎ ಪ್ರೊಪಸಲ್ ಫಾರ್ ಫಾವ್ವಿ ಸಿ,ಸಿ,ಟಿಎಸ್." ದಲ್ಲಿ ಭಾರತದಲ್ಲಿ ಪುನರ್ ವಿತರಣೆ ಕಾರ್ಯಕ್ರಮಗಳು ಸಾಪೇಕ್ಷಿಕವಾಗಿ ಮತ್ತು ಪರಿಣಮಕಾರಿಯಾಗಿಲ್ಲ ಮತ್ತು ಬಡವರಿಗೆ ಅವುಗಳ ಲಾಭವು ಮುಟ್ಟಿಲ್ಲ. ಆದ್ದರಿಂದ ಈಗ ಸರಕಾರವು ನೇರವಾಗಿ ಕಾರ್ಯಕ್ರಮಗಳ ಬದಲಾಗಿ ಷರತ್ತುಬದ್ಧ ನಗದನ್ನು ಬಡವರಿಗೆ ವರ್ಗಾವಣೆಯ ಮೂಲಕ

ಅವರ ಏಳಿಗೆಯನ್ನು ಮಾಡುವಾಗ ಮತ್ತು ಈ ರೀತಿಯಾಗಿ ಷರತ್ತುಬದ್ಧ ನಗದನ್ನು ಬಡವರಿಗೆ ವರ್ಗಾವಣೆ ಮಾಡುವಾಗ ಕೆಲವೊಂದು ಬೇಡಿಕೆಯನ್ನು ಗಮನದಲ್ಲಿಟ್ಟು ಕೊಂಡು ರೂಪಿಸಬೇಕು. ಏಕೆಂದರೆ ಭಾರತದಲ್ಲಿ ಬಡತನ ರೇಖೆಯ ಕೆಳಗಿರುವ ಕುಟುಂಬಗಳು ಕೆಲವೊಂದು ತಪ್ಪಿನಿಂದ ಹೆಚ್ಚು ಕಡಿಮೆಯಾಗಿವೆ. ಷರತ್ತುಬಧ್ಧ ನಗದನ್ನು ಬಡವರಿಗೆ ವರ್ಗಾವಣೆ ಮಾಡುವಾಗ ಐದು ಅಂಶಗಳನ್ನು ಗಮನದಲ್ಲಿಟ್ಟು ಕೇಂದ್ರ ಸರಕಾರವು ಈ ಕಾರ್ಯಕ್ರಮವನ್ನು ಜಾರಿಯಲ್ಲಿ ತರಬಹುದು. ಈ ರೀತಿಯಾಗಿ ಮಾಡಬೇಕಾದರೆ ಸರ್ಕಾರವು ಇನ್ನೂ ಪೂರ್ವಸಿದ್ದತೆಗಳನ್ನು ಮಾಡಿಕೊಂಡಿಲ್ಲ. ಇದರಿಂದ ನಗದು ವರ್ಗಾವಣೆಯು ಷರತ್ತುಬದ್ದವಾಗಿರಬಹುದು ಅಥವಾ ಷರತ್ತು ಇಲ್ಲದೆ ಇರಬಹುದು. ಈ ರೀತಿಯಾಗಿ ಸದ್ಯ ಜಾರಿಯಲ್ಲಿರುವ ಸರ್ಕಾರದ ಕಾರ್ಯಕ್ರಮಗಳಿಗೆ ಈ ಕಾರ್ಯಕ್ರಮದಿಂದ ಅಪಾಯವಿರುವುದರಿಂದ ಮತ್ತು ಕೆಲವೊಂದು ಕಠಿಣ ಸಮಸ್ಯೆಗಳು ಎದುರಾಗಬಹುದು. ಈ ಕಾರ್ಯಕ್ರಮಕ್ಕೆ ಯಾವುದೇ ರೀತಿಯಾದ ಹಣಕಾಸಿನ ಸಮಸ್ಯೆಯಾಗುವುದಿಲ್ಲ ಏಕೆಂದರೆ ಈಗಿರುವ ರಿಯಾಯಿತಿ ದರದ ಕಾರ್ಯಕ್ರಮಗಳ ಅಥವಾ ಯೋಜನೆಗಳ ಹಣವನ್ನು ಇದಕ್ಕೆ ಬಳಸಿಕೊಳ್ಳಬಹುದು. ಭಾರತದಲ್ಲಿ ಷರತ್ತುಬದ್ದ ನಗದು ವರ್ಗಾವಣೆಯನ್ನು ಜಾರಿಯಲ್ಲಿ ತರುವುದರಿಂದ ಹಣದ ಅವಶ್ಯಕತೆ ಇರುವ ಬಡವರಿಗೆ ಅನುಕೂಲವಾಗುತ್ತದೆ.

1973–74 ರಿಂದ 1993–94ರ ವರೆಗಿನ ಎರಡು ದಶಕಗಳ ಅವಧಿಯಲ್ಲಿ ಬಡವರ ಸಂಖ್ಯೆ ಕಡಿಮೆಯಾಗಿಲ್ಲ ಆದರೆ ಬಡವರ ತಲೆ ಎಣಿಕೆಯ ಪ್ರಮಾಣದಲ್ಲಿ ಇಳಿಕೆಯಾಗಿದೆ. ಶೇ.92ರಷ್ಟು ಅಸಂಘಟಿತ ಕಾರ್ಮಿಕರು ಅನೌಪಚಾರಿಕ ಉದ್ಯೋಗಗಳಲ್ಲಿ ದುಡಿಯುವುದರಿಂದ ಇವರ ಆದಾಯವು ಕಡಿಮೆ ಇದ್ದು ಮತ್ತು ಇವರು ಯಾವುದೇ ಸಾಮಾಜಿಕ ನೆರವನ್ನು ಪಡೆಯುತ್ತಿಲ್ಲ. ಈ ರೀತಿಯಾಗಿ ಕೆಲಸದಲ್ಲಿ ನಿರತರಾದವರಿಗೆ ಯಾವುದೇ ರೀತಿಯ ಸಾಮಾಜಿಕ ಭದ್ರತೆ ಇಲ್ಲ ಮತ್ತು ಇದು ಯಾವುದೇ ನಾಗರಿಕ ಸಮಾಜವು ಮಾನವೀಯತೆಯ ದೃಷ್ಟಿಯಿಂದ ಒಪ್ಪಿಕೊಳ್ಳಲು ಸಾಧ್ಯವಿಲ್ಲ. ಆದ್ದರಿಂದ ಇವರಿಗೆ ನಗದಿನ ರೂಪದಲ್ಲಿ ಕೆಲವೊಂದು ಸಾಮಾಜಿಕ ನೆರವು ಸಿಗುವಂತಾಗಬೇಕು. ಸಾಮಾಜಿಕ ಮರುವಿತರಣೆಯ ಅವಶ್ಯಕತೆಯಿದೆ ಏಕೆಂದರೆ ಭಾರತಿಯ ಅರ್ಥವ್ಯವಸ್ಥೆಯು ಹೆಚ್ಚು ಸಮಗ್ರತೆಯಿಂದ ಕೂಡಿದ್ದು ಸಾಮಾಜಿಕ ಸುರಕ್ಷಾ ಪರದೆಗಳು ಬಹಳ ಪರಿಣಾಮಕಾರಿಯಾಗಿ ಇರುವ ಪ್ರಸ್ತುತ ಪುನರ್ವಿಂಗಡಣೆಯ ಕಾರ್ಯಕ್ರಮಗಳು ಕಡಿಮೆ ಸೋರಿಕೆಯಿಂದ ಕೂಡಿರುವ ಕಾರ್ಯಕ್ರಮಗಳ ಅವಶ್ಯಕತೆ ಹಿಂದೆಂದಿಗಿಂತಲೂ ಹೆಚ್ಚಿನ ಅಗತ್ಯವಿದೆ.

ಅಂತರಾಷ್ಟ್ರೀಯ ಅನುಭವದ ಪ್ರಕಾರ ಸಾಮಾಜಿಕ ಒಪ್ಪಂದದ ಅಗತ್ಯತೆಯನ್ನು ಎತ್ತಿ ತೋರಿಸಿವೆ ಮತ್ತು ಜೆ.ಡಿ.ಪಿ.ಯ ಹೆಚ್ಚಿನ ಹಣವನ್ನು ಸಾಮಾಜಿಕ ವರ್ಗಾವಣೆಯ ಪ್ರಮುಖ ಸೂಚಕಗಳಾದ ಆರೋಗ್ಯ, ಶಿಕ್ಷಣ ಮತ್ತು ಸಾಮಾಜಿಕ ಭದ್ರತೆಯ ಮೇಲೆ ಹೆಚ್ಚಿನ ಹಣವನ್ನು ವ್ಯಯಿಸಬೇಕು. ಭಾರತದಲ್ಲಿ ಸ್ಪಷ್ಟವಾಗಿ, ಪರಿಣಾಮಕಾರಿಯಲ್ಲದ ಮತ್ತು ತಾತ್ಕಾಲಿಕ ಬಡತನ

ನಿವಾರಣೆಯ ಬಹಳಷ್ಟು ಕಾರ್ಯಕ್ರಮಗಳ ಹೊರತಾಗಿಯೂ ಆರ್ಥಿಕ ಮಾರುಕಟ್ಟೆಯಲ್ಲಿ ಸಾಧಾರಣವಾಗಿದೆ. ಗುರಿಯಿಲ್ಲದ ಅಥವ ಉದ್ದೇಶಿತ ಅನುದಾನಗಳು ಈಗ ಬದಲಾಯಿಸುವ ಅಗತ್ಯವಿದೆ. ವಿಶೇಷವಾಗಿ 2008ರ ನಂತರ ಆರ್ಥಿಕ ಬಿಕ್ಕಟ್ಟಿನ ನಂತರ ಉತ್ತಮ ಪ್ರಚೋದಕಗಳನ್ನು ಅರಗಿಸಿಕೊಳ್ಳಲಾಗಲಿಲ್ಲ. ಈ ಮೇಲಿನ ಎಲ್ಲ ರೀತಿಯಿಂದ ನೋಡಿದಾಗ ಈಗಾಗಲೇ ಚಾಲ್ತಿಯಲ್ಲಿರುವ ಮತ್ತು ಲ್ಯಾಟೀನ್ ಅಮೇರಿಕ ದೇಶಗಳ ಅನುಭವಗಳನ್ನು ಬಳಸಿಕೊಂಡು ಬಡವರಿಗೆ ಷರತ್ತುಬದ್ಧ ನಗದು ವರ್ಗಾವಣೆಯನ್ನು ಮಾಡುವ ಕಾರ್ಯಕ್ರಮಗಳನ್ನು ಮಾಡಬೇಕು. ಒಂದು ವೇಳೆ ಈ ಯೋಜನೆಯು ಭಾರತದಲ್ಲಿ ಯಶಶ್ವಿಯಾಗಬೇಕಾದರೆ ಮೂರು ಪ್ರಮುಖ ಸವಲತ್ತುಗಳನ್ನು ಹೊಂದಿರಲೇಬೇಕಾಗುತ್ತದೆ. ಮೊದಲನೆಯದಾಗಿ ಬಡತನ ರೇಖೆಯ ಕೆಳಗಿರುವ ಕುಟುಂಬಗಳನ್ನು ಗುರಿಯಾಗಿಟ್ಟುಕೊಂಡಿರಬೇಕು. ಇದಕ್ಕೂ ಮೊದಲು 1992, 1999 ಮತ್ತು 2002ರ ಗ್ರಾಮೀಣ ಜನಗಣತಿಯಲ್ಲಿ ಈ ಕುಟುಂಬಗಳ ಸಂಖ್ಯೆಯು ಹೆಚ್ಚು ಕಡಿಮೆಯಾಗಿದೆ. ಈ ತಪ್ಪನ್ನು ಹೊಸ ವಿಧಾನಗಳನ್ನು ಬಳಸಿಕೊಂಡು ನೇರವಾಗಿ ಪರೀಶಿಲಿಸುವ, ಸರಳವಾದ, ಪಾರದರ್ಶಕವಾದ ಮತ್ತು ನೇರವಾಗಿ ಗ್ರಹಿಸುವ ಲಕ್ಷಣಗಳುಳ್ಳ ವಿಧಾನಗಳಿಂದ ಬಡವರನ್ನು ಗುರುತಿಸಬೇಕು. ಪಾರದರ್ಶಕತೆಯಿಂದ ಬಡವರಲ್ಲದವರನ್ನು ಬಿಟ್ಟು ಕಡುಬಡವರನ್ನು ಸೇರಿಸಿಕೊಂಡು ಉಳಿದವರನ್ನು ವಿವಿಧ ರೀತಿಯ ಮನಿ ಮೆಟ್ರಿಕ್ ಮಾನದಂಡಗಳ ಮೂಲಕ ಬಿಟ್ಟು ಹೋದ ಕುಟುಂಬಗಳನ್ನು ಸೇರಿಸಿಕೊಂಡು ಬಡವರಲ್ಲದವರನ್ನು ಸೇರಿಸಿದರೆ ಅವರನ್ನು ಪಟ್ಟಿಯಿಂದ ಕೈ ಬಿಟ್ಟು ಕೇಂದ್ರ ಅಥವಾ ರಾಜ್ಯ ಸರಕಾರಗಳಲ್ಲಿ ಲಭ್ಯವಿರುವ ಆರ್ಥಿಕ ಸಂಪನ್ಮೂಲಗಳ ಪ್ರಕಾರ ಬಿ.ಪಿ.ಎಲ್. ಕುಟುಂಬಗಳ ಗಾತ್ರವನ್ನು ನಿರ್ಧರಿಸಬಹುದಾಗಿದೆ. ಎರಡನೆಯದು ಎಲ್ಲಾ ನಾಗರಿಕರ ಬಯೊಮೇಟ್ರಿಕ್‌ನ್ನು ನಿಜವಾದ ಫಲಾನುಭವಿಗೆ ಮುಟ್ಟಿದೆಯೋ ಅಥವ ಇಲ್ಲವೆಂಬುವುದನ್ನು ತಿಳಿದುಕೊಳ್ಳಲು ಸಿಧ್ಧತೆಯನ್ನು ಮಾಡಿಕೊಳ್ಳಬೇಕು. ಮೂರನೇಯದು, ಈ ಯೋಜನೆಯ ಹಣದ ವರ್ಗಾವಣೆಯು ಬ್ಯಾಂಕ್ ಅಥವಾ ಅಂಚೆ ಕಛೇರಿಯ ಮೂಲಕ ನಗದು ವರ್ಗಾವಣೆ ಇರುವದರಿಂದ ಈ ಸೇವೆಗಳು ಎಲ್ಲ ನಾಗರಿಕರಿಗೂ ಸರಳವಾಗಿ ಮತ್ತು ಸುಲಭವಾಗಿ ದೊರಕುವ ಹಾಗೆ ವ್ಯವಸ್ಥೆ ಮಾಡಿರಬೇಕು ಇಲ್ಲದ್ದರೆ ಬಂದ ಹಣಕಾಸಿನ ನೆರವು ಸಾಂದರ್ಭಿಕ ಖರ್ಚುಗಳಾದ ಬ್ಯಾಂಕ್ ಅಥವಾ ಅಂಚೆ ಕಛೇರಿಗೆ ಪ್ರಯಾಣದ ಖರ್ಚು, ಸಮಯ ಮತ್ತು ಪ್ರಯಾಣದಿಂದಾಗುವ ಕೂಲಿಯ ನಷ್ಟವನ್ನು ಬಡವರು ಅನುಭವಿಸಬೇಕಾಗುತ್ತದೆ. ಈ ಮೂರು ಸೇವೆಗಳನ್ನು ಸ್ಥಾಪಿಸಿ ಯೋಜನೆ ಅನುಷ್ಠಾನಗೊಂಡರೆ ಯೋಜನೆಯು ಯಶಸ್ವಿಯಾಗುವದರಲ್ಲಿ ಸಂದೇಹವಿಲ್ಲ ಎಂದು ಲೇಖಕರು ಅಭಿಪ್ರಾಯಪಡುತ್ತಾರೆ.

ಎಚ್. ಎಸ್. ಗೋಪಲರಾವ್ ಆ್ಯಂಡ ಎಂ.ಶ್ರೀಪತಿರಾವ್ (1975) "ಸ್ಮಾಲ್ ಫಾರಮರ್ ಮತ್ತು ಅಗ್ರಿಕಲ್ಚರಲ್ ಪ್ರೆಜಿಸ್"– ಎ ಕೇಸ್ ಆಫ್ ಕಾಟನ್ ಎಂಬ ಸಂಶೋಧನೆಯು ಕರ್ನಾಟಕ ರಾಜ್ಯದ ಹುಬ್ಬಳ್ಳಿ ಕೃಷಿ ಉತ್ಪನ ಮಾರುಕಟ್ಟೆಯಲ್ಲಿನ ಖರೀದಿದಾರರ ದಾಖಲೆಯನ್ನು

ಆಧಾರವಾಗಿಟ್ಟುಕೊಂಡು 1974-75 (ಅಂದರೆ ಜುಲೈ 1974 ರಿಂದ ಜೂನ್ 1975) ರವರೆಗೆ ಆದ ವ್ಯಾಪಾರವನ್ನು ದೃಷ್ಟಿಯಲ್ಲಿ ಇಟ್ಟುಕೊಂಡು ಅನುವಂಶಿಕ ಮಾಹಿತಿಯ ಮೇಲೆ ಅಭ್ಯಸಿಸಲಾಗಿದೆ. ಇದರ ಮೂಲ ಉದ್ದೇಶ ದೊಡ್ಡ ರೈತರೊಂದಿಗೆ ಹೋಲಿಸಿ ನೋಡಿದಾಗ ಸಣ್ಣ ರೈತರು ತಾವು ಬೆಳೆದಿರುವ ಅಲ್ಪ ಪ್ರಮಾಣದ ಸರಕಿಗೆ ಕಡಿಮೆ ದರದಲ್ಲಿ ತಮ್ಮ ಸರಕನ್ನು ಮಾರಾಟ ಮಾಡುತ್ತಾರೆ ಎಂದು ತಿಳಿದುಕೊಳ್ಳಲು ಕೈಗೆತ್ತಿಕೊಳ್ಳಲಾಗಿತ್ತು. ಇದರಿಂದ ಸಂಶೋಧಕರು ಈ ಕೆಳಗಿನ ತೀರ್ಮಾನಕ್ಕೆ ಬರುತ್ತಾರೆ. ಬಹಳ ಗಂಭೀರವಾಗಿ ಅಥವಾ ತಿವ್ರತೆಯಲ್ಲಿ ದೊಡ್ಡ ರೈತರು ಮತ್ತು ಸಣ್ಣ ರೈತರ ನಡುವೆ ಅಂದರೆ ಅವರು ಮಾರಾಟ ಮಾಡುವ ಸರಕಿನ ಬೆಲೆಯಲ್ಲಿ ತಾರತಮ್ಯವಿದೆ. ಏಕೆಂದರೆ ಸಣ್ಣ ರೈತರ ಒಟ್ಟು ಕಾಂಟಿಟಿಯು ಬಹಳ ಕಡಿಮೆ ಇರುತ್ತದೆ. ಆದ್ದರಿಂದ ಸಣ್ಣ ರೈತರ ಸಹಕಾರಿ ಸಂಘಗಳನ್ನು ಸ್ಥಾಪಿಸಿ ಮಾರಾಟ ಮಾಡುವುದರಿಂದ ಸಮಾನತೆಯನ್ನು ಕಾಣಬಹುದೆಂದು ಹೇಳುತ್ತಾರೆ. ಸಂಘಗಳಿಂದ ಸಣ್ಣ ರೈತರು ತಾವು ಬೆಳೆದಿರುವ ಬೆಳೆಗಳನ್ನು ಮಾರುಕಟ್ಟೆಗೆ ತಂದು ಅವುಗಳನ್ನು ಗುಣಮಟ್ಟಕ್ಕನುಗುಣವಾಗಿ ವಿಂಗಡಿಸಿ ಹೆಚ್ಚಿನ ಬೆಲೆಯನ್ನು ಪಡೆಯಬಹುದಾಗಿದೆ.

ವಾಸವಿ (1999) "ಅಗ್ರೆರಿಯನ್ ಡಿಸಟ್ರೆಸ್ಸ ಇನ್ ಬೀದರ ಮಾರ್ಕೆಟ್ ಲ್ಯಂಡ ಸುಸೈಡ್" ಎಂಬ ಲೇಖನವು ಕರ್ನಾಟಕ ಸರ್ಕಾರವು ನೇಮಿಸಲ್ಪಟ್ಟ ರೈತರ ಆತ್ಮಹತ್ಯೆಗೆ ಸಂಬಂಧಪಟ್ಟ ವಿಚಾರಣೆಯ ಸಮಿತಿಯ ಸದ್ಯಸರಾಗಿದ್ದುಕೊಂಡು ರೈತರ ಆತ್ಮ ಹತ್ಯೆಗೆ ಕಾರಣಗಳನ್ನು ಶೋಧಿಸುತ್ತಾ ಈ ಕೆಳಗಿನಂತೆ ಹೇಳುತ್ತಾರೆ. ರೈತರ ಆತ್ಮಹತ್ಯಗೆ ನೈಸರ್ಗಿಕ , ಆರ್ಥಿಕ ಮತ್ತು ಸಾಮಾಜಿಕ ಕಾರಣಗಳ ಜೊತೆಗೆ ಸಣ್ಣ ಮತ್ತು ಅತಿ ಸಣ್ಣ ರೈತರಿಗೆ ಸಹಕಾರ ಸಂಘದಿಂದ ನಿಗದಿತ ಸಮಯದಲ್ಲಿ ಸಾಲ ಸಿಗದೇ ಇರುವುದು, ಸಾಲವನ್ನು ಪಡೆದುಕೊಳ್ಳಲು ಸಾಕಷ್ಟು ಭೂಮಿಯನ್ನು ಹೊಂದಿರದೇ ಇರುವುದು, ಜಾಮಿನಾಗಿ ಇಡಲು ಹೆಚ್ಚಿನ ಭೂಮಿ ಇರುವುದಿಲ್ಲ, ವಾಣಿಜ್ಯ ಬೆಳೆಗಳನ್ನು ಬೆಳೆಯಲು ಹೆಚ್ಚಿನ ಬಡ್ಡಿದರದ ಸಾಕಷ್ಟು ಸಾಲ, ಭೂ ಒಡೆತನ ಬಹಳಷ್ಟು ಛಿದ್ರವಾಗಿದ್ದು ಭೂ ಸುಧಾರಣೆಯಿಂದ ಸರಿಯಾಗಿ ಹಂಚಿಕೆಯಾಗಿಲ್ಲವೆಂದು ವಿವರಿಸುತ್ತಾ ಈ ಪ್ರದೇಶದಲ್ಲಿ ಅಸಮಾನತೆ ಅಥವಾ ಕೆಳಮಟ್ಟದ ರೈತರು ಆರ್ಥಿಕವಾಗಿ ಶೋಷಣೆಗೆ ಒಳಗಾಗುತ್ತಿದ್ದರೆ, ದೊಡ್ಡ ಭೂ ಹಿಡುವಳಿದಾರರು ಸಾಕಷ್ಟು ಭೂಮಿಯನ್ನು ಹೊಂದಿ ಅದರಿಂದ ಬರುವ ಲಾಭವನ್ನು ಮತ್ತು ತಮ್ಮಲ್ಲಿರುವ ಬಂಡವಾಳವನ್ನು ಹೂಡಿ ಆಧುನಿಕ ತಂತ್ರಜ್ಞಾನಗಳನ್ನು ಬಳಕೆ ಮಾಡಿಕೊಂಡು ವಾಣಿಜ್ಯ ಬೆಳೆಗಳನ್ನು ಬೆಳೆದು ಹೆಚ್ಚಿನ ಲಾಭವನ್ನು ಮಾಡಿಕೊಳ್ಳುತ್ತಿದ್ದಾರೆ. ಆದರೆ ಸಣ್ಣ ಮತ್ತು ಅತೀ ಸಣ್ಣ ರೈತರು ಹೊಂದಿರುವ ಭೂಮಿಯು ಕಡಿಮೆಯಿದ್ದು ಸಾಲ ಮಾಡಿ ವಾಣಿಜ್ಯ ಬೆಳೆಗಳನ್ನು ಬೆಳೆದರೂ ಬಂದ ಲಾಭವನ್ನು ಮಾಡಿದ ಸಾಲವನ್ನು ತೀರಿಸಲು ಸಾಕಾಗುವುದಿಲ್ಲ. ಈ ರೀತಿಯಗಿ ಸಣ್ಣ ರೈತರು ಬಂಡವಾಳವಿಲ್ಲದೆ ಮತ್ತು ಆಧುನಿಕ ತಂತ್ರಜ್ಞಾನವನ್ನು ಸಾಲಮಾಡಿ ತಂದಾಗ ಆ ವ್ಯಾಪಾರಸ್ಥರ ಸಾಲವನ್ನು ತೀರಿಸಲು ಆಗದೆ ಅವರು ಆತ್ಮಹತ್ಯೆಗೆ ಶರಣಾಗುತ್ತಾರೆ ಎಂದು ಉಲ್ಲೇಖಿಸಿತ್ತಾರೆ.

ಚಚಡಿ ಎನ್.ಜಿ. (1988) ರವರು "ದಿ ಇಂಟಿಗ್ರೇಟೆಡ್ ರೂರಲ್ ಡೆವಲಂಪ್‌ಮೆಂಟಲ್ ಪ್ರೋಗ್ರಮ್ ಆಂಡ್ ರೂರಲ್ ಪಾವರ್ಟಿ ಇನ್ ಕರ್ನಾಟಕ – ಎ ಕೇಸ್ ಸ್ಟಡಿ ಆಫ್ ಧಾರವಾಡ ಡಿಸ್ಟಿಕ್" ಎಂಬ ಕರ್ನಾಟಕ ವಿಶ್ವವಿದ್ಯಾಲಯಕ್ಕೆ ಸಾದರಪಡಿಸಿದ ಸಂಶೋಧನೆಯು 1978–79ರಲ್ಲಿ ಪ್ರಾರಂಭವಾದ ಐ.ಆರ್.ಡಿ.ಪಿ. ಯೋಜನೆಯ ಪರಿಣಾಮವನ್ನು ತಿಳಿದುಕೊಳ್ಳಲು ಧಾರವಾಡ ಜಿಲ್ಲೆಯಲ್ಲಿದ್ದ 17 ತಾಲ್ಲೂಕುಗಳನ್ನು ಸಂಪೂರ್ಣ ಅಭಿವೃದ್ಧಿ ಹೊಂದಿದ, ಅಭಿವೃದ್ಧಿ ಹೊಂದದ, ಅಭಿವೃದ್ಧಿ ಹೊಂದುತ್ತಿರುವ ಮತ್ತು ಹಿಂದುಳಿದ ತಾಲ್ಲೂಕುಗಳಾಗಿ ವಿಂಗಡಿಸಿ ಮೊದಲನೆಯ ಮತ್ತು ಕೊನೆಯ ಗುಂಪಿನಲ್ಲಿ ಬರುವ ನರಗುಂದ ಮತ್ತು ಮುಂಡರಗಿ ತಾಲ್ಲೂಕುಗಳನ್ನು ಆಯ್ಕೆ ಮಾಡಿಕೊಂಡು 200 ಐ.ಆರ್.ಡಿ.ಪಿ. ಯೋಜನೆಯ ಫಲಾನುಭವಿಗಳನ್ನು, ವೈಯುಕ್ತಿಕ ಸಂದರ್ಶನದ ಮೂಲಕ 1987ರ ಏಪ್ರಿಲ್ ಮತ್ತು ಮೇ ತಿಂಗಳಲ್ಲಿ ಮಾಹಿತಿಯನ್ನು ಸಂಗ್ರಹಿಸಲಾಗಿತ್ತು. ಈ ರೀತಿಯಾಗಿ ಆಯ್ಕೆ ಮಾಡಿಕೊಂಡ ತಾಲ್ಲೂಕಗಳಾದ ನರಗುಂದವು ನೀರಾವರಿಯಿಂದ ಕೂಡಿದೆ ಹಾಗೂ ಮುಂಡರಗಿಯು ಸದಾ ಬರಗಾಲಕ್ಕೆ ತುತ್ತಾಗುತ್ತಿರುವುದಕ್ಕೊಸ್ಕರ ಆಯ್ಕೆ ಮಾಡಿಕೊಂಡು ಐ.ಆರ್.ಡಿ.ಪಿ. ಮತ್ತು ಬಡತನವನ್ನು ತುಲನಾತ್ಮಕವಾಗಿ ನೋಡಲಾಗಿದೆ. ಈ ಯೋಜನೆಯಿಂದಾದ ಪರಿಣಾಮವನ್ನು ನೋಡುವ ದೃಷ್ಟಿಕೋನದಿಂದ ಈ ಸಂಶೋಧನೆಯನ್ನು ಮಾಡಲಾಗಿದೆ.

ಗ್ರಾಮೀಣ ಬಡತನವನ್ನು ಭೂರಹಿತ ಕಾರ್ಮಿಕರು, ಸಣ್ಣ ಮತ್ತು ಅತಿ ಸಣ್ಣ ರೈತರು, ಗ್ರಾಮೀಣ ಕರಕುಶಲಗಾರರು, ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡ ಮತ್ತು ಸಾಮಾಜಿಕ ಮತ್ತು ಆರ್ಥಿಕವಾಗಿ ಹಿಂದುಳಿದ ವರ್ಗಗಳನ್ನು ಪರಿಗಣನೆಗೆ ತೆಗೆದುಕೊಂಡು ಒಟ್ಟು ಗ್ರಾಮೀಣ ಜನಸಂಖ್ಯೆಯೊಂದಿಗೆ ಹೋಲಿಕೆ ಮಾಡಿದ್ದಾರೆ. ಈ ಸಂಶೋಧನೆಯಿಂದ ಸಂಶೋಧಕರು ಈ ಕೆಳಗಿನ ತೀರ್ಮಾನಗಳನ್ನು ಮಂಡಿಸಿರುತ್ತಾರೆ. ಸಮಗ್ರ ಗ್ರಾಮೀಣ ಅಭಿವೃದ್ಧಿಯೊಂದಿಗೆ ಯೋಜನೆಯಲ್ಲಿ ಅಂದರೆ ಐ.ಆರ್.ಡಿ.ಪಿ. ಶೇ.23% ರಷ್ಟು ಫಲಾನುಭವಿಗಳ ಆಯ್ಕೆಯು ತಪ್ಪಾಗಿರುತ್ತದೆ ಮತ್ತು ಆಯ್ಕೆಗೆ ಇರುವ ಮಾನದಂಡಗಳನ್ನು ಪರಿಪೂರ್ಣವಾಗಿ ಅನುಸರಿಸಿಲ್ಲ ಎಂದು ಸಂಶೋಧನೆಯಿಂದ ಕಂಡುಕೊಂಡಿದ್ದಾರೆ. ಕೆಲವೊಂದು ಫಲಾನುಭವಿಗಳು ಅವರಿಗೆ ಸಿಗಬೇಕಾದ ರಿಯಾಯಿತಿಗಿಂತಲೂ ಹೆಚ್ಚಿನದನ್ನು ಪಡೆದುಕೊಂಡಿದ್ದಾರೆ. ಆದ್ದರಿಂದ ಬಡತನ ನಿರ್ಮೂಲನೆ ಮಾಡುವ ಪ್ರಮುಖ ಉದ್ದೇಶವಿಟ್ಟುಕೊಂಡು ಪ್ರಾರಂಭವಾದ ಐ.ಆರ್.ಡಿ.ಪಿ. ಯೋಜನೆಯಲ್ಲಿ ಶೇ.29.5ದಷ್ಟು ಫಲಾನುಭವಿಗಳು ಬಡತನ ರೇಖೆಗಿಂತ ಮೇಲಿನ ಜನರನ್ನು ಆಯ್ಕೆ ಮಾಡಿಕೊಂಡಾಗ ಬಡತನದ ರೂಪರೇಖೆಗಳಲ್ಲಿ ಬಹಳಷ್ಟು ಬದಲಾವಣೆಯಾಗುತ್ತದೆ ಎಂಬುದನ್ನು ತಮ್ಮ ಸಂಶೋಧನೆಯ ಮೂಲಕ ವ್ಯಕ್ತಪಡಿಸಿದ್ದಾರೆ. ಇವುಗಳಲ್ಲದೆ ಯೋಜನೆಯ ವಿಫಲತೆಗಳನ್ನು ಎತ್ತಿ ತೋರಿಸುತ್ತಾರೆ. ಈ ಯೋಜನೆಯು ಸಹ ತನ್ನದೇ ಆದ ಅನಾನುಕೂಲತೆಗಳನ್ನು ಹೊಂದಿದೆ ಮತ್ತು ಗ್ರಾಮೀಣ ಬಡತನವನ್ನು ಅಭ್ಯಸಿಸಲು ಬೇರೆ ವಿಧಾನ ಮತ್ತು ಪದ್ಧತಿಯನ್ನು

ಅಳವಡಿಸಿಕೊಳ್ಳಬೇಕೆಂದು ಸಂಶೋಧಕರು ಅಭಿಪ್ರಾಯವನ್ನು ಮಂಡಿಸಿರುತ್ತಾರೆ. ಈ ಸಂಶೋಧನೆಯಲ್ಲಿ ಬಡತನ ರೇಖೆಯ ಕೆಳಗಿರುವವರ ಅಭಿವೃದ್ಧಿಗಾಗಿ ಇರುವ ಯೊಜನೆಗಳನ್ನು ಬಡತನ ರೇಖೆಯ ಮೇಲಿರುವವರು ಬಳಸಿಕೊಂಡಿರುವುದು ಈ ಒಂದು ಅಧ್ಯಯನದಲ್ಲಿ ಕಂಡುಕೊಂಡಿದ್ದಾರೆ.

ಕೆ.ಜಿ.ಗಾಯತ್ರಿ ದೇವಿ (2008) ರವರು "ಪಾವರ್ಟಿ ಆ್ಯಂಡ್ ನ್ಯಾಚುರಲ್ ರಿಸೋರ್ಸಸ್: ಮೆಜರಿಂಗ್ ದಿ ಲಿಂಕ್ಸ (ಸಮ್ ಇಶ್ಯುಸ್ ಇನ್ ದಿ ಕಾಂಟೆಸ್ಟ್ ಆಫ್ ಕರ್ನಾಟಕ)" ತಮ್ಮ ಲೇಖನದಲ್ಲಿ ಬಡತನಕ್ಕೆ ಸುತ್ತ ಮುತ್ತಲಿನ ಪರಿಸರ ಅಂಶಗಳಾದ ಭೌತಿಕ, ಆರ್ಥಿಕ, ನೈತಿಕ ಮತ್ತು ಮಾನಸಿಕ ಅಂಶಗಳು ಹಲವಾರು ರೀತಿಯಲ್ಲಿ ಬಡತನಕ್ಕೆ ಪರಿಣಾಮವನ್ನುಂಟು ಮಾಡುವ ಪ್ರಮುಖವಾದ ಅಂಶಗಳಾಗಿವೆ. ಬಡತನಕ್ಕೆ ಸಂಬಂಧಪಟ್ಟಂತೆ ಸಾಂಪ್ರದಾಯಿಕ ವ್ಯಾಖ್ಯಗಳು ಮೂಲ ಸೌಕರ್ಯಗಳನ್ನು ಪಡೆದುಕೊಳ್ಳಲು ಆದಾಯದ ಕೊರತೆಯ ಮೇಲೆ ಬಡತನದ ವ್ಯಾಖ್ಯೆಯನ್ನು ರಚಿಸಲಾಗಿದೆ ಎಂದು ಲೇಖಕರು ಅಭಿಪ್ರಾಯ ಪಟ್ಟಿದ್ದಾರೆ.

ಅಮಿತಾ ಶಾ (2002) ರವರು ವಿವಿಧ ಅನುಷಂಗಿಕ ಮೂಲಗಳಿಂದ ಮಾಹಿತಿಗಳನ್ನು ಕಲೆಹಾಕಿ ಈ ಒಂದು ಲೇಖನವನ್ನು ಭಾರತದಲ್ಲಿರುವ ಒಣಭೂಮಿ ಪ್ರದೇಶ ಮತ್ತು ಅರಣ್ಯ ಆಧಾರಿತ ಪ್ರದೇಶಗಳಾಗಿ ವಿಂಗಡಿಸಿ ರಾಜ್ಯವಾರು ಮತ್ತು ರಾಜ್ಯದಲ್ಲಿನ ಪ್ರಾದೇಶಿಕವಾಗಿ ಮಾಹಿತಿಯನ್ನು ವಿಶ್ಲೇಷಿಸಿದ್ದಾರೆ. ಈ ರೀತಿಯಾಗಿ ವಿಶ್ಲೇಷಿಸಿದ ಮಾಹಿತಿಯನ್ನು ಕರ್ನಾಟಕಕ್ಕೆ ಸಂಬಂಧಪಟ್ಟಂತೆ ಈ ಕೆಳಗಿನಂತೆ ವಿಶ್ಲೇಷಿಸುತ್ತಾರೆ. ಕರ್ನಾಟಕದಲ್ಲಿ ಶೇ.68ರಷ್ಟು ಬಡವರು ಒಣ ಭೂ ಪ್ರದೇಶ ಕೇಂದ್ರಿಕೃತರಾಗಿದ್ದಾರೆ ಮತ್ತು ಇದು ಕರಾವಳಿ ಪ್ರದೇಶದಲ್ಲಿ ಶೇ.9.4ರಷ್ಟು ಈಶಾನ್ಯ ಒಳನಡಿನಲ್ಲಿ ಶೇ.13.7 ರಷ್ಟು ದಕ್ಷಿಣ ಒಳ ನಾಡಿನಲ್ಲಿ ಶೇ.29.46ರಷ್ಟು ಹಾಗೂ ಉತ್ತರ ಒಳ ನಾಡಿನಲ್ಲಿ ಶೇ.37.68ರಷ್ಟು ಬಡಕುಂಟುಂಬಗಳಿವೆ ಎಂದು ಅಭಿಪ್ರಾಯ ವ್ಯಕ್ತಪಡಿಸಿ ಮುಂದಿನ ಅಭಿವೃದ್ಧಿ ಯೋಜನೆಗಳು ಬಡವರು ಮತ್ತು ಕಡುಬಡವರನ್ನು ದೃಷ್ಟಿಯಲ್ಲಿ ಇಟ್ಟುಕೊಂಡು ಸರ್ವತೋಮುಖ ಅಭಿವೃದ್ಧಿಯಲ್ಲಿ ಗೆಲುವು ಸಾಧಿಸಬಹುದೆಂದು ತಮ್ಮ ನಿಲುವನ್ನು ವ್ಯಕ್ತಪಡಿಸುತ್ತಾರೆ.

ಕರ್ನಾಟಕ ರಾಜ್ಯ ಯೋಜನಾ ಮಂಡಳಿ (2008)ಯು ವಿಶ್ವಸಂಸ್ಥೆಯ ಸಹಸ್ರಮಾನ (ಮಿಲೇನಿಯಂ) ಅಭಿವೃದ್ಧಿ ಧ್ಯೇಯಗಳಲ್ಲಿ (ಎಂ.ಡಿ.ಜಿ.ಎಸ್) ನಿರ್ದಿಷ್ಟಪಡಿಸಲಾದ ಪ್ರಥಮ ಧ್ಯೇಯವು **'ತೀವ್ರ ಬಡತನ ಮತ್ತು ಹಸಿವನ್ನು ನಿರ್ಮೂಲನೆ ಮಾಡುವುದು'** 2004-05ನೇ ಸಾಲಿನಲ್ಲಿ ಗ್ರಾಮೀಣ ಕರ್ನಾಟಕದಲ್ಲಿ ಬಡತನ ತಲೆ ಎಣಿಕೆ ಅನುಪಾತ (ಎಚ್.ಸಿ.ಆರ್.) ಶೇ.20.8ರಷ್ಟಿತ್ತು ಮತ್ತು ಅದು ನಗರ ಕರ್ನಾಟಕದಲ್ಲಿ ಅದಕ್ಕಿಂತ ಹೆಚ್ಚು ಎಂದರೆ ಶೇ.32.6ರಷ್ಟಿತ್ತು. ಕರ್ನಾಟಕದ ಒಟ್ಟಾರೆ ಹೆಚ್.ಸಿ.ಆರ್. ಪ್ರಮಾಣ ಶೇ.25ರಷ್ಟಾಗಿ ನಗರ ಕರ್ನಾಟಕದ ಹೆಚ್.ಸಿ.ಆರ್. ಪ್ರಮಾಣವು ತನ್ನ ಎಲ್ಲ ನೆರೆಯ ರಾಜ್ಯಗಳಿಗಿಂತ ಹಾಗೂ ದೇಶದ ಸರಾಸರಿಗಿಂತ ಅಧಿಕವಾಗಿದೆ

ಎಂದು ಉಲ್ಲೇಖಿಸುತ್ತದೆ. ರಾಜ್ಯವು ವೇಗವಾಗಿ ನಗರೀಕರಣಗೊಳ್ಳುತ್ತಿರುವ ವಿಶೇಷ ಸಂದರ್ಭದಲ್ಲಿ ಇದು ಬಹಳ ಕಳವಳಕ್ಕೆ ಕಾರಣವಾಗಿದೆ. ಮುಂದುವರೆದು ಅಲ್ಪ ಪ್ರಮಾಣದ ಗ್ರಾಹಕ ವೆಚ್ಚದ ಬಗ್ಗೆ ವಿವರಿಸುತ್ತಾ ಕರ್ನಾಟಕದ ಜನರ ಮಾಸಿಕ ತಲಾ ಗ್ರಾಹಕ ವೆಚ್ಚದ ಮಟ್ಟವು ರಾಜ್ಯದ ಗ್ರಾಮೀಣ ಮತ್ತು ನಗರ ಪ್ರದೇಶಗಳೆರಡರಲ್ಲಿಯೂ ಕಡು ಬಡತನವಿದೆ ಎಂಬ ಅಂಶವನ್ನು ಬಹಿರಂಗಪಡಿಸುತ್ತದೆ. ನಾವು 365 ರೂಪಾಯಿಗಳಿಗಿಂತ ಕಡಿಮೆ ಮಾಸಿಕ ತಲಾ ಗ್ರಾಹಕ ವೆಚ್ಚವಿರುವ ಗ್ರಾಮೀಣ ಕುಟುಂಬಗಳ ಸಂಖ್ಯೆಯನ್ನು ಗಮನಿಸಿದಾಗ, ಇತರ ರಾಜ್ಯಗಳಿಗಿಂತ ಹಾಗೂ ರಾಷ್ಟ್ರೀಯ ಸರಾಸರಿಗಿಂತ ಕರ್ನಾಟಕವು ದುಸ್ಥಿತಿಯಲ್ಲಿದೆ. ಶೇ.30ಕ್ಕಿಂತ ಹೆಚ್ಚಿನ ಗ್ರಾಮೀಣ ಜನರು ಅಂದರೆ, ಗ್ರಾಮೀಣ ಕರ್ನಾಟಕದಲ್ಲಿನ ಒಂದು ಕೋಟಿಗಿಂತ ಹೆಚ್ಚು ಜನರು ಪ್ರತಿ ದಿನ ಪ್ರತಿ ವ್ಯಕ್ತಿ 12 ರೂಪಾಯಿಗಳಿಗಿಂತ ಕಡಿಮೆ ವೆಚ್ಚದ ಬದುಕನ್ನು ಸಾಗಿಸುತ್ತಿದ್ದಾರೆ ಎಂಬುದನ್ನು ಇದು ಸೂಚಿಸುತ್ತದೆ. ಮಾಸಿಕ ತಲಾ ಗ್ರಾಹಕ ವೆಚ್ಚದ ಎಲ್ಲ ವರ್ಗಗಳಲ್ಲಿ ಖರ್ಚು ಮಾಡುವ ಪ್ರಮಾಣ ಕಡಿಮೆ ಇದೆ. 890 ರೂಪಾಯಿಗಳಿಗಿಂತ ಹೆಚ್ಚು ಮಾಸಿಕ ತಲಾ ಗ್ರಾಹಕ ವೆಚ್ಚವಿರುವ ರಾಜ್ಯಗಳಿಗೆ ಹೋಲಿಸಿದಾಗಲೂ ಕರ್ನಾಟಕದ ಗ್ರಾಮೀಣ ಕುಟುಂಬಗಳ ಶೇಕಡವಾರು ಅತಿ ಕಡಿಮೆಯಿದೆ. ತಲಾ 335 ರೂಪಾಯಿಗಳಿಗಿಂತ ಕಡಿಮೆ ಮಾಸಿಕ ಗ್ರಾಹಕ ವೆಚ್ಚ ಇರುವ ನಗರ ಕುಟುಂಬಗಳ ಅತ್ಯಧಿಕ ಪಾಲು ರಾಜ್ಯದಲ್ಲಿರುವುದರಿಂದ ಮತ್ತು ತಲಾ 580 ರೂಪಾಯಿಗಳಿಗಿಂತ ಕಡಿಮೆ ಮಾಸಿಕ ತಲಾ ಗ್ರಾಹಕ ವೆಚ್ಚ ಇರುವ ನಗರ ಕುಟುಂಬಗಳು (ಆಂಧ್ರ ಪ್ರದೇಶದ ನಂತರ) ಎರಡನೇ ಅತ್ಯಧಿಕ ಶೇಕಡಾ ಪ್ರಮಾಣ ಹೊಂದಿರುವುದರಿಂದ ನಗರ ಕರ್ನಾಟಕದ ಸ್ಥಿತಿ ಅದಕ್ಕಿಂತ ಉತ್ತಮವಾಗೇನೂ ಇಲ್ಲ. ಅಂದರೆ ಸುಮಾರು 60ಲಕ್ಷ ಜನರು, ಒಬ್ಬ ವ್ಯಕ್ತಿ ಒಂದು ದಿನಕ್ಕೆ 19ರೂಪಾಯಿಗಳಿಗಿಂತ ಕಡಿಮೆ ಹಣದ ಮೇಲೆ ಬದುಕು ಸಾಗಿಸುತ್ತಿದ್ದಾರೆ ಎಂದು ಇದು ಗಮನ ಸೆಳೆಯುತ್ತದೆ.

ಬಡತನ ಕಡಿಮೆ ಮಾಡುವಲ್ಲಿ ಕಳಪೆ ಸಾಧನೆ ಇದೆ ಎಂದು ರಾಷ್ಟ್ರೀಯ ಮಾದರಿ ಸಮೀಕ್ಷಾ ಸಂಸ್ಥೆಯ (1994–95) 51ನೇ ಸುತ್ತಿನಲ್ಲಿ ಗ್ರಾಮೀಣ ತಲಾ ಮಾಸಿಕ ಗ್ರಾಹಕ ವೆಚ್ಚಕ್ಕೆ ಸಂಬಂಧಿಸಿದಂತೆ 13ನೇ ಸ್ಥಾನದಲ್ಲಿದ್ದರೆ, ಅದು 56ನೇ ಸುತ್ತಿನಲ್ಲಿ (2000–2001) 6ನೇ ಸ್ಥಾನಕ್ಕೇರಿತು. ಇದು 60ನೇ ಸುತ್ತಿನಿಂದ (2003–2004) 13ನೇ ಸ್ಥಾನಕ್ಕೆ ಇಳಿದಿದೆ ಎಂದು ತಿಳಿಸುತ್ತದೆ. ಬಡತನವು ನಗರ–ಗ್ರಾಮೀಣ ಪ್ರದೇಶಕ್ಕನುಗುಣವಾಗಿ ಅಸಮಾನತೆಯಿಂದ ಕೂಡಿದೆ ಮತ್ತು ಇದು ಕೂಲಿ, ಶಿಕ್ಷಣ ಮತ್ತು ಆರೋಗ್ಯ ಸೂಚ್ಯಂಕಗಳಲ್ಲಿ ಹಾಗೂ ಮೂಲ ಸೇವೆಗಳ ಲಭ್ಯತೆಗೆ ಸಂಬಂಧಿಸಿದಂತೆ ತಾರತಮ್ಯ ಅಧಿಕವಾಗಿದೆ. ರಾಜ್ಯಾದ್ಯಂತ ಇರುವ ಬಡತನದಲ್ಲಿಯೂ ಸಹ ಗಣನೀಯವಾಗಿ ಅಸಮಾನತೆ ಇದೆ. ರಾಯಚೂರಿನಲ್ಲಿ ರಾಜ್ಯ ಜನಸಂಖ್ಯೆಯ ಪೈಕಿ ಕೇವಲ ಶೇಕಡ 5.5ರಷ್ಟು ಜನಸಂಖ್ಯೆ ಇದೆ. ಆದರೆ ರಾಜ್ಯದ ಬಡವರ ಪೈಕಿ ಶೇ. 12.6ರಷ್ಟು ಜನ ಅಲ್ಲಿದ್ದಾರೆ. ರಾಯಚೂರು ಮತ್ತು ಕೋಲಾರದಲ್ಲಿ ಬಡತನದ ಅನುಪಾತ ಶೇ.40ಕ್ಕಿಂತಲೂ

ಅಧಿಕವಾಗಿದೆ. ಇದಕ್ಕೆ ತದ್ವಿರುದ್ಧವಾಗಿ ಚಿಕ್ಕಮಗಳೂರು ಮತ್ತು ಕೊಡಗು ಜಿಲ್ಲೆಗಳಲ್ಲಿ ಅತಿ ಕಡಿಮೆ ಅಂದರೆ ಅನುಕ್ರಮವಾಗಿ ಶೇ.2.3ರಷ್ಟು ಮತ್ತು ಶೇ. 4.9ರಷ್ಟು ಇದೆ. ಈ ಅಸಮಾನತೆಯು ಸಾಮಾಜಿಕ ಸೌಲಭ್ಯವಂಚಿತ ಸಮೂಹಗಳು ಬಳಕೆಯ ಮಟ್ಟಗಳನ್ನೂ ಒಳಗೊಂಡಂತೆ ಕಡಿಮೆ ಸಾಮಾಜಿಕ ಮತ್ತು ಆರ್ಥಿಕ ಸೂಚಕಗಳನ್ನು ಹೊಂದಿವೆ. ಪ.ಜಾ/ಪ.ಪಂ.ಗಳ ಇತರ ಹಿಂದುಳಿದ ವರ್ಗಗಳು ಮತ್ತು ಮುಸ್ಲಿಮರು ರಾಜ್ಯದಲ್ಲಿ ಅತ್ಯಧಿಕವಾಗಿ ಸೌಲಭ್ಯ ವಂಚಿತರಾಗಿರುವುದು ಸ್ಪಷ್ಟವಾಗಿದೆ. 2001ರಲ್ಲಿ ಪ.ಜಾ. ಮತ್ತು ಪ.ಪಂ.ಗಳ ಮಾನವ ಅಭಿವೃದ್ಧಿ ಸೂಚ್ಯಂಕವು 1991ರಲ್ಲಿ ರಾಜ್ಯದ ಮಾನವ ಅಭಿವೃದ್ಧಿ ಸೂಚ್ಯಂಕಕ್ಕೆ (0.54) ಹತ್ತಿರವಾಗಿತ್ತು. ರಾಜ್ಯ ನಗರ ತಲೆ ಎಣಿಕೆ ಅನುಪಾತವಾದ ಶೇ.32.7ಕ್ಕೆ ಹೋಲಿಸಿದಾಗ ನಗರದ ಪ.ಜಾ./ಪ.ಪಂ.ಗಳ ಮತ್ತು ಮುಸ್ಲಿಂರ ಬಡತನದ ಮಟ್ಟ ಅನುಕ್ರಮವಾಗಿ ಶೇ.54 ಮತ್ತು ಶೇ.49ರಷ್ಟಿದೆ. ಸಾಕ್ಷರತೆಗೆ ಸಂಬಂಧಿಸಿದಂತೆ, ಗ್ರಾಮೀಣ ಮತ್ತು ನಗರ ಪರಿಶಿಷ್ಟ ಜಾತಿ/ ಪರಿಶಿಷ್ಟ ಪಂಗಡಗಳ ಮಹಿಳೆಯರು ಶೇ.35ರಷ್ಟು ಮತ್ತು ಶೇ.59ರಷ್ಟು ಸಾಕ್ಷರತೆಯನ್ನು ಹೊಂದಿದ್ದು, ಇದು ಅನುಕ್ರಮವಾಗಿ ರಾಜ್ಯದ ಸಾಕ್ಷರತೆಯ ಮಟ್ಟವಾದ ಶೇ.48 ಮತ್ತು ಶೇ.74ಕ್ಕಿಂತ ಬಹಳ ಕಡಿಮೆ ಇದೆ. ತತ್ಪರಿಣಾಮವಾಗಿ ಈ ಹಿಂದುಳಿದ ಸಮೂಹಗಳ ಮಾನವ ಆಭಿವೃದ್ಧಿಯ ಸ್ಥಿತಿಗತಿ ರಾಜ್ಯದ ಇತರರಿಗಿಂತ ಸುಮಾರು ಒಂದು ದಶಕದಷ್ಟು ಹಿಂದೆ ಇದೆ ಎಂದು ವರದಿಯಲ್ಲಿ ಹೇಳಲಾಗಿದೆ.

ದಿನೇಶ ಎಂ. ಹೆಗಡೆ (2007) ರವರು ತಮ್ಮ ಲೇಖನ "ಅಭಿವೃದ್ದಿ ಅಂಚಿನ ಸಮುದಾಯಗಳು: ಹಿಂದುಳಿದ ವರ್ಗಗಳ ಒಂದು ಅಧ್ಯಯನ"ದಲ್ಲಿ ಲೇಖಕರು ಕರ್ನಾಟಕ ರಾಜ್ಯದಲ್ಲಿ ವಿವಿಧ ಕಾಲಘಟ್ಟದಲ್ಲಿ ನೇಮಿಸಲಾದ ಹಿಂದುಳಿದ ವರ್ಗಗಳ ಸಮಿತಿಗಳು ನೀಡಿದ ಅಂಕಿ ಅಂಶಗಳನ್ನು ಮತ್ತು ವಿವಿಧ ಆಯೋಗಗಳ ವರದಿಗಳ ಮೇಲೆ ಈ ಲೇಖನಕ್ಕೆ ಮಾಹಿತಿಗಳನ್ನು ಬಳಸಿಕೊಂಡಿದ್ದಾರೆ. ವಸಾಹತುಶಾಹಿ ಮತ್ತು ಆಧುನೀಕರಣದ ಪ್ರಕ್ರಿಯೆಗಳು ಈಗಿನ ಸಮಾಜದಲ್ಲಿ ವಿವಿಧ ರೀತಿಯ ಸಾಮಾಜಿಕ ಪರಿವರ್ತನೆಗೆ ಕಾರಣವಾದವು, ಅವುಗಳಲ್ಲಿ ಬ್ರಾಹ್ಮಣರು ಗ್ರಾಮೀಣ ಪ್ರದೇಶದಿಂದ ನಗರಕ್ಕೆ ವಲಸೆ ಬಂದಿದ್ದರಿಂದ ಪಾಶ್ಚಾತ್ಯ ಶಿಕ್ಷಣವನ್ನು ಪಡೆದು ಹಲವಾರು ಸರಕಾರಿ ಹುದ್ದೆಗಳನ್ನು ಗಿಟ್ಟಿಸಿ ತಮ್ಮ ಜೀವನದ ಮಟ್ಟವನ್ನು ಸುಧಾರಿಸಿಕೊಂಡರೆ ಬ್ರಾಹ್ಮಣೇತರ ಜಾತಿಗಳು ಹಳ್ಳಿಗಳಲ್ಲಿಯೇ ನೆಲೆಸಿ ಕೃಷಿ ಹಾಗೂ ಅದಕ್ಕೆ ಸಂಬಂಧಿಸಿದ ಹತ್ತು ಹಲವು ಕೆಲಸದಲ್ಲಿ ತೊಡಗಿಸಿಕೊಂಡು ತಮ್ಮ ಜೀವನ ಆಧಾರವನ್ನಾಗಿ ಮಾಡಿಕೊಂಡು ಆಧುನಿಕ ಶಿಕ್ಷಣದಿಂದ ವಂಚಿತರಾಗಿದ್ದರು. ಆಧುನಿಕ ಶಿಕ್ಷಣ ಪಡೆದ ಬ್ರಾಹ್ಮಣರು 1819 ಸಮಯದಲ್ಲಿ ಮೈಸೂರು ಸರ್ಕಾರದ ನೌಕರಶಾಹಿಯಲ್ಲಿ ಶೇ.65ರಷ್ಟು ಗೆಜೆಟೆಡ್ ಮತ್ತು ಶೇ.70ರಷ್ಟು ನಾನ್ ಗೆಜೆಟೆಡ್ ನೌಕರಿಗಳನ್ನು ಪಡೆದು ನೌಕರಶಾಹಿಗಳಲ್ಲಿ ಪ್ರಭಾವಶಾಲಿಯಾಗಿ ಸರ್ಕಾರವು ಹಾಕಿಕೊಂಡ ಎಲ್ಲ ಹಂತದ ಯೋಜನೆಗಳನ್ನು ಅತ್ಯಂತ ವ್ಯವಸ್ಥಿತವಾಗಿ ಕೆಳವರ್ಗದವರನ್ನು ಅಭಿವೃದ್ಧಿಯ ಅಂಚಿನಲ್ಲಿಡುವ ವರ್ಗವು ಸೃಷ್ಟಿಯಾಯಿತು ಈ ರೀತಿಯಾಗಿ ಸೃಷ್ಟಿಯಾದ ವರ್ಗಗಳ ಹಿಡಿತವು ಅವರ ವಿರುದ್ಧದ ಹೋರಾಟದ ಚಳುವಳಿಗಳಿಂದ ಸ್ವಲ್ಪಮಟ್ಟಿಗೆ ಕಡಿಮೆಯಾಗಿ ಗ್ರಾಮೀಣ

ಪ್ರದೇಶದಲ್ಲಿ ಬ್ರಾಹ್ಮಣೇತರ ಪ್ರಬಲ ಜಾತಿಗಳಾದ ಲಿಂಗಾಯತರು, ಒಕ್ಕಲಿಗರು ಮತ್ತು ಇತರ ಜಾತಿಯ ಜನರಲ್ಲಿ ಪಟ್ಟಣದ ವಲಸೆ ನಿಧಾನವಾಗಿ ಪ್ರಾರಂಭವಾಗಿ ಈ ಶತಮಾನದ ಮೊದಲ ಎರಡು ದಶಕದಲ್ಲಿ ಶಿಕ್ಷಣ ಹಾಗೂ ನೌಕರಿಗಳನ್ನು ಅರಸಿ ಪಟ್ಟಣಕ್ಕೆ ವಲಸೆ ಬಂದರು. ಇಲ್ಲಿ ಲೇಖಕರು ಶೈಕ್ಷಣಿಕ ಪ್ರಗತಿ, ಆಡಳಿತದಲ್ಲಿ ಪ್ರಾತಿನಿಧ್ಯ ಮತ್ತು ರಾಜಕೀಯ ಪ್ರಾತಿನಿಧ್ಯಗಳನ್ನು ವಿವರಿಸುತ್ತಾ ಹಿಂದುಳಿದ ಜಾತಿ ವರ್ಗಗಳು ರಾಜಕೀಯ ಲೆಕ್ಕಾಚಾರದ ವಿಷಯವಾಗಿದೆಯೇ ಹೊರತು ಅವರ ಅಭಿವೃದ್ಧಿಯ ಕುರಿತು ಸೈದ್ಧಾಂತಿಕವಾಗಿ ಪ್ರಾಮುಖ್ಯತೆಯನ್ನು ಪಡೆದುಕೊಂಡಿಲ್ಲಾ ಹಾಗೂ ರಾಜಕೀಯ ಪಕ್ಷಗಳು ಈ ತೆರನಾದ ಧೋರಣೆಯಿಂದಾಗಿ ಆ ವರ್ಗಗಳು ಪರದಿಯ ಕಡೆಗೆ ಒತ್ತಲ್ಪಡುತ್ತಿರುವ ವಿದ್ಯಮಾನವನ್ನು ಈಗಿನ ಪ್ರಚಲಿತ ಯುಗದಲ್ಲಿ ಕಾಣಬಹುದೆಂದು ಲೇಖಕರು ಅಭಿಪ್ರಾಯ ಪಡುತ್ತಾರೆ.

ಎಂ. ಚಂದ್ರ ಪೂಜಾರಿ (2010) ರವರು ತಮ್ಮ ಪುಸ್ತಕ 'ಯಾಕೀಗ ಭೂಮಿ ಪ್ರಶ್ನೆ' ಯಲ್ಲಿ ಕಳೆದ ಶತಮಾನದಲ್ಲಿ ರಾಜಕೀಯ, ಆರ್ಥಿಕ ನೀತಿ ನಿರೂಪಣೆಗಳಲ್ಲಿ, ಪಂಚವಾರ್ಷಿಕ ಯೋಜನೆಗಳಲ್ಲಿ, ಅಭಿವೃದ್ಧಿ ತತ್ವ ಮತ್ತು ಕಾರ್ಯಕ್ರಮಗಳಲ್ಲಿ ಸಂಶೋಧನೆಗಳು ಎಲ್ಲವು ಭೂಮಿಯನ್ನೆ ಪ್ರಮುಖವಾದ ವಿಷಯವನ್ನಾಗಿ ಇಟ್ಟುಕೊಂಡು ಮತ್ತು ತಮ್ಮ ಕೆಲಸ ಕಾರ್ಯಗಳನ್ನು ನಡೆಸಿಕೊಂಡು ಹೋಗುತಿದ್ದವು ಎಂದು ಹೇಳುತ್ತಾರೆ. 1980ರ ಮತ್ತು 90ರ ದಶಕದ ನಂತರ ಭೂಮಿ, ಕೃಷಿ, ಗ್ರಾಮ ಎಲ್ಲವೂ ಮಹತ್ವ ಕಳೆದುಕೊಂಡು ಕೈಗಾರಿಕೆ, ವ್ಯಾಪಾರ, ಐಟಿ–ಬಿಟಿ ಉದ್ದಿಮೆಗಳು, ಶೇರು ಮಾರುಕಟ್ಟೆಗಳು ಇನ್ನಿತರ ವಿಷಯಗಳು ಮುಂಚೂಣಿಗೆ ಬಂದವು ಎಂದು ಲೇಖಕರು ಅಭಿಪ್ರಾಯ ವ್ಯಕ್ತಪಡಿಸಿದ್ದಾರೆ. ಹೀಗೆ ಹೇಳುತ್ತಾ ಇಂದಿನ ರಾಜಕೀಯವು ದುಡ್ಡು ಹಾಕಿ ದುಡ್ಡು ತೆಗೆಯುವ ವ್ಯವಹಾರವಾಗಿದೆ ಮತ್ತು ಈ ವ್ಯವಸ್ಥೆಯು ಕಳೆದ ಆರು ದಶಕಗಳಲ್ಲಿ ಅಭಿವೃದ್ಧಿಯ ಹೆಸರಲ್ಲಿ ಬಹುತೇಕರನ್ನು ಮೂರು ಹೊತ್ತಿನ ಊಟಕ್ಕೆ ಪರದಾಡುವ ಸ್ಥಿತಿಗೆ ತಳ್ಳಲಾಗಿದೆ. ಹೀಗೆ ತಳ್ಳಲ್ಪಟ್ಟವರಿಗೆ ವ್ಯವಸ್ಥೆ ಪರಿವರ್ತಿಸುವ ಕಾರ್ಯಕ್ರಮಗಳೊಂದಿಗೆ ಗುರುತಿಸಿಕೊಳ್ಳುವಷ್ಟು ಶಕ್ತಿ, ತಾಳ್ಮೆ ಉಳಿದಿಲ್ಲ ಮತ್ತು ಕೇಜಿಗೆ 2 ರೂಪಾಯಿ ಅಕ್ಕಿ ಕೊಡುವುದು, 20ಚದರ ಅಡಿ ವಸತಿ ಕೊಡುವುದು, ಟಿವಿ, ಸೀರೆ ಇತ್ಯಾದಿಗಳ ಇಂದಿನ ಚುನಾವಣೆ ಸಂದರ್ಭದಲ್ಲಿ ಕೊಡುವ ಭರವಸೆಗಳು ಮತ್ತು ಜಾತಿ, ಧರ್ಮ ಹಾಗೂ ಇತ್ಯಾದಿಗಳ ಜೊತೆಗೆ ಮೇಲಿನ ಭರವಸೆಗಳ ಮೂಲಕ ಚುನಾವಣೆ ಗೆಲ್ಲುವ ಮೂಲ ಮಂತ್ರವಾಗಿದೆ. ಆದ್ದರಿಂದ ಪ್ರಮುಖ ಉತ್ಪಾದನಾ ಪರಿಕರವಾದ ಭೂಮಿಯ ಪ್ರಶ್ನೆಯನ್ನು ಯಾವ ರಾಜಕೀಯ ಪಕ್ಷಗಳು ಎತ್ತುವುದೇ ಇಲ್ಲ. ಏಕೆಂದರೆ ಭೂಸುಧಾರಣೆಗಳಿಂದ ಜನರ ಭೂ ಸಂಬಂಧಗಳು ತುಂಬಾ ಸುಧಾರಣೆಗೊಂಡಿವೆ ಎಂಬ ಬಲವಾದ ನಂಬಿಕೆಯಲ್ಲಿವೆ ಎಂದು ಲೇಖಕರು ಉಲ್ಲೇಖಿಸುತ್ತಾರೆ. ಮುಂದುವರೆದು ಇಂದೂ ಕೂಡ ನಮ್ಮ ಸಮಾಜದಲ್ಲಿರುವ ಬಹುತೇಕರ ಬದುಕನ್ನು ಸಕರಾತ್ಮಕವಾಗಿ ಬದಲಾಯಿಸುವ ಒಂದು ಸಾಧನ ಇದ್ದರೆ ಅದು ಭೂಮಿ ಮಾತ್ರ ಎಂದು ಅಭಿಪ್ರಾಯ ವ್ಯಕ್ತಪಡಿಸಿದ್ದಾರೆ.

ಈಗಿನವರೆಗೆ ರಾಜ್ಯದಲ್ಲಿ ಮೂರು ಭೂಸುಧಾರಣೆ ಕಾಯಿದೆಯಿಂದ ನ್ಯಾಯಯುತವಾದ ಸುಧಾರಣೆಯಾಗಿಲ್ಲ ಆದ್ದರಿಂದ ಸದ್ಯದ ಪರಿಸ್ಥಿಯಲ್ಲಿ ಮತ್ತೊಂದು ಭೂಸುಧಾರಣೆ ಅನಿವಾರ್ಯವೆಂಬುವುದು ಲೇಖಕರು ಈ ಪುಸ್ತಕದಲ್ಲಿ ವಾದಿಸಿದ್ದಾರೆ. ಸಕರಾತ್ಮಕ ರಾಜಕೀಯಕ್ಕೆ, ಆರ್ಥಿಕ ಅಭಿವೃದ್ಧಿಗೆ ಹಾಗೂ ಸಾಮಾಜಿಕ ಪರಿವರ್ತನೆಗೆ ಇಂದು ಕೂಡ ತಳಸ್ತರದ ಜನರು ಭೂಮಿ ಹೊಂದಿದ್ದಾರೆ ಮತ್ತು ಇದು ಬಹಳ ಪ್ರಮುಖವಾಗಿದೆ ಎಂದು ವಿವರಿಸಿದ್ದಾರೆ ಮತ್ತು ಭೂಮಿ ಇದ್ದರೆ ಆ ಕುಟುಂಬ ಎಲ್ಲ ರೀತಿಯಿಂದ ಅಭಿವೃದ್ದಿ ಹೊಂದಬಹುದೆಂದು ಕೂಡ ಲೇಖಕರು ಅಭಿಪ್ರಾಯಪಟ್ಟಿದ್ದಾರೆ.

ಕರ್ನಾಟಕ ಲೋಕಾಯುಕ್ತ (2012) ರವರು ಸಾರ್ವಜನಿಕರ ಆಹಾರ ವಿತರಣೆಯಲ್ಲಿಯ ಲೋಪದೋಷಗಳನ್ನು ಕಂಡುಹಿಡಿಯಲು ಬಾಲಸುಬ್ರಮಣ್ಯನವರ ಸಮಿತಿಯ ವರದಿಯಂತೆ ಭಾರತದಲ್ಲಿ ಸುಮಾರು 16ಕೋಟಿ ಕುಟುಂಬಗಳು ನಾಲ್ಕು ಲಕ್ಷಕ್ಕಿಂತ ಹೆಚ್ಚಿನ ನ್ಯಾಯಬೆಲೆ ಅಂಗಡಿಗಳಿಂದ ಆಹಾರ ಪದಾರ್ಥಗಳನ್ನು ವಿತರಿಸುವ ವ್ಯವಸ್ಥೆಯಲ್ಲಿ ಸೇರಿಕೊಂಡಿವೆ. ಇದು ಪ್ರಪಂಚದಲ್ಲಿಯೇ ಅತೀ ದೊಡ್ಡ ವ್ಯವಸ್ಥೆ. ಇದಕ್ಕೆ ಸುಮಾರು 15 ಸಾವಿರ ಕೋಟಿ ರೂಪಾಯಿಗಿಂತಲೂ ಹೆಚ್ಚಿನ ಹಣವನ್ನು ವ್ಯಯಸಲಾಗುತ್ತಿದೆ. ಆದ್ದರಿಂದ ಭಾರತದ ಸರ್ಕಾರವು 1997ರ ವರೆಗೆ ದೇಶದ ಎಲ್ಲಾ ನಾಗರಿಕರಿಗೆ ವಿತರಿಸುತ್ತದ್ದ ಈ ವ್ಯವಸ್ಥೆಯನ್ನು 1997ರಿಂದ ದೇಶದಲ್ಲಿರುವ ಕುಟುಂಬಗಳನ್ನು ಬಡತನ ರೇಖೆ ಮೇಲಿರುವ (ಎ.ಪಿ.ಎಲ್) ಮತ್ತು ಬಡತನ ರೇಖೆಯ ಕೆಳಗಿರುವ ಕುಟುಂಬಗಳು (ಬಿ.ಪಿ.ಎಲ್) ಎಂದು ವಿಂಗಡಿಸಿ ಆಹಾರ ಪದಾರ್ಥಗಳ ಅವಶ್ಯಕತೆ ಇದ್ದ ಗ್ರಾಹಕರನ್ನು ಗುರಿಯನ್ನಾಗಿಸಿತ್ತು. ಈ ವ್ಯವಸ್ಥೆಯಿಂದ ಬಿ.ಪಿ.ಎಲ್. ಎಂದು ವಿಂಗಡಣೆಗೊಂಡವರು ಹೆಚ್ಚಿನ ರಿಯಾಯಿತಿ ದರದಲ್ಲಿ ಪದಾರ್ಥಗಳನ್ನು ಪಡೆದರೆ ಎ.ಪಿ.ಎಲ್. ದವರು ಮಾರುಕಟ್ಟೆಯ ಸಮೀಪದ ಬೆಲೆಗೆ ಪದಾರ್ಥಗಳನ್ನು ಪಡೆಯುವಂತಾದರು. ಸದ್ಯದ ವಾಸ್ತವಿಕ ಅಂಶವೆಂದರೆ ಶೇ.57ರಷ್ಟು ಆಹಾರ ಪದಾರ್ಥಗಳು ತಲುಪಬೇಕಾದ ಜನರಿಗೆ ತಲುಪುವುದಿಲ್ಲ. ಪ್ರತಿ ನಾಲ್ಕು ರೂಪಾಯಿ ಸಾರ್ವಜನಿಕ ಆಹಾರ ವಿತರಣೆಯ ವ್ಯವಸ್ಥೆಗೆ ಖರ್ಚಾಗುತ್ತದೆ ಮತ್ತು ಇದರಲ್ಲಿ ಕೇವಲ ಒಂದು ರೂಪಾಯಿ ಮಾತ್ರ ಫಲಾನುಭವಿಗಳಿಗೆ ತಲಪುತ್ತದೆ. ಅಂದರೆ ಶೇ.75ರಷ್ಟು ಹಣವು ಸಿಗಬೇಕಾದವರಿಗೆ ತಲಪುವುದಿಲ್ಲಾ. ಇಂದು ಕರ್ನಾಟಕದಲ್ಲಿ ಸುಮಾರು ಒಂದು ಕೋಟಿ ಇಪ್ಪತ್ತು ಲಕ್ಷ ಕುಟುಂಬಗಳಿವೆ. ಆದರೆ ಒಟ್ಟು ಪಡಿತರ ಚೀಟಿಗಳ ವಿತರಣೆಯು ಒಂದು ಕೋಟಿ ಅರವತ್ತು ಲಕ್ಷಗಳಾಗಿವೆ. ಹೀಗಾಗಿ ಸುಮಾರು 40 ಲಕ್ಷದಷ್ಟು ನಕಲಿ ಪಡಿತರ ಚೀಟಿಗಳಿವೆ. 1 ಕೋಟಿ 20ಲಕ್ಷಗಳಲ್ಲಿ ಶೇ.47ರಷ್ಟು ಕುಟುಂಬಗಳು ಬಡತನ ರೇಖೆಯ ಕೆಳಗಿನ ಕುಟುಂಬಗಳು ಅಂದರೆ ಬಿ.ಪಿಎಲ್. ಕುಟುಂಬಗಳು ಇದರಲ್ಲಿ ಶೇ.97.7ರಷ್ಟು ಬಿ.ಪಿಎಲ್. ಪಡಿತರ ಚೀಟಿಗಳನ್ನು ವಿತರಿಸಲಾಗಿದೆ. ಶೇ.69ರಷ್ಟು ಎ.ಪಿ.ಎಲ್ ಕುಟುಂಬಗಳು ಬಿ.ಪಿ.ಎಲ್ ಕುಟುಂಬಗಳಿಗೆ ಮೀಸಲಾಗಿಟ್ಟ ಯೋಜನೆಗಳ ಅನುಕೂಲತೆಯನ್ನು

ಪಡೆಯುತ್ತಿವೆ ಇದರಿಂದ ಕರ್ನಾಟಕ ಸರಕಾರಕ್ಕೆ ಸುಮಾರು 144.8 ಕೋಟಿ ರೂಪಾಯಿಗಳ ಆರ್ಥಿಕ ನಷ್ಟ ಉಂಟಾಗುತ್ತಿದೆ ಎಂದು ಸಮಿತಿ ತನ್ನ ವರದಿಯಲ್ಲಿ ತಿಳಿಸಿದೆ.

ಪ್ರಜಾವಾಣಿ (2012) ದಿನಪತ್ರಿಕೆಯು ರಾಷ್ಟ್ರೀಯ ಮಾದರಿ ಸಮೀಕ್ಷಾ ಸಂಸ್ಥೆಯ 2011ರ ಜುಲೈನಿಂದ 2012ರ ಜೂನ್‌ವರೆಗೆ ನಡೆಸಿರುವ ಸಮೀಕ್ಷೆಯನ್ನು ಉಲ್ಲೇಖಿಸುತ್ತಾ ದೇಶದ ಗ್ರಾಮೀಣ ಪ್ರದೇಶದಲ್ಲಿ ಶೇ 10ರಷ್ಟು ಜನ 17 ರೂಪಾಯಿಗಿಂತ ಕಡಿಮೆ ಹಣದಲ್ಲಿ ನಿತ್ಯದ ಬದುಕು ಸಾಗಿಸುತ್ತಿದ್ದಾರೆ. ಅಂದರೆ ಇವರು ಬಡವರಲ್ಲಿಯೇ ಕಡುಬಡವರು. ಮನೆ ಬಳಕೆ ವೆಚ್ಚ ಕುರಿತಂತೆ 2011–12ನೇ ಸಾಲಿನಲ್ಲಿ ಈ ಸಮೀಕ್ಷೆಯ ಪ್ರಕಾರ ಗ್ರಾಮೀಣ ಪ್ರದೇಶದಲ್ಲಿ ಶೇ.10ರಷ್ಟು ಕಡುಬಡವರ ಮಾಸಿಕ ತಲಾ ಖರ್ಚು 503.49 ರೂಪಾಯಿ ಮತ್ತು ಇದು ನಗರದಲ್ಲಿ 702.26 ರೂಪಾಯಿ. ಇಲ್ಲಿ ಗ್ರಾಮೀಣದಲ್ಲಿರುವ ಬಡವರಿಗಿಂತ ನಗರದಲ್ಲಿರುವ ಬಡವರೇ ತುಸು ವಾಸಿ. ನಗರದಲ್ಲಿರುವ ಕಡುಬಡವರ ನಿತ್ಯದ ತಲಾ ಖರ್ಚು 23.40 ರೂಪಾಯಿ. 1991ರ ಆರ್ಥಿಕ ಸುಧಾರಣೆಗೆ ಚಾಲನೆ ನೀಡಿ ಸರಿಸುಮಾರು ಎರಡು ದಶಕಗಳ ನಂತರ ಈ ಸಮೀಕ್ಷೆಯನ್ನು ಮಾಡಲಾಗಿದೆ. ದೇಶದ ಜನರ ಜೀವನ ಮಟ್ಟವನ್ನು ಅಳೆಯುವುದು ಈ ಸಮೀಕ್ಷೆಯ ಉದ್ದೇಶವಾಗಿತ್ತು. 2009–11ನೇ ಸಾಲಿಗೆ ಯೋಜನಾ ಆಯೋಗವು ನಿತ್ಯದ ತಲಾ ಖರ್ಚನ್ನು ನಗರ ವಾಸಿಗಳಿಗೆ 28.65 ರೂಪಾಯಿ ಹಾಗೂ ಗ್ರಾಮೀಣರಿಗೆ 22.42 ರೂಪಾಯಿ ನಿಗದಿ ಮಾಡಲಾಗಿದೆ ಎಂದು ವರದಿಯಾಗಿದೆ.

ಬಾಲಸುಬ್ರಹ್ಮಣ್ಯಂ ಆರ್. (2012) ರವರು ಕಳೆದ 24 ವರ್ಷಗಳ ಹಿಂದೆ ನಡೆದ ಘಟನೆಗಳನ್ನು ವಿವರಿಸುತ್ತಾ ಮೇಲ್ಜಾತಿಯವರು ತೋರಿಕೆಗಾಗಿ ಅನುಕಂಪಗಳನ್ನು ತೋರಿಸುತ್ತಾರೆ. 'ಮೈಲಿಗೆ'ಯ ಹೆಸರಿನಲ್ಲಿ ಅವರನ್ನು ಶೋಷಣೆಗೆ ಒಳಪಡಿಸುತ್ತಾರೆ. ದೇಶದ ಕಡುಬಡವರು ಸಾಮಾಜಿಕವಾಗಿ ತಾರತಮ್ಯಕ್ಕೆ ಒಳಗಾದ ವರ್ಗಗಳಿಗೇ ಸೇರಿರುವುದು ಮತ್ತು ಜಾತಿ ವ್ಯವಸ್ಥೆಯಲ್ಲಿ ಅತ್ಯಂತ ಕೆಳಸ್ತರದಲ್ಲಿರುತ್ತಾರೆ. ಅಭಿವೃದ್ಧಿ ಎಂಬುದು ಮಾನವನ ಸಾಮರ್ಥ್ಯದ ವಿಸ್ತರಣೆ ಮತ್ತು ಬಡತನ ಎಂಬುದು ಅವಕಾಶಗಳ ನಿರಾಕರಣೆಯೇ ಹೊರತು ಬೇರೇನೂ ಅಲ್ಲ ಎಂಬ ಈಗಾಗಲೇ ಚಾಲ್ತಿಯಲ್ಲಿರುವ ಅಭಿಪ್ರಾಯವನ್ನು ಒಪ್ಪುತ್ತಾ ಈ ತಾರತಮ್ಯಕ್ಕೆ ಅವಕಾಶಗಳ ನಿರಾಕರಣೆಗೆ ಸಮಾಜದಲ್ಲಿರುವ ಜಾತಿ ವ್ಯವಸ್ಥೆಯೇ ಮೂಲ ಕಾರಣವೆಂದು ತಮ್ಮ ಅಭಿಪ್ರಾಯವನ್ನು ವ್ಯಕ್ತಪಡಿಸುತ್ತಾರೆ.

ಬಾಲಸುಬ್ರಹ್ಮಣ್ಯಂ ಆರ್. (2012) 'ವರ್ಣ ವ್ಯವಸ್ಥೆ: ಸಂಪೂರ್ಣ ಅವ್ಯವಸ್ಥೆ' ಎಂಬ ಲೇಖನದಲ್ಲಿ ದೇಶದ ಕಡುಬಡವರು ಸಾಮಾಜಿಕವಾಗಿ ತಾರತಮ್ಯಕ್ಕೆ ಒಳಗಾದ ವರ್ಗಗಳಿಗೆ ಸೇರಿರುವುದು ಮತ್ತು ಜಾತಿ ವ್ಯವಸ್ಥೆಯಲ್ಲಿ ಅತ್ಯಂತ ಕೆಳಸ್ತರದಲ್ಲಿದ್ದಾರೆ. ಅಭಿವೃದ್ಧಿ ಎಂಬುದು ಮಾನವನ ಸಾಮರ್ಥ್ಯದ ವಿಸ್ತರಣೆ ಮತ್ತು ಬಡತನ ಎಂಬುದು ಅವಕಾಶಗಳ ನಿರಾಕರಣೆಯೇ ಹೊರತು ಬೇರೇನೂ ಅಲ್ಲ ಎಂಬ ಅಭಿಪ್ರಾಯವನ್ನು ವ್ಯಕ್ತಪಡಿಸುತ್ತಾರೆ. ಜಾತಿ ವ್ಯವಸ್ಥೆಯು

ತಾರತಮ್ಯವನ್ನು ಹಾಗೂ ಅವಕಾಶಗಳ ನಿರಾಕರಣೆಗಳಿಂದ ಜನರು ರೋಸಿಹೋಗಿದ್ದಾರೆ. ಸಮಾನತೆಯಿಂದ ಒಡಗೂಡಿದ ಜಾತಿ ಮುಕ್ತ ಸಮಾಜ ನಮ್ಮದಾಗಬೇಕು, ಪ್ರತಿ ಭಾರತೀಯನಿಗೂ ನಿರ್ಭೀತಿಯಿಂದ ತನ್ನ ಬದುಕನ್ನು ರೂಪಿಸಿಕೊಳ್ಳುವ, ಅವನ ಎಲ್ಲ ಮೂಲಭೂತ ಅಗತ್ಯಗಳಿಗೂ ಸ್ಪಂದಿಸುವಂತಹ ಸಮಾನ ಅವಕಾಶಗಳು ದೊರೆಯುವ ವ್ಯವಸ್ಥೆ ಇರಬೇಕು ಎಂಬ ಅಭಿಪ್ರಾಯವನ್ನು ವ್ಯಕ್ತಪಡಿ ಸುತ್ತಾರೆ.

ಈ.ಚ.ಮುಳಗುಂದ (2010) ರವರು "ಭಾರತೀಯ ಸಮಾಜ ರಚನೆ ಮತ್ತು ಪರಿವರ್ತನೆ" ಎಂಬ ಪುಸ್ತಕದಲ್ಲಿ ಭಾರತೀಯ ಸಮಾಜವು ಮೂರು ಸ್ತಂಭಗಳ ಮೇಲೆ ಬೆಳೆದು ಬಂದಿದೆ. ಅವು ಜಾತಿ ಪದ್ಧತಿ, ಅವಿಭಕ್ತ ಕುಟುಂಬ ಮತ್ತು ಗ್ರಾಮೀಣ ಸಮುದಾಯ. ಇವುಗಳಲ್ಲಿ ಜಾತಿ ಪದ್ಧತಿಯು ಭಾರತೀಯ ಸಮಾಜದ ಪ್ರಮುಖ ಲಕ್ಷಣವೆಂದು ಪರಿಗಣಿಸಲ್ಪಟ್ಟಿದೆ. ಜಾತಿಯು ಒಂದು ಪುರಾತನ, ಸಂಕೀರ್ಣ ಮತ್ತು ಅದ್ವಿತೀಯ ಸಾಮಾಜಿಕ ಸಂಸ್ಥೆ ಮತ್ತು ಇದು ಭಾರತೀಯ ಸಮಾಜದ ಉಕ್ಕಿನ ಚೌಕಟ್ಟೆಂದು ಪರಿಗಣಿಸಲಾಗಿದೆ. ಜಾತಿಯ ಸ್ಥಾನಮಾನ ಹುಟ್ಟಿನಿಂದ ಸಿಗುವಂಥದ್ದು, ಅದನ್ನು ಮತ್ತಾವುದೇ ವಿಧಾನಗಳಿಂದ ಪಡೆಯುವುದಕ್ಕೆ ಅಥವ ಅದನ್ನು ಯಾವುದೇ ವಿಧಾನದಿಂದ ಬದಲಾಯಿಸಿಕೊಳ್ಳುವುದಕ್ಕೆ ಬರುವುದಿಲ್ಲವೆಂದು ಲೇಖಕರು ಅಭಿಪ್ರಾಯ ವ್ಯಕ್ತಪಡಿಸುತ್ತಾರೆ.

ರಾಘಬೇಂದ್ರ ಜಾ, ಸಂಬಿತ್ ಭಟ್ಟಾಚಾರ್ಯ, ರಾಘವ್ ಗೈಯ ಮತ್ತು ಶೈಲಶ್ರೀ ಶಂಕರ (2009) ರವರು ತಮ್ಮ ಲೇಖನದಲ್ಲಿ ಬಡತನ ನಿವಾರಣಾ ಕರ್ಯಕ್ರಮಗಳಲ್ಲಿ ಒಂದು ದೊಡ್ಡ ಸವಾಲ್ ಎಂದರೆ ಬಡತನ ರೇಖೆಯ ಮೇಲಿರುವ ಕುಟುಂಬಗಳು ಬಡವರಿಗಾಗಿ ಮೀಸಲಿರುವ ಕಾರ್ಯಕ್ರಮಗಳ ಲಾಭವನ್ನು ತಡೆಗಟ್ಟುವದು. ಉಳ್ಳವರು ತಮ್ಮ ಆರ್ಥಿಕ ಬಲದಿಂದ ರಾಜಕೀಯ ಪಕ್ಷಗಳಿಗೆ ದೇಣಿಗೆಯನ್ನು ನೀಡಿ ಅಭಿವೃದ್ಧಿಯ ಕಾರ್ಯಕ್ರಮಗಳಲ್ಲಿ ಭಾಗವಹಿಸಿ ತಮಗಾಗಿ ಅನೂಕೂಲತೆಗಳನ್ನು ಪಡೆಯತ್ತಿದ್ದಾರೆ. ಆದ್ದರಿಂದ ಲೇಖಕರು ಇದನ್ನು "ಬಲವಾದ ಹಿಡಿತ" ಎಂದು ಉಲ್ಲೇಖಿಸುತ್ತಾರೆ. ಈ ಒಂದು ಅಧ್ಯಯನವನ್ನು ರಾಜಸ್ಥಾನ ಮತ್ತು ಆಂಧ್ರ ಪ್ರದೇಶ ರಾಜ್ಯಗಳಲ್ಲಿ ಕುಟುಂಬ ಮಟ್ಟದ ಮಾಹಿತಿಯನ್ನು ಕಲೆ ಹಾಕಿ ಸಾರ್ವಜನಿಕ ಪಡಿತರ ವಿತರಣಾ ವ್ಯವಸ್ಥೆ ಮತ್ತು ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತ್ರಿ ಯೋಜನೆಗಳನ್ನು ತುಲನಾತ್ಮಕವಾಗಿ ನೋಡಿ ಆಂಧ್ರ ಪ್ರದೇಶದಲ್ಲಿ ಈ ಕಾರ್ಯಕ್ರಮಗಳ ಮೇಲೆ ಉಳ್ಳವರು ಬಲವಾದ ಹಿಡಿತವನ್ನು ಹೊಂದಿ ಲಾಭವನ್ನು ಪಡೆದು ಬಡವರನ್ನು ಇವುಗಳಿಂದ ವಂಚಿತರನ್ನಾಗಿಸಿವೆ ಎಂದು ಲೇಖಕರು ಅಭಿಪ್ರಾಯ ಪಟ್ಟಿದ್ದಾರೆ.

ಅಜಿತ್ ಜಕಾರಿಯ್ಸ್ ಮತ್ತು ವಾಮ್ಸಿ ವಕುಲಭರನಮ್ (2011) ರವರು ತಮ್ಮ ಲೇಖನದಲ್ಲಿ ಆಧುನಿಕ ಭಾರತದಲ್ಲಿ ಜಾತಿಯು ಅಧಿಕಾರ, ಆರ್ಥಿಕ ಅಸಮಾನತೆ ಮತ್ತು ಬಡತನವನ್ನು ನಿರ್ಧರಿಸುವ ಸಾಧನವಾಗಿದೆ. ಎಂದು ಉಲ್ಲೇಖಿಸಿ ಇವರು ಆಲ್ ಇಂಡಿಯಾ ಡೆಟ್ ಮತ್ತು

ಇನ್‌ವೆಸ್ಟಮೆಂಟ್ ಸಮೀಕ್ಷೆಯ ಮಾಹಿತಿಯನ್ನು ಉಪಯೊಗಿಸಿಕೊಂಡು ಜಾತಿ ಮತ್ತು ಸಂಪತ್ತಿನ ಅಸಮಾನತೆಯ ನಡುವೆ ಇರುವ ಸಂಬಂಧವನ್ನು ತಿಳಿದುಕೊಳ್ಳಲು ಅಭ್ಯಸಿಸಲಾಗಿದೆ. ಈ ಅಧ್ಯಯನದಲ್ಲಿ ಪರಿಶಿಷ್ಟ ಜಾತಿ ಮತ್ತು ಪಂಗಡಗಳು ಬಹಳ ಅನಾನುಕೂಲತೆಯನ್ನು ಮತ್ತು ಉಳ್ಳವರಿಗಿಂತಲೂ ಅತ್ಯಂತ ಕಡಿಮೆ ಸಂಪತ್ತನ್ನು ಹೊಂದಿದ್ದರೆ ಇತರೆ ಹಿಂದುಳಿದ ಜಾತಿಯವರು ಮತ್ತು ಹಿಂದೂಯೇತರರು ಮಧ್ಯದಲ್ಲಿದ್ದಾರೆಂದು ಲೇಖಕರು ತಮ್ಮ ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದಾರೆ.

ಇಂದಿರಾ ಹಿರ್ವೆ (2003) ರವರು ತಮ್ಮ ಲೇಖನದಲ್ಲಿ 2002-03 ರಲ್ಲಿ ಭಾರತ ಸರಕಾರದ ಗ್ರಾಮೀಣ ಸಚಿವಾಲಯಕ್ಕೆ ಸಲ್ಲಿಕೆಯಾದ ಬಡತನ ರೇಖೆಯ ಕೆಳಗಿರುವ ಕುಟುಂಬಗಳ ಗಣತಿಯ ವರದಿಯನ್ನು ಸಲ್ಲಿಕೆಯಾದ ನಂತರದಲ್ಲಿ ಕೆ.ಸುಂದರಂರವರು ಈ ಸಮೀಕ್ಷೆಯ ನಿಷ್ಪ್ರಯೋಜಕತೆಯ ಬಗ್ಗೆ ಈ ಕೆಳಗಿನ ಕಾರಣಗಳನ್ನು ನೀಡಿದ್ದಾರೆ. ಒಂದು-ಸಮೀಕ್ಷೆಯು 1997ರಲ್ಲಿ ನಡೆಸಿದ ಸಮೀಕ್ಷೆಯ ವಿಧಾನದ ನ್ಯೂನತೆಗಳಿಂದ ಕೂಡಿದೆ. ಎರಡು-ಸೂಚಕಗಳಿಗೆ, ಲೆಕ್ಕಚಾರಗಳನ್ನು ಒಟ್ಟುಗೂಡಿಸುವದರಿಂದ ಬಡವರನ್ನು ಗುರುತಿಸುವಲ್ಲಿ ಗಂಭೀರವಾದ ಸಮಸ್ಯೆಗಳಿವೆ. ಮೂರು-ಸಮಗ್ರ ಲೆಕ್ಕಚಾರದ ಮೇಲೆ 13 ಸೂಚಕಗಳ ಆಧಾರದ ಮೇಲೆ ಕುಟುಂಬಗಳನ್ನು ರ್‍ಯಾಕಿಂಗ್‌ಮೇಲೆ ವಿಂಡಿಸುವುದರಿಂದ ಉಪಯೋಗವಾಗುವುದಿಲ್ಲ ಎಂದು ತಿಳಿಸುತ್ತಾ ಭಾರತದಲ್ಲಿನ ಬಡವರು ಈ ಕೆಳಗಿನ ಕಾರಣಗಳಿಂದಾಗಿ ಆರ್ಥಿಕ ಬೆಳವಣಿಗೆಯಲ್ಲಿ ಭಾಗವಹಿಸುತ್ತಿಲ್ಲವೆಂದು ಹೇಳುತ್ತಾರೆ. ಅವರಲ್ಲಿ ಉತ್ಪಾದನಾ ಪರಿಕರಗಳಿಲ್ಲ, ಉತ್ಪಾದನಾ ಪರಿಕರಗಳನ್ನು ಕೊಂಡುಕೊಳ್ಳಲು ಅವರಿಗೆ ಬ್ಯಾಂಕುಗಳು ಸಾಲಸೌಲಭ್ಯಗಳನ್ನು ನೀಡುವುದಿಲ್ಲ, ಆರ್ಥಿಕ ಪ್ರಗತಿಯಲ್ಲಿ ಭಾಗವಹಿಸಲು ಅವರಿಗೆ ಆಧುನಿಕ ಕೌಶಲ್ಯದ ಮತ್ತು ಶಿಕ್ಷಣದ ಕೊರತೆಯಿದೆ, ಇವರು ಕೆಳಸ್ತರದ/ಪರಿಶಿಷ್ಟ ಪಂಗಡ ಮತ್ತು ಸಾಮಾಜಿಕ ಹಿಂದುಳಿವಿಕೆಯಿಂದ ಬಳಲುತ್ತಿದ್ದು ಆರ್ಥಿಕ ಚಟುವಟಿಕೆಯಿಂದ ಹೊರಗಿಡಲಾಗಿದೆ. ಬಡವರಿಗೆ ಆಸ್ತಿಗಳು, ಉತ್ಪಾದನ ಪರಿಕರಗಳಾದ ಭೂಮಿ, ಆಧುನಿಕ ಕೌಶಲ್ಯಗಳನ್ನು ಪಡೆದುಕೊಳ್ಳಲು ನೇರವಾಗಿ ಬ್ಯಾಂಕುಗಳಿಂದ ಸಾಲವು ದೊರಕುವಂತಾಗಬೇಕು. ಈಗಾಗಲೇ ಚಾಲ್ತಿಯಲ್ಲಿರುವ ಬಡತನ ನಿವಾರಣಾ ಕಾರ್ಯಕ್ರಮಗಳು ಬಡವರನ್ನು ತಲುಪುವಲ್ಲಿ ಕೆಲವೊಂದು ಸಮಸ್ಯೆಗಳಿವೆ ಅವು ಅವರಿಗೆ ಅರಿವು ಇರುವುದಿಲ್ಲ, ಬಡವರೆಂದು ಗುರುತಿಸಿಕೊಳ್ಳಲು ಬಹಳ ಕಷ್ಟ ಪಡಬೇಕಾಗುತ್ತದೆ, ಕೆಲವೊಂದು ಕಾರ್ಯಕ್ರಮಗಳ ಆಡಳಿತ್ಮಾಕ ಷರತ್ತುಗಳು ಇವರ ಪರವಾಗಿರುವದಿಲ್ಲ, ಇವರಿಗೆ ಸ್ಥಳೀಯ ಆಡಳಿತ ವರ್ಗದ ಸಹಾಯ/ಸಹಕಾರ ದೊರೆಯುವುದಿಲ್ಲ, ಒಂದು ವೇಳೆ ಈ ಎಲ್ಲಾ ಸಮಸ್ಯೆಗಳನ್ನು ಬಗೆಹರಿಸಿಕೊಂಡು ಕಾರ್ಯಕ್ರಮದ ಸವಲತ್ತು ದಕ್ಕಿಸಿಕೊಳ್ಳುವಲ್ಲಿ ಬಹಳಷ್ಟು ಕಷ್ಟವನ್ನು ಅನುಭವಿಸಬೇಕಾಗುತ್ತದೆ. ಹಾಗೆಯೇ ಈ ಎಲ್ಲಾ ಕಾರ್ಯಕ್ರಮಗಳಿಂದ ಒಂದನ್ನು ಸ್ಪಷ್ಟವಾಗಿ ತಿಳಿದು ಬರುವುದೇನೆಂದರೆ ಭಾರತದಲ್ಲಿ ಬಡತನರೇಖೆಯ ಕೆಳಗಿರುವ ಕುಟುಂಬಗಳನ್ನು ಗುರುತಿಸುವ ಕಾರ್ಯ ರಾಜಕೀಯ ಚಟುವಟಿಕೆಯಿಂದ ಕೂಡಿರುತ್ತದೆ ಎಂದು ಲೇಖಕರು ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದಾರೆ.

ಇ.ಪಿ.ಡಬ್ಲ್ಯುಯು (2012) ವಾರಪತ್ರಿಕೆಯ ಸಂಪಾದಕೀಯದಲ್ಲಿ ಬಡತನರೇಖೆಯ ಕೆಳಗಿರುವ ಸಮೀಕ್ಷೆಯನ್ನು ಉಲ್ಲೇಖಿಸುತ್ತಾ ಕೇಂದ್ರದಲ್ಲಿ ಆಡಳಿತ ನಡೆಸುತ್ತಿರುವ ಸರಕಾರವು ಬಡತನಕ್ಕೆ ಸಂಬಂಧಪಟ್ಟ ಮಾಹಿತಿಯನ್ನು ಸರಿಯಾಗಿ ನಿಭಾಯಿಸಿಲ್ಲವೆಂದು ಲೇಖಕರು ಅಭಿಪ್ರಾಯ ಪಟ್ಟಿದ್ದಾರೆ. ಎಂ.ಚಂದ್ರ ಪೂಜಾರಿ (2013) ರವರು ತಮ್ಮ ಲೇಖನದಲ್ಲಿ ಕಳೆದ ಆರು ದಶಕಗಳಲ್ಲಿ ಅಭಿವೃದ್ಧಿಯ ಹೆಸರಲ್ಲಿ ಬಹುತೇಕರನ್ನು ಮೂರು ಹೊತ್ತಿನ ಊಟಕ್ಕೆ ಪರದಾಡುವ ಸ್ಥಿತಿಗೆ ತಳ್ಳಲಾಗಿದೆ ಎಂದು ಹೇಳುತ್ತಾ ದೇಶ/ರಾಜ್ಯಗಳಲ್ಲಿ ನಡೆಯುವ ಚುನಾವಣೆಗಳು ಅನೇಕ ಕುಟುಂಬಗಳು ಜೀವಂತವಿರಲು ಅವಶ್ಯವಿರುವ ಮೂಲ ಸವಲತ್ತುಗಳಾದ ಅಕ್ಕಿ, ಕುಡಿಯುವ ನೀರು, ವಸತಿ, ಶೌಚಾಲಯ ಮತ್ತು ಇತ್ಯಾದಿಗಳ ವಿಷಯಗಳನ್ನು ಪ್ರಧಾನವಾಗಿರಿಸಿಕೊಂಡು ನಡೆಯುತ್ತವೆ. ಇದರಿಂದ ಬಡತನ ರೇಖೆಯ ಕೆಳಗಿರುವ ಕುಟುಂಬಗಳು ಆರ್ಕಷಿತವಾಗುತ್ತವೆ. ಏಕೆಂದರೆ ಉಳ್ಳವರು ಮತ್ತು ಮಧ್ಯಮ ವರ್ಗದವರಿಗೆ ಈ ಸೌಲಭ್ಯಗಳ ಸಮಸ್ಯೆ ಇರುವುದಿಲ್ಲ. ಅಂದರೆ ಬಡವರು ಈ ಎಲ್ಲಾ ಸೌಲಭ್ಯಗಳಿಂದ ವಂಚಿತರಾಗಿರುವುದರಿಂದ ಕಳೆದ ಹಲವಾರು ಚುನಾವಣೆಗಳಲ್ಲಿ ಬಡವರಿಗೆ ಈ ಎಲ್ಲಾ ಸೌಲಭ್ಯಗಳು ಒದಗಿಸಿಕೊಡುತ್ತೇವೆ ಎಂದು ಘೋಷಿಸಿಕೊಂಡು ಬರಲಾಗಿದೆ. ಇಂತಹ ಅಭಿವೃದ್ಧಿ ಕಾರ್ಯಕ್ರಮಗಳಿಂದ ಬಡತನ ನಿವಾರಣೆಯಾಗುವುದಿಲ್ಲ. ಬದಲಾಗಿ ಬಡವರಿಗೆ ಒಪ್ಪೊತ್ತಿನ ಊಟ ಕೊಡಬಹುದು. ಇದರ ಬದಲಾಗಿ ಅವರ ಊಟವನ್ನು ಅವರೇ ದುಡಿದು ಗಳಿಸುವ ಸಂಪನ್ಮೂಲಗಳ ಒಡೆತನವನ್ನು ಇವು ಒದಗಿಸುವುದಿಲ್ಲ, ಆದ್ದರಿಂದ ಭೂಮಿ, ಬಂಡವಾಳ ಮತ್ತು ಆಧುನಿಕ ಕೌಶಲ್ಯ ಈ ಮೂರರಲ್ಲಿ ಯಾವುದಾದರೂ ಒಂದನ್ನು ಕನಿಷ್ಠ ಪ್ರಮಾಣದಲ್ಲಾದರೂ ಪ್ರತಿಯೊಬ್ಬರೂ ಹೊಂದುವುದರಿಂದ ಬಡತನವನ್ನು ಉತ್ಪಾದಿಸುವ ಪರಿಸರವನ್ನು ಸುಧಾರಿಸಬಹುದೆಂದು ಮತ್ತು ಬಡತನವನ್ನು ನಿವಾರಿಸುವ ದಿಕ್ಕಿನಲ್ಲಿ ಸಾಗಬಹುದೆಂದು ಲೇಖಕರು ತಮ್ಮ ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದಾರೆ.

ದ್ವಾರಕಾನಾಥ್, ಸಿ.ಎಸ್. (2010) "ಹಿಂದುಳಿದ ವರ್ಗಗಳು–ಅಸ್ಥಿತ್ವ ಮತ್ತು ಅಸಮಾನತೆ" ಎಂಬ ಲೇಖನದಲ್ಲಿ ಭಾರತದಲ್ಲಿ ಅಸ್ಪೃಶ್ಯರನ್ನು ಮುಟ್ಟಬಾರದವರು ಎಂದು ಕರೆದರೆ ಹಿಂದುಳಿದ ವರ್ಗಗಳಲ್ಲಿ ಕೆಲವೊಂದು ಜಾತಿಗಳನ್ನು ನೋಡಬಾರದವರು ಇದ್ದಾರೆಂದು ಉಲ್ಲೇಖಿಸುತ್ತಾರೆ. ಇದಕ್ಕೆ ಉದಾರಣೆಯಾಗಿ ಕ್ಷೌರಿಕರನ್ನು ಹೆಸರಿಸುತ್ತಾರೆ ಮತ್ತು ಇನ್ನೂ ಅನೇಕ ಸಮುದಾಯಗಳು ಯಾವುದೇ ಹಿಂದುಳಿದ ಪಟ್ಟಿ ಅಥವಾ ಪರಿಶಿಷ್ಟ ಪಂಗಡ ಅಥವ ಜಾತಿಗಳಲ್ಲಿ ಸೇರದ ಜಾತಿಗಳಿವೆ. ಈಗಿನ ರಾಜಕಾರಣಿಗಳು ನಾವು ನಾಗರಿಕರು ನಮ್ಮಲ್ಲಿ ಜಾತೀನೇ ಇಲ್ಲ, ಜಾತಿ ಪದ್ದತಿ ಈಗ ಕುಸಿದು ಹೋಗಿದೆ ಈಗ ಅದು ಸಮಾಜದಲ್ಲೂ ಇಲ್ಲ, ಸಂವಿಧಾನದಲ್ಲೂ ಇಲ್ಲ ಎಂದು ಹೇಳುತ್ತಾರೆ ಹಾಗೂ ವಿಶ್ವ ಮಟ್ಟದಲ್ಲಿ ಹೀಗೇನೇ ದೇಶವನ್ನು ಪ್ರತಿಬಿಂಬಿಸುತ್ತಾರೆ ಎಂದು 13 ವರ್ಷಗಳ ಹಿಂದೆ ಡರ್ಬಾನಿನಲ್ಲಿ ನಡೆದ ಉದಾಹರಣೆಯ ಮೂಲಕ ತಮ್ಮ ಅಭಿಪ್ರಾಯವನ್ನು ವ್ಯಕ್ತಪಡಿಸುತ್ತಾರೆ.

ಅಜೀಜ್, ಅಬ್ದುಲ್ (2013, ಮಾರ್ಚ,11) ರವರು ವಿಜಯವಾಣಿ ದಿನಪತ್ರಿಕೆಗೆ ಸಬ್ಸಿಡಿಯ ಕುರಿತು ಬರೆದ ಲೇಖನದಲ್ಲಿ ಸಬ್ಸಿಡಿಯನ್ನು ತೆಗೆಯುವುದರ ಪರಿಣಾಮ ನೇರವಾಗಿ ಬಡತನ ರೇಖೆಗಳಿಗಿಂತ ಕೆಳಗಿರುವ ಕುಟುಂಬಗಳ ಮೇಲೆ ಬೀಳುತ್ತದೆ ಮತ್ತು ಪಡಿತರ ಚೀಟಿಯನ್ನು ಹೊಂದಿರುವವರಿಗೆ ಮಾತ್ರ ಲಭಿಸುತ್ತದೆ ಎನ್ನುವುದು ಸಾಮಾನ್ಯವಾದ ನಂಬಿಕೆ. ಆದರೆ ಇದು ಸುಳ್ಳು ಇದರ ನೇರ ಪರಿಣಾಮ ಬೀಳುವುದು ಮಧ್ಯಮ ವರ್ಗದವರ ಮೇಲೆ ಇದಕ್ಕೆ ಪ್ರಮುಖ ಕಾರಣ ಮತಗಟ್ಟೆಯಾಧರಿತ ರಾಜಕಾರಣ ಮತ್ತು ನಮ್ಮ ಆರ್ಥಿಕ ವ್ಯವಸ್ಥೆ. ಇಂದು ಭಾರತದಲ್ಲಿರುವ ಮಧ್ಯಮ ವರ್ಗದವರು ತಮ್ಮ ಆದಾಯದ ಶೇಕಡಾ 70ರಷ್ಟನ್ನು ಆಹಾರ ಪದಾರ್ಥಗಳ ಕೊಳ್ಳುವಿಕೆಯ ಮೇಲೆಯೇ ವ್ಯಯಿಸುತ್ತಾರೆ ಮತ್ತು ಪ್ರತಿ ವರ್ಷ ಶೇಕಡಾ 10ರಷ್ಟು ಬೆಲೆ ಏರಿಕಯ ಪ್ರಮಾಣದೊಂದಿಗೆ ಮಧ್ಯಮ ವರ್ಗದವರ ಆದಾಯದಲ್ಲಿ ಹೆಚ್ಚಾಗುತ್ತಿಲ್ಲವೆಂದು ಹೇಳುತ್ತಾ ಈ ರೀತಿ ಹೆಚ್ಚಾಗುತ್ತಿರುವ ವೆಚ್ಚವನ್ನು ಹೇಗೆ ಭರಿಸುಬೇಕೆನ್ನವುದು ಪ್ರಶ್ನೆಯಾಗಿ ಉಳಿದಿದೆ ಎಂದು ಲೇಖಕರು ತಮ್ಮ ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದಾರೆ.

ಶಿವಸುಂದರ್ (2010) ರವರು ತಮ್ಮ ಲೇಖನ "ಜಾತಿ ಜನಗಣತಿ ಮತ್ತು ಜಾತಿ ವಿನಾಶ"ದಲ್ಲಿ ಭಾರತ ದೇಶದ ಸಾಮಾಜಿಕ ರಚೆನೆಯಲ್ಲಿ ಜಾತಿಯದ್ದು ಪ್ರಮುಖ ಪಾತ್ರ ಮತ್ತು ಜಾತಿಯೇ ವರ್ಗದ ಪಾತ್ರವನ್ನು ವಹಿಸಿತ್ತು. ಇಲ್ಲಿ ಜಾತಿಯೇ ಒಬ್ಬ ಮನುಷ್ಯನ ಸಾಮಾಜಿಕ ಸ್ಥಾನವನ್ನು ನಿರ್ಧರಿಸಿಬಿಡುವ ಅಂಶ ಮತ್ತು ಇದು ವಿಶ್ವದ ಶೋಷಕ ಸಿದ್ಧಾಂತ ಮತ್ತು ಆಚರಣೆಗೆ ಭಾರತದ ಆಳುವ ವರ್ಗಗಳ ಕೊಡುಗೆ ಇದೆ ಮತ್ತು ನಮ್ಮ ದೇಶದಲ್ಲಿ ಚಾರಿತ್ರಿಕವಾಗಿ ಅವಕಾಶಗಳ ವಂಚನೆಯು ವ್ಯಕ್ತಿ ನೆಲೆಯಲ್ಲಿ ಮಾತ್ರವಲ್ಲದೆ ಒಂದು ಸಮುದಾಯದ, ಅಂದರೆ ಜಾತಿಗಳ ನೆಲೆಯ ಮೇಲೂ ನಡೆದಿದೆ ಎಂಬುದನ್ನು ನಮ್ಮ ಸಂವಿಧಾನ ಒಪ್ಪಿಕೊಂಡಿದೆ ಎಂದು ತಮ್ಮ ಅಭಿಪ್ರಾಯವನ್ನು ವ್ಯಕ್ತಪಡಿಸುತ್ತಾರೆ. ಗುಮ್ಮಾಡಿ ನಾಗಾಚಾರ್ಯ (1985) ರವರು ಆಂಧ್ರ ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ ಸಂಶೋಧನೆಯ ಪ್ರಬಂಧದಲ್ಲಿ ಜಾತಿಯು ಭೂಮಿಯ ಹಂಚಿಕೆಯಲ್ಲಿ ಬಹಳ ಪ್ರಮುಖವಾದ ಪಾತ್ರವನ್ನು ವಹಿಸುತ್ತದೆ ಮತ್ತು ಹೆಚ್ಚಿನ ಭೂಮಿಯು ಮೇಲ್ಜಾತಿ ಮತ್ತು ಪ್ರಬಲ ಭೂ ಒಡೆಯರಲ್ಲಿ ಕೇಂದ್ರೀಕೃತವಾಗಿದೆ ಎಂದು ಸಂಶೋಧಕರು ತಮ್ಮ ಅಭಿಪ್ರಾಗಳನ್ನು ವ್ಯಕ್ತಪಡಿಸಿದ್ದಾರೆ.

ಯರಿಸ್ವಾಮಿ ಎಂ (2002) ರವರು ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ ತಮ್ಮ ಸಂಶೋಧನಾ ಪ್ರಬಂಧದಲ್ಲಿ ತಳಮಟ್ಟದ ಜನರ ಸಶಕ್ತೀಕರಣದಲ್ಲಿ ಗ್ರಾಮ ಪಂಚಾಯತಿಗಳು ಸಾಧಿಸಿರುವ ಕಾರ್ಯಕ್ಷಮತೆಯನ್ನು, ಇದು ಯಾವ ರೀತಿ ಪ್ರಭಾವಿಸಿದೆ, ಇದಕ್ಕೆ ಪ್ರಭಾವ ಬೀರುವ ಅಂಶಗಳನ್ನು ತಿಳಿದುಕೊಳ್ಳುವ ಉದ್ದೇಶದೊಂದಿಗೆ ಬಳ್ಳಾರಿ ಜಿಲ್ಲೆಯ ಹೊಸಪೇಟೆ ಮತ್ತು ಕೂಡ್ಲಿಗಿ ತಾಲೂಕುಗಳಲ್ಲಿನ ತಲಾ ಎರಡು ಗ್ರಾಮ ಪಂಚಾಯತಿಗಳನ್ನು ಅಧ್ಯಯನಕ್ಕೆ ಆಯ್ಕೆ ಮಾಡಿಕೊಂಡು ಗ್ರಾಮ ಪಂಚಾಯತಿಗಳಲ್ಲಿಯ ಶೇ 10ರಷ್ಟು ಕುಟುಂಬಗಳನ್ನು

ಸಂದರ್ಶಿಸಲಾಯಿತ್ತು. ಗ್ರಾಮ ಪಂಚಾಯತಿಗಳಲ್ಲಿ ಜಾರಿಯಾದ ಕುಡಿಯುವ ನೀರು ಮತ್ತು ನೈರ್ಮಲೀಕರಣ, ವಸತಿ, ಬಡತನ ನಿರ್ಮೂಲನಾ ಕಾರ್ಯಕ್ರಮಗಳು ಮತ್ತು ಗ್ರಾಮಾಭಿವೃದ್ಧಿ ಯೋಜನೆಗಳು ಎಷ್ಟರ ಮಟ್ಟಿಗೆ ಅವುಗಳ ಉದ್ದೇಶಗಳನ್ನು ಮುಟ್ಟುವಲ್ಲಿ ಯಶಸ್ವಿಯಾಗಿವೆ ಎಂಬುದನ್ನು ಮುಂದೆ ತಿಳಿಸಿದ ರೀತಿಯಲ್ಲಿ ತಮ್ಮ ಅಭಿಪ್ರಾಯಗಳನ್ನು ವ್ಯಕ್ತಪಡಿಸಿದ್ದಾರೆ. ಎಲ್ಲಾ ಗ್ರಾಮೀಣಾಭಿವೃದ್ಧಿ ಕಾರ್ಯಕ್ರಮಗಳ ಮೂಲ ಉದ್ದೇಶ ಗ್ರಾಮೀಣ ಪ್ರದೇಶದ ಕೆಳಜಾತಿ/ ವರ್ಗಗಳ ಮತ್ತು ಬಡತನ, ಆರ್ಥಿಕ, ಸಾಮಾಜಿಕ ಬದಲಾವಣೆ ಆದರೆ ಈ ಯೋಜನೆಗಳು ನಿರೀಕ್ಷಿತ ಗುರಿಯನ್ನು ಸಾಧಿಸಲಿಲ್ಲ ಮತ್ತು ವರಮಾನ ವರ್ಧನೆಯೇ ನಿಜವಾದ ಅಭಿವೃದ್ಧಿ ಮತ್ತು ಜಿಡಿಪಿಯಲ್ಲಿ ಉಂಟಾಗುವ ವರಮಾನ ಏರಿಕೆಯೇ ಅಭಿವೃದ್ಧಿ ಎಂದು ತಿಳಿಯಲಾಗಿದೆ. ವಸತಿ ಯೋಜನೆಯ ಕುರಿತು ಸಂಶೋಧಕರು ಹೆಚ್ಚಿನ ವಸತಿ ಯೋಜನೆಗಳು ಬಡತನ ರೇಖೆಯ ಮೇಲಿನ ಕುಟುಂಬಗಳಿಗೆ ವಿತರಣೆಯಾಗಿವೆ ಮತ್ತು ಅಂಬೇಡ್ಕರ್ ವಸತಿ ಯೋಜನೆಯಲ್ಲಿ ಪರಿಶಿಷ್ಟರಿಗೆ ತಲುಪಿಸಲಾಗಿದ್ದರೂ ಸಹ  ನಿಜವಾದ ವಸತಿಹೀನ ಮತ್ತು ಬಡತನ ರೇಖೆಯ ಕೆಳಗಿನ ಪರಿಶಿಷ್ಟರಿಗೆ ತಲುಪದೆ ಬಡತನ ರೇಖೆಯ ಮೇಲಿನ ಕುಟುಂಬಗಳಿಗೆ ವಿತರಣೆಯಾಗಿವೆ ಮತ್ತು ನಿಜವಾದ ಬಡವರಿಗೆ ಆಶ್ರಯ ಮನೆಗಳು ವಿತರಣೆಯಾಗಿಲ್ಲ. ಇದಕ್ಕೆ ಮೂಲ ಕಾರಣ ಸ್ಥಳೀಯ ರಾಜಕಾರಣದ ಪ್ರಭಾವ, ರಾಜಕೀಯ ಪ್ರತಿನಿಧಿಗಳ ಜೊತೆ ಹೆಚ್ಚು ಒಡನಾಟ ಇರುವವರಿಗೆ ಹಾಗೂ ಹಣದ ಆಮಿಷ ಒಡ್ಡುವ ಕಾರಣಗಳಿಂದ ಎಂದು ಸಂಶೋಧಕರು ತಮ್ಮ ಅಭಿಪ್ರಾಯಗಳನ್ನು ವ್ಯಕ್ತಪಡಿಸಿದ್ದಾರೆ.

ಎಸ್.ಪಿ.ಸಿಂಗ್ (2013) ರವರು ತಮ್ಮ ಲೇಖನದಲ್ಲಿ ಅಪೌಷ್ಟಿಕತೆ ಮತ್ತು ಹಸಿವನ್ನು ರಾಷ್ಟ್ರದಲ್ಲಿ ನಿರ್ಮೂಲನೆ ಮಾಡುವುದರಿಂದ ಸಾಮಾಜಿಕ ಬೆಳವಣಿಗೆಯಲ್ಲದೆ ಇದರ ಜೊತೆಗೆ ಒಟ್ಟಾರೆ ಆರ್ಥಿಕ ಬೆಳವಣಿಗೆಯನ್ನು ಉತ್ತಮ ಪಡಿಸುವಲ್ಲಿ ಸಹಾಯಕವಾಗುತ್ತದೆ. ಇದರಿಂದ ಆರ್ಥಿಕ ಉತ್ಪಾದನೆಯಲ್ಲಿ ಹೆಚ್ಚಿನ ಪ್ರಮಾಣದ ಉತ್ಪಾದನೆ ಮತ್ತು ಧೃಡತೆಯನ್ನು ಸಾಧಿಸಬಹುದು. ಹಸಿವು ಮತ್ತು ಅಪೌಷ್ಟಿಕತೆಯು ಸಮಾಜದ ಮೇಲೆ ದೊಡ್ಡ ಮಟ್ಟಿನ ಆರ್ಥಿಕ ಹೊರೆಯನ್ನು ಹೇರುತ್ತದೆ ಎಂದು ಲೇಖಕರು ತಮ್ಮ ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದಾರೆ.

ಯೋಜನಾ (2013) ಸಂಪಾದಕೀಯದಲ್ಲಿ ಬಡತನಕ್ಕೆ ಸಂಬಂಧಪಟ್ಟಂತೆ ಈ ಕೆಳಗಿನಂತೆ ಉಲ್ಲೇಖಿಸಿದ್ದಾರೆ. ಒಂದು ದೇಶದ ಆರ್ಥಿಕತೆ ಚೆನ್ನಾಗಿದ್ದರೆ ಆ ದೇಶದಲ್ಲಿರುವ ಜನರ ಆರ್ಥಿಕತೆ ಚೆನ್ನಾಗಿರುತ್ತದೆ ಎಂಬರ್ಥದಲ್ಲಿ ಮತ್ತು ಇದು ಬೆಳವಣಿಗೆಯ ವಿರೋಧಾಭಾಸ ಸ್ಥಿತಿ ತೋರಿಸುತ್ತದೆ. ಬಡತನವನ್ನು ಕಡಿಮೆ ಮಾಡುವ ಉದ್ಯೋಗಾವಕಾಶಗಳು ಸೃಷ್ಟಿಯಾಗುತ್ತಿಲ್ಲ. ಬಡತನ ಮತ್ತು ಉದ್ಯೋಗದ ಬೆಳವಣಿಗೆಯಲ್ಲಿ ನೇರ ಸಂಬಂಧವಿದೆ. ಉದ್ಯೋಗ, ಬಡತನ ಮತ್ತು ಬೆಳವಣಿಗೆಯ ನಡುವಿನ ಸಂಬಂಧಗಳನ್ನು ಮತ್ತು ಅವುಗಳ ಉದ್ದೇಶಗಳನ್ನು ಸ್ಥೂಲವಾಗಿ ಅರ್ಥೈಸಿಕೊಳ್ಳಬೇಕಾದ ಅಗತ್ಯವಿದೆ. ಬೆಳವಣಿಗೆ, ಬಡತನದ ಮೇಲೆ ಯಾವ ರೀತಿ ಪ್ರಭಾವ ಬೀರಬಹುದು ಎನ್ನುವ

ಅಂಶ, ಅದರ ಉದ್ಯೋಗ ಸೃಷ್ಟಿ ಸಾಮಾರ್ಥ್ಯವನ್ನು ಅವಲಂಬಿಸಿದೆ ಎಂದು ಅಭಿಪ್ರಾಯ ಪಡಲಾಗಿದೆ.

ಟಿ.ಸಿ.ಎ. ಅನಂತ್ (2013) ರವರು "ಬಡತನದ ಅಳತೆಗೋಲು" ಎಂಬ ತಮ್ಮ ಲೇಖನದಲ್ಲಿ ಇಂದಿನ ವಿಶ್ವದ ಎಲ್ಲಾ ಸಂಸ್ಥೆಗಳು ಬಡತನದ ವಿರುದ್ಧ ಹೋರಾಡುವುದು ಒಂದು ಪ್ರಮುಖ ಧ್ಯೇಯವಾಗಿಟ್ಟುಕೊಂಡಿವೆ. ಭಾರತದಲ್ಲಿ ಬಡತನವನ್ನು ಆದರಣೀಯವಾಗಿ ಅಳೆಯುವ ದೀರ್ಘಕಾಲದ ಸಂಪ್ರದಾಯ ಬಹಳ ಕಾಲದಿಂದಲೂ ಚಾಲ್ತಿಯಲ್ಲಿದೆ. ವಿಶ್ವಸಂಸ್ಥೆ ಕೂಡ ತನ್ನ ಸಹಸ್ರಮಾನದ ಅಭಿವೃದ್ಧಿ ಗುರಿಗಳನ್ನು ರೂಪಿಸುವಾಗ ತೀವ್ರ ಬಡತನ ಮತ್ತು ಹಸಿವಿನ ನಿರ್ಮೂಲನೆಯನ್ನು ಪ್ರಥಮ ಗುರಿಯನ್ನಾಗಿ ದಾಖಲಿಸಿದೆ. ಭಾರತದಲ್ಲಿ 1979 ರಿಂದಲೂ ಯೋಜನಾ ಆಯೋಗ ಎನ್ಎಸ್ಎಸ್ ಸಮೀಕ್ಷೆಯ ಕುಟುಂಬಗಳ ಉಪಭೋಗತೆಯ ವೆಚ್ಚವನ್ನು ಆಧರಿಸಿ ಬಡತನವನ್ನು ಅಂದಾಜು ಮಾಡುತ್ತಿದೆ ಎಂದು ಲೇಖಕರು ತಮ್ಮ ಅಭಿಪ್ರಾಯವನ್ನು ಹಂಚಿಕೊಂಡಿದ್ದಾರೆ.

ಎಂ.ಚಂದ್ರ ಪೂಜಾರಿ (2013) ರವರು ತಮ್ಮ ಲೇಖನ "ಬಡತನದ ಬವಣೆ"ದಲ್ಲಿ ಬಡತನದ ಮೇಲಿನ ಬಹುತೇಕ ಬರಹಗಳು ಬಡತನದ ಆರ್ಥಿಕ ಆಯಾಮಗಳ ಮೇಲೆ ಗಮನ ಹರಿಸುತ್ತಿವೆ. ಆದರೆ ಬಡತನ ಕೇವಲ ಆರ್ಥಿಕ ಸಮಸ್ಯೆಯಲ್ಲ ಮತ್ತು ಆರ್ಥಿಕ ರೂಪದಲ್ಲಿ ಮಾತ್ರ ಪ್ರಕಟಗೊಳ್ಳುವುದಿಲ್ಲ. ಬಡತನದ ಹುಟ್ಟು ಮತ್ತು ಪ್ರಕಟನೆಯಲ್ಲಿ ಸಾಮಾಜಿಕ, ರಾಜಕೀಯ ಹಾಗೂ ಸಾಂಸ್ಕೃತಿಕ ಕ್ಷೇತ್ರಗಳ ಪಾತ್ರ ಬಹಳ ಪ್ರಮುಖವಾಗಿದೆ. ಸಮಾಜದ ಪ್ರತಿಯೊಬ್ಬರೂ ಅವರ ಮೂರು ಹೊತ್ತಿನ ಊಟವನ್ನು ದುಡಿದು ಗಳಿಸುವಷ್ಟು ಸಂಪನ್ಮೂಲಗಳ ಒಡೆತನ ಹೊಂದುವ ರೀತಿಯಲ್ಲಿ ನಮ್ಮ ಅರ್ಥವ್ಯವಸ್ಥೆಯನ್ನು ರೂಪಿಸಬೇಕಾಗಿದೆ ಎಂದು ತಮ್ಮ ಅಭಿಪ್ರಾಗಳನ್ನು ವ್ಯಕ್ತಪಡಿಸಿದ್ದಾರೆ.

ಪಿ.ಸಾಯಿನಾಥ್ (2012) ರವರು ತಮ್ಮ ಪುಸ್ತಕ "ಬರ ಅಂದ್ರೆ ಎಲ್ಲರಿಗೂ ಇಷ್ಟ" ಎಂಬ ಪುಸ್ತಕವನ್ನು ದೇಶದ ಕಡು ಬಡ ಜಿಲ್ಲೆಗಳಿಂದ ಮಾಡಿದ ವರದಿಯ ಸರಣಿಯನ್ನು ವಿವರಿಸುತ್ತಾ ಭಾರತದಲ್ಲಿ ಬಡತನವನ್ನು ಒಂದು 'ಪ್ರಕರಣ'ವಲ್ಲ ಬದಲಿಗೆ ಒಂದು 'ಪ್ರಕ್ರಿಯೆ'ಯಾಗಿ ನೋಡಬೇಕು ಎಂಬ ಉದ್ದೇಶದಿಂದ ದೇಶದ ಕಡು ಬಡ ಜಿಲ್ಲೆಗಳಲ್ಲಿ ತಮ್ಮ ಪ್ರವಾಸವನ್ನು ಮಾಡಿದ್ದಾರೆ. ಬಡತನ ಮತ್ತು ಅವಕಾಶಗಳ ಕಸಿಯುವಿಕೆ ಎಂಬುದು ಯಾವಾಗಲೂ ಕೇವಲ 'ಪ್ರಕರಣ'ಗಳಾಗಿ ವರದಿಯಾಗುತ್ತಿವೆ. ಅದು ಸಹ ಏನಾದರೂ ಅನಾಹುತ ಸಂಭವಿಸಿದಾಗ ಇಲ್ಲವೇ ಯಾರಾದರೂ ಸತ್ತಾಗ ಮಾತ್ರ. ಆದರೆ ಬಡತನ ಎಂಬುದು ಹಸಿವಿನ ಕಾರಣದಿಂದಾಗಿ ಆಗುವ ಸಾವು ಅಥವಾ ಬಹುತೇಕ ಕ್ಷಾಮದ ಸ್ಥಿತಿಗಿಂತಲೂ ಭಿನ್ನವಾದ ಕಾರಣಗಳಿಂದ ಅವು ಭೂಮಿ ಇಲ್ಲದೆ ಇರುವುದು, ಆರೋಗ್ಯದ ಕೊರತೆ, ಶಿಕ್ಷಣದ ಕೊರತೆ, ಸಾಕ್ಷರತೆ, ಶಿಶುಗಳ ಸಾವಿನ ಪ್ರಮಾಣ ಮತ್ತು ಜೀವಿತ ಅವಧಿಯ ಪ್ರಶ್ನೆ ಕೂಡ ಬಡತನದ ಭಾಗಗಳೇ ಎಂದು ಲೇಖಕರು ತಮ್ಮ ಅಭಿಪ್ರಾಗಳನ್ನು ವ್ಯಕ್ತಪಡಿಸಿದ್ದಾರೆ.

ಅನದಲೀಬ್ ರೆಹಮಾನ್ (2014) ರವರು ತಮ್ಮ ಲೇಖನದಲ್ಲಿ ಎನ್‌ಎಸ್‌ಎಸ್‌ಓವು 2004-05, 2009-10 ಮತ್ತು 2011-12 ರಲ್ಲಿ ನಡೆಸಿದ ಸಮೀಕ್ಷೆಯ ಮಾಹಿತಿಯನ್ನು ಬಳಸಿಕೊಂಡು ಈ ಕೆಳಗಿನ ಕೆಲವೊಂದು ಪ್ರಮುಖವಾದ ಅಂಶಗಳನ್ನು ಮಂಡಿಸುತ್ತಾರೆ. 2004-05ರಲ್ಲಿ ಶೇಕಡ29.5ರಷ್ಟು ಇದ್ದ ಬಿಪಿಎಲ್ ಮತ್ತು ಎಎವೈ ಕಾರ್ಡನ್ನು ಹೊಂದಿರುವ ಕುಟುಂಬಗಳ ಸಂಖ್ಯೆಯು 2011-12ರಲ್ಲಿ ಇದು ಶೇಕಡ 42.59ಕ್ಕೆ ಏರಿಕೆಯಾಯಿತು ಮತ್ತು ಇದರ ಜೊತೆಯಲ್ಲಿ ಯಾವುದೇ ಕಾರ್ಡನ್ನು ಹೊಂದಿರದೆ ಇರುವ ಕುಟುಂಬಗಳ ಸಂಖ್ಯೆಯಲ್ಲಿ ಶೇಕಡ 18.72 ರಿಂದ 14.07ಕ್ಕೆ ಇಳಿಕೆಯಾಯಿತು. ಈ ಏರಿಕೆ ಮತ್ತು ಇಳಿಕೆ ಕ್ರಮವು ಕರ್ನಾಟಕದಲ್ಲಿಯೂ ಸಹ ಕಾಣಬಹುದಾಗಿದೆ. 2011-12ರಂತೆ ಭಾರತದ ಸಾಮಾಜಿಕ ವಿಂಗಡಣೆಯ ಅನುಸಾರವಾಗಿ ನೋಡಿದರೆ ಪರಿಶಿಷ್ಟ ಜಾತಿಯವರಲ್ಲಿ ಶೇಕಡ 58ರಷ್ಟು ಪರಿಶಿಷ್ಟ ಪಂಗಡದವರಲ್ಲಿ ಶೇಕಡ 54ರಷ್ಟು ಮತ್ತು ಇತರೆ ಹಿಂದುಳಿದ ವರ್ಗದವರಲ್ಲಿ ಶೇಕಡ 40ರಷ್ಟು ಕುಟುಂಬಗಳು ಬಿಪಿಎಲ್ ಅಥವಾ ಎಎವೈ ಕಾರ್ಡನ್ನು ಹೊಂದಿದ್ದಾರೆ. ಕರ್ನಾಟಕದಲ್ಲಿ ಶೇಕಡ 70ಕ್ಕಿಂತ ಹೆಚ್ಚಿನ ಕುಟುಂಬಗಳು ತಮ್ಮ ದಿನನಿತ್ಯದ ಆಹಾರವಾದ ಅಕ್ಕಿ ಮತ್ತು ಗೋಧಿಯನ್ನು ಸಾರ್ವಜನಿಕ ವಿತರಣಾ ವ್ಯವಸ್ಥೆಯಿಂದ ಖರಿದೀಸುತ್ತವೆ ಮತ್ತು ಮನೆಯ ಹೊಲಗಳಲ್ಲಿ ಬೆಳೆದ ಹಾಗೂ ಮುಕ್ತ ಮಾರುಕಟ್ಟೆಯ ಮೇಲಿನ ಅವಲಂಬನೆ ಕಡಿಮೆಯಾಗುತ್ತಿದೆ ಮತ್ತು ಕರ್ನಾಟಕದಲ್ಲಿ ಶೇಕಡ 25ರಷ್ಟು ಕುಟುಂಬಗಳು ತಮ್ಮ ಕುಟುಂಬಕ್ಕೆ ಬೇಕಾಗುವ ಅಕ್ಕಿ ಮತ್ತು ಗೋಧಿಗಾಗಿ ಇನ್ನಿತರೇ ಮೂಲಗಳ ಮೇಲೆ ಅವಲಂಬಿತವಾಗಿವೆ ಮತ್ತು ಇದು ದಕ್ಷಿಣ ಭಾರತದಲ್ಲಿಯೇ ಅಧಿಕವಾಗಿದೆ ಎಂದು ಲೇಖಕರು ಅಭಿಪ್ರಾಯ ಪಡುತ್ತಾರೆ.

ಭಾಸ್ಕರ್ ಮುಖರ್ಜಿ (2004) ರವರು ತಮ್ಮ ಪುಸ್ತಕ "ಪಾವರ್ಟಿ, ಫುಡ್ ಸೆಕ್ಯುರಿಟಿ ಆ್ಯಂಡ್ ಸಸ್ಟೆನೆಬಿಲಿಟಿ"ವನ್ನು ಯೋಜನಾ ಆಯೋಗದ ಹಣಕಾಸಿನ ನೆರವಿನಿಂದ ಕೈಗೊಂಡಿರುವ ಅಧ್ಯಯನದಿಂದ ಕಲೆಹಾಕಿದ ಮಾಹಿತಿಯಿಂದ ಈ ಪುಸ್ತಕವನ್ನು ಪ್ರಕಟಿಸಲಾಗಿದೆ. ಈ ಅಧ್ಯಯನವನ್ನು ಉತ್ತರ ಪ್ರದೇಶದ ಅಲಹಬಾದ ಜಿಲ್ಲೆಯಲ್ಲಿನ ನಾಲ್ಕು ವಲಯಗಳನ್ನು ಆಯ್ಕೆ ಮಾಡಿಕೊಂಡು ಸಾರ್ವಜನಿಕ ವಿತರಣಾ ಪದ್ಧತಿಯ ಪರಿಣಾಮಗಳನ್ನು ಅಧ್ಯಯನ ಮಾಡಲಾಯಿತ್ತು. ನ್ಯಾಯಬೆಲೆ ಅಂಗಡಿಗಳಿಂದ ರಿಯಾತಿಯಲ್ಲಿ ಮಾರಾಟ ಮಾಡುವ ಆಹಾರ ಧಾನ್ಯಗಳು ಈಗಾಗಲೇ ಇದರಿಂದ ಅನೂಕುಲತೆಯನ್ನು ಪಡೆದಿರುವ ಸಾಮಾಜಿಕ-ಆರ್ಥಿಕ ಪಂಗಡಗಳೇ ಹೆಚ್ಚಿನ ಲಾಭವನ್ನು ಪಡೆಯುತ್ತಿವೆ. ಕಾರ್ಡಗಳು ಹಂಚಿಕೆಯಾಗುವಲ್ಲಿ ಕೂಡ ಅನೇಕ ರೀತಿಯ ಗೊಂದಲಗಳಿವೆ ಇದಕ್ಕಾಗಿ ಲೇಖಕರು ಅನೇಕ ಸಲಹೆ ಮತ್ತು ಉಪಾಯಗಳನ್ನು ವಿವರಿಸಿದ್ದಾರೆ.

ಕರ್ನಾಟಕ ಜನಪರ ವೇದಿಕೆ (2008)ಯವರು "ಬಡವರ ಅನ್ನದ ತಟ್ಟೆಗೆ ಕುಬೇರರ ಕನ್ನ" ಎನ್ನುವ ಕೈಪಿಡಿಯಲ್ಲಿ ನ್ಯಾಯ ಬೆಲೆ ಮತ್ತು ಆಹಾರ ಪದಾರ್ಥಗಳ ಬಗ್ಗೆ ಕೆಲವೊಂದು ಅನಿಸಿಕೆ ಮತ್ತು ಅಭಿಪ್ರಾಯಗಳನ್ನು ವ್ಯಕ್ತಪಡಿಸಿದ್ದಾರೆ. ಇಂದು ಕರ್ನಾಟಕದ ಪ್ರತೀ ಜಿಲ್ಲಾ-

ತಾಲೂಕು ಕೇಂದ್ರಗಳಲ್ಲಿನ ಆಹಾರ ಮತ್ತು ನಾಗರಿಕ ಸರಬರಾಜು ಇಲಾಖೆಯ ಕಛೇರಿಗಳ ಎದುರು ನೂರಾರು ಜನರು ಹಲವಾರು ಸಂಘ-ಸಂಸ್ಥೆಗಳ ಮೂಲಕ ಪ್ರತಿಭಟನೆಯಲ್ಲಿ ನಿರತರಾಗಿರುವ ದೃಶ್ಯಗಳು ಅತ್ಯಂತ ಸಾಮಾನ್ಯವಾದ ಚಿತ್ರವಾಗಿದೆ. ನಮಗೆ ರೇಷನ್ ಕಾರ್ಡ್ ಕೊಟ್ಟಿಲ್ಲ; ಅಂತ್ಯೋದಯ ಕಾರ್ಡ್ ಕೊಡಬೇಕಿತ್ತು ಆದರೆ ಎಪಿಎಲ್ ಕಾರ್ಡ್ ಕೊಟ್ಟಿದ್ದಾರೆ; ನಮಗೆ ಬರೀ ನಾಲ್ಕು ಕೆಜಿ ಅಕ್ಕಿ ಕೊಟ್ಟರು, ಸೀಮೆಎಣ್ಣೆ ಕೊಡಲ್ವಂತೆ ಎಂಬ ಇತ್ಯಾದಿ ದೂರುಗಳನ್ನು ಕೊಡುತ್ತಿರುತ್ತಾರೆ. ಪಡಿತರ ಚೀಟಿಗಳಲ್ಲಿ ದೊರೆಯುವ ಆಹಾರ ಪದಾರ್ಥಗಳ ಆಧಾರದ ಮೇಲೆಯೇ ತಮ್ಮ ಜೀವನ ನಿರ್ವಹಣೆಯನ್ನು ಅವಲಂಬಿಸಿರುವ ಲಕ್ಷಾಂತರ ಕುಟುಂಬಗಳು ನಮ್ಮ ರಾಜ್ಯದಲ್ಲಿವೆ. ಈಗ ಕೊಡುತ್ತಿರುವ ಕಾರ್ಡ್‌ಗಳಲ್ಲೂ ಎಪಿಎಲ್, ಅಕ್ಷಯ, ಅಂತ್ಯೋದಯ, ಅನಿಲ-ರಹಿತ ಮತ್ತು ಅನಿಲ-ಸಹಿತ ಎಂಬ ಹಲವು ವಿಧಗಳಿದ್ದು ಅವೂ ಸಹ ಜನರಿಗೆ ಗೊಂದಲ ಮೂಡಿಸಿವೆ ಎಂದು ಅಭಿಪ್ರಾಯ ಪಡಲಾಗಿದೆ.

ದಿವಾಕರ (2013)ರವರು ತಮ್ಮ ಅನುವಾದಿತ "ಜಾಗತೀಕರಣ ಮತ್ತು ದಲಿತರು" ಪುಸ್ತಕದಲ್ಲಿ ವಿಶಾಲ ಅರ್ಥದಲ್ಲಿ ಭಾರತದಲ್ಲಿ ವಾಸ್ತವತೆ ಎಂದರೆ ಇಲ್ಲಿ ಬಡಜನತೆ ಸಂಖ್ಯೆ ಅಪಾರ ಪ್ರಮಾಣದಲ್ಲಿದೆ. 1996ರ ಮಾನವ ಅಭಿವೃದ್ಧಿ ಸೂಚ್ಯಂಕದ ಪ್ರಕಾರ ಭಾರತದಲ್ಲಿ 229 ದಶಲಕ್ಷ ಜನರು ಕಡಿಮೆ ಆದಾಯದಿಂದ ಬಡತನ ಅನುಭವಿಸುತ್ತಿದ್ದರೆ 554 ದಶಲಕ್ಷ ಜನತೆ ಬದುಕುವ ಸಾಮರ್ಥ್ಯ ಕಳೆದುಕೊಂಡು ಬಡತನದಲ್ಲಿ ಬೇಯುತ್ತಿದ್ದಾರೆ. ಅಂದರೆ ಒಟ್ಟು ಜನಸಂಖ್ಯೆಯ ಶೇ.61.5ರಷ್ಟು ಜನರು ಬದುಕುವ ಸಾಮರ್ಥ್ಯವಿಲ್ಲದೆ ಬಳಲುತ್ತಿದ್ದಾರೆ ಎಂದು ಲೇಖಕರು ತಮ್ಮ ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದಾರೆ.

ಚಂದ್ರಶೇಖರ ಟಿ.ಆರ್. (2014) ರವರು ತಮ್ಮ ಲೇಖನ "ಆಹಾರ ಭದ್ರತೆ: ಜನರನ್ನು ಒಳಗೊಳ್ಳುವ ಯೋಜನೆ"ದಲ್ಲಿ ಕರ್ನಾಟಕ ಸರಕಾರದ ಅನ್ನಭಾಗ್ಯ ಯೋಜನೆಯ ಬಗ್ಗೆ ವಿವರಿಸುತ್ತಾ ಮಹಿಳೆಯರಿಗೆ ಅನ್ನಭಾಗ್ಯ ಯೋಜನೆಯು ಒಂದು ವರವಾಗಿ ಪರಿಣಮಿಸಿದೆ ಮತ್ತು ನಮ್ಮ ಜನರು ಎದುರಿಸುತ್ತಿರುವ, ಕಾಣಿಸಿದರೂ ಕಾಣಿಸದಂತಿರುವ ಹಸಿವಿನ ಸಮಸ್ಯೆಯನ್ನು ಪರಿಹರಿಸುವ ಕಾರ್ಯಕ್ರಮವಾಗಿದೆ. ಬಡವರಿಗೆ ಸಂಬಂಧಿಸಿದಂತೆ ಅನ್ನಭಾಗ್ಯವು ವರಮಾನವನ್ನು ಉಳಿಸುವ ಕ್ರಮವೆಂದು ಭಾವಿಸಬೇಕು. ನಮ್ಮ ರಾಜ್ಯದಲ್ಲಿ ಒಟ್ಟು ಭೂರಹಿತ ಕೃಷಿ ದಿನಗೂಲಿ ದುಡಿಮೆಗಾರರಲ್ಲಿ ಮಹಿಳಾ ದುಡಿಮೆಗಾರರ ಪ್ರಮಾಣ ಪುರುಷರಿಗಿಂತಲೂ ಅಧಿಕವಾಗಿದ್ದು ಬಡತನದಲ್ಲಿರುವ ಕುಟುಂಬಗಳಲ್ಲಿ ಅದರ ನಿರ್ವಹಣೆಯು ಮಹಿಳೆಯದೇ ಆಗಿರುವುದರಿಂದ ಆಹಾರ ಭದ್ರತೆಯು ಮಹಿಳೆಯರಿಗೆ ಅತ್ಯಂತ ಅಗತ್ಯವಾದ ಸಂಗತಿಯಾಗಿದೆ. ಈ ಕಾರ್ಯಕ್ರಮವು ಸಾಮಾಜಿಕ ನ್ಯಾಯದ ಸಂಗತಿಯಾಗಿದೆ ಹಾಗೂ ಅಭಿವೃದ್ಧಿಯ ಫಲ ಎಲ್ಲರಿಗೂ ಸಮಾನವಾಗಿ ಅಲ್ಲದಿದ್ದರೂ ಸಮರ್ಪಕವಾಗಿ ಮತ್ತು ಸರಾಗವಾಗಿ ದೊರೆಯುವಂತೆ ಮಾಡಬೇಕು ಎಂದು ಲೇಖಕರು ತಮ್ಮ ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದಾರೆ.

ಚಂದ್ರ ಪೂಜಾರಿ ಎಂ. (2014) ರವರು ತಮ್ಮ ಪುಸ್ತಕ "ಅಭಿವೃದ್ಧಿ ಮತ್ತು ರಾಜಕೀಯ"ದಲ್ಲಿ ಅಭಿವೃದ್ಧಿ, ಬಡತನ ಮತ್ತು ರಾಜಕೀಯದ ನಡುವಿನ ಸಂಬಂಧವನ್ನು ವಿವರಿಸುತ್ತಾ ಚಾಲ್ತಿಯಲ್ಲಿರುವ ಅಭಿವೃದ್ಧಿ ಕಾರ್ಯಕ್ರಮಗಳಿಂದ ಬಡತನ ನಿವಾರಣೆಯಾಗುವುದಿಲ್ಲ ಹೊರತಾಗಿ ಬಡತನ ಸೃಷ್ಟಿಯಾಗುತ್ತದೆ. ಸರಕು ಸೇವೆಗಳ ಅನುಭೋಗದ ಕೊರತೆಗಳು ಕೆಲವೊಮ್ಮೆ ಒತ್ತಾಯ ಪೂರ್ವಕವಾಗಿ ಹೇರಲ್ಪಟ್ಟ ಸಂಗತಿಯಾಗಿದೆ ಮತ್ತು ಎಲ್ಲಿಯವರೆಗೆ ಬಡತನವನ್ನು ನಿವಾರಿಸುವ ಜವಾಬ್ದಾರಿಯನ್ನು ಬಡವರೇ ವಹಿಸಲು ಸಾಧ್ಯವಿಲ್ಲವೋ ಅಲ್ಲಿಯವರೆಗೆ ಬಡತನವೆಂಬುದು ಮುಂದುವರೆಯುತ್ತದೆ ಎಂದು ಲೇಖಕರು ತಮ್ಮ ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದಾರೆ.

ಭಾರತದ ಗ್ರಾಮೀಣಾಭಿವೃದ್ಧಿ ವರದಿ (2013)ಯಲ್ಲಿ ಉಲ್ಲೇಖಿಸಿದಂತೆ ಗ್ರಾಮೀಣ ಮತ್ತು ನಗರ ಪ್ರದೇಶದಲ್ಲಿನ ಜನರ ಜೀವನಮಟ್ಟ ಸುಧಾರಿಸಿದೆ ಆದರೆ ರಾಜ್ಯಗಳಲ್ಲಿ, ಜಿಲ್ಲೆಗಳಲ್ಲಿ, ಸಾಮಾಜಿಕ ಪಂಗಡಗಳಲ್ಲಿ ಮತ್ತು ಲಿಂಗಾನುಪಾತವಾಗಿ ಬಹಳ ಕಳವಳಕಾರಿ ಮತ್ತು ಅಸಮಾನತೆಗಳಿವೆ. ಈ ಅಸಮಾನತೆಗಳು ಕೇವಲ ಆದಾಯದಲ್ಲಿ ಅಲ್ಲ ಬದಲಾಗಿ ಸಾಮಾಜಿಕ ಅಭಿವೃದ್ಧಿಯಲ್ಲೂ ಸಹ ಅಸಮಾನತೆ ಇದೆ. ಶಿಕ್ಷಣಕ್ಕಾಗಿ ಸರಕಾರವು ಅನೇಕ ರೀತಿಯ ಕಾರ್ಯಕ್ರಮಗಳ ಮೂಲಕ ಸ್ವಲ್ಪಮಟ್ಟಿನ ಸಾಧನೆ ಆಗಿದ್ದರೂ ಸಹ ಅಂದುಕೊಂಡಷ್ಟು ಶಿಕ್ಷಣದ ಗುಣಮಟ್ಟವಿಲ್ಲ. ಇನ್ನು ಪ್ರಮುಖವಾದ ಆರೋಗ್ಯ ಕ್ಷೇತ್ರಕ್ಕೆ ಕಡಿಮೆ ಹಣವನ್ನು ವ್ಯಯಿಸಲಾಗುತ್ತಿದೆ ಮತ್ತು ಹೆಚ್ಚಿನ ಪ್ರಾಮುಖ್ಯತೆಯನ್ನು ಕೊಡುತ್ತಿಲ್ಲ. ಗ್ರಾಮೀಣ ಪ್ರದೇಶದಲ್ಲಿನ ತಾಯಿ ಮತ್ತು ಮಕ್ಕಳ ಮರಣದ ಪ್ರಮಾಣ ಸ್ವಲ್ಪ ಕಡಿಮೆಯಾಗಿದ್ದು ಇದು ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡಗಳಲ್ಲಿ ಇನ್ನೂ ಹೆಚ್ಚಿನ ಪ್ರಮಾಣದಲ್ಲಿದೆ, ಸರಿಯಾದ ಆರೋಗ್ಯ ಸೌಲಭ್ಯಗಳು ದೊರಕುತ್ತಿಲ್ಲ. ಇದರ ಜೊತೆ ಜೊತೆಗೆ ಆರೋಗ್ಯ ಪದ್ಧತಿಯಲ್ಲಿ, ಪೌಷ್ಟಿಕ ಆಹಾರವನ್ನು ಪಡೆದುಕೊಳ್ಳುವುದರಲ್ಲಿ, ಶುದ್ಧವಾದ ಕುಡಿಯುವ ನೀರು ಮತ್ತು ಸುತ್ತಮುತ್ತಲಿನ ಪರಿಸರವನ್ನು ಸುಧಾರಿಸಲು ಅನೇಕ ರೀತಿಯ ಕ್ರಮಗಳನ್ನು ಕೈಗೊಳ್ಳಬೇಕಾಗಿದೆ. ಈ ಎಲ್ಲಾ ಸೇವೆಗಳನ್ನು ಒದಗಿಸುವುದು ತುಂಬ ಸವಾಲಿನ ಕೆಲಸವಾಗಿದೆ. ಒಟ್ಟಾರೆ ಎಲ್ಲಾ ರೀತಿಯ ಕಳಪೆ ಮಟ್ಟದ ಸೇವೆಗಳಿಂದ ಸಾರ್ವಜನಿಕರು ಖಾಸಗಿ ಸೇವೆಗಳ ಮೇಲೆ ಹೆಚ್ಚಿನ ಅವಲಂಬನೆ ಇರುವುದರಿಂದ ಹೆಚ್ಚಿನ ಖರ್ಚು-ವೆಚ್ಚವನ್ನು ಮಾಡಿ ಸಾಲದ ಸುಳಿಗೆ ಸಿಲುಕಿ ಬಡವರಾಗುತ್ತಾರೆ. ಇದರಿಂದ ಬಡವರಲ್ಲದವರು ಸಹಿತ ಬಡವರಾಗುವ ಸ್ಥಿತಿ ತಲುಪುತ್ತಾರೆ ಎಂದು ವರದಿಯಲ್ಲಿ ಉಲ್ಲೇಖಿಸಲಾಗಿದೆ.

ದಟ್ಸ ಕನ್ನಡ (2014) ಎಂಬ ಅಂತರ್ಜಾಲ ತಾಣದಲ್ಲಿ ಉಲ್ಲೇಖಿಸಿದಂತೆ ಒಟ್ಟು ರಾಜ್ಯಗಳ ಪೈಕಿ (ಕೇಂದ್ರಾಡಳಿತ ಪ್ರದೇಶಗಳನ್ನು ಹೊರತು ಪಡಿಸಿ) ಬಡತನ ರೇಖೆಗಿಂತ ಕೆಳಗಿರುವ ಹದಿನೈದು ರಾಜ್ಯಗಳ ಪಟ್ಟಿಯನ್ನು ರಿಸರ್ವ್ ಬ್ಯಾಂಕ್ ಆಫ್ ಇಂಡಿಯಾ ಬಡುಗಡೆ ಮಾಡಿ ವಿಶ್ವದ ಒಟ್ಟು ಜನಸಂಖ್ಯೆಯ ಮೂರನೇ ಒಂದು ಭಾಗದಷ್ಟು ಬಡವರು ಭಾರತದಲ್ಲಿ ನೆಲೆಸಿದ್ದಾರೆ. 2004-05ರ ಅವಧಿಯಲ್ಲಿ ದೇಶದ ಒಟ್ಟು ಬಡವರ ಸಂಖ್ಯೆ ಅಂದಾಜು 396 ಮಿಲಿಯನ್ ಆಗಿತ್ತು. 2014ರಲ್ಲಿ ಈ ಸಂಖ್ಯೆ 148 ಮಿಲಿಯನಿಗೆ ಇಳಿದಿದೆ ಎಂದು ಆರ್‌ಬಿಐಯ್

ತಿಳಿಸಿದೆ. 2011-12ರ ಅವಧಿಯಲ್ಲಿ ಯೋಜನಾ ಆಯೋಗ ನಡೆಸಿದ ಅಧ್ಯಯನದ ಅನ್ವಯ ಗ್ರಾಮೀಣ ಪ್ರದೇಶದಲ್ಲಿನ ಜನರ ಸರಾಸರಿ ಮಾಸಿಕ ತಲಾ ಆದಾಯ ರೂಪಾಯಿ 816, ನಗರವಾಸಿಗಳ ಸರಾಸರಿ ತಲಾ ಆದಾಯ ರೂಪಾಯಿ 1 ಸಾವಿರ. ಭಾರತೀಯ ರಿಸರ್ವ ಬ್ಯಾಂಕ್ ಪ್ರಕಟಣೆಯ ಪ್ರಕಾರ ದೇಶದ ಹದಿನೈದು ಬಡ ರಾಜ್ಯಗಳೆಂದರೆ; ನಕ್ಸಲ್ ಪೀಡಿತ ಛತ್ತೀಸಗಢ ರಾಜ್ಯವು ಶೇ. 39.93, ಜಾರ್ಖಂಡ ಶೇ.36.96, ಮಣಿಪುರ ಶೇ. 36.89, ಅರುಣಾಚಲ ಪ್ರದೇಶ ಶೇ. 34.67, ಬಿಹಾರ ಶೇ.33.74, ಒರಿಸ್ಸಾ ಶೇ. 32.59, ಆಸ್ಸಾಂ ಶೇ. 31.98, ಮಧ್ಯಪ್ರದೇಶ ಶೇ.31.65, ಉತ್ತರಪ್ರದೇಶ ಶೇ. 29.43, ಕರ್ನಾಟಕ ಶೇ. 20.91, ಮಿಜೋರಾಂ ಶೇ. 20.12, ಪಶ್ಚಿಮ ಬಂಗಾಳ ಶೇ. 19.98, ನಾಗಾಲ್ಯಾಂಡ್ ಶೇ.18.88 ಮಹಾರಾಷ್ಟ್ರ ಶೇ.17.35 ಮತ್ತು ಕೊನೆಯದಾಗಿ ಗುಜರಾತ್ ಶೇ. 16.63ರೊಂದಿಗೆ ಕೊನೆಯ ಸ್ಥಾನದಲ್ಲಿದೆ. ಈ ಪಟ್ಟಿಯಲ್ಲಿ ಕೇವಲ ಕರ್ನಾಟಕ ಹೊರತು ಪಡಿಸಿದರೆ ದಕ್ಷಿಣದ ಯಾವ ರಾಜ್ಯಗಳು ಇದರಲ್ಲಿ ಇಲ್ಲದಿರುವದು ಸ್ಪಷ್ಟವಾಗುತ್ತದೆ.

ಭಾರತ ಸರಕಾರದ ವತಿಯಿಂದ 2012-13ರಲ್ಲಿ ಕೈಗೊಂಡಿದ್ದ ಜಿಲ್ಲಾ ಕೌಟುಂಬಿಕ ಸಮೀಕ್ಷೆ (ಡಿಎಲ್‌ಹೆಚ್‌ಎಸ್-4) ನಾಲ್ಕರ ಪ್ರಕಾರ ಕರ್ನಾಟಕದ ಎಲ್ಲಾ ಜಿಲ್ಲೆಗಳ ಸಾರ್ವಜನಿಕ ಸಂಸ್ಥೆಗಳಲ್ಲಿ ಹೆರಿಗೆಯಾದವರು ಒಂದು ಹೆರಿಗೆಗೆ ಮಾಡಿದ ಒಟ್ಟು ಖರ್ಚನ್ನು ವಿವರಿಸಲಾಗಿದೆ. ದೇಶದ ಎಲ್ಲಾ ಸಾರ್ವಜನಿಕ ಸಂಸ್ಥೆಗಳಲ್ಲಿ ಹೆರಿಗೆಯನ್ನು ಹೆಚ್ಚಿಸಲು ಸರಕಾರವು ಅನೇಕ ರೀತಿಯ ಕಾರ್ಯಕ್ರಮಗಳನ್ನು ತನ್ನ ರಾಷ್ಟ್ರೀಯ ಗ್ರಾಮೀಣ ಯೋಜನೆಯಲ್ಲಿ ಪ್ರಕಟಿಸಿರುತ್ತದೆ. ಉದಾ: ಜನನಿ ಶಿಸು ಸುರಕ್ಷಾ ಕಾರ್ಯಕ್ರಮದಡಿಯಲ್ಲಿ ಎಲ್ಲಾ ಸರಕಾರಿ ಸಂಸ್ಥೆಗಳಲ್ಲಿ ಹೆರಿಗೆಗಾಗಿ ಬರುವವರನ್ನು ಮನೆಯಿಂದ ಉಚಿತವಾಗಿ ಕರೆದುಕೊಂಡು ಬರಬೇಕು ಮತ್ತು ಹೆರಿಗೆ ನಂತರದಲ್ಲಿ ಅವರ ಮನೆಗೆ ಉಚಿತವಾಗಿ ಬಿಡಬೇಕು, ಯಾವುದೇ ತರಹದ ನೋಂದಣಿ ಶುಲ್ಕ ಇರುವುದಿಲ್ಲ, ತಾಯಿ ಮತ್ತು ನವಜಾತ ಶಿಶುವಿಗೆ ಎಲ್ಲಾ ಪರೀಕ್ಷೆಗಳು ಮತ್ತು ಔಷಧಿಗಳು ಉಚಿತವಾಗಿ ದೊರಕಬೇಕು ಮತ್ತು ಅವರು ಆಸ್ಪತ್ರೆಯಲ್ಲಿರುವವರೆಗೆ ಉಚಿತವಾಗಿ ಊಟವನ್ನು ಕೊಡಮಾಡಿದೆ. ಈ ಸೌಲಭ್ಯಗಳು ಎಲ್ಲಾ ಜಾತಿ ಮತ್ತು ವರ್ಗದ ಜನರು ದೇಶದ ಎಲ್ಲಾ ಸರಕಾರಿ ಆಸ್ಪತ್ರೆಗಳಲ್ಲಿ ಪಡೆಯಬಹುದು. ಇಷ್ಟೆಲ್ಲಾ ರೀತಿಯ ಅನುಕೂಲತೆ ಇದ್ದಾಗಿಯೂ ಸಹ ಸರಕಾರಿ ಆಸ್ಪತ್ರೆಯಲ್ಲಿ ಹೆರಿಗೆ ಮಾಡಿಸಿಕೊಂಡವರು ಕರ್ನಾಟಕ ರಾಜ್ಯದಲ್ಲಿ ಸರಿಸುಮಾರು ಒಂದು ಹೆರಿಗೆಗೆ ಮೂರು ಸಾವಿರದ ಒಂದು ನೂರಾ ಮೂವತ್ತು ರೂಪಾಯಿಗಳನ್ನು ತಮ್ಮ ಜೇಬಿನಿಂದ ಖರ್ಚು ಮಾಡುತ್ತಾರೆಂದು ಡಿಎಲ್‌ಹೆಚ್‌ಎಸ್-4 ಸಮೀಕ್ಷೆಯಿಂದ ತಿಳಿದು ಬರುತ್ತದೆ. ಇನ್ನು ಜಿಲ್ಲಾವಾರು ನೋಡಿದಾಗ ಬೆಂಗಳೂರು (6 ಸಾವಿರದ 65 ರೂಪಾಯಿಗಳು), ರಾಮನಗರ (6 ಸಾವಿರದ 35 ರೂಪಾಯಿಗಳು), ಬೆಂಗಳೂರು ಗ್ರಾಮೀಣ (6 ಸಾವಿರದ 16 ರೂಪಾಯಿಗಳು) ಮತ್ತು ಚಿಕ್ಕಮಗಳೂರು (5 ಸಾವಿರದ 67 ರೂಪಾಯಿಗಳು) ಜಿಲ್ಲೆಯಲ್ಲಿಯ ಜನರು ರಾಜ್ಯದ ಸರಾಸರಿಗಿಂತಲೂ ಅತಿ ಹೆಚ್ಚಿನ ಹಣವನ್ನು ತಮ್ಮ ಜೇಬಿನಿಂದ ಖರ್ಚು ಮಾಡುತ್ತಾರೆಂದು

ಸಮೀಕ್ಷೆಯಿಂದ ತಿಳಿದು ಬರುತ್ತದೆ. ಇಲ್ಲಿ ಒಂದು ಮೂಲಭೂತವಾದ ಪ್ರಶ್ನೆಯನ್ನು ಎತ್ತಬೇಕಾಗುತ್ತದೆ. ಅದೇನೆಂದರೆ ಸರಕಾರವು ಸರಕಾರಿ ಸಂಸ್ಥೆಗಳಲ್ಲಿ ಉಚಿತವಾಗಿ ಹೆರಿಗೆಮಾಡಿಸಿಕೊಳ್ಳಲು ಅನೇಕ ರೀತಿಯ ಕಾರ್ಯಕ್ರಮಗಳು ಜಾರಿಯಲ್ಲಿದ್ದರೂ ಸಹಿತ ಇಷ್ಟೆಲ್ಲಾ ಹಣ ಯಾವುದಕ್ಕಾಗಿ ಖರ್ಚಾಗುತ್ತಿದೆ? ಇದು ಕೇವಲ ಹೆರಿಗೆಗಾಗಿ ಮಾತ್ರ ಈ ರೀತಿಯಾದರೆ ಇನ್ನುಳಿದ ಸಾಮಾನ್ಯ ಹಾಗೂ ದಿನನಿತ್ಯದ ಕಾಯಿಲೆಗಳಾದ ನೆಗಡಿ, ಕೆಮ್ಮು, ಜ್ವರಗಳಿಗೆ ಗ್ರಾಮದ ಅಥವಾ ಸಮೀಪದ ಪಟ್ಟಣದಲ್ಲಿನ ಖಾಸಗಿ ವೈದ್ಯರ ಹತ್ತಿರ ತೋರಿಸಿ ಅದಕ್ಕೆ ಪ್ರತಿಸಲ ಸುಮಾರು 150–200 ರೂಪಾಯಿಗಳವರೆಗೆ ಒಂದೊಂದು ಕುಟುಂಬಗಳು ತಮ್ಮ ಜೇಬಿನಿಂದ ಖರ್ಚು ಮಾಡುತ್ತಾರೆ ಮತ್ತು ಕೆಲವೊಂದು ದೊಡ್ಡ ಪ್ರಮಾಣದ ಕಾಯಿಲೆಗಳಿಗೆ ಇದಕ್ಕಿಂತಲೂ ಹೆಚ್ಚಿನ ಹಣವನ್ನು ಖರ್ಚು ಮಾಡಬೇಕಾಗುತ್ತದೆ.

ಕರ್ನಾಟಕದ ಆರ್ಥಿಕ ಸಮೀಕ್ಷೆ (2013–14)ಯ ಪ್ರಕಾರ ಬಡತನವನ್ನು ಪ್ರಾದೇಶಿಕವಾಗಿ ನೋಡಿದಾಗ ರಾಜ್ಯದಲ್ಲಿ ಹಿಂದುಳಿದ ಭಾಗವಾದ ಗುಲ್ಬರ್ಗಾ ವಿಭಾಗವು ಅತಿ ಹೆಚ್ಚಿನ ಶೇಕಡಾ 36.9ರಷ್ಟನ್ನು ರಾಜ್ಯದ ಬಡತನಕ್ಕೆ ತನ್ನ ಪಾಲನ್ನು ಸೇರಿಸುತ್ತಿದೆ. ಇದರ ನಂತರದಲ್ಲಿ ಬೆಳಗಾವಿ (ಶೇ.31.8), ಬೆಂಗಳೂರು (ಶೇ.20.4) ಮತ್ತು ಮೈಸೂರು (ಶೇ.10.8) ವಿಭಾಗಗಳು ಗುಲ್ಬರ್ಗಾ ವಿಭಾಗಕ್ಕಿಂತಲೂ ಕಡಿಮೆ ಪ್ರಮಾಣವನ್ನು ನೀಡುತ್ತಿವೆ. ಕೆಳಗಿನ ಕೋಷ್ಟಕ 1.6ರಿಂದ ಕರ್ನಾಟಕದಲ್ಲಿನ ಸಾಮಾಜಿಕ ಪಂಗಡಗಳ ಅನುಗುಣವಾಗಿ ಪ್ರತಿ ತಿಂಗಳು ಗ್ರಾಮೀಣ ಪ್ರದೇಶಗಳಲ್ಲಿನ ಕುಟುಂಬಗಳು

**ಕೋಷ್ಟಕ 1.6**

**ರಾಜ್ಯದಲ್ಲಿನ ಕುಟುಂಬಗಳ ಅನುಭೋಗದ ಖರ್ಚು ಮತ್ತು ಬಡತನಕ್ಕೆ ಸಲ್ಲಿಸುತ್ತಿರುವ ಕಾಣಿಕೆ**

| ವರ್ಷ | ಸಾಮಾಜಿಕ ಪಂಗಡಗಳು | ಪ್ರತಿ ತಿಂಗಳ ಅಂದಾಜು ಅನುಬೋಗ (ರೂ.ಗಳಲ್ಲಿ) | ಒಟ್ಟು ಬಡತನಕ್ಕೆ ಕಾಣಿಕೆ |
|---|---|---|---|
| 2004–05 | ಪರಿಶಿಷ್ಟಪಂಗಡ | 977.33 | 11.28 |
| | ಪರಿಶಿಷ್ಟ ಜಾತಿ | 981.54 | 31.00 |
| | ಇತರೆ ಹಿಂದುಳಿದ ಜಾತಿಗಳು | 1162.98 | 37.14 |
| | ಇತರೆ | 1351.50 | 20.58 |
| | ಒಟ್ಟು | 1171.99 | 100.00 |
| 2011–12 | ಪರಿಶಿಷ್ಟಪಂಗಡ | 1191.89 | 8.72 |
| | ಪರಿಶಿಷ್ಟ ಜಾತಿ | 1281.80 | 26.93 |
| | ಇತರೆ ಹಿಂದುಳಿದ ಜಾತಿಗಳು | 1452.48 | 46.36 |
| | ಇತರೆ | 1409.14 | 17.99 |
| | ಒಟ್ಟು | 1395.10 | 100.00 |

ಮಾಹಿತಿಯ ಮೂಲ: 2013–14ರ ಕರ್ನಾಟಕ ಸರಕಾರದ ಆರ್ಥಿಕ ಸಮೀಕ್ಷೆ

ಸಿ.ಎ.ಕೆ. ಯೆಸುದೈಯನ್ (1988)ರವರ "ಹೆಲ್ತ್ ಸರವಿಸ್ಸ್ ಯುಟಿಲಾಜೆಸೆನ್ ಇನ್ ಅರ್ಬನ್ ಇಂಡಿಯಾ (ಎ ಸ್ಟಡಿ)" ಎಂಬ ಪುಸ್ತಕದಲ್ಲಿ ವ್ಯಕ್ತಪಡಿಸಿದಂತೆ ಭಾರತ ದೇಶದಲ್ಲಿನ ಒಂದು ನಗರ ಪ್ರದೇಶದಲ್ಲಿರುವ ವಿವಿಧ ಸಾಮಾಜಿಕ ಶ್ರೇಣಿಯಲ್ಲಿರುವ ಸಮುದಾಯವು ಅಲ್ಲಿ ದೊರೆಯುವ ಆರೋಗ್ಯ ಸೇವೆಗಳ ಬಗ್ಗೆ ಅನಿಸಿಕೆ ಮತ್ತು ಅವುಗಳನ್ನು ಉಪಯೋಗಿಸಿಕೊಳ್ಳುವುದರ ಕುರಿತು ತಿಳಿದುಕೊಳ್ಳಲು ತಮಿಳುನಾಡಿನ ರಾಜ್ಯದ ಚೆನ್ನೈನಲ್ಲಿ ಪರಿಮಾಣಾತ್ಮಕ ವಿಧಾನದ ಸಮೀಕ್ಷೆ ಮತ್ತು ಗುಣಾತ್ಮಕ ವಿಧಾನಗಳ ಮೂಲಕ ಸಂದರ್ಶನಗಳನ್ನು ಕೈಗೊಳ್ಳಲಾಯಿತ್ತು. ಇದಕ್ಕೆ ನಗರ ಪ್ರದೇಶದಲ್ಲಿ ಅತಿ ಹೆಚ್ಚಿನ ಸರಕಾರಿ ಆಸ್ಪತ್ರೆಗಳು ಇರುವ ಒಂದು ಪ್ರದೇಶವನ್ನು ಅಧ್ಯಯನಕ್ಕೆ ಆಯ್ಕೆಮಾಡಿಕೊಳ್ಳಲಾಯಿತ್ತು. ಈ ಪ್ರದೇಶದಲ್ಲಿರುವ ಎಲ್ಲಾ ಕುಟುಂಬಗಳ ಸದಸ್ಯರ ಶಿಕ್ಷಣ, ಉದ್ಯೋಗ, ಆದಾಯದ ಅನುಸಾರವಾಗಿ ಒಟ್ಟು ನಾಲ್ಕು ವರ್ಗಗಳನ್ನಾಗಿ ವಿಂಗಡಿಸಲಾಯಿತ್ತು. ಇವುಗಳಲ್ಲಿ ಮೇಲ್ವರ್ಗ, ಮಧ್ಯಮ ವರ್ಗ, ಕೆಳವರ್ಗ ಮತ್ತು ತೀರ ಕೆಳವರ್ಗಗಳು ಎಂದು ಹೆಸರಿಸಲಾಯಿತ್ತು. ಈ ಅಧ್ಯಯನದಲ್ಲಿ ಒಟ್ಟು 400 ಮಾಹಿತಿದಾರರನ್ನು ಸಂದರ್ಶಿಸಿ ಮಾಹಿತಿಯನ್ನು ಪಡೆಯಲಾಯಿತ್ತು. ಇವುಗಳಲ್ಲಿ ಶೇಕಡಾ 67.5ರಷ್ಟು ಕೆಳವರ್ಗದ ಮತ್ತು ಶೇಕಡಾ 70ರಷ್ಟು ತೀರ ಕೆಳವರ್ಗದ ಜನರು ಮಾತ್ರ ಸರಕಾರಿ ಆಸ್ಪತ್ರೆಗಳಲ್ಲಿ ದೊರೆಯುವ ಸೇವೆಗಳನ್ನು ಉಪಯೋಗಿಸಿಕೊಳ್ಳುತ್ತಿದ್ದಾರೆ. ಇದಕ್ಕೆ ಪ್ರಮುಖವಾದ ಕಾರಣವೇನೆಂದರೆ ಬಡತನ ಮತ್ತು ಅವರ ಆರೋಗ್ಯಕ್ಕೆ ಖರ್ಚುಮಾಡಲು ಆಗದೇ ಇರುವದು. ಶೇಕಡಾ 90ರಷ್ಟು ತೀರ ಕೆಳವರ್ಗ ಮತ್ತು 80ರಷ್ಟು ಕೆಳವರ್ಗದ ಜನರು ಹೆರಿಗೆಗೆ ಸಂಬಂಧಪಟ್ಟ ಸೇವೆಗಳನ್ನು ಉಚಿತವಾಗಿ ಪಡೆದರೆ ಶೇಕಡಾ 75ರಷ್ಟು ಮೇಲ್ವರ್ಗದವರು ರೂಪಾಯಿ 300ಕ್ಕಿಂತ ಹೆಚ್ಚು ಮತ್ತು ಮಧ್ಯಮ ವರ್ಗದವರು ಶೇಕಡಾ 65ರಷ್ಟು ಜನರು ರೂಪಾಯಿ 101 ರಿಂದ 300ರಷ್ಟು ಖರ್ಚನ್ನು ಮಾಡಿರುತ್ತಾರೆ. ಇದರ ಅರ್ಥ ಉಳ್ಳವರು ಹಣವನ್ನು ಕೊಟ್ಟು ಸೇವೆಗಳನ್ನು ಪಡೆದರೆ ಬಡವರು ಸರಕಾರವು ಕೊಡಮಾಡುವ ಸೇವೆಗಳ ಮೇಲೆ ಅತಿಹೆಚ್ಚಿನ ರೀತಿಯಲ್ಲಿ ಅವಲಂಬಿತರಾಗಿರುವುದು ಕಂಡು ಬರುತ್ತದೆ ಎಂದು ಲೇಖಕರು ತಮ್ಮ ಪುಸ್ತಕದಲ್ಲಿ ಉಲ್ಲೇಖಿಸಿದ್ದಾರೆ.

ಎಂ.ಚಂದ್ರ ಪೂಜಾರಿ (2014) ರವರು ತಮ್ಮ ಪುಸ್ತಕ "ಬಡತನ ಮತ್ತು ಪ್ರಜಾಪ್ರಭುತ್ವ"ದಲ್ಲಿ ಬಡತನದ ವಿವಿಧ ಆಯಾಮಗಳನ್ನು, ಬಡತನಕ್ಕೆ ಕಾರಣ ಹಾಗೂ ಅದಕ್ಕೆ ಪರಿಹಾರಗಳನ್ನು ಕಂಡುಕೊಳ್ಳುವಲ್ಲಿ ನೆರವಾಗುತ್ತದೆ ಎಂಬ ಪ್ರಮುಖ ಉದ್ದೇಶದೊಂದಿಗೆ ರಚಿಸಲಾಗಿದೆ ಎಂದು ಉಲ್ಲೇಖಿಸಿರುತ್ತಾರೆ. ಬಡವರು ಎಲ್ಲ ಚುನಾವಣೆಗಳಲ್ಲಿ ಅದು ಮಳೆಗಾಲವಿರಲಿ, ಚಳಿಗಾಲ ಅಥವ ಸುಡುವ ಬೇಸಿಗೆಗಾಲವಿರಲಿ ಯಾವುದನ್ನೂ ಲೆಕ್ಕಿಸದೇ ತಮಗೆ ಸಂವಿಧಾನವು ಕೊಟ್ಟಿರುವ ತಮ್ಮ ಹಕ್ಕನ್ನು ಅತ್ಯಂತ ನಿಷ್ಠಯಿಂದ ಚಲಾಯಿಸುತ್ತಾರೆ. ಒಟ್ಟಾರೆಯಾಗಿ ಬಡತನ ಮತ್ತು ಬಡವರು ಎಲ್ಲ ರಾಜಕೀಯ ಪಕ್ಷಗಳಿಗೆ ಮತ್ತು ಸರಕಾರಗಳಿಗೆ ಒಂದು ತರಹದ **"ಹಾಟ್ ಕೇಕ್" (ಎಲ್ಲರಿಗೂ ಪ್ರಿಯವಾದ ತಿನಿಸು)** ಇದ್ದ ಹಾಗೆ ಎಂದು ವಿವರಿಸಿರುತ್ತಾರೆ. ರಾಜಕೀಯ

ಮತ್ತು ಅಭಿವೃದ್ಧಿಯೆಂಬ ಎರಡು ಪರಿಭಾಷೆಗಳು ನಿಂತಿರುವದು ಬಡತನ ಮತ್ತು ಬಡತನವನ್ನು ಹೋಗಲಾಡಿಸಲು ಅಳವಡಿಸಿಕೊಂಡಿರುವ ಕಾರ್ಯಕ್ರಮಗಳ ಮೇಲೆ. ಆದರೆ ಇವುಗಳಲ್ಲಿ ಕೆಲವೊಂದು ನೇರವಾಗಿರುತ್ತವೆ ಮತ್ತೆ ಕೆಲವು ಪರೋಕ್ಷವಾಗಿರುತ್ತವೆ. ಬಡತನ ರೇಖೆಯ ಕೆಳಗಿರುವ ಕುಟುಂಬಗಳಿಗೆ ಸರಕಾರವು ಆಹಾರ ಮತ್ತು ನಾಗರಿಕ ಸರಬರಾಜು ಇಲಾಖೆಯ ಮೂಲಕ ಕೊಡುವ ಕಡಿಮೆ ಬೆಲೆಯ ಆಹಾರ ಪದಾರ್ಥಗಳು, ಕೆಲವು ದಿನಗಳ ಉದ್ಯೋಗ, ವಸತಿ, ಶೌಚಾಲಯಗಳನ್ನು ಕಟ್ಟಿಸಿ ಕೊಡುವದು, ಶಾಲಾ ಮಕ್ಕಳಿಗೆ ಬಿಸಿಯೂಟ ನೀಡುವುದು ಮತ್ತು ಕೆಳಸ್ತರದ ಜನರಿಗೆ ಉದ್ಯೋಗಗಳಲ್ಲಿ ಮೀಸಲಾತಿ ಇವುಗಳು ನೇರವಾಗಿ ಬಡವರನ್ನು ತಲುಪುವ ಕಾರ್ಯಕ್ರಮಗಳಾಗಿವೆ. ರಸ್ತೆ, ಆಣೆಕಟ್ಟು, ಬಂದರು, ವಿಮಾನ ನಿಲ್ದಾಣ, ಕೈಗಾರಿಕೆ, ವಿಶೇಷ ಆರ್ಥಿಕ ವಲಯಗಳನ್ನು ಸ್ಥಾಪಿಸುವದು, ಕೈಗಾರಿಕೆಗಳಿಗೆ ಕಡಿಮೆ ಬೆಲೆಗೆ ಭೂಮಿ, ನೀರು ಕೊಡುವುದು, ಕಡಿಮೆ ಬಡ್ಡಿಗೆ ಸಾಲ ಕೊಡುವುದು, ಉನ್ನತ ಶಿಕ್ಷಣವನ್ನು ಒದಗಿಸಿ ಕೊಡುವುದು ಮತ್ತು ಉಪಗ್ರಹಗಳನ್ನು ಹಾರಿಸುವುದರಿಂದ ಬಡತನ ನಿವಾರಣೆಯ ಕಾರ್ಯಕ್ರಮಗಳಿಗೆ ಪರೋಕ್ಷವಾದಂತಹ ಸಂಬಂಧವಿದೆ.

ಚಾರಿತ್ರಿಕವಾಗಿ ರೂಪುಗೊಂಡ ನಮ್ಮ ಸಾಮಾಜಿಕ ಸಂಸ್ಥೆ, ಜಾತಿ ಪದ್ಧತಿ, ಉದ್ಯೋಗ, ಉತ್ಪಾದನಾ ಪರಿಕರಗಳ ಅಸಮಾನ ಹಂಚಿಕೆಯನ್ನು ತೊಡೆದು ಹಾಕಲು ಹಲವಾರು ಕಾನೂನುಗಳು ಬಂದರೂ ಸಹ ಅವುಗಳನ್ನು ಅನುಷ್ಠಾನಗೊಳಿಸುವ ರಾಜಕೀಯ ಪಕ್ಷಗಳಿಗೆ ಮತ್ತು ಸರಕಾರಗಳಿಗೆ ಇಚ್ಛಾಶಕ್ತಿಯ ಕೊರತೆ ಇದೆ. ಬಡತನದ ಸೃಷ್ಟಿಯ ಬಗ್ಗೆ ಹಲವಾರು ರೀತಿಯ ವಾದಗಳಿವೆ. ಅವುಗಳಲ್ಲಿ ಸಾಮಾಜಿಕ, ಆರ್ಥಿಕ, ರಾಜಕೀಯ ಮತ್ತು ಸಾಂಸ್ಕೃತಿಕತೆಯ ಪರಿಸರದ ಪಾತ್ರವಿದೆ ಎಂದು ಪರ ಮತ್ತು ವಿರೋಧವಾದ ಅಭಿಪ್ರಾಯಗಳಿವೆ. ಈ ಒಂದು ವಿಭಾಗದಲ್ಲಿ ದುಶ್ಚಟ ಮತ್ತು ಬಡತನದ ನಡುವಿನ ಸಂಬಂಧವನ್ನು ಮದ್ಯ ನಿಷೇಧದಿಂದ ಬಡತನ ಕಡಿಮೆಯಾಗುವುದಿಲ್ಲ. ಭೂಮಿ, ಬಂಡವಾಳ, ಆಧುನಿಕ ಕರ-ಕೌಶಲ್ಯಗಳು ಕೆಲವೇ ವ್ಯಕ್ತಿಗಳಲ್ಲಿ ಕೇಂದ್ರೀಕರಣಗೊಂಡಿರುವುದು ಬಡತನದ ಹುಟ್ಟು ಮತ್ತು ಮುಂದುವರಿಯುವಲ್ಲಿ ಹೆಚ್ಚಿನ ಪಾತ್ರವಿದೆ ಮತ್ತು ಭೂಮಿ ಇಲ್ಲದವರು, ಬಂಡವಾಳವಿಲ್ಲದವರು, ಅನಕ್ಷರಸ್ಥರು, ದುಡಿದು ತಿನ್ನಲು ಆರೋಗ್ಯವಿಲ್ಲದವರು ಬಡವರಾಗಿದ್ದಾರೆ. ಇವರು ಬಡತನದಿಂದ ಹೊರಬರಲು ಸರಕಾರ ಮತ್ತು ಖಾಸಗಿ ಬಂಡವಾಳ ಸೃಷ್ಟಿಸುವ ಹೊಸ ಅವಕಾಶಗಳನ್ನು ಉಪಯೋಗ ಮಾಡಿಕೊಳ್ಳಲು ಈ ಮೇಲೆ ಹೇಳಿದ ಉತ್ಪಾದನ ಪರಿಕರಗಳು ಬಹಳ ಅವಶ್ಯಕವಾಗಿವೆ.

ಅಶೋಕ ಕೆ.ಪಂಕಜ (2015) ರವರು ತಮ್ಮ ಲೇಖನ "ದಿ ಪಬ್ಲಿಕ್ ಡಿಸ್ಟ್ರಿಬ್ಯುಸನ್ ಸಿಸ್ಟಮ್ ಇನ್ ಬಿಹಾರ: ಆನ್ ಅಸ್ಸೆಸಮೆಂಟ್ ಆಫ್ ದಿ ಕೂಪನ್ ಸಿಸ್ಟಮ್" ದಲ್ಲಿ ಗುರಿತುಪಡಿಸಿದ ಅಥವಾ ನಿರ್ದಿಷ್ಟಪಡಿಸಿದ ಸಾರ್ವಜನಿಕ ವಿತರಣಾ ವ್ಯವಸ್ಥೆಯಡಿಯಲ್ಲಿ ರಿಯಾಯತಿ ದರದಲ್ಲಿ ಆಹಾರ ಪದಾರ್ಥಗಳನ್ನು ವಿತರಿಸುವುದರಿಂದ ಬಡತನ ರೇಖೆಯ ಕೆಳಗಿರುವ ಕುಟುಂಬಗಳಿಗೆ

ಬಹಳಷ್ಟು ಅನುಕೂಲವಾಗಿದೆ. ಆದರೆ ಈ ಕಾರ್ಯಕ್ರಮವು ತನ್ನ ಗುರಿ ಅಥವಾ ಉದ್ದೇಶಗಳನ್ನು ತಲುಪುವಲ್ಲಿ ಕೆಲವೊಂದು ರಾಜ್ಯಗಳಲ್ಲಿ ಸಫಲವಾಗಿಲ್ಲ ಎಂದು ಲೇಖಕರು ತಮ್ಮ ಅಭಿಪ್ರಾಯಗಳನ್ನು ವ್ಯಕ್ತಪಡಿಸಿದ್ದಾರೆ. ಕೆಲವೊಂದು ರಾಜ್ಯಗಳಲ್ಲಿನ ತಪ್ಪುಗಳನ್ನು ಉಲ್ಲೇಖಿಸುತ್ತಾ ಕರ್ನಾಟಕದಲ್ಲಿ ಶೇಕಡಾ 20.58 ಪಡಿತರ ಚೀಟಿಗಳು ನಕಲಿಗಳಾಗಿದ್ದರೆ ಶೇಕಡಾ 36.39 ಕುಟುಂಬಗಳು ಪಟ್ಟಿಯಿಂದ ಬಿಟ್ಟು ಹೋಗಿರುವುದನ್ನು ಲೇಖಕರು ಎತ್ತಿ ತೋರಿಸಿದ್ದಾರೆ.

ಎನ್ ಎನ್ ಎಸ್ ಓ (2013) ಸಂಸ್ಥೆಯು ಜುಲೈ–ಡಿಸೆಂಬರ್, 2012ರಲ್ಲಿ ನಡೆಸಿದ 62ನೇ ಸುತ್ತಿನ ಮಾಹಿತಿಯ ಪ್ರಕಾರ ದೇಶ ಮತ್ತು ಕರ್ನಾಟಕ ರಾಜ್ಯದಲ್ಲಿ ಕುಡಿಯುವ ನೀರು, ನೈರ್ಮಲ್ಯ, ಸ್ವಚ್ಛತೆ ಮತ್ತು ವಸತಿ ಮನೆಗಳ ಸ್ಥಿತಿಯನ್ನು ಕುರಿತು ಈ ಕೆಳಕಂಡಂತೆ ಹೇಳಲಾಗಿದೆ. ಸಮೀಕ್ಷೆ ಮಾಡಿದ ಪ್ರತಿ ಸಾವಿರ ಕುಟುಂಬಗಳಿಗೆ ಸಂಬಂಧಿಸಿದಂತೆ ಕರ್ನಾಟಕದಲ್ಲಿ ಶೇಕಡಾ 95.1ರಷ್ಟು ಗ್ರಾಮೀಣ ಕುಟುಂಬಗಳು ಮತ್ತು ಶೇಕಡಾ 96.0ರಷ್ಟು ನಗರ ಕುಟುಂಬಗಳು ಶುದ್ಧವಾದ ಕುಡಿಯುವ ನೀರಿನ ಸೌಲಭ್ಯಗಳನ್ನು ಹೊಂದಿವೆ. ಆದರೆ ಶೇಕಡಾ 75 ಮತ್ತು 79ರಷ್ಟು ಕ್ರಮವಾಗಿ ಗ್ರಾಮೀಣ ಹಾಗೂ ನಗರ ಪ್ರದೇಶದಲ್ಲಿನ ಕುಟುಂಬಗಳಿಗೆ ಮಾತ್ರ ಸಾಕಾಗುವಷ್ಟು ಕುಡಿಯುವ ನೀರಿನ ಅನುಕೂಲತೆಗಳಿವೆ. ಇನ್ನುಳಿದ ಶೇಕಡಾ 25ಕ್ಕಿಂತ ಕಡಿಮೆ ಗ್ರಾಮೀಣ ಮತ್ತು ನಗರ ಪ್ರದೇಶದಲ್ಲಿನ ಕುಟುಂಬಗಳಿಗೆ ಸಾಕಾಗುವಷ್ಟು ಕುಡಿಯುವ ನೀರು ಸಿಗುತ್ತಿಲ್ಲ. ಇದು ಇತರೇ ದಕ್ಷಿಣದ ರಾಜ್ಯಗಳಾದ ಕೇರಳ (ಶೇಕಡಾ 86 ಮತ್ತು 91.6), ತಮಿಳನಾಡು (ಶೇಕಡಾ 93.2 ಮತ್ತು 92.5), ಆಂಧ್ರ ಪ್ರದೇಶ (ಶೇಕಡಾ 86.5 ಮತ್ತು 87.6)ದಲ್ಲಿನ ಗ್ರಾಮೀಣ ಮತ್ತು ನಗರ ಪ್ರದೇಶದಲ್ಲಿನ ಕುಟುಂಬಗಳಿಗಿಂತ ಹೆಚ್ಚಿರುವದು ಕಂಡು ಬರುತ್ತದೆ. ಇನ್ನು ಕುಟುಂಬದ ಸ್ವಚ್ಛತೆಗೆ ಸಂಬಂಧಪಟ್ಟಂತೆ ಹೇಳುವುದಾದರೆ ಕರ್ನಾಟಕ ರಾಜ್ಯದಲ್ಲಿನ ಶೇಕಡಾ 48.1 ಮತ್ತು ಶೇಕಡಾ 11.2ರಷ್ಟು ಕುಟುಂಬಗಳು ಕ್ರಮವಾಗಿ ಗ್ರಾಮೀಣ ಹಾಗೂ ನಗರ ಪ್ರದೇಶದಲ್ಲಿನ ಕುಟುಂಬಗಳಿಗೆ ಸ್ನಾನಗ್ರಹದ ಸೌಲಭ್ಯವಿರುವುದಿಲ್ಲ. ರಾಜ್ಯದಲ್ಲಿ ಶೇಕಡಾ 70.8 ಮತ್ತು ಶೇಕಡಾ 9ರಷ್ಟು ಕುಟುಂಬಗಳು ಕ್ರಮವಾಗಿ ಗ್ರಾಮೀಣ ಹಾಗೂ ನಗರ ಪ್ರದೇಶದಲ್ಲಿನ ಕುಟುಂಬಗಳಿಗೆ ಯಾವುದೇ ರೀತಿಯ ಶೌಚಾಲಯದ ವ್ಯವಸ್ಥೆ ಇರದಿರುವುದು ಈ ವರದಿಯಲ್ಲಿ ಉಲ್ಲೇಖಿಸಲಾಗಿದೆ.

ರಮ್ಯ ವಿಜಯ, ರಾಹುಲ್ ಲಾಹೋಟಿ ಮತ್ತು ಹೇಮಾ ಸ್ವಾಮಿನಾಥನ್ (2013) ತಮ್ಮ ವರ್ಕಿಂಗ್ ಪೇಪರ್ "ಮೂವ್ವಿಂಗ್ ಫ್ರಮ್ ಹೌಸ್ಹೋಲ್ಡ್ ಟೂ ಇಂಡಿವ್ಹಿಜವಲ್: ಮಲ್ಟಿಡೈಮೆನ್ಶನಲ್ ಪಾವರ್ಟಿ ಅನಲೈಸ್ಸ್"ದಲ್ಲಿ ಬಡತನವನ್ನು ನಾವು ಕೌಟುಂಬಿಕವಾಗಿ ನೋಡದೆ ಅದನ್ನು ವ್ಯಕ್ತಿಗತವಾಗಿ ನೋಡಬೇಕು ಎಂದು ಹೇಳುತ್ತಾರೆ. ಈ ಲೇಖನವು ಕರ್ನಾಟಕ ಕೌಟುಂಬಿಕ ಆಸ್ತಿ ಸಮೀಕ್ಷೆ–2011ರ ಮಾಹಿತಿಯನ್ನು ಬಳಸಿಕೊಂಡು ಲೇಖಕರು ಈ ಕೆಳಗಿನಂತೆ ತಮ್ಮ ಅಭಿಪ್ರಾಯಗಳನ್ನು ವ್ಯಕ್ತಪಡಿಸಿದ್ದಾರೆ. ಈ ಸಮೀಕ್ಷೆಯಿಂದ ಕೆಲವೊಂದು ಪ್ರಮುಖವಾದ ಅಂಶಗಳು ತಿಳಿದು ಬರುತ್ತವೆ.

ಅವುಗಳಲ್ಲಿ, ಅನೇಕ ವ್ಯಕ್ತಿಗಳು ಬಡವರಲ್ಲದಿದ್ದರೂ ಸಹಿತ ಅವರನ್ನು ಬಡತನ ರೇಖೆಯು ಕೆಳಗಿನ ಕುಟುಂಬಗಳಿಗೆ ಸೇರಿಸಲಾಗಿದೆ. ಲಿಂಗವಾರು ಆದಾಯಕ್ಕೆ ಸಂಬಂಧಪಟ್ಟಂತೆ ಹೇಳುವುದಾದರೆ ಮಹಿಳೆಯರ ದುಡಿಮೆ ಮತ್ತು ಅವರ ಆದಾಯವನ್ನು ಲೆಕ್ಕ ಮಾಡುವಾಗ ಕುಟುಂಬದಲ್ಲಿ ಅದರ ಸುಳಿವು ಇರದೇ ವೈಯಕ್ತಿಕವಾಗಿ ಆದಾಯವನ್ನು ಲೆಕ್ಕ ಹಾಕ ಬೇಕಾದರೆ ಅವರ ಆದಾಯವು ಅತಿ ಪ್ರಾಮುಖ್ಯತೆಯನ್ನು ಪಡೆದು ಕೊಳ್ಳುತ್ತವೆ. ಈ ರೀತಿಯಾದ ಮಾಹಿತಿಯು ಅನೇಕ ಕುಟುಂಬಗಳನ್ನು ಬಡತನ ರೇಖೆಯ ಮೇಲೆ ಮತ್ತು ಕೆಳಗೆ ಎಂದು ಗುರುತಿಸುವುದರಿಂದ ಅನೇಕ ಕುಟುಂಬಗಳು ಸೌಲಭ್ಯದಿಂದ ವಂಚಿತವಾಗುತ್ತಿವೆ. ಅನೇಕ ಕುಟುಂಬಗಳಲ್ಲಿ ಬಡತನ ಇಲ್ಲದಿದ್ದರೂ ಸರಕಾರದಿಂದ ಸಿಗುವ ಎಲ್ಲ ಅನುಕೂಲತೆಗಳನ್ನು ಪಡೆಯುವಲ್ಲಿ ಯಶಸ್ವಿಯಾಗಿ ನಿಜವಾದ ಬಡವರನ್ನು ಬಡತನದಲ್ಲೇ ಸಾಯುವಂತೆ ಮಾಡುತ್ತಿದೆ ಎಂದು ಲೇಖಕರು ತಮ್ಮ ಅಭಿಪ್ರಾಯವನ್ನು ತಿಳಿಸಿದ್ದಾರೆ.

ಶಾರದಾ ಗೋಪಾಲ (2016) ರವರು ತಮ್ಮ ಲೇಖನ "ಇದು ಆಹಾರದ ಇನ್ನೊಂದು ರಾಜಕೀಯ"ದಲ್ಲಿ ಉತ್ತರ ಕರ್ನಾಟಕದಲ್ಲಿ ರೇಷನ್ ಕಾರ್ಡನ್ನು 'ಕೂಪನ್' ಎಂದು ಕರೆಯುತ್ತಾರೆ. ಕೂಪನ್ ಮೇಲೆ ಕೂಪನ್ ಆದರೂ ಸಹ ಬಡವರಿಗೆ ಸಿಗಬೇಕಾದ ರೇಷನ್ನು ದೊರಕುತ್ತಿಲ್ಲ. ಕೂಪನ್‌ಗೆ ಕುಟುಂಬದ ಎಲ್ಲಾ ಸದಸ್ಯರ ಭಾವಚಿತ್ರಗಳನ್ನು ತೆಗೆದುಕೊಳ್ಳಬೇಕು, ಮೊಬೈಲ್‌ನಿಂದ ಎಸ್ಸ್‌ಮೆಸ್ಸ್‌ಗಳನ್ನು ಕಳುಹಿಸುವುದು ಮತ್ತು ಅವರ ಕುಟುಂಬಗಳ ಎಲ್ಲಾ ಸದಸ್ಯರ ಹೆಬ್ಬೆರಳು ಗುರುತನ್ನು ತೆಗೆದುಕೊಳ್ಳುವದು ಎಂಬ ಇತ್ಯಾದಿ ನಿಯಮಗಳಿಂದ ನಿಜವಾದ ಬಡವರಿಗೆ ಮತ್ತು ಅನಕ್ಷರಸ್ಥರಿಗೆ ಹೆಚ್ಚಿನ ತೊಂದರೆಯಾಗಿದೆ ಹೊರತು ಅವರಿಗೆ ಹೇಳಿಕೊಳ್ಳುವಷ್ಟು ಅನುಕೂಲವಾಗಿಲ್ಲ ಎಂದು ಲೇಖಕರು ತಮ್ಮ ಅಭಿಪ್ರಾಯಗಳನ್ನು ವ್ಯಕ್ತಪಡಿಸಿದ್ದಾರೆ. ಈ ಎಲ್ಲಾ ಕಾರಣಗಳಿಂದ ಮೊಬೈಲ್ ಇಲ್ಲದ ಮತ್ತು ಹಲವು ಕುಟುಂಬಗಳ ಸದಸ್ಯರು ದುಡಿದು ತಿನ್ನಲು ದೂರದ ಊರುಗಳಿಗೆ ವಲಸೆ ಹೋಗಿರುವದ್ದರಿಂದ ಹಲವರ ಕೂಪನ್‌ಗಳು ಇನ್ನೂ ಸಿಗುತ್ತಿಲ್ಲವೆಂಬುವದು ನಮ್ಮ ಕ್ಷೇತ್ರಕಾರ್ಯದ ಸಮಯದಲ್ಲಿ ಕೂಡ ಕಂಡುಕೊಂಡಿದ್ದೇವೆ ಎಂದು ಹೇಳಬಹುದು. ಈ ರೀತಿಯಾದ ನಿಯಮಗಳು ಹಲವಾರು ಬಾರಿ ಬದಲಾವಣೆ ಮಾಡುವುದರಿಂದ ತೀರ ಬಡವರು ಅನೇಕ ರೀತಿಯ ತೊಂದರೆಗಳನ್ನು ಅನುಭವಿಸುತ್ತಿದ್ದಾರೆ.

ಎಂ.ಚಂದ್ರ ಪೂಜಾರಿ (2017)ರವರು "ಮಾರುಕಟ್ಟೆ ಅಭಿವೃದ್ಧಿ ಮತ್ತು ಪ್ರಜಾಪ್ರಭುತ್ವ" ಎಂಬ ಲೇಖನದಲ್ಲಿ ತೊಂಬತ್ತರ ದಶಕದ ನಂತರದಲ್ಲಿ ಅಧಿಕೃತವಾಗಿ ನಮ್ಮ ದೇಶದಲ್ಲಿ ನಿಯೋ ಲಿಬರಲ್ ಅಥವಾ ಉದಾರೀಕರಣ, ಖಾಸಗೀಕರಣ, ಜಾಗತೀಕರಣ ನೀತಿಗಳು ಬಹಳ ಯಶಸ್ವಿಯಾಗಿವೆ. ಜನರ ಖರೀದಿಸುವ ಶಕ್ತಿ ಮತ್ತು ಅವರು ಅನುಭವಿಸುವ ಸರಕು ಸೇವೆ ಅಥವಾ ಉತ್ಪಾದನಾ ಪರಿಕರಗಳ ನಡುವೆ ನೇರ ಸಂಬಂಧ ಕಲ್ಪಿಸಲಾಗಿದೆ. ಬಡವರಲ್ಲದವರು ಮಾರುಕಟ್ಟೆಯಲ್ಲಿ ದರ ಹೆಚ್ಚಿದ್ದರೂ ಸಹ ಖರೀದಿ ಮಾಡಿ ತಮ್ಮ ಜೀವನವನ್ನು ಸಾಗಿಸುತ್ತಾರೆ

ಆದರೆ ಬಡವರು ಸರಕಾರ ಕೊಡುವ ಕಾರ್ಯಕ್ರಮಗಳ ಮೇಲೆ ಮಾತ್ರ ಅವಲಂಬಿತರಾಗಿದ್ದಾರೆ. ಇದರಿಂದ ಬಡವರು ತೀರ ಬಡವರಾಗಿ ಮತ್ತು ಉಳ್ಳವರು ತಮ್ಮ ಸಂಪತ್ತನ್ನು ಹೆಚ್ಚಿಗೆ ಮಾಡಿಕೊಳ್ಳುವಲ್ಲಿ ನಿರತರಾಗಿದ್ದಾರೆ. ಒಟ್ಟಾರೆಯಾಗಿ, ನಮ್ಮ ಸಮಾಜವನ್ನು ಒಂದು ಪಿರಮಿಡ್ ಆಕೃತಿಯಲ್ಲಿ ರೂಪಿಸುವಲ್ಲಿ ನಿಯೋ ಲಿಬರಲ್ ಆರ್ಥಿಕ ನೀತಿಗಳು ತಮ್ಮ ಗುರಿಗಳನ್ನು ಯಶಸ್ವಿಯಾಗಿ ಮುಟ್ಟಿವೆ ಎಂದು ಲೇಖಕರು ಉಲ್ಲೇಖಿಸಿದ್ದಾರೆ.

ಈಗಾಗಲೇ ಆಗಿರುವ ಅಧ್ಯಯನಗಳನ್ನು ಸಮಸ್ಸೀಕರಣಗಿಂತ ಮೊದಲು ಈ ಒಂದು ಅಧ್ಯಯನದಲ್ಲಿ ಬಳಸಿಕೊಳ್ಳಲಾದ ಪಾರಿಭಾಷಿಕ ಶಬ್ದಗಳನ್ನು ತಿಳಿದುಕೊಳ್ಳುವುದು ಕೂಡ ಅಷ್ಟೇ ಪ್ರಮುಖವಾಗಿದೆ. ಅಧ್ಯಯನಕ್ಕೆ ಬಳಸಿಕೊಂಡ ಪಾರಿಭಾಷಿಕ ಶಬ್ದಗಳನ್ನು ಈ ಕೆಳಗಿನಂತೆ ನೋಡಲಾಗಿದೆ. ಈ ಒಂದು ಸಂಶೋಧನೆಯ ಪ್ರಬಂಧದಲ್ಲಿ ಪ್ರಮುಖವಾಗಿ ಜಾತಿ, ವರ್ಗಗಳಿಗೆ ಮತ್ತು ಬಡತನ ರೇಖೆಯ ಕೆಳಗಿರುವ ಕುಟುಂಬಗಳು (ಬಿಪಿಎಲ್) ತಮ್ಮ ಕುಟುಂಬಗಳ ನಿರ್ವಹಣೆಗಾಗಿ ಆಹಾರ, ಆರೋಗ್ಯ, ಶಿಕ್ಷಣ, ವಸತಿ, ಕುಡಿಯುವ ನೀರು ಮತ್ತು ನೈರ್ಮಲೀಕರಣ (ಶೌಚಾಲಯ)ಕ್ಕೆ ಒಟ್ಟು ಎಷ್ಟು ಹಣಕಾಸು ಬೇಕಾಗುತ್ತದೆ, ಅದರಲ್ಲಿ ಸರಕಾರದಿಂದ ಪಡೆಯುವ ನೆರವಿನ ಪ್ರಮಾಣ ಎಷ್ಟು ಮತ್ತು ಕೊರತೆಯನ್ನು ಯಾವ ರೀತಿಯಾಗಿ ಬಗೆಹರಿಸಿಕೊಳ್ಳುತ್ತಾರೆ ಹಾಗೂ ಆಗಿರುವ ಕೊರತೆಯನ್ನು ನೀಗಿಸಿಕೊಳ್ಳುವಲ್ಲಿ ಮುಕ್ತ ಮಾರುಕಟ್ಟೆಯು ಯಾವ ರೀತಿಯ ಪಾತ್ರವು ವಹಿಸುತ್ತಿದೆ ಎಂದು ತಿಳಿದುಕೊಳ್ಳಲು ಈ ಒಂದು ಅಧ್ಯಯನವನ್ನು ಕೈಗೆತ್ತಿಕೊಳ್ಳಲಾಗಿದೆ. ಆದ್ದರಿಂದ ಅಧ್ಯಯನದಲ್ಲಿ ಬಳಸಿಕೊಳ್ಳಲಾದ ಪರಿಭಾಷೆಗಳನ್ನು ಕೆಳಗೆ ವಿವರಿಸಿದಂತೆ ಬಳಸಿಕೊಳ್ಳಲಾಗಿದೆ.

ಜಾತಿಯನ್ನು ಅದರ ಮೂಲ ವಿಶ್ಲೇಷಣೆಯನ್ನು ಮಾಡುವ ಬದಲಾಗಿ ಜಾರಿಯಲ್ಲಿರುವ ಜಾತಿ ವ್ಯವಸ್ಥೆಯನ್ನು ಆಧಾರವಾಗಿಟ್ಟುಕೊಳ್ಳಲಾಗಿದೆ. ಏಕೆಂದರೆ ಈ ಒಂದು ಸಂಶೋಧನೆಯು ಈಗಾಗಲೇ ಸ್ಥಾಪಿತ ಜಾತಿಯ ಸಿದ್ಧಾಂತಗಳನ್ನು ಒಪ್ಪಿಕೊಂಡು ಮುಂದುವರೆಯಲಾಗಿದೆ. ವರ್ಗಕ್ಕೆ ಸಂಬಂಧಪಟ್ಟಂತೆ ಹೇಳುವುದಾದರೆ ಬಡತನ ರೇಖೆಯ ಕೆಳಗಿನ ಕುಟುಂಬಗಳು ಎಂದರೆ ಸಹಜವಾಗಿ ಸಮಾಜದಲ್ಲಿನ ಕೆಳವರ್ಗದ ಗುಂಪು ಎಂದು ತಿಳಿದುಕೊಳ್ಳಲಾಗಿದೆ. ಇಲ್ಲಿ ಮಾರುಕಟ್ಟೆ ಎಂದರೆ ಗ್ರಾಮದ ಮತ್ತು ಸಮೀಪದ ನಗರ ಪ್ರದೇಶದಲ್ಲಿರುವ ಸಾಮಾನ್ಯ ಅಂಗಡಿಗಳಿಂದ ಬಡತನ ರೇಖೆಯ ಕೆಳಗಿರುವ ಕುಟುಂಬಗಳು ವ್ಯವಹರಿಸುವ ಸಣ್ಣ ಪ್ರಮಾಣದ ವಾಣಿಜ್ಯ ಕೇಂದ್ರಗಳು. ಮಾರುಕಟ್ಟೆಯ ಬಗ್ಗೆ ಹೇಳುವುದಾದರೆ ಬಡತನ ರೇಖೆಯ ಕೆಳಗಿರುವ ಕುಟುಂಬಗಳು ಸರಕಾರದ ಬಡತನ ನಿವಾರಣೆಯ ಕಾರ್ಯಕ್ರಮಗಳಲ್ಲಿ ಪಡೆದ ಆಹಾರ ಪದಾರ್ಥಗಳು, ಆರೋಗ್ಯ ಸೌಕರ್ಯಗಳು, ಶಿಕ್ಷಣದ ಅನೂಕೂಲತೆಗಳು, ವಸತಿ, ಕುಡಿಯುವ ನೀರು ಮತ್ತು ಶೌಚಾಲಯಕ್ಕೆ ಸಂಬಂಧಪಟ್ಟ ವಿವಿಧ ಯೋಜನೆಗಳಲ್ಲಿ ಪಡೆದ ಸೌಲಭ್ಯಗಳನ್ನು ಹೊರತಾಗಿ ಹೊರಗಿನ ಮುಕ್ತ ಮಾರುಕಟ್ಟೆ ಮತ್ತು ಇನ್ನಿತರ ಮೂಲಗಳ ಮೇಲೆ ಎಷ್ಟರ ಮಟ್ಟಗೆ ಅವಲಂಬಿತರಾಗಿದ್ದಾರೆ ಎಂಬುದನ್ನು ನೋಡುವುದು.

**ಉಪಸಂಹಾರ**

ಈ ಮೇಲಿನ ಅಧ್ಯಯನಗಳ ವಿಶ್ಲೇಷಣೆಯಿಂದ ತಿಳಿದು ಬರುವುದೇನೆಂದರೆ ಬಡತನ, ಜಾತಿ, ವರ್ಗ ಮತ್ತು ಮಾರುಕಟ್ಟೆಗಳ ನಡುವೆ ನೇರ ಸಂಬಂಧವಿದೆ ಎಂದು ತಿಳಿದು ಬರುತ್ತದೆ. ಸರಕಾರವು ಕಾಲಕ್ಕೆ ತಕ್ಕಂತೆ ಬಡತನವನ್ನು ಅಳೆಯುವ ಮಾನದಂಡದಲ್ಲಿ ಬದಲಾವಣೆ ಮಾಡಿವೆ, ಬಡವರಿಗಾಗಿ ಸರಕಾರದಿಂದ ಬಡತನ ರೇಖೆಯ ಕೆಳಗಿನ ಕುಟುಂಬಗಳಿಗೆ ಘೋಷಿಸುವ ಕಾರ್ಯಕ್ರಮಗಳು ಸಹ ಕಡಿಮೆಯಾಗಿಲ್ಲ. ಆದರೆ ಈ ಒಂದು ಕಾರ್ಯಕ್ರಮಗಳಿಗಾಗಿ ಕೊಡುವ ಅನುದಾನ ಅಥವಾ ಸಹಾಯಧನದ ಪ್ರಮಾಣದಲ್ಲಿ ಕಡಿಮೆಯಾಗಿದೆ. ಬಡವರಿಗಾಗಿ ಮೀಸಲಿರುವ ಕಾರ್ಯಕ್ರಮಗಳ ಲಾಭವು ಬಡವರಿಗೆ ಸರಿಯಾಗಿ ಮುಟ್ಟುತ್ತಿಲ್ಲ ಎಂದು ಅನೇಕ ಅಧ್ಯಯನಗಳಿಂದ ತಿಳಿದು ಬಂದಿದೆ. ಸರಕಾರದಿಂಂದ ಕೊಡುವ ಸಹಾಯಧನದ ಹೊರತಾಗಿ ಬಡ ಕುಟುಂಬಗಳು ಹೆಚ್ಚುವರಿ ಖರ್ಚುನ್ನು ಮಾಡುತ್ತಿವೆ ಎಂದು ಗೊತ್ತಾಗುತ್ತದೆ. ಆದ್ದರಿಂದ ಈ ಒಂದು ಅಧ್ಯಯನದ ಪ್ರುಖವಾದ ಉದ್ದೇಶಗಳಲ್ಲಿ ಇದು ಕೂಡ ಒಂದಾಗಿದೆ.

**ಕೊನೆಟಿಪ್ಪಣಿಗಳು**


1. ಟಿ.ಆರ್. ಚಂದ್ರಶೇಖರ್, (2008) *ಕರ್ನಾಟಕದಲ್ಲಿ ಪ್ರಾದೇಶಿಕ ಅಸಮಾನತೆ ಮತ್ತು ಉನ್ನತ ಅಧಿಕಾರ ಸಮಿತಿ,* ವಿದ್ಯಾರಣ್ಯ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

2. ಕರೀನಾ ಕಪಾಡಿಯಾ, (1997) *ಮೀಡಿಯಾತಿಂಗ್ ಡಿ ಮಿನಿಂಗ್ ಆಫ್ ಮಾರ್ಕೆಟ್ ಅಪಾರ್ಚುನಿಟಿಸ್: ಜೆಂಡರ್, ಕಾಸ್ಟ್ ಮತ್ತು ಕ್ಲಾಸ್ ಇನ್ ರೂರಲ್ ಸೌತ್ ಇಂಡಿಯಾ, ಎಕಾನಾಮಿಕ್ ಅಂಡ್ ಪೊಲಿಟಿಕಲ್ ವೀಕ್ಲಿ,* ಸಂಪುಟ.32, ಸಂಚಿಕೆ.52, ಪು.3329–3335.

3. ರಿಚರ್ಡ್ ಮತ್ತು ಫಾಕ್ಸ್, (1997) *ಫ್ಯಾಮಿಲಿ ಕಾಸ್ಟ್ ಅಂಡ್ ಕಾಮರ್ಸ್ ಇನ್ ಎ ನಾರ್ತ್ ಇಂಡಿಯಾನ್ ಮಾರ್ಕೆಟ್ ಟೌನ್, ಎಕಾನಮಿಕ್ ಡೆವಲಪ್‌ಮೆಂಟ್ ಕಲ್ಚರಲ್ ಚೇಂಜ್,* ಸಂಪುಟ/5, ಪು.297–314.

4. ವೈ.ಪಿ.ಚಿಬ್ಬರ್, (1968) *ಪ್ರಾಂ ಕಾಸ್ಟ್ ಟು ಕ್ಲಾಸ್, ಎ ಸ್ಟಡಿ ಆಫ್ ದ ಇಂಡಿಯನ್ ಮಿಡಲ್ ಕ್ಲಾಸಸ್,* ನವದೆಹಲಿ.

5. ಜಗನನಾತರಾವ ಆರ್. ಪವಾರ ಆಂಡ್ ವಿಜಯ ಬಿ.ಪಾಟೀಲ್ (1975) *ಮೇಜರಮೆಂಟ್ ಆಫ್ ರೂರಲ್ ಸರಪ್ಲಸ ಆಟ ದ ಮೈಕ್ರೋ ಲೆವಲ್ ಇನ್ ದಿ ಶುಗರ ಫ್ಯಾಕ್ಟರಿ ಏರಿಯಾಸ ಆಫ್ ದಿ ಮಹಾರಾಷ್ಟ್ರಾ ಸ್ಟೇಟ್, ಇಂಡಿಯನ್ ಜರ್ನಲ್ ಆಫ್ ಅಗ್ರಿಕಲ್ಚರಲ್ ಎಕಾನಾಮಿಕ್ಸ್* ಸಂಪುಟ–10 ನಂ.3 ಜೂಲೈ, ಸೆಪ್ಟಂಬರ್, ಪು–10–15.

6. ಹಂಜ್ಜಾ ಆಲ್ವಿ (1975) *ಇಂಡಿಯಾ ಆಂಡ್ ದಿ ಕೋಲೋನಿಯಲ್ ಮೋಡ್ ಆಫ್ ಪ್ರೋಡಕ್ಷನ್, ಎಕನಾಮಿಕ ಆಂಡ್ ಪೊಲಿಟಿಕಲ್ ವೀಕ್ಲೀ,* ಸಂಚಿಕೆ –10, ನಂ 33/35,

7. ಕುಸುಮ ನೈಯರ (1961) *ಬ್ಲಾಜೂಮ್ಸ ಇನ್ ದಿ ಡಸ್ಟ – ದಿ ಹ್ಯೂಮನ್ ಎಲಿಮೆಂಟ್ ಇನ್ ಇಂಡಿಯನ್ ಡೆವಲಪ್ಪಮೆಂಟ್* – ಗೆರಾಲ್ಡ ಡಕ್ಕ ವರ್ತ ಆಂಡ್ ಕೋ. ಲಿಮಿಟೆಡ್. ಲಂಡನ್–ಯು.ಕೆ.

8. ನಟರಾಜನ್ ಬಾಲಮುರಳಿ (2005) *ಕಾಸ್ಟ, ಕ್ಲಾಸ ಮತ್ತು ಕಮ್ಯುನಿಟು ಇನ್ ಇಂಡಿಯಾ– ಆನ್ ಇತನೋಗ್ರಾಫಿಕ್ ಎಪ್ರೋಚ್. ಇತನೋಲೊಜಿ,* ಸಂಪುಟ–44, ನಂ.3 (ಸಮ್ಮರ), ಪು.227–241.

9. ರಾಮು ಕುಮಾರ, ಎಂ.ಎಲ್.ಶರ್ಮಾ ಮತ್ತು ಜಿ.ಎಸ್. ಸಿಸೊಡಿಯಾ (1975) *ಮೊಬಲಾಯಜೆಶನ್ ಆಫ್ ರೂರಲ್ ಸರಪ್ಲಸ್. ಎ ಸ್ಟಡಿ ಆಫ್ ಸೇವಿಂಗ್ ಇನ್ ರೂರಲ್ ಹಿಸ್ಸಾರ. ಇಂಡಿಯನ್ ಜರನಲ್ ಆಫ್ ಅಗ್ರಿಕಲ್ಚರಲ್ ಎಕನಾಮಿಕ್.* ಸಂಪುಟ– ನಂ.ಪುಟ.16–25.

10. ಮೂರ್ತಿ ಸಿ.ಎಸ್. (1979) *ಇಂಪ್ಯಾಕ್ಟ ಆಫ್ ಟೆಕ್ನೋಲೊಜಿಕಲ್ ಚೇಂಜ ಆನ್ ದಿ ಎಕ್ಸಟೆಂಟ ಆಫ್ ಟೆನ್ನಸ್ಸಿ ಆಂಡ್ ಆನ್ ಕಂಪೊಜಿಷನ್ ಆಫ್ ಟೆನೆಟ್ಸ್: ಎ ಕೇಸ್ ಸ್ಟಡಿ ಇನ್ ಟೂ ಡೆಲ್ಟಾ ವಿಲೆಜೆಸ್* – ಪುಟ–86–293.

11. ಡ್ಯಾನಿಯಲ್ ಆಂಡ್ ಆಲಿಸ್ ತ್ರೋನರ್, (1965). *ಟೈಪ್ಸ್ ಆಫ್ ಎಂಪ್ಲಾಯರ್ – ಲೇಬರ್ ರಿಲೇಷನ್‌ಸಿಪ್ ಇನ್ ಇಂಡಿಯನ್ ಅಗ್ರಿಲಕ್ಚರಲ್ ಬಯೊ ಇಂಡಿಯನ್ ಜರನಲ್ ಆಫ್ ಅಗಿಕಲ್ಚರಲ್ ಎಕನಾಮಿಕ್ಸ್,* ಸಂಪುಟ–12, ನಂ.2 ಪುಟ –287–302.

12. ದಾಂಡೆಕರ ವಿ.ಎಂ. (1965) *ಪ್ರೈಸ್, ಪ್ರೋಡಕ್ಷನ ಆಂಡ್ ಮಾರ್ಕೆಟೆಡ್ ಸರ್ಪ್ಲಸ್ ಆಫ್ ಫುಡ್‌ಗ್ರೇನ್ಸ್. ಇಂಡಿಯನ್ ಜರನಲ್ ಆಫ್ ಅಗಿಕಲ್ಚರಲ್ ಎಕನಾಮಿಕ್ಸ್*–1940–64 ಸಿಲೆಕ್ಟೆಡ ರೀಡಿಂಗ್ಸ್, ಪುಟ–239–250.

13. ಪ್ರಹ್ಲಾದಚಾರ್ ಎಂ. (1987) *ಸಮ್ ಆಸ್ಪೆಕ್ಟ ಆಫ್ ಅಸೆಟ್ ಸ್ಟ್ರಕ್ಚರ್ ಇನ್ ರೂರಲ್ ಕರ್ನಾಟಕ,* 1971–82, ಪುಟ.103–306.

14. ದಂತವಾಲಾ, ಎಂ.ಎಲ್. (1987) *ರೂರಲ್ ಆಸೆಟ್ಸ್ ಡಿಸ್ಟ್ರಿಬ್ಯೂಷನ್ ಆಂಡ ಕಾಂಪೋಜಿಷನ್ ಆಫ್ ಲೇಬರ್ ಫೋರ್ಸ್. ಇಂಡಿಯನ್ ಜರನಲ್ ಆಫ್ ಅಗಿಕಲ್ಚರಲ್ ಎಕನಾಮಿಕ್ಸ್,* ಸಂಪುಟ–42, ನಂ.3, ಜುಲೈ–ಸೆಪ್ಟೆಂಬರ, ಪುಟ–275–285.

15. ಗೋಪಲರಾವ್, ಎಚ್. ಎಸ್. ಮತ್ತು ಎಂ.ಶ್ರೀಪತಿರಾವ್ (1975) *"ಸ್ಮಾಲ್ ಫಾರಮರ್ ಮತ್ತು ಅಗ್ರಿಕಲ್ಚರಲ್ ಪ್ರೆಜಿಸ್"* – ಎ ಕೇಸ್ ಆಫ್ ಕಾಟನ್, ಪುಟ–204–214.

16. ಈಶ್ವರನ್, ಕೆ. (1976) *ಗ್ರಾಮೀಣ ಭಾರತದಲ್ಲಿ ಸಂಪ್ರದಾಯ ಮತ್ತು ಆರ್ಥಿಕ ವ್ಯವಸ್ಥೆ.* ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.

17. ಶ್ರೀನಿವಾಸನ್, ಎಂ.ಎನ್. (1976) *ದಿ ರಿಮೆಂಬರ್ಡ ವಿಲೇಜ,* ಆಕ್ಸ್‌ಫರ್ಡ್ ಯುನಿವರ್ಸಿಟಿ ಪ್ರೇಸ್, ನ್ಯೂ ದಿಲ್ಲಿ.

18. ರಾಜಶೇಖರ್, ವಿ.ಟಿ. (2005) *ಜಾತಿ: ರಾಷ್ಟ್ರದೊಳಗೊಂದು ರಾಷ್ಟ್ರ,* ಬುಕ್ಸ್ ಫಾರ್ ಚೇಂಜ್, ಬೆಂಗಳೂರು.

19. ವಾಸವಿ ಎ.ಆರ್ (1999) *"ಅಗ್ರೆರಿಯನ್ ಡಿಸ್‌ಟ್ರೆಸ್ಸ್ ಇನ್ ಬೀದರ ಮಾರ್ಕೆಟ್ ಆಂಡ್ ಸುಸೈಡ್"* ಎಕನಾಮಿಕ್ ಆಂಡ್ ಪೊಲಿಟಿಕಲ್ ವೀಕ್ಲೀ, ಸಂಪುಟ–34, ಸಂಚಿಕೆ 32.

20. ಯು.ಎನ್.ಡಿ.ಪಿ. (2011) *ಯು.ನ್.ಡಿ.ಪಿ.ಯ* ಅಂತರ್ಜಾಲ ತಾಣದಿಂದ ದಿನಾಂಕ 17.11.2011 ರಂದು ಪಡೆಯಲಾಗಿದೆ.

21. ಕರ್ನಾಟಕ ರಾಜ್ಯ ಯೋಜನಾ ಮಂಡಳಿ (2008) *ಕರ್ನಾಟಕದ ಒಂದು ದೃಷ್ಟಿಕೋನ* ಪುಟ 11–16.

22. ಒಟ್ಟೋ ಬ್ಲೂಮೆ (1970) *ದಿ ಪವರ್ಟಿ ಆಫ್ ಓಲ್ಡ್ ಪೀಪಲ್ ಇನ್ ಅರ್ಬನ್ ಆಂಡ್ ರೂರಲ್ ಏರಿಯಾಸ್.* ಸಂಪಾದಕರು: ಟೌನ್‌ಸೆಂಡ್ ಪೀಟರ್, ದಿ ಕಾನ್‌ಸೆಪ್ಟ ಆಫ್ ಪಾವರ್ಟಿ ಹೆನೆಮನ್ ಎಜುಕೇಶನಲ್ ಬುಕ್ಸ್, ಲಂಡನ್.

23. ಮಾರ್ಟಿನ್ ರೇನ್ (1970) *ಪ್ರಾಬ್ಲಮ್ ಇನ್ ದಿ ಡೆಫಿನೆಷನ್ ಆಂಡ್ ಮೇಜರಮೆಂಟ್ ಆಫ್ ಪಾವರ್ಟಿ,* ಸಂಪಾದಕರು: ಟೌನ್‌ಸೆಂಡ್ ಪೀಟರ್, ದಿ ಕಾನ್‌ಸೆಪ್ಟ ಆಫ್ ಪಾವರ್ಟಿ ಹೆನೆಮನ್ ಎಜುಕೇಶನಲ್ ಬುಕ್ಸ್, ಲಂಡನ್, ಪುಟ 16–63.

24. ದಾಂಡೇಕರ್ ಮತ್ತು ರಾಥ್ (1971) *"ಪಾವರ್ಟಿ ಇನ್ ಇಂಡಿಯಾ ಡೈಮೇನ್ಸ್‌ಸ ಆಂಡ್ ಟ್ರೇಡ್ಸ್"* *ಎಕನಾಮಿಕ್ ಆಂಡ್ ಪೊಲಿಟಿಕಲ್ ವೀಕ್ಲೀ*, ಸಂಪುಟ–6, ಸಚಿಂಕ–.8.

25. ಎಂ. ಚಂದ್ರ ಪೂಜಾರಿ (2008) *ರಾಜಕೀಯದ ಬಡತನ*, ಸಿದ್ಧಾರ್ಥ ಪ್ರಕಾಶನ, ಹೊಸಪೇಟೆ.

26. ದಿನೇಶ ಎಂ. ಹೆಗಡೆ (2007) *ಅಭಿವೃದ್ಧಿ ಅಂಚಿನ ಸಮುದಾಯಗಳು: ಹಿಂದುಳಿದ ವರ್ಗಗಳ ಒಂದು ಅಧ್ಯಯನ*, ಅಭಿವೃದ್ಧಿ ಅಧ್ಯಯನ ಸಂಪುಟ–6 ಸಂಚಿಕೆ–2.

27. ಅಮಿತಾ ಶಾ (2002) *ಸ್ಪ್ಯಾಷಿಯಲ್ ಪಾವರ್ಟಿ ಟ್ರಾಪ್ಸ್ ಇನ್ ರೂರಲ್ ಇಂಡಿಯಾ: ಆನ್ ಎಕ್ಸಪ್ಲನೇಡರಿ ಅನಲಿಸ್ಸ್ ಆಫ್ ದಿ ನೇಚರ ಆಫ್ ದಿ ಕಾಜಸ್, ಜರ್ನಲ್ ಆಫ್ ಸೋಷಿಯಲ್ ಆಂಡ್ ಎಕನಾಮಿಕ ಡೆವಲಂಪಮೆಂಟ್*–ಜುಲೈ–ಡಿಸೆಂಬರ, ಸಂಪುಟ–4 ಸಂಚಿಕೆ–2, ಪುಟ–123–147.

28. ಮುಕೇಶ ಈಶ್ವರನ್, ಅಶೋಕ ಕೊತವಾಲ, ಭರತ ರಾಮಸ್ವಾಮಿ ಮತ್ತು ವಿಲಿಯಮ್ ವಾದವಾ (2009) *ಸೆಕ್ಟ್ರಲ್ ಲೇಬರ್ ಫ್ಲೋಸ್ ಆಂಡ್ ಅಗ್ರಿಕಲ್ಚರಲ್ ವೆಜಸ್ ಇನ್ ಇಂಡಿಯಾ, 1983–2004! ಹ್ಯಾಸ್ ಗ್ರೋತ ಟ್ರಿಕಲ್ಡ್ ಡೌನ?, ಎಕನಾಮಿಕ ಆಂಡ್ ಪೊಲಿಟಿಕಲ್ ವೀಕ್ಲೀ*, ಜನೇವರಿ 10 ವಿಶೇಷ ಸಂಚಿಕೆ, ಪುಟ–46–55.

29. ಚಚಡಿ ಎನ್.ಜಿ. (1988) *"ದಿ ಇನ್‌ಟಿಗ್ರೆಟೆಡ್ ರೂರಲ್ ಡೆವಲಂಪ್‌ಮೆಂಟಲ್ ಪ್ರೋಗ್ರಮ್ ಆಂಡ್ ರೂರಲ್ ಪಾವರ್ಟಿ ಇನ್ ಕರ್ನಾಟಕ–ಎ ಕೇಸ್ ಸ್ಟಡಿ ಆಫ್ ಧಾರವಾಡ ಡಿಸ್ಟ್ರೀಕ್ಟ್"* ಕರ್ನಾಟಕ ವಿಶ್ವವಿದ್ಯಾಲಯಕ್ಕೆ ಸಾದರಪದಿಸಿದ ಅಪ್ರಕಟಿತ ಪ್ರಬಂದ.

30. ದೀಪಾ ನಾರಾಯಣ, ಬಿನಾಯಕ್ ಸೆನ್ ಮತ್ತು ಕಾಟೆ ಹುಲ್ (2009) *ಮೂವ್ಹಿಂಗ್ ಔಟ್ ಆಫ್ ಪಾವರ್ಟಿ ಇನ್ ಇಂಡಿಯಾ: ಯಾನ್ ಓವ್ಹರ್‌ವ್ಹಿವ್*, ಜಾಗತಿಕ ಬ್ಯಾಂಕ್.

31. ಮಧುರಾ ಸ್ವಾಮಿನಾಥನ್ (2010) *"ದಿ ನ್ಯೂ ಪಾವರ್ಟಿ ಲೈನ್: ಎ ಮೆಥೋಡೊಲೊಜಿ ಡಿಪ್ಲಿ ಫ್ಲಾಡ್"* ಇಂಡಿಯನ್ ಜರ್ನಲ್ ಆಫ್ ಹುಮನ್ ಡೆವ್ಹಲಪ್ಮೆಂಟ್, ಸಂಪುಟ.4, ಸಂಚಿಕೆ.1. ಪುಟ: 121–125.

32. ರಾಬರ್ಟ್ ಚೇಂಬರ್ಸ್ (1988) *ಪಾವರ್ಟಿ ಇನ್ ಇಂಡಿಯಾ; ಕಾನ್ಸೆಪ್ಟ್, ರಿಸರ್ಚ್ ಆಂಡ್ ರಿಯಾಲಿಟಿ ಡಿಸ್‌ಕಷನ್ ಪೇಪರ್*–241–ಐಡಿಎಸ್.

33. ರಾಬರ್ಟ್ ಚೇಂಬರ್ಸ್ (2006) *ಜರ್ನಲ್ ಆಫ್ ಪಾವರ್ಟಿ ಇನ್ ಫೋಕಸ್–ಯು.ಎನ್.ಡಿ.ಪಿ.*

34. ರಾಜಶೇಖರ ಭಾಸೂ (2011) *ಎಕನಾಮಿಕ್ಸ್ ಆಫ್ ಕಾಸ್ಟ*, *ಫ್ರಂಟಲೈನ್* ಪತ್ರಿಕೆ, ಸಂಪುಟ–28, ಸಂಚಿಕೆ 24 ಪುಟ–19.

35. ಎಂ. ಚಂದ್ರ ಪೂಜಾರಿ (2010) *ಯಾಕೀಗ ಭೂಮಿ ಪ್ರಶ್ನೆ?* ಪ್ರಸಾರಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ.

36. ಜಿ. ತಿಮ್ಮಯ್ಯಾ (1983) *ಕಾಸ್ಟ ಆಂಡ್ ಕ್ಲಾಸ್ ಇನ್ ಕರ್ನಾಟಕ. ಸೊಶಿಯಲ್ ಸೈಂಟಿಸ್ಟ*, ಸಂಪುಟ; 11, ಸಂಚಿಕೆ:117, ಪುಟ; 31–37.

37. ಸಿ.ಎ.ಕೆ. ಎಸೂದಿಯಾ (2007) *ಪಾವರ್ಟಿ ಎಲಿವೇಷನ್ ಪ್ರೋಗ್ರಾಮ್ಸ ಇನ್ ಇಂಡಿಯಾ: ಎ ಸೋಶಿಯಲ್ ಆಡಿಟ್. ದಿ ಇಂಡಿಯನ್ ಜರ್ನಲ್ ಆಫ್ ಮೆಡಿಕಲ್ ರಿಸರ್ಚ್*–126, ಪುಟ–364–373.

38. ಎನ್.ಸಿ. ಸಕ್‌ಸೇನಾ (2007) *ರೂರಲ್ ಪಾವರ್ಟಿ ರಿಡಕ್ಷನ್ ಥ್ರೊ ಸೆಂಟ್ರಲಿ ಸ್ಪಾನ್ಸರ್ಡ ಸ್ಕೀಮ್ಸ್, ಇಂಡಿಯನ್ ಜರ್ನಲ್ ಆಫ್ ಮೆಡಿಕಲ್ ರಿಸರ್ಚ್*–126, ಪುಟ–381–389.

39. ಸಂತೋಷ ಮ್ಹೆರೊತ್ರಾ (2010) *"ಇನ್ಟ್ರೂಡ್ಯೂಸಿಂಗ್ ಕಂಡಿಷ್ನಲ್ ಕ್ಯಾಷ್ ಟ್ರಾನ್ಸಫರ್ ಇನ್ ಇಂಡಿಯಾ: ಎ ಪ್ರೊಪಸಲ್ ಫಾರ್ ಫಾವ್ಹಿ ಸಿ,ಸಿ,ಟಿಎಸ್."*

40. **_http://www.graam.org.in/sites/graam.org.in/files/PDS-Q&A%20handout.pdf_**. Downloaded on 02/01/2012.

41. ಕೆ. ಸುಂದರಂ, ಸುರೇಶ ತೆಂಡೂಲ್ಕರ್ (2003) *ಪಾವರ್ಟಿ ಅಮಂಗ್ ಸೋಸಿಯಲ್ ಆಂಡ್ ಎಕನಾಮಿಕ್ ಗ್ರೂಪ್ಸ ಇನ್ ಇಂಡಿಯಾ ಇನ್ 1990, ಇ.ಪಿ.ಡಬ್ಲೂ,* ಸಂಪುಟ–38,ಸಂಚಿಕೆ.50, ಪುಟ–5263–5276.

42. ಕೆ.ಜಿ.ಗಾಯತ್ರಿ ದೇವಿ (2008) *ಪಾವರ್ಟಿ ಆಂಡ್ ನ್ಯಾಚುರಲ್ ರಿಸೋರ್ಸಿಸ: ಮೆಜರಿಂಗ್ ದಿ ಲಿಂಕ್ಸ (ಸಮ್ ಇಶ್ಯುಸ್ಸ ಇನ್ ದಿ ಕಾಂಟೆಸ್ಟ್ ಆಫ್ ಕರ್ನಾಟಕ. ವರ್ಕಿಂಗ್ ಪೇಪರ್*:142, ಐಸಾಕ್), ಬೆಂಗಳೂರು.

43. ಯು.ಎನ್.ಡಿ.ಪಿ. (2008) *ಗುಲಬರ್ಗಾ ಜಿಲ್ಲೆಯ ಮಾನವ ಅಭಿವೃದ್ಧಿ ವರದಿ.*

44. ಸುಬ್ರತಾ ಮುಖರ್ಜಿ, ಸ್ಲಿಮ್ ಹಾದ್ದಡ ಮತ್ತು ಡಿ.ನಾರಾಯಣ (2011) *ಸೋಷಿಯಲ್ ಕ್ಲಾಸ್ ರಿಲೇಟೆಡ್ ಇನ್‌ಇಕ್ವಾಲಿಟಿಸ್ ಇನ್ ಹೌಸ್‌ಹೋಲ್ಡ್ ಹೆಲ್ತ್ ಎಕ್ಸ್ಪೆಂಡಿಚರ್ ಆಯಿಂಡ್ ಎಕೊನೊಮಿಕ್ ಬರ್ಡನ್: ಎವ್ಹಿಡೆನ್ಸ್ ಫ್ರಮ್ ಕೇರಳ, ಸೌತ್ ಇಂಡಿಯಾ, ಇಂಟರ್‌ನ್ಯಾಶನಲ್ ಜರ್ನಲ್ ಫಾರ್ ಈಕ್ವಿಟಿ ಇನ್ ಹೆಲ್ತ್,* 10:1.

45. ಎಂ.ಚಂದ್ರ ಪೂಜಾರಿ (2012) *ಆರ್ಥಿಕಾಭಿವೃದ್ಧಿ ಏಕೆ ಕುಂಠಿತಗೊಂಡಿದೆ? ವಿಜಯ ಕರ್ನಾಟಕ* ಶುಕ್ರವಾರ 14, ಡಿಸೆಂಬರ್. ಪುಟ–9.

46. ಬಾಲಸುಬ್ರಹ್ಮಣ್ಯಂ ಆರ್. (2012) *ವರ್ಣ ವ್ಯವಸ್ಥೆ: ಸಂಪೂರ್ಣ ಅವ್ಯವಸ್ಥೆ.* ಮಂಗಳವಾರ 21ನೇ ಆಗಸ್ಟ್, *ಪ್ರಜಾವಾಣಿ.*

47. ರಾಘಬೇಂದ್ರ ಜಾ, ಸಂಬಿತ್ ಭಟ್ಟಾಚಾರ್ಯ, ರಾಘವ್ ಗೈಯ ಮತ್ತು ಶೈಲಶ್ರೀ ಶಂಕರ (2009) *ಕ್ಯಾಪ್ಚರ್ ಆಫ್ ಆ್ಯಂಟಿ–ಪಾವರ್ಟಿ ಪ್ರೋಗ್ರಾಮ್ಸ್: ಆ್ಯನ್ ಅನಾಲಸಿ ಆಫ್ ನ್ಯಾಷನಲ್ ರೂರಲ್ ಎಂಪ್ಲಾಯಿಮೆಂಟ್ ಗ್ಯಾರಂಟಿ ಪ್ರೋಗ್ರಾಮ ಇನ್ ಇಂಡಿಯಾ. ಜರ್ನಲ್ ಆಫ್ ಏಷಿಯನ್ ಎಕಾನೊಮಿಕ್ಸ್–20,* ಪುಟ 456–464.

48. ಅಜಿತ್ ಜಕಾರೀಸ್ ಮತ್ತು ವಾಮ್ಸಿ ವಕುಲಭರನಮ್ (2011) *ಕಾಸ್ಟ್ ಸ್ಟ್ರಾಟಿಫಿಕೇಷನ್ ಆ್ಯಂಡ್ ವೆಲ್ತ್ ಇನ್ ಈಕ್ವಾಲಿಟಿ ಇನ್ ಇಂಡಿಯಾ. ವರ್ಲ್ಡ್ ಡೆವಲಪ್ಮೆಂಟ್,* ಸಂಪುಟ.39 ನಂ.10 ಪುಟ 1820–1833.

49. ಇಂದಿರಾ ಹಿರ್ವೆ (2003) *ಐಡೆನ್ಟಿಫಿಕೇಶನ್ ಆಫ್ ಬಿಪಿಎಲ್ ಹೌಸ್ಹೋಲ್ಡ್ಸ್ ಫಾರ್ ಪಾವರ್ಟಿ ಆಲಿವೇಷನ್ ಪ್ರೋಗ್ರಾಮ್ಸ್, ಎಕೊನೊಮಿಕಲ್ ಪೊಲಿಟಿಕಲ್ ವೀಕ್ಲೀ*, ಸಂಪುಟ–38 ನಂ.45, ನವ್ಹೆಂಬರ್, 8–14, ಪುಟ–4803–4808.

50. ಎಂ.ಚಂದ್ರ ಪೂಜಾರಿ (2012) *ಅಭಿವೃದ್ಧಿ ಮತ್ತು ಬಡತನ ನಿವಾರಣೆ*, ಡಿಸೆಂಬರ್, ವಿಜಯ ಕರ್ನಾಟಕ ದಿನ ಪತ್ರಿಕೆ.

51. ಮುಳಗುಂದ ಈ.ಚ. (2010) *ಭಾರತೀಯ ಸಮಾಜ ರಚನೆ ಮತ್ತು ಪರಿವರ್ತನೆ*. ಸೃಷ್ಟಿ ಪ್ರಕಾಶನ, ಧಾರವಾಡ.

52. ಅನಿರುದ್ಧ ಕೃಷ್ಣ (2004) *ಎಸ್ಕೇಪಿಂಗ್ ಪಾವರ್ಟಿ ಆ್ಯಂಡ್ ಬಿಕಮಿಂಗ್ ಪುವರ್: ಹೂ ಗೇನ್ಸ್ ಆ್ಯಂಡ್ ಹೂ ಲಾಸ್ಟ್, ವರ್ಲ್ಡ್ ಡೆವಲ್ಪ್‌ಮೆಂಟ್*, ವ್ಯಾಲುಂ–32 ನಂ.1 ಪುಟ–232–236.

53. ಶಿವಕುಮಾರಸ್ವಾಮಿ (2012) *ಸಾರ್ವಜನಿಕ ವಿತರಣಾ ಪದ್ಧತಿ, ಯೋಜನೆ ಮಾಸ ಪತ್ರಿಕೆ*, ಸಂಪುಟ–28, ಸಂಚಿಕೆ–2.

54. ಪ್ರಜಾವಾಣಿ (2012) *ರಾಷ್ಟ್ರೀಯ ಮಾದರಿ ಸಮೀಕ್ಷಾ ಸಂಸ್ಥೆಯ ಸಮೀಕ್ಷೆಯ ಬಗ್ಗೆ ಪ್ರಕಟಣೆ.*

55. ಎಂ.ಚಂದ್ರ ಪೂಜಾರಿ (2013) *ಅಭಿವೃದ್ಧಿ ಮತ್ತು ಚುನಾವಣೆ ಗೆಲವು, ವಿಜಯ ಕರ್ನಾಟಕ* ಜನೇವರಿ 11ರ ದಿನಪತ್ರಿಕೆ.

56. ಸಂಪಾದಕೀಯ *ಇ.ಪಿ.ಡಬ್ಲ್ಯು* (2012), ಸಂಪುಟ–XLVII No.14.

57. ದ್ವಾರಕಾನಾಥ್, ಸಿ.ಎಸ್. (2010) *ಹಿಂದುಳಿದ ವರ್ಗಗಳು–ಅಸ್ಥಿತ್ವ ಮತ್ತು ಅಸಮಾನತೆ. ಸಂಪಾದಕರು ಅಸಮಾನ ಭಾರತ*, ಲಡಾಯಿ ಪ್ರಕಾಶನ, ಗದಗ.

58. ಅಜೀಜ್, ಅಬ್ದುಲ್ ರವರು (2013,) ಮಾರ್ಚ, 11ರ *ವಿಜಯವಾಣಿ* ದಿನಪತ್ರಿಕೆಯಲ್ಲಿ ಪ್ರಕಟವಾದ ಲೇಖನ.

59. ಗುಮ್ಮಾಡಿ ನಾಗಾಚಾರ್ಯ (1985) *ಕಾಸ್ಟ್ ಆ್ಯಂಡ್ ಲ್ಯಾಂಡ್: ಎ ಸ್ಟಡಿ ಆಫ್ ಸಿಫ್ಟ್ ಇನ್ ಲ್ಯಾಂಡ್ ಓನರ್ಶಿಪ್ ಇನ್ ಎ ಸೌತ್ ಇಂಡಿಯನ್ ವಿಲೇಜ್*, ಆಂಧ್ರ ವಿಶ್ವವಿದ್ಯಾಲಯ, ವಾಲ್ಟೇರ್, ಆಂಧ್ರ ಪ್ರದೇಶ.

60. ಯರಿಸ್ವಾಮಿ ಎಂ (2002) *ಗ್ರಾಮ ಪಂಚಾಯತಿ ಮತ್ತು ಸಬಲೀಕರಣ* (ಬಳ್ಳಾರಿ ಜಿಲ್ಲೆಯ ಅಧ್ಯಯನ), ಕನ್ನಡ ವಿಶ್ವವಿದ್ಯಾಲಯ, ವಿದ್ಯಾರಣ್ಯ, ಹಂಪಿ.

61. ಎಸ್.ಪಿ.ಸಿಂಗ್ (2013) *ಸಪ್ಲೈ–ಸೈಡ್ ಚಾಲೆಂಜೆಸ್ಸ್ ಆಫ್ ದಿ ನ್ಯಾಷನಲ್ ಫುಡ್ ಸೆಕ್ಯುರಿಟಿ ಬಿಲ್*, ಕುರುಕ್ಷೇತ್ರ, ನವ್ಹೆಂಬರ್, ಸಂಪುಟ–12, ಸಂಚಿಕೆ–1.

62. ಯೋಜನಾ (2013) *ಬೆಳವಣಿಗೆ, ಉದ್ಯೋಗ ಮತ್ತು ಬಡತನ*, ಸಂಚಿಕೆ–3, ಸಂಪುಟ–29.

63. ಟಿ.ಸಿ.ಎ. ಅನಂತ್ (2013) *ಬಡತನದ ಅಳತೆಗೋಲು, ಯೋಜನಾ,* ಸಂಚಿಕೆ–3, ಸಂಪುಟ–29.

64. ಎಂ.ಚಂದ್ರ ಪೂಜಾರಿ (2013) *ಬಡತನದ ಬವಣೆ ಯೋಜನಾ,* ಸಂಚಿಕೆ–3, ಸಂಪುಟ–29.

65. ಪಿ.ಸಾಯಿನಾಥ್ (2012) *ಬರ ಅಂದ್ರೆ ಎಲ್ಲರಿಗೂ ಇಷ್ಟ,* ಕನ್ನಡಕ್ಕೆ ಅನು: ಜಿ.ಎನ್ ಮೋಹನ್, ಅಭಿನವ ಪ್ರಕಾಶನ, ಬೆಂಗಳೂರು.

66. Samik Chowdhury, *Public Retreat, Private Expenses and Penury – A Study of Illness Induced Impoverishment in Urban India,* National Institute of Public Finance and Policy, New Delhi.

67. ಅನದಲೀಬ್ ರೆಹಮಾನ್ (2014) *ರೀವೈವಲ್ ಆಫ್ ರೂರಲ್ ಪಬ್ಲಿಕ್ ಡಿಸ್ಟ್ರಿಬ್ಯೂಶನ್ ಸಿಸ್ಟಮ್–ಎಕ್ಸಪೆನ್ಶನ್ ಆ್ಯಂಡ್ ಔಟ್ರೀಚ್,* ಇಪಿಡಬ್ಲ್ಯ, ವ್ಯಾಲ್ಯೂಮ್–XLIX ನಂ.20

68. ಭಾಸ್ಕರ್ ಮುಖರ್ಜಿ (2004) *ಪಾವರ್ಟಿ, ಫುಡ್ ಸೆಕ್ಯುರಿಟಿ ಆ್ಯಂಡ್ ಸ್ಟಟೆನೆಬಿಲಿಟಿ,* ರಾವತ್ ಪಬ್ಲಿಕೇಶನ್, ಜೈಪುರ.

69. ಕರ್ನಾಟಕ ಜನಪರ ವೇದಿಕೆ (2008) *ಬಡವರ ಅನ್ನದ ತಟ್ಟೆಗೆ ಕುಬೇರರ ಕನ್ನ,* ಕರ್ನಾಟಕ ಜನಪರ ವೇದಿಕೆ, ಮಂಡ್ಯ.

70. ದಿವಾಕರ ನಾ. (2013) *ಜಾಗತೀಕರಣ ಮತ್ತು ದಲಿತರು* ಮೂಲ:ಆನಂದ್ ತೇಲ್ತುಂಬ್ಡೆ, ಲಡಾಯಿ ಪ್ರಕಾಶನ, ಗದಗ.

71. ಚಂದ್ರಶೇಖರ ಟಿ.ಆರ್ (2014) *ಆಹಾರ ಭದ್ರತೆ: ಜನರನ್ನು ಒಳಗೊಳ್ಳುವ ಯೋಜನೆ, ಹೊಸತು,* ಸಂಪುಟ–15 ಸಂಚಿಕೆ–12 ಜುಲೈ 2014.

72. ಚಂದ್ರ ಪೂಜಾರಿ ಎಂ (2014) *ಅಭಿವೃದ್ಧಿ ಮತ್ತು ರಾಜಕೀಯ,* ಪುಟ–58–70.

73. *ಭಾರತದ ಗ್ರಾಮೀಣಾಭಿವೃದ್ಧಿ ವರದಿ* (2013) ಓರಿಯಂಟ್ ಬ್ಲಾಕ್‌ಸ್ವಾನ್ ಪ್ರೈ.ಲಿ. ಹೈದರಾಬಾದ.

74. http://kannada.oneindia.in//news/india/fifteen-indian-states-highest-poverty-rates-as-per-rbi-085798.html (ಭಾರತದ 15 ಬಡ ರಾಜ್ಯಗಳು ಮತ್ತು ಇದರಲ್ಲಿ ಕರ್ನಾಟಕ ರಾಜ್ಯಕ್ಕೆ ಎಷ್ಟನೇ ಸ್ಥಾನ?) dated 2-07-2014.

75. ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ, ಭಾರತ ಸರಕಾರ (2013) ಡಿಎಲ್‌ಹೆಚ್‌ಎಸ್–4, ಜಿಲ್ಲಾವಾರು ಮಾಹಿತಿ ಒಳಗೊಂಡಿರುವ ಫ್ಯಾಕ್ಟಸೀಟ್.

76. ಕರ್ನಾಟಕ ಸರಕಾರ (2013) *ಆರ್ಥಿಕ ಸಮೀಕ್ಷೆ*–2013–14, ಬೆಂಗಳೂರು.

77. ಸಿ.ರಂಗರಾಜನ್ (2014) *"ದಿ ನೀಡ್ ಟು ಮೇಜರ್ ಪಾವರ್ಟಿ", ದಿ ಹಿಂದೂ* ದಿನಪತ್ರಿಕೆ, 7 ಆಗಸ್ಟ್, 2014.

78. ಮಿಯಿಕಾ ಚಟರ್ಜಿ (2014) *"ಆ್ಯನ್ ಇಮಪ್ರೂಡ್ ಪಿಡಿಎಸ್ ಇನ್ ಎ 'ರಿವೀವಿಂಗ್' ಸ್ಟೇಟ್, ಫುಡ್ ಸೆಕ್ಯುರಿಟಿ ಇನ್ ಕೊರಾಪುಟ್, ಒಡಿಸಾ"* ಇಪಿಡಬ್ಲ್ಯು, ವ್ಯಾಲುಮ್–XLIX, ಸಂಖ್ಯೆ–45.

79. ಸಿ.ಎ.ಕೆ. ಯೆಸುದ್ಯೆಯನ್ (1988) *"ಹೆಲ್ತ್ ಸರವೀಸ್ಸ್ ಯುಟಿಲಾಯಿಜೆಸೆನ್ ಇನ್ ಅರ್ಬನ್ ಇಂಡಿಯಾ (ಎ ಸ್ಟಡಿ)"* ಮಿತ್ತಲ್ ಪಬ್ಲಿಕೇಶನ್, ದೆಹಲಿ.

80. ಎಂ.ಚಂದ್ರ ಪೂಜಾರಿ (2014) *"ಬಡತನ ಮತ್ತು ಪ್ರಜಾಪ್ರಭುತ್ವ"*, ಗಾಯತ್ರಿ ಪ್ರಕಾಶನ, ಬಳ್ಳಾರಿ.

81. ಡೈರೆಕ್ಟರೇಟ್ ಆಫ್ ಸೆನಸ್ಸ್ (2011) ಭಾರತದ 2011ರ ಜನಗಣತಿಯ ಅಂತರಜಾಲ ತಾಣದಿಂದ ಪಡೆಯಲಾಗಿದೆ.

82. ಕರ್ನಾಟಕ ಸರಕಾರ (2014) ಆಹಾರ ಮತ್ತು ನಾಗರಿಕ ಸರಬರಾಜು ಇಲಾಖೆಯ ಅಂತರಜಾಲ ತಾಣದಿಂದ ಪಡೆಯಲಾಗಿದೆ.

83. ಅಶೋಕ ಕೆ.ಪಂಕಜ (2015) *"ದಿ ಪಬ್ಲಿಕ್ ಡಿಸ್ಟ್ರಿಬ್ಯುಸನ್ ಸಿಸ್ಟಮ್ ಇನ್ ಬಿಹಾರ: ಆನ್ ಅಸ್ಸೆಸ್‌ಮೆಂಟ್ ಆಫ್ ದಿ ಕೂಪನ್ ಸಿಸ್ಟಂ"*, *ಸೋಶಿಯಲ್ ಚೇಂಜ್*, ವ್ಯಾಲೂಮ್–45, ನಂ.4

84. ಎನ್ ಎನ್ ಎಸ್ ಓ (2013) ಜುಲೈ ರಿಂದ ಡಿಸೆಂಬರ್, 2012ರಲ್ಲಿ ನಡೆಸಿದ 62ನೇ ಸುತ್ತಿನ ಮಾಹಿತಿಯ ಪ್ರಕಾರ ದೇಶ ಮತ್ತು ಕರ್ನಾಟಕ ರಾಜ್ಯದಲ್ಲಿ ಕುಡಿಯುವ ನೀರು, ನೈರ್ಮಲ್ಯ, ಸ್ವಚ್ಛತೆ ಮತ್ತು ವಸತಿ ಮನೆಗಳ ಸ್ಥಿತಿಯನ್ನು ಕುರಿತು ವರದಿ.

85. ರಮ್ಯ ವಿಜಯ, ರಾಹುಲ್ ಲಾಹೊಟಿ ಮತ್ತು ಹೇಮಾ ಸ್ವಾಮಿನಾಥನ್ (2013) *"ಮೂವ್ಹಿಂಗ್ ಫ್ರಮ್ ಹೌಸ್ಹೋಲ್ಡ್ ಟೂ ಇಂಡ್ವಿಜಿವಲ್: ಮಲ್ಟಿಡೈಮೆನ್ಷನಲ್ ಪಾವರ್ಟಿ ಅನಲೈಸ್ಸ್"* ಭಾರತೀಯ ವ್ಯವಹಾರ ನಿರ್ವಹಣೆ ಸಂಸ್ಥೆ, ಬೆಂಗಳೂರು, ವರ್ಕಿಂಗ್ ಪೇಪರ್ ನಂ.404.

86. ಕಲಬುರಗಿ ಜಿಲ್ಲಾ ಆಡಳಿತ (2012) 2011–12ರ *ಗುಲಬರ್ಗಾ ಜಿಲ್ಲೆಯ ಅಂಕಿ ಸಂಖ್ಯೆಗಳ ಪಕ್ಷಿ ನೋಟ.*

87. ಧಾರವಾಡ ಜಿಲ್ಲಾ ಆಡಳಿತ (2012) 2011–12ರ *ಧಾರವಾಡ ಜಿಲ್ಲಾ ಅಂಕಿ ಸಂಖ್ಯೆಗಳ ಪಕ್ಷಿ ನೋಟ.*

88. ಶಾರದಾ ಗೋಪಾಲ (2016) *ಇದು ಆಹಾರದ ಇನ್ನೊಂದು ರಾಜಕೀಯ*, ದಿನಾಂಕ 1–09–2016ರ *ಪ್ರಜಾವಾಣಿ* ದಿನ ಪತ್ರಿಕೆ, ಪುಟ–6.

89. ಎಂ.ಚಂದ್ರ ಪೂಜಾರಿ (2017) *ಮಾರುಕಟ್ಟೆ ಅಭಿವೃದ್ಧಿ ಮತ್ತು ಪ್ರಜಾಪ್ರಭುತ್ವ, ಹೊಸತು* ಮಾಸ ಪತ್ರಿಕೆ, ಸಂಪುಟ–18, ಸಂಚಿಕೆ–6, ಪುಟ–195–199.

90. ವಿಶ್ವ ಬ್ಯಾಂಕ್ (2007) *ಹ್ಯೂಮನ್ ಡೆವಲಪ್ಮೆಂಟ್ ಇಂಡಿಕೇಟರ್ಸ್ ರಿಜನಲ್ ಟೇಬಲ್ಸ್.*

91. ವಿಶ್ವ ಬ್ಯಾಂಕ್ (2011) ವಿಶ್ವಬ್ಯಾಂಕ್ 2011ರ ಬಡತನದ ಕುರಿತು ವರದಿ.

92. *ಮೇರಿಯನ್ ವೆಬಸ್ಟರ್ ಶಬ್ದಕೋಶ* (2013) https://www.merriam-webster.com/dictionary/poverty ದಿನಾಂಕ 18 ನವೆಂಬರ್ 2013ರಂದು ಅಂತರ ಜಾಲ ತಾಣದಿಂದ ಪಡೆದದ್ದು.

93. ರಾಫೆಲ್ ಡೆನ್ನಿಸ್ (2005) *Child poverty in rich nations: Report card* no. 6 (Report). Innocenti Research Centre.

94. ರಾಫೆಲ್ ಡೆನ್ನಿಸ್ (2009) *"Poverty, Human Development, and Health in Canada: Research, Practice, and Advocacy Dilemmas"*. Canadian Journal of Nursing Research (CJNR). 41 (2): 7–18.

95. ವಿಶ್ವ ಬ್ಯಾಂಕ್ (2014) *ಜಾಗತಿಕ ಬಡತನದ ವರದಿ.*

96. ಜಿ.ಎನ್ ನಾಗರಾಜ್ (2018) *21ನೆಯ ಶತಮಾನದಲ್ಲಿ ಡಾ, ಅಂಭೇಡ್ಕರ್‌ರವರ ಚಿಂತನೆಗಳ ಪ್ರಸ್ತುತತೆ, ಸಂವಾದ* – ಸಂಪುಟ–16 ಸಂಚಿಕೆ–06, ಪುಟ–8–11.

97. ಚನ್ನಕ್ಕಿ ಹೆಚ್. ಆರ್ ಮತ್ತು ರಾಧಾ ಜಿ. ಮಣ್ಣೂರ್ (2016) *ದಕ್ಷಿಣ ಭಾರತ ಮತ್ತು ಕರ್ನಾಟಕ ರಾಜ್ಯದಲ್ಲಿನ ತಳ ಸಮುದಾಯದಲ್ಲಿರುವ ಬಡತನದ ಕುರಿತು ಒಂದು ವಿಶ್ಲೇಷಣೆ, ಹೊಸತು* –ಸಂಪುಟ 18–ಸಂಚಿಕೆ–3, ಪುಟ–25–29.

98. ಎ. ವೈದ್ಯನಾಥನ್ (2001) *"ಪಾವರ್ಟಿ ಆ್ಯಂಡ್ ಪಾಲಿಸಿ", ಎಕನಾಮಿಕಲ್ ಆ್ಯಂಡ್ ಪೊಲಿಟಿಕಲ್ ವೀಕ್ಲಿ,* ಸಂಪುಟ–36 ನಂ.21, ಪುಟ–1807–1822.

99. ಅರವಿಂದ ಪನಗರಿಯಾ ಮತ್ತು ವಿಶಾಲ ಮೋರೆ (2013) *'ಪಾವರ್ಟಿ ಬೈ ಸೋಶಿಯಲ್, ರೀಲಿಜಿಯಸ್ ಆ್ಯಂಡ್ ಎಕಾನಾಮಿಕ್ ಗ್ರೂಪ್ಸ್ ಇನ್ ಇಂಡಿಯಾ ಅಮಾಂಗ್ ಆ್ಯಂಡ್ ಇಟ್ಸ್ ಲಾರ್ಜ ಸ್ಟೇಟ್ಸ್ 1993–94 ರಿಂದ 2011–12,* ಎಸ್‌ಆಯ್‌ಪಿಎ–ಆಯ್‌ಎಸ್‌ಈಆರ್‌ಪಿ, ಕೋಲಂಬಿಯಾ ಯುನಿವರಸಿಟಿ, ವರ್ಕಕಿಂಗ್ ಪೇಪರ್ ನಂ.2013–02, ಪುಟ–1–46.

100. ಚನ್ನಕ್ಕಿ ಹೆಚ್. ಆರ್. (2015) *"ಶೌಚಾಲಯದ ವ್ಯವಸ್ಥೆಯಲ್ಲಿನ ಅಸಮಾನತೆ ಕುರಿತು ಒಂದು ಅವಲೋಕನ", ಹೊಸತು* ಸಂಪುಟ–17 ಸಂಚಿಕೆ–1, ಪುಟ–41–42.



# ಅಧ್ಯಾಯ ೨

# ಕ್ಷೇತ್ರ ಪರಿಚಯ

**ಪೀಠಿಕೆ**

ಈ ಅಧ್ಯಾಯದಲ್ಲಿ ಅಧ್ಯಯನ ಕೈಗೊಂಡ ಕಲಬುರಗಿ ಮತ್ತು ಧಾರವಾಡ ಜಿಲ್ಲೆಗಳ ಸ್ಥೂಲ ಪರಿಚಯವನ್ನು ಮಾಡಿದೆ. ಜಿಲ್ಲೆಗಳ ಚಾರಿತ್ರಿಕ ಹಿನ್ನೆಲೆ, ಸಾಮಾಜಿಕ ರಚನೆ, ಸಂಪನ್ಮೂಲಗಳ ಲಭ್ಯತೆ ಮತ್ತು ಜಿಲ್ಲೆಗಳ ಆರ್ಥಿಕ ವ್ಯವಸ್ಥೆಯ ಸ್ವರೂಪ ಮುಂತಾದ ವಿಷಯಗಳನ್ನು ಈ ಅಧ್ಯಾಯದಲ್ಲಿ ಚರ್ಚಿಸಲಾಗಿದೆ. ಈ ಅಧ್ಯಯನದ ಪ್ರಮುಖವಾದ ಉದ್ದೇಶವೇನೆಂದರೆ ಅಭಿವೃದ್ಧಿ ಹೊಂದಿದ ಮತ್ತು ತೀರ ಹಿಂದುಳಿದ ಜಿಲ್ಲೆಗಳಲ್ಲಿ ಬಡತನ ರೇಖೆಯ ಕೆಳಗಿರುವ ಕುಟುಂಬಗಳು ತಮ್ಮ ದೈನಂದಿನ ಉಪಜೀವನಕ್ಕೆ ಬೇಕಾದ ಆಹಾರ, ಶಿಕ್ಷಣ, ಅರೋಗ್ಯ, ವಸತಿ ಮತ್ತು ನೈರ್ಮಲ್ಯಕ್ಕೆ ಸಂಬಂಧಿಸಿದಂತೆ ಸರಕಾರದ ಮೇಲೆ ಎಷ್ಟರಮಟ್ಟಿಗೆ ಅವಲಂಬಿತರಾಗಿದ್ದಾರೆ, ಸರಕಾರವು ಆ ಕುಟುಂಬಗಳ ಬೇಕು ಬೇಡಿಕೆಗಳಿಗೆ ಯಾವ ರೀತಿ ಸ್ಪಂದಿಸುತ್ತಿದೆ ಮತ್ತು ಇವುಗಳಲ್ಲಿ ಮುಕ್ತ ಮಾರುಕಟ್ಟೆಯ ಪಾತ್ರ ಏನು ಎಂಬುದನ್ನು ತಿಳಿದುಕೊಳ್ಳುವುದಾಗಿದೆ. ಅದಕ್ಕೋಸ್ಕರ ಪ್ರಸ್ತುತ ಸಂಶೋಧನೆಗೆ ಧಾರವಾಡ ಮತ್ತು ಕಲಬುರಗಿ ಜಿಲ್ಲೆಗಳಲ್ಲಿನ ಒಂದೊಂದು ಗ್ರಾಮಗಳನ್ನು ಆಯ್ಕೆ ಮಾಡಿಕೊಂಡು ಕ್ಷೇತ್ರಕಾರ್ಯವನ್ನು ಕೈಗೊಳ್ಳಲಾಯಿತ್ತು. ಈ ರೀತಿಯಾದ ಗ್ರಾಮಗಳನ್ನು ಆಯ್ಕೆ ಮಾಡಿಕೊಳ್ಳಲು ಎರಡು ಕಾರಣಗಳಿವೆ. ಕಾರಣ ಒಂದು, ಧಾರವಾಡದಲ್ಲಿನ ನಿಗದಿಯು ಜಿಲ್ಲಾ ಕೇಂದ್ರದಿಂದ 12 ಕೀ.ಮಿ. ದೂರದಲ್ಲಿದೆ ಮತ್ತು ಧಾರವಾಡವು ಜಿಲ್ಲಾ ಕೇಂದ್ರವಾಗಿರುವುದರಿಂದ ಆ ಗ್ರಾಮದ ಜನರಿಗೆ ಜಿಲ್ಲಾ ಕೇಂದ್ರವಾದ ಧಾರವಾಡದಲ್ಲಿನ ಮಾರುಕಟ್ಟೆಯು ಹತ್ತಿರದಲ್ಲಿದೆ. ಎರಡು ಕಲಬುರಗಿ ಜಿಲ್ಲೆಯ ಕೊಂಕನಳ್ಳಿ ಗ್ರಾಮವು ಜಿಲ್ಲಾ ಕೇಂದ್ರದಿಂದ 40 ಕೀ.ಮಿ. ದೂರದಲ್ಲಿದೆ ಆದರೆ ತಾಲೂಕ ಕೇಂದ್ರವಾದ ಸೇಡಂ ದಿಂದ ಕೇವಲ 10 ಕೀ.ಮಿ ದೂರದಲ್ಲಿದೆ. ಒಂದು ಗ್ರಾಮವು ಜಿಲ್ಲಾ ಕೇಂದ್ರದ ಸಮೀಪದಲ್ಲಿದೆ ಮತ್ತೊಂದು ಗ್ರಾಮವು ಜಿಲ್ಲಾ ಕೇಂದ್ರದಿಂದ ದೂರದಲ್ಲಿದೆ ಮತ್ತು ತಾಲೂಕ ಕೇಂದ್ರದಲ್ಲಿರುವ ಮುಕ್ತ ಮಾರುಕಟ್ಟೆಗಳಿಂದ ಸಮೀಪದಲ್ಲಿದೆ. ಆದರೆ ಈ ಎರಡು ಗ್ರಾಮಗಳ ಆಯ್ಕೆಯಲ್ಲಿ ಕೆಲವೊಂದು ಇತಿಮಿತಿಗಳು ಇವೆ. ಅವುಗಳು ಈ ಕೆಳಗಿನಂತಿವೆ. ಜಿಲ್ಲೆಯಲ್ಲಿರುವ ಮುಕ್ತ ಮಾರುಕಟ್ಟೆಯು ತಾಲೂಕ ಮಾರುಕಟ್ಟೆಯಲ್ಲಿ ಗ್ರಾಹಕರಿಗೆ ಮುಕ್ತ ಆಯ್ಕೆಗೆ ಅವಕಾಶವಿರುವುದಿಲ್ಲ. ಆಯ್ಕೆ ಮಾಡಿಕೊಂಡ ಜಿಲ್ಲೆ ಹಾಗೂ ಗ್ರಾಮಗಳ ಹಿನ್ನೆಲೆ, ರಾಜಕೀಯ, ಆರ್ಥಿಕ, ಜನಸಂಖ್ಯೆ, ಭೌಗೋಳಿಕ ಲಕ್ಷಣಗಳನ್ನು ಈ ಒಂದು ಅಧ್ಯಾಯದಲ್ಲಿ ಚರ್ಚಿಸಲಾಗಿದೆ.

ಈ ಸಂಶೋಧನೆಗೆ ಉತ್ತರ ಕರ್ನಾಟಕದ ಎರಡು ಜಿಲ್ಲೆಗಳಾದ ಧಾರವಾಡ ಮತ್ತು ಕಲಬುರಗಿ ಜಿಲ್ಲೆಗಳಲ್ಲಿನ ತಲಾ ಒಂದರಂತೆ ಎರಡು ಗ್ರಾಮಗಳನ್ನು ಆಯ್ಕೆಮಾಡಿಕೊಳ್ಳಲಾಗಿದೆ.

ಆಯ್ಕೆ ಮಾಡಿಕೊಂಡ ಧಾರವಾಡ ಜಿಲ್ಲೆಯಲ್ಲಿ ನನ್ನ ಸಂಶೋಧನೆಯ ಪ್ರಥಮ ಮಟ್ಟದ ಕ್ಷೇತ್ರಕಾರ್ಯವನ್ನು ಧಾರವಾಡ ಜಿಲ್ಲೆಯ ಧಾರವಾಡ ತಾಲೂಕಿನ ನಿಗದಿ ಗ್ರಾಮವನ್ನು ಆಯ್ಕೆಮಾಡಿಕೊಂಡಿದೆ. ಈ ರೀತಿಯಾಗಿ ಆಯ್ಕೆಮಾಡಿಕೊಳ್ಳುವ ಮುಂಚೆ ಗ್ರಾಮದ ಹಿರಿಯರನ್ನು, ಪಂಚಾಯತ್ ಸದಸ್ಯರನ್ನು ಮತ್ತು ಇತರೆ ಜನರನ್ನು ಕಂಡು ನನ್ನ ಸಂಶೋಧನೆಯ ಉದ್ದೇಶಗಳನ್ನು ತಿಳಿ ಹೇಳಿ ಗ್ರಾಮದ ಭೌಗೋಳಿಕ, ಸಾಮಾಜಿಕ, ಆರ್ಥಿಕ, ಶೈಕ್ಷಣಿಕ ಮತ್ತು ಗ್ರಾಮಕ್ಕೆ ಸಂಬಂಧಪಟ್ಟ ಇತರೆ ಮಾಹಿತಿಯನ್ನು ಸಂಗ್ರಹಿಸಲಾಯಿತ್ತು.

**ಕಲಬುರಗಿ ಜಿಲ್ಲೆಯ ಚಾರಿತ್ರಿಕ ಹಿನ್ನೆಲೆ**

ಕಲಬುರಗಿಯನ್ನು ಸ್ಥಳೀಯವಾಗಿ 'ಕಲಬುರಗಿ' ಎಂದು ಕರೆಯುತ್ತಾರೆ. ಉರ್ದು ಭಾಷೆಯಲ್ಲಿ ಇದನ್ನು 'ಗುಲಬರ್ಗಾ' ಎಂದು ಕರೆಯುವುದು ಚಾಲ್ತಿಯಲ್ಲಿದೆ. ವಿಜಯನಗರ ಸಾಮ್ರಾಜ್ಯದ ಗಡಿಗಳನ್ನು ವಿವರಿಸುವಾಗ ವಿದೇಶಿ ಪ್ರವಾಸಿಗ ಅಬ್ದುಲ್ ರಜಾಕ್ ಕ್ರಿ.ಶ.1445ರಲ್ಲಿ ಕಲಬುರಗಿಯ ಬಗ್ಗೆ ಉಲ್ಲೇಖಿಸಿದ್ದಾನೆ. 'ಕಲಬುರುಗ' ಅಂದರೆ ಕನ್ನಡದಲ್ಲಿ ಕಲ್ಲುಗಳಿಂದ ಕೂಡಿದ ಪ್ರದೇಶ ಅಥವಾ 'ಕಲ್ಲುಗಳ ಗುಡ್ಡ' ಅಥವಾ 'ಕಲ್ಲುಗಳ ರಾಶಿ' ಎಂದು ಅರ್ಥವಿದೆ (ಕಲಬುರಗಿ ಮಾನವ ಅಭಿವೃದ್ಧಿ ವರದಿ, 2014 ಪು. 9–22 ಮತ್ತು ಜಿಲ್ಲಾ ಜನಗಣತಿ ಕೈಪಿಡಿ 2011, ಪು. 17–18). ಈ ಒಂದು ಹೆಸರಿನಿಂದ ಸ್ಥಳೀಯ ಪ್ರದೇಶದ ಭೌಗೋಳಿಕ ಗುಣಲಕ್ಷಣಗಳನ್ನು ತಿಳಿದುಕೊಳ್ಳಬಹುದು. ಅಂದರೆ ಇಡೀ ಪ್ರದೇಶದಲ್ಲಿ ಎಲ್ಲಿ ನೋಡಿದರೂ ಕಲ್ಲುಗಳಿಂದ ಕೂಡಿರುವ ಪ್ರದೇಶದಿಂದ ಆವೃತವಾಗಿದೆ. ಇದಕ್ಕೆ ತಾಜಾ ಉದಾಹರಣೆ ಎಂದರೆ ಜಿಲ್ಲೆಯಲ್ಲಿ ತಲೆ ಎತ್ತುತ್ತಿರುವ ಸಿಮೆಂಟ್ ಕೈಗಾರಿಕೆಗಳು. ಉರ್ದು ಭಾಷೆಯಲ್ಲಿ ಕಲಬುರಗಿಯನ್ನು 'ಗುಲಬರ್ಗಾ' ಎಂದು ಸಂಬೋಧಿಸುತ್ತಾರೆ. ಪರ್ಷಿಯನ್ ಭಾಷೆಯಲ್ಲಿ 'ಗುಲ್' ಎಂದರೆ ಹೂ/ಪುಷ್ಪ ಅಂತಲೂ ಮತ್ತು 'ಬರ್ಗ' ಎಂದರೆ ಎಲೆ ಅಂತಲೂ ಅರ್ಥವಿದೆ (ಕಲಬುರಗಿ ಮಾನವ ಅಭಿವೃದ್ಧಿ ವರದಿ, 2014, ಪು. 9–22). ಒಟ್ಟಾರೆಯಾಗಿ ಹೇಳಬೇಕಾದರೆ ಹೂಗಳಿರುವ ತೋಟ ಎಂದು ಅರ್ಥ. ಆದರೆ ಈ ಹೆಸರು ಆ ಪ್ರದೇಶದ ಯಾವುದೇ ಗುಣಲಕ್ಷಣಗಳನ್ನು ಹೇಳುವುದಿಲ್ಲ (ಕಲಬುರಗಿ ಮಾನವ ಅಭಿವೃದ್ಧಿ ವರದಿ, 2014, ಪು. 9–22). ಮತ್ತೊಂದು ಮೂಲದ ಪ್ರಕಾರ ಇದು 'ಗುಲ್‌ಚಾಂದ್' ಎಂಬ ರಾಜನ ಹೆಸರಿನಿಂದ ಜಿಲ್ಲೆಗೆ 'ಗುಲಬರ್ಗಾ' ಎಂಬ ಹೆಸರು ಬಂತು ಎಂದು ಹೇಳಲಾಗುತ್ತದೆ (ಕರ್ನಾಟಕ ಸರ್ಕಾರ, ಕರ್ನಾಟಕ ಸ್ಟೇಟ್ ಗೆಜೆಟೀಯರ್, ಕಲಬುರಗಿ ಜಿಲ್ಲೆ: ಪು: 1–2). ತೀರ ಇತ್ತೀಚೆಗೆ ಕೇಂದ್ರ ಸರಕಾರದ ಗೃಹ ಇಲಾಖೆಯು ರಾಜ್ಯದ ಕೆಲವು ನಗರಗಳ ಹೆಸರುಗಳನ್ನು ತಿದ್ದುಪಡಿಯ ಮೂಲಕ ಬದಲಾಯಿಸಿತ್ತು. ಹೀಗೆ ಹೆಸರು ಬದಲಾಯಿಸಿದ ನಗರಳ್ಲಿ 'ಗುಲಬರ್ಗಾ'ವು 'ಕಲಬುರಗಿ'ಯಾಗಿ ಬದಲಾಯಿತ್ತು.

ಈ ಪ್ರದೇಶದ ಪರಂಪರೆಯು ಶ್ರೀಮಂತವಾದುದಾಗಿದೆ. ಈ ಪ್ರದೇಶವನ್ನು ಚಾಲುಕ್ಯರು ಮತ್ತು ರಾಷ್ಟ್ರಕೂಟರು ಆಳಿದರು. ಚಕ್ರವರ್ತಿ ನೃಪತುಂಗನ ಕಾಲದಲ್ಲಿ ಪ್ರಸಿದ್ಧ ಕೃತಿ ಕವಿರಾಜಮಾರ್ಗ

ರಚಿತವಾಯಿತು. ಈ ಮಣ್ಣಲ್ಲಿ ಮಹಾವೀರಾಚಾರ್ಯರಿಂದ ಪ್ರಸಿದ್ಧ ಗಣಿತದ ಒಂದು ಕೃತಿ ಮತ್ತು ವಿಜ್ಞಾನೇಶ್ವರರಿಂದ 'ಮಿತಾಕ್ಷರ' ಎಂಬ ಕೃತಿ ರಚಿತವಾದವು. ಈ ಪ್ರದೇಶವು ಶಿಕ್ಷಣಕ್ಕೆ ಸಂಬಂಧಿಸಿದಂತೆಯೂ ಮುಂದುವರೆದಿತ್ತು. ಈ ದಿಶೆಯಲ್ಲಿ ಚಿತ್ತಾಪುರ ತಾಲ್ಲೂಕಿನ ನಾಗಾಯಿ ಎಂಬಲ್ಲಿ ಒಂದು ವಿಶ್ವವಿದ್ಯಾಲಯವೇ ಇತ್ತು ಎಂದು ಹೇಳಲಾಗುತ್ತದೆ. ಈ ಭೂಮಿಯಲ್ಲಿ 12ನೆಯ ಶತಮಾನದಲ್ಲಿ ಸಾಮಾಜಿಕ ಸುಧರಣಾ ಕ್ರಾಂತಿಯೊಂದು ನಡೆಯಿತು. ಆ ಕ್ರಾಂತಿಯನ್ನು ಬಸವೇಶ್ವರ ಮತ್ತು ಇತರೆ ಶರಣರ ನೇತೃತ್ವದಲ್ಲಿ ನಡೆಯಿತು. ಅದೊಂದು ಸಾಮಾಜಿಕ ಏಕತೆಯ ಮತ್ತು ಸಮಾನತೆಯ ಸಂದೇಶದ ಕ್ರಾಂತಿಯಾಗಿತ್ತು. ಸಾಮಾಜಿಕ ಕಲ್ಯಾಣವನ್ನು ಗರಿಷ್ಠೀಕರಿಸಿಕೊಳ್ಳುವುದಕ್ಕೆ ಅನುಕೂಲವಾಗುವ ಕಾಯಕ ಮತ್ತು ದಾಸೋಹ ಪದ್ಧತಿಗಳು ಉತ್ಪಾದನೆ ಮತ್ತು ವಿತರಣೆಗಳಿಗೆ ಸಂಬಂಧಿಸಿದಂತೆ ಹೊಸ ನಿಯಮಗಳನ್ನು ಜಾರಿಗೊಳಿಸಿತು. ಅದೊಂದು ನ್ಯಾಯಬದ್ಧ ಸಮಾಜವನ್ನು ಕಟ್ಟುವ ಚಳುವಳಿಯಾಗಿತ್ತು. ಶಿವಶರಣರು ರಚಿಸಿದ್ದ ವಚನಗಳು ಕನ್ನಡ ಸಾಹಿತ್ಯವನ್ನು ಶ್ರೀಮಂತಗೊಳಿಸಿವೆ (ಕಲಬುರಗಿ ಮಾನವ ಅಭಿವೃದ್ಧಿ ವರದಿ, 2014, ಪು. 9–22).

ಕಲಬುರಗಿ ಜಿಲ್ಲೆ ಅನೇಕ ಜನಪದ ಕಲಾವಿದರಿಗೆ ಮತ್ತು ಪ್ರಸಿದ್ಧ ಸೂಫಿ ಸಂತ ಹಜರತ್ ಖಾಜಾ ಬಂದೇ ನವಾಜ್ ಅವರ ಕೇಂದ್ರವೂ ಆಗಿತ್ತು. ಆದರೆ ಅನಿಶ್ಚಿತತೆಯಿಂದ ಕೂಡಿದ ಮಳೆಯಿಂದಾಗಿ ಮತ್ತು ಮತ್ತೆ ಮತ್ತೆ ಬಂದೆರಗುತ್ತಿದ್ದ ಬರಗಾಲದಿಂದಾಗಿ (ಮುಖ್ಯವಾಗಿ ಹತ್ತೊಂಬತ್ತನೆಯ ಶತಮಾನದಲ್ಲಿ) ಜನರ ಬದುಕು ಅಭದ್ರವಾಗಿತ್ತು ಮತ್ತು ದುಸ್ಥಿತಿಯಿಂದ ಕೂಡಿತ್ತು. ನಿಜಾಮನ ಕಾಲದಲ್ಲಿ ಕಲಬುರಗಿ ಪ್ರದೇಶವು ಆಡಳಿತದ ನಿರ್ಲಕ್ಷ್ಯಕ್ಕೆ ಮತ್ತು ಅದಕ್ಷತೆಗೆ ಒಳಗಾಗಿದ್ದುದರಿಂದ ಜಿಲ್ಲೆಯು ಅಭಿವೃದ್ಧಿಯಿಂದ ವಂಚಿತವಾಯಿತು. ಸಂಸ್ಥಾನದ ರಾಜಧಾನಿಯು ಕಲಬುರಗಿ ಪ್ರದೇಶದಿಂದ ಬಹುದೂರ ಇದ್ದುದರಿಂದ ನಿರ್ಲಕ್ಷ್ಯ ಅನಿವಾರ್ಯವಾಗಿತ್ತು. ಹೀಗೆ ಅದು ಮೈಸೂರು ರಾಜ್ಯದಲ್ಲಿ ವಿಲೀನವಾಗುವ 1956ರ ಸಂದರ್ಭದಲ್ಲಿ ಜಿಲ್ಲೆಯು ಅತ್ಯಂತ ಹಿಂದುಳಿದ ಸ್ಥಿತಿಯಲ್ಲಿತ್ತು.

ಭಾರತ 1947 ರ ಸ್ವಾತಂತ್ರ್ಯ ಪಡೆದ ಸಂದರ್ಭದಲ್ಲಿ ಕರ್ನಾಟಕದ ಎಲ್ಲಾ ಜಿಲ್ಲೆಗಳು ಒಕ್ಕೂಟ ವ್ಯವಸ್ಥೆಯಲ್ಲಿ ವಿಲೀನವಾಗಿದ್ದರೂ ಕಲಬುರಗಿ ಜಿಲ್ಲೆಯು ಹೈದ್ರಾಬಾದ ಸಂಸ್ಥಾನದ ನವಾಬನ ಕಪಿಮುಷ್ಟಿಯಿಂದ ಕಳಚಿಕೊಂಡು ಒಂದು ವರ್ಷ ತಡವಾಗಿ ಅಂದರೆ ಸೆಪ್ಟೆಂಬರ್ 17, 1948 ರಲ್ಲಿ ಭಾರತದ ಗಣರಾಜ್ಯದಲ್ಲಿ ಸೇರಿಸಲ್ಪಟ್ಟಿತು. ಹಳೆ ಮೈಸೂರು ಪ್ರಾಂತ್ಯ ಸೇರಿದಂತೆ ಉಳಿದ ಎಲ್ಲಾ ಜಿಲ್ಲೆಗಳು ಶೈಕ್ಷಣಿಕ ಕ್ಷೇತ್ರದಲ್ಲಿ ಮುಂದುವರಿಯುತ್ತಿದ್ದ ವೇಳೆಯಲ್ಲಿ ನವಾಬನ ಕಳಂಕಿತ ಬಾಹುಗಳಲ್ಲಿ ಸಿಕ್ಕ ಈ ಜಿಲ್ಲೆಗೆ ಅಕ್ಷರಗಳ ಅರಿವಿನ ಬೆಳಕು ಪಸರಿಸದೆ (ಕಲಬುರಗಿ ಮಾನವ ಅಭಿವೃದ್ಧಿ ವರದಿ, 2014, ಪು. 9–22) ತೀರ ನಿಧಾನಗತಿಯಲ್ಲಿ ಅಥವಾ ಆಮೆಗತಿಯಲ್ಲಿ ಅಕ್ಷರ ಕಲಿತ ಪರಿಣಾಮದಿಂದ ಆರ್ಥಿಕವಾಗಿ, ಸಾಮಾಜಿಕವಾಗಿ ಹಿಂದುಳಿದು ಒಟ್ಟಾರೆ ಈ

ಜಿಲ್ಲೆಯ ಗ್ರಾಮೀಣ ಪ್ರದೇಶಗಳ ಅಭಿವೃದ್ಧಿಯ ಮಟ್ಟ ಹಿಂದುಳಿಯಲಿಕ್ಕೆ ಬಲವಾದ ಕಾರಣವಾಯಿತು ರಾಜ್ಯದ ಅಧಿಕಾರದ ಚುಕ್ಕಾಣಿಯಲ್ಲಿ ಇದುವರೆಗೂ ಯಥೇಚ್ಛ ಪ್ರಾತಿನಿಧ್ಯ ಪಡೆದು ಈ ಕ್ಷೇತ್ರದಲ್ಲಿ ಈ ಭಾಗದ ಜನತೆಗೆ ಅರಿವಿದ್ದರೂ ಕೂಡಾ ಪರಿಣಾಮಕಾರಿಯಾಗಿ ಅಭಿವೃದ್ಧಿಯಾಗದೇ, ಪ್ರಾಕೃತಿಕವಾಗಿ ಕಾಲಕಾಲಕ್ಕೆ ನಿರೀಕ್ಷಿತ ಪ್ರಮಾಣದಲ್ಲಿ ಮಳೆಯಾಗದ ಕಾರಣ ಬಡತನದ ಬವಣೆಯಲ್ಲಿ ಬಳಲುವಂತಾಗಿ ಹಿಂದುಳಿದ ಜಿಲ್ಲೆಗಳಲ್ಲಿ ಒಂದಾಗಿದೆ (ಕಲಬುರಗಿ ಮಾನವ ಅಭಿವೃದ್ಧಿ ವರದಿ, 2014, ಪು. 9–22).

**ಭೌಗೋಳಿಕ ಹಿನ್ನೆಲೆ**

ಕರ್ನಾಟಕ ರಾಜ್ಯದ 30 ಜಿಲ್ಲೆಗಳಲ್ಲಿ ಉತ್ತರ ಕರ್ನಾಟಕದ ಈಶಾನ್ಯ ಭಾಗದಲ್ಲಿರುವ ಆರು ಜಿಲ್ಲೆಗಳಲ್ಲಿ ಕಲಬುರಗಿ ಜಿಲ್ಲೆಯು ಒಂದು. ಜಿಲ್ಲೆಯ ಪಶ್ಚಿಮದಲ್ಲಿ ಕರ್ನಾಟಕದ ವಿಜಯಪುರ ಜಿಲ್ಲೆ ಮತ್ತು ಮಹಾರಾಷ್ಟ್ರದ ಸೊಲ್ಲಾಪುರ ಜಿಲ್ಲೆಗಳಿವೆ. ಪೂರ್ವದಲ್ಲಿ ತೆಲಂಗಾಣದ ಮೆಹಬೂಬ್‌ನಗರ ಜಿಲ್ಲೆ ಇದೆ. ಉತ್ತರದಲ್ಲಿ ರಾಜ್ಯದ ಬೀದರ್ ಮತ್ತು ಮಹಾರಾಷ್ಟ್ರದ ಉಸ್ಮಾನಾಬಾದ್ ಜಿಲ್ಲೆಗಳಿವೆ. ದಕ್ಷಿಣದಲ್ಲಿ ರಾಜ್ಯದ ರಾಯಚೂರು ಜಿಲ್ಲೆಯೊಂದಿಗೆ ತನ್ನ ಗಡಿಯನ್ನು ಹಂಚಿಕೊಂಡಿದೆ. ಈ ಜಿಲ್ಲೆಯಲ್ಲಿ ಒಟ್ಟು ಏಳು ತಾಲೂಕ ಕೇಂದ್ರಗಳಿವೆ ಅವುಗಳು: ಅಫಜಲಪುರ, ಆಳಂದ, ಚಿಂಚೋಳಿ, ಚಿತ್ತಾಪುರ, ಸೇಡಂ, ಕಲಬುರಗಿ ಮತ್ತು ಜೇವರ್ಗಿ. ಈ ಜಿಲ್ಲೆಯು ವಿಶಾಲವಾದ ಭೂಭಾಗವನ್ನು ಹೊಂದಿದೆ ಇದರ ವಿಸ್ತೀರ್ಣವು ಒಟ್ಟು 10951 ಚದರ ಕೀಲೋ ಮೀಟರಗಳಾಗಿದೆ. ಇದರಿಂದ ರಾಜ್ಯದ ವಿಸ್ತೀರ್ಣದಲ್ಲಿ ಇದರ ಪಾಲು ಶೇಕಡಾ 8.49ರಷ್ಟು ಇದೆ. ರಾಜ್ಯದ 2011ರ ಜನಗಣತಿಯಂತೆ ಜಿಲ್ಲೆಯ ಪಾಲು ಶೇಕಡಾ 4.5ರಷ್ಟಿದೆ ಎಂದು ಹೇಳಬಹುದು. ಜನಸಂಖ್ಯೆಯಲ್ಲಿ ಜಿಲ್ಲೆಯು ಅತೀ ಹೆಚ್ಚು ತೊಗರಿ ಬೆಳೆಯುವ ಪ್ರದೇಶವನ್ನು ಒಳಗೊಂಡಿದೆ ಹಾಗೂ ಉಷ್ಣತೆಯಿಂದ ಕೂಡಿದೆ. ಜಿಲ್ಲೆಯ ಮೂಲ ಸಮತಟ್ಟಾದ ಪ್ರದೇಶವು 76 04 ಮತ್ತು 77 42 ಪೂರ್ವ ರೇಖಾಂಶ ಹಾಗೂ 16 12 ಮತ್ತು 17 46 ಉತ್ತರ ಅಕ್ಷಾಂಶ ಇವುಗಳ ನಡುವೆ ಹರಡಿಕೊಂಡಿದೆ (ಕಲಬುರಗಿ ಮಾನವ ಅಭಿವೃದ್ಧಿ ವರದಿ, 2014, ಪು. 9–22).

ಜಿಲ್ಲೆಯು ಕಪ್ಪು ಮಣ್ಣಿನಿಂದ ಕೂಡಿದ್ದು ಗಿಡ–ಮರಗಳಿಲ್ಲದ ಪ್ರದೇಶವಾಗಿದೆ. ಜಿಲ್ಲೆಯು ಸುಮಾರು 60 ಕೀ.ಮಿ.ನಷ್ಟು ಪ್ರದೇಶವು ಬೆಟ್ಟ–ಗುಡ್ಡಗಳಿಂದ ಕೂಡಿರುತ್ತದೆ. ಒಟ್ಟಾರೆಯಾಗಿ ಹೇಳುವುದಾದದರೆ ಜಿಲ್ಲೆಯಲ್ಲಿ ದಟ್ಟವಾದ ಅರಣ್ಯ ಪ್ರದೇಶವಿಲ್ಲ ಆದರೆ ಚಿಂಚೋಳಿ ಮತ್ತು ಆಳಂದ ತಾಲೂಕುಗಳಲ್ಲಿ ಕುರುಚಲು ಗಿಡಗಳಿಂದ ಕೂಡಿದ ಕಾಡು ಇದೆ. ಜಿಲ್ಲೆಯ ಒಟ್ಟು ವಿಸ್ತೀರ್ಣದಲ್ಲಿ ಅರಣ್ಯ ಪ್ರದೇಶದ ಪಾಲು ಶೇಕಡಾ 4.2ರಷ್ಟು ಎಂದು ತಿಳಿದುಬರುತ್ತದೆ. ಈ ಜಿಲ್ಲೆಯು ಬರಪೀಡಿತ ಪ್ರದೇಶವಾಗಿದೆ. ಸರಾಸರಿ ಮಳೆಯ ಪ್ರಮಾಣ 777 ಮೀ.ಮೀ.ಇದೆ. ಸಾಮಾನ್ಯ ವಾರ್ಷಿಕ ಮಳೆಯ ದಿನಗಳು 46. ವಾತಾವರಣವು ತೀವ್ರ ಉಷ್ಣತೆಯಿಂದ ಕೂಡಿದ್ದು ಬೇಸಿಗೆಯಲ್ಲಿ ಉಷ್ಣಾಂಶದ ಪ್ರಮಾಣವು 45ಡಿಗ್ರಿಗಿಂತ ಹೆಚ್ಚಾಗಿ ಜನರಿಗೆ ದುಡಿಮೆ ಮಾಡುವದು ಬಲು ಕಷ್ಟದ ಕೆಲಸವಾಗಿರುತ್ತದೆ.

ಈ ಪ್ರದೇಶದಲ್ಲಿ ಹೇರಳವಾಗಿ ಸಿಗುವ ಖನಿಜ ಸಂಪತ್ತುಗಳಿಲ್ಲ. ಜಿಲ್ಲೆಯ ಸೇಡಂ, ಚಿತ್ತಾಪುರ ಮತ್ತು ಚಿಂಚೋಳಿ ತಾಲೂಕುಗಳಲ್ಲಿ ದೊರೆಯುವ ಒಂದೇ ಒಂದು ಖನಿಜವೆಂದರೆ ಸುಣ್ಣದ ಕಲ್ಲು. ಆದ್ದರಿಂದ ಜಿಲ್ಲೆಯ ಈ ಮೂರು ತಾಲೂಕಗಳಲ್ಲಿ ಬೃಹತ್ ಉದ್ದಿಮೆ ಎಂದರೆ ಸಿಮೆಂಟ್ ಕಾರ್ಖಾನೆಗಳು ಸಾಕಷ್ಟು ಪ್ರಮಾಣದಲ್ಲಿ ಇದ್ದರೂ ಇಲ್ಲಿಯ ಜನರ ಜೀವನ ಮಟ್ಟ ಅಷ್ಟೇನೂ ಸುಧಾರಣೆ ಕಂಡಿಲ್ಲ ಎಂದು ಹೇಳಬಹುದು. ಈ ಜಿಲ್ಲೆಯ ಭೂ ಭಾಗವು ಹೆಚ್ಚು ವಿಸ್ತಾರವಾದ ಪ್ರಸ್ಥಭೂಮಿಯಿಂದ ಕೂಡಿರುತ್ತದೆ. ಇದನ್ನು ಸಾವಮಾನ್ಯವಾಗಿ ದಕ್ಷಿಣ ಪ್ರಸ್ಥಭೂಮಿಯೆಂದು ಕರೆಯುತ್ತಾರೆ. ಈ ಜಿಲ್ಲೆಯ ಭೂಭಾಗವು ಸುಣ್ಣದ ಕಲ್ಲು ಮತ್ತು ಪದರ ಕಲ್ಲಿನಿಂದ ಕೂಡಿರುತ್ತದೆ. ವಿವಿಧ ವಿಶೇಷಣದ ಮತ್ತು ಎಲ್ಲಾ ಆಕರ ಗಾತ್ರವುಳ್ಳ ಕಪ್ಪು ಬಣ್ಣದ ಕಲ್ಲುಗಳು ದೊರೆಯುತ್ತವೆ. ಇವುಗಳಿಗೆ ಬೆಸಾಲ್ಟ್ ಎನ್ನುತ್ತಾರೆ. ಸಾಮಾನ್ಯವಾಗಿ ಭೂಮಿಯ ಮೇಲ್ಮೈಯು 350 ಮಿ ಮತ್ತು 650 ಮಿ ವರೆಗೆ ಇದೆ. ಪೂರ್ವ ದಿಕ್ಕಿನಲ್ಲಿ ಕೆಲವು ಕಡೆ 660 ಮಿ ಗಿಂತ ಹೆಚ್ಚಿಗೆ ಇರುತ್ತದೆ. ಈ ಜಿಲ್ಲೆಯು ಹೆಚ್ಚು ಕಡಿಮೆ ಸಮತಟ್ಟಾದ ಪ್ರದೇಶವನ್ನು ಹೊಂದಿದೆ. ಹಾಗೂ ಭೂಮಿಯ ಇಳಿಜಾರು ಮಟ್ಟವು ಉತ್ತರದಿಂದ ದಕ್ಷಿಣದ ಕಡೆಗೆ ಮತ್ತು ದಕ್ಷಿಣದಿಂದ ಪೂರ್ವದ ಕಡೆಗೆ ಇರುತ್ತದೆ.

ಕಲಬುರಗಿ ಜಿಲ್ಲೆಯಲ್ಲಿ ಭೀಮಾ ಮತ್ತು ಕೃಷ್ಣಾ ಪ್ರಮುಖ ನದಿಗಳಾಗಿದ್ದು, ಭೀಮಾ ನದಿಯು ಕೃಷ್ಣಾ ನದಿಯ ಒಂದು ಉಪ ನದಿಯಾಗಿರುತ್ತದೆ. ಇದಲ್ಲದೆ ಕಾಗಿಣ ಮತ್ತು ಬೆಣ್ಣೆತೋರಾ ನದಿಗಳು ಭೀಮಾ ನದಿಯ ಉಪನದಿಗಳಾಗಿ ಜಿಲ್ಲೆಯಲ್ಲಿ ಹರಿಯುತ್ತವೆ. ಬೆಣ್ಣೆತೋರಾ ನದಿಗೆ ಚಿತ್ತಾಪುರ ತಾಲೂಕಿನಲ್ಲಿ ಒಂದು ಸಣ್ಣ ಪ್ರಮಾಣದ ಆಣೆಕಟ್ಟನ್ನು ಕಟ್ಟಲಾಗಿದೆ. ಆದರೆ ಆಣೆಕಟ್ಟಿನ ಸಂಪೂರ್ಣ ಅನೂಕೂಲತೆಯು ಜಿಲ್ಲೆಯ ಜನರಿಗೆ ದೊರೆತಿಲ್ಲವೆಂದು ಹೇಳಬಹುದು. ಕಲಬುರಗಿ ಜಿಲ್ಲೆಯು ಶುಷ್ಕ ಹವಾಗುಣದಿಂದ ಕೂಡಿದೆ. ಜಿಲ್ಲೆಯ ಒಟ್ಟು ಭೂಪ್ರದೇಶದಲ್ಲಿ ಪ್ರತಿಶತ 4 ರಷ್ಟು ಮಾತ್ರ ಅರಣ್ಯ ಪ್ರದೇಶವನ್ನು ಒಳಗೊಂಡಿದೆ. ಜಿಲ್ಲೆಯಲ್ಲಿ ದಟ್ಟವಾದ ಅರಣ್ಯ ಪ್ರದೇಶವಿಲ್ಲದ ಕಾರಣ ಕಾಡು ಪ್ರಾಣಿಗಳು ಅತಿ ವಿರಳವಾಗಿ ಕಂಡುಬರುತ್ತವೆ. ಜಿಲ್ಲೆಯು ಶುಷ್ಕ ಹವಾಮಾನದಿಂದ ಕೂಡಿರುತ್ತದೆ. ಆದರೂ ಅದು ಆರೋಗ್ಯಕರವಾದ ವಾತಾವರಣವಾಗಿದೆ. ಮಧ್ಯ ಏಪ್ರಿಲ್ ಮತ್ತು ಮೇ ತಿಂಗಳು ಅತಿ ಉಷ್ಣತೆಯುಳ್ಳ ತಿಂಗಳಾಗಿರುತ್ತವೆ ಮತ್ತು ಹಲವಾರು ದಿನಗಳಲ್ಲಿ ಫಬ್ರುವರಿ ಮಧ್ಯ ಭಾಗದವರೆಗೆ ಚಳಿಗಾಲವಿರುತ್ತದೆ. ಅಲ್ಲದೆ ಡಿಸೆಂಬರ ತಿಂಗಳಲ್ಲಿ ಕಡಿಮೆ ಉಷ್ಣತೆಯುಳ್ಳದಾಗಿದೆ.

ಈ ಜಿಲ್ಲೆಯಲ್ಲಿ ಹಲವು ಭೌಗೋಳಿಕ ಕಾರಣಗಳಿಂದ ಕಡಿಮೆ ಪ್ರಮಾಣದ ಮಳೆ ಬೀಳುವ ಪ್ರದೇಶವನ್ನು ಒಳಗೊಡಿರುತ್ತದೆ. ವಾರ್ಷಿಕ ಸರಾಸರಿ ಮಳೆಯ ಪ್ರಮಾಣ 715 ಮಿಮಿ ಆಗಿದ್ದು, ಈ ಮಳೆಗಾಲವು 6 ತಿಂಗಳಲ್ಲಿ ಸರಾಸರಿ 47 ದಿನಗಳಿಂದ ಕೂಡಿರುತ್ತದೆ. ಮಾರ್ಚ, ಜೂನ್, ಮಧ್ಯಭಾಗದಿಂದ ಸೆಪ್ಟೆಂಬರ್ ತಿಂಗಳವರೆಗೆ ಪ್ರತಿಶತ 8 ರಷ್ಟು ನೈರುತ್ಯ

ಮಳೆಗಾಲವು ಕೂಡಿರುತ್ತದೆ. ಸಾಮಾನ್ಯವಾಗಿ ಸೆಪ್ಟೆಂಬರ್ ತಿಂಗಳಲ್ಲಿ ಅತಿ ಹೆಚ್ಚು ಮಳೆ ಬೀಳುತ್ತದೆ. ಈ ಜಿಲ್ಲೆಯ ಅಂತರ್ಜಲ ಮಟ್ಟವು ಕಡಿಮೆ ಪ್ರಮಾಣದಲ್ಲಿರುತ್ತದೆ. ಭೂಮಿಯ ಒಳಭಾಗದಲ್ಲಿರುವ ಶಿಲಾ ಮಾದರಿಯ ರಚನೆಗಳು ಮಳೆಯ ನೀರನ್ನು ಸುಲಭವಾಗಿ ಇಂಗಿಸಿಕೊಳ್ಳುವುದಿಲ್ಲ. ಇದೇ ರೀತಿ ಅಂತರ್ಜಲ ಮಟ್ಟವಿರುವ ಭೂಭಾಗಗಳು ಅತಿ ಕಡಿಮೆಯಿದ್ದು ಮತ್ತು ಸೀಮಿತ ಪ್ರದೇಶದಲ್ಲಿ ಮಾತ್ರ ಇದೆ.

ಈ ಜಿಲ್ಲೆಯ ಒಟ್ಟು ಭೌಗೋಳಿಕ ಪ್ರದೇಶವು 16.224 ಚ.ಕಿ.ಮಿ ಇರುತ್ತದೆ. ಒಟ್ಟು ಪ್ರತಿಶತ 85 ರಷ್ಟು ಭೌಗೋಳಿಕ ಪ್ರದೇಶವನ್ನು ಕೃಷಿ ಚಟುವಟಿಕೆಗಳಿಗೆ ಅಳವಡಿಸಲ್ಪಟ್ಟಿರುತ್ತದೆ. ಗುಲಬರ್ಗಾ ಜಿಲ್ಲೆಯು ರಾಜ್ಯದಲ್ಲಿ ಅತಿ ಕಡಿಮೆ ನೀರಾವರಿ ಪ್ರದೇಶವುಳ್ಳ ಜಿಲ್ಲೆಯಾಗಿದೆ. ಒಟ್ಟು ಭೂಪ್ರದೇಶದಲ್ಲಿ ಎಲ್ಲಾ ನೀರಾವರಿ ಮೂಲಗಳಿಂದ ಪ್ರತಿಶತ 2 ರಷ್ಟು ಮಾತ್ರ ನೀರಾವರಿ ಪ್ರದೇಶದಿಂದ ಕೂಡಿದೆ (ಕಲಬುರಗಿ ಮಾನವ ಅಭಿವೃದ್ಧಿ ವರದಿ, 2014, ಪು. 9–22). ಈ ಜಿಲ್ಲೆಯಲ್ಲಿ ಜಾನುವಾರುಗಳ ಸಾಕಾಣಿಕೆ ಕೃಷಿಯ ಒಂದು ಅಂಗವಾಗಿದ್ದು. ಜಿಲ್ಲೆಯಲ್ಲಿ ಆರ್ಥಿಕವಾಗಿ ಪ್ರಾಮುಖ್ಯತೆಯನ್ನು ಹೊಂದಿದೆ. ಈ ಜಿಲ್ಲೆಯಲ್ಲಿ ಇತರೆ ಕೈಗಾರಿಕೆಗಳಾದ ಹತ್ತಿ ಗಿರಣಿ, ಸಿಮೆಂಟ್ ಕಾರ್ಖಾನೆಗಳು ಸೇಡಂ, ಶಾಹಾಬಾದ, ವಾಡಿ, ಮಳಖೇಡ, ಮತ್ತು ಕುರಕುಂಟಾಗಳಲ್ಲಿವೆ. ಸೇಡಂ, ಚಿತ್ತಾಪುರ ಮತ್ತು ಶಾಹಾಬಾದಗಳಲ್ಲಿ ಹಲವಾರು ಕಲ್ಲಿನ ಗಣಿಗಳಿವೆ. ಈ ಜಿಲ್ಲೆಯಲ್ಲಿ ಮುಖ್ಯವಾಗಿ ಖನಿಜ ಸಂಪತ್ತುಗಳಾದ ಸುಣ್ಣದ ಕಲ್ಲು, ಕೆಂಪು ಕಾವಿ ಮಣ್ಣು, ಬೆಣಚು ಕಲ್ಲು, ಜೇಡಿ ಮಣ್ಣು ಮತ್ತು ಸವಳು ಮಣ್ಣಿನಿಂದ ಕೂಡಿರುತ್ತದೆ.

**ಜಿಲ್ಲೆಯ ರಾಜಕೀಯ ನೋಟ**

ಜಿಲ್ಲೆಯಲ್ಲಿ ಒಟ್ಟು ಏಳು ತಾಲೂಕುಗಳಿದ್ದು ಅವುಗಳು ಕಲಬುರಗಿ, ಅಫ್ಜಲ್ಪುರ್, ಆಳಂದ, ಜೇವರ್ಗಿ, ಚಿತ್ತಾಪುರ, ಸೇಡಂ ಮತ್ತು ಚಿಂಚೋಳಿ. ಇದರಲ್ಲಿ ಕಲಬುರಗಿ ಮತ್ತು ಸೇಡಂ ತಾಲೂಕಗಳು ಜಿಲ್ಲೆಯ ಉಪ ವಿಭಾಗಗಳ ಕೇಂದ್ರ ಸ್ಥಾನಗಳಾಗಿವೆ. ಜಿಲ್ಲೆಯಲ್ಲಿ ಒಟ್ಟು ಒಂಬತ್ತು ವಿಧಾನ ಸಭಾ ಕ್ಷೇತ್ರಗಳಿರುತ್ತವೆ. ಕಲಬುರಗಿ ನಗರ ಮತ್ತು ಗ್ರಾಮೀಣ ಭಾಗವನ್ನು ಸೇರಿಸಿ ಕಲಬುರಗಿ ಉತ್ತರ, ದಕ್ಷಿಣ ಮತ್ತು ಗ್ರಾಮೀಣ ಎಂದು ಒಟ್ಟು ಮೂರು ವಿಧಾನ ಸಭಾ ಕ್ಷೇತ್ರಗಳನ್ನಾಗಿ ವಿಂಗಡಿಸಿದೆ. ಆದರೆ ಜಿಲ್ಲೆಯಲ್ಲಿರುವ ಒಂಬತ್ತು ವಿಧಾನ ಸಭಾ ಕ್ಷೇತ್ರಗಳು ಕಲಬುರಗಿ ಮತ್ತು ಬೀದರ್ ಎರಡು ಲೋಕಸಭಾ ಕ್ಷೇತ್ರದಲ್ಲಿ ಹಂಚಿಕೆಯಾಗಿವೆ. ಕಲಬುರಗಿ ಲೋಕಸಭಾ ಕ್ಷೇತ್ರದಲ್ಲಿ ಕಲಬುರಗಿ ಗ್ರಾಮೀಣ, ದಕ್ಷಿಣ ಮತ್ತು ಉತ್ತರ ವಿಧಾನ ಸಭಾ ಕ್ಷೇತ್ರಗಳು, ಸೇಡಂ, ಅಫ್ಜಲ್ಪುರ್, ಜೇವರ್ಗಿ, ಚಿತ್ತಾಪುರ ಮತ್ತು ಜಿಲ್ಲೆಯಿಂದ ಬೇರೆಯಾಗಿ ಹೊಸ ಜಿಲ್ಲೆ ಎಂದು 2011ರಲ್ಲಿ ಉದಯವಾಗಿರುವ ಯಾದಗಿರಿ ಜಿಲ್ಲೆಯ ಗುರುಮಿಟ್ಕಲ್ ವಿಧಾನ ಸಭಾ ಕ್ಷೇತ್ರಗಳನ್ನು ಒಳಗೊಂಡಿದೆ. ಜಿಲ್ಲೆಯ ಚಿಂಚೋಳಿ ಮತ್ತು ಆಳಂದ ವಿಧಾನ ಸಭಾ ಕ್ಷೇತ್ರಗಳು ಪಕ್ಕದ ಬೀದರ್ ಲೋಕಸಭಾ ಕ್ಷೇತ್ರಕ್ಕೆ ಸೇರಿಸಲ್ಪಟ್ಟಿವೆ. ಜಿಲ್ಲೆಯಲ್ಲಿ ಒಟ್ಟು ಒಂದು ಜಿಲ್ಲಾ

ಪಂಚಾಯತಿ, ಏಳು ತಾಲೂಕ ಪಂಚಾಯತಿಗಳು ಮತ್ತು 220 ಗ್ರಾಮ ಪಂಚಾಯತಿಗಳು ಕಾರ್ಯ ನಿರ್ವಹಿಸುತ್ತಿವೆ. ಒಟ್ಟು 43 ಚುನಾಯಿತ ಜಿಲ್ಲಾ ಪಂಚಾಯತಿ ಸದಸ್ಯರು, 155 ತಾಲೂಕ ಪಂಚಾಯತಿ ಸದಸ್ಯರು ಮತ್ತು 3370 ಗ್ರಾಮ ಪಂಚಾಯತಿ ಸದಸ್ಯರು ಆಯ್ಕೆಯಾಗಿದ್ದಾರೆ. ಈಗ ಜಿಲ್ಲೆಯಲ್ಲಿ ಕಾಂಗ್ರೆಸ್ (ಕಲಬುರಗಿ) ಮತ್ತು ಬಿಜೆಪಿಯ (ಬೀದರ್) ಸಂಸತ್ ಸದಸ್ಯರು ಜಿಲ್ಲೆಯ ಭೌಗೋಳಿಕ ಭಾಗವನ್ನು ಪ್ರತಿನಿಧಿಸುತ್ತಿದ್ದಾರೆ.

ರಾಜ್ಯ ಸಭೆಯಲ್ಲಿ ರಾಜ್ಯ ವಿಧಾನ ಸಭೆಯಿಂದ ಒಬ್ಬರು ಈ ಜಿಲ್ಲೆಯಿಂದ ಬಿಜೆಪಿಯಿಂದ ಚುನಾಯಿತರಾಗಿದ್ದಾರೆ. ಅದೇ ರೀತಿ ಇನ್ನು ವಿಧಾನ ಸಭಾ ಕ್ಷೇತ್ರಗಳ ಬಗ್ಗೆ ಹೇಳುವುದಾದರೆ ಒಟ್ಟು ಒಂಬತ್ತು ಕ್ಷೇತ್ರಗಳಲ್ಲಿ ಏಳರಲ್ಲಿ ಕಾಂಗ್ರೆಸ್ (ಸೇಡಂ, ಕಲಬುರಗಿ ಉತ್ತರ, ಕಲಬುರಗಿ ಗ್ರಾಮೀಣ, ಜೇವರ್ಗಿ, ಚಿತ್ತಾಪುರ, ಚಿಂಚೋಳಿ ಮತ್ತು ಅಫ್ಜಲ್ಪುರ್) ತಲಾ ಒಂದರಲ್ಲಿ ಬಿಜೆಪಿ ಮತ್ತು ಕೆಜೆಪಿ (ಕಲಬುರಗಿ ದಕ್ಷಿಣ ಮತ್ತು ಆಳಂದ) ಪಕ್ಷಗಳ ಸದಸ್ಯರು ಕಲಬುರಗಿ ಜಿಲ್ಲೆಯನ್ನು ರಾಜ್ಯ ವಿಧಾನ ಸಭೆಯಲ್ಲಿ ಪ್ರತಿನಿಧಿಸುತ್ತಿದ್ದಾರೆ. ಇನ್ನು ರಾಜ್ಯ ವಿಧಾನ ಪರಿಷತ್‌ನಲ್ಲಿ ಕಲಬುರಗಿ ಜಿಲ್ಲೆಯನ್ನು ಈಶಾನ್ಯ ಶಿಕ್ಷಕರ ಮತ್ತು ಪದವೀಧರ ಕ್ಷೇತ್ರಗಳಲ್ಲಿ ಕ್ರಮವಾಗಿ ಕಾಂಗ್ರೆಸ್ ಮತ್ತು ಬಿಜೆಪಿ ಪಕ್ಷಗಳ ಸದಸ್ಯರು ಪ್ರತಿನಿಧಿಸುತ್ತಿದ್ದಾರೆ. ವಿಧಾನ ಸಭೆಯಿಂದ ವಿಧಾನ ಪರಿಷತ್‌ಗೆ ಬಿಜೆಪಿಯ ಒಬ್ಬ ಸದಸ್ಯರು ಈ ಜಿಲ್ಲೆಯವರಾಗಿದ್ದಾರೆ. ಸ್ಥಳೀಯ ಸಂಸ್ಥೆಗಳ ಪ್ರತಿನಿಧಿಯಾಗಿ ಕಾಂಗ್ರೆಸ್ ಪಕ್ಷದ ಒಬ್ಬ ಸದಸ್ಯರು ಚುನಾಯಿತರಾಗಿದ್ದಾರೆ. ಜಿಲ್ಲೆಯ ಜಿಲ್ಲಾ ಪಂಚಾಯತಿ ಬಿಜೆಪಿ ಮತ್ತು ಕಲಬುರಗಿ ಮಹಾನಗರ ಪಾಲಿಕೆಯ ಆಡಳಿತವು ಕಾಂಗ್ರೆಸ್ ಪಕ್ಷದ ಹಿಡಿತದಲ್ಲಿದೆ. ಈ ಮೇಲಿನ ಅಂಕಿ ಅಂಶಗಳಿಂದ ತಿಳಿದುಬರುವುದೇನೆಂದರೆ ಜಿಲ್ಲೆಯಲ್ಲಿರುವ ವಿವಿಧ ಪಕ್ಷಗಳ ರಾಜಕೀಯ ನಾಯಕರು ತಮ್ಮ ಪಕ್ಷಗಳಲ್ಲಿ ಬಲಾಢ್ಯರಾಗಿದ್ದು ಈ ಪ್ರದೇಶವನ್ನು ಅಭಿವೃದ್ಧಿ ಪಡಿಸುವಲ್ಲಿ ತೀರ ನಿರಾಸಕ್ತಿ ತೋರಿಸುತ್ತಿರುವದು ಸ್ಪಷ್ಟವಾಗುತ್ತದೆ.

**ಒಟ್ಟು ಜನಸಂಖ್ಯೆಯ ವಿವರ**

ಭಾರತದ ಸರಕಾರದ ಗೃಹ ಸಚಿವಾಲಯದ ಅಡಿಯಲ್ಲಿ ಬರುವ ಜನಗಣತಿ ವಿಭಾಗವು 10 ವರ್ಷಕೊಮ್ಮೆ ನಡೆಸುವ ಜನಗಣತಿಯ ಪ್ರಕಾರ ಜಿಲ್ಲೆಯ ಜನಸಂಖ್ಯೆಯು 1951ರಿಂದಲೂ ತೀವ್ರಗತಿಯಲ್ಲಿ ಬೆಳೆಯುತ್ತಾ ಬಂದಿದೆ. ಅದು 1951–61ರ ದಶಕದ ಅವಧಿಯಲ್ಲಿ ಶೇಕಡಾ 14.5ರಷ್ಟು ಏರಿಕೆಯನ್ನು ಕಂಡಿದೆ. 1981–91ರ ದಶಕದಲ್ಲಿ ಈ ಏರಿಕೆಯ ಪ್ರಮಾಣವು ಶೇಕಡಾ 24ರಷ್ಟು ಆಗಿರುವುದು ಕಂಡು ಬರುತ್ತದೆ. 1991–2001ರ ದಶಕದಲ್ಲಿ ಇದು 21ಕ್ಕೆ ಮತ್ತು 2001–2011ರ ದಶಕದಲ್ಲಿ ಶೇಕಡಾ 17ಕ್ಕೆ ಇಳಿದಿದೆ. ಆದ್ದರಿಂದ 2011ರ ಜನಗಣತಿಯ ಪ್ರಕಾರ ಜಿಲ್ಲೆಯ ಜನಸಂಖ್ಯೆಯು 2566326ರಷ್ಟು ಇದೆ. ಇದರೊಂದಿಗೆ ಶೇಕಡಾ 4.2ರಷ್ಟು ಜನರು ರಾಜ್ಯದ ಒಟ್ಟು ಜನಸಂಖ್ಯೆಯಲ್ಲಿ ಕಲಬುರಗಿ ಜಿಲ್ಲೆಗೆ ಸೇರಿದವರಾಗಿದ್ದಾರೆ. ಈ ಒಟ್ಟು ಜನಸಂಖ್ಯೆಯಲ್ಲಿ 1301755ರಷ್ಟು ಜನರು ಪುರುಷರಾಗಿದ್ದಾರೆ ಮತ್ತು 1264571ರಷ್ಟು ಜನರು

ಮಹಿಳೆಯರಾಗಿದ್ದಾರೆ. 2011ರ ಜನಗಣತಿಯಂತೆ ಜಿಲ್ಲೆಯ ಲಿಂಗಾನುಪಾತವು 962ಕ್ಕಿಂತ ಕಡಿಮೆ ಇದೆ. ಇದು ರಾಜ್ಯಮಟ್ಟದ ಲಿಂಗಾನುಪಾತ 973ಕ್ಕಿಂತ ತೀವ್ರ ಕೆಳಮಟ್ಟದ್ದಾಗಿದೆ. ಜಿಲ್ಲೆಯಲ್ಲಿ ಶೇಕಡಾ 67ರಷ್ಟು ಜನರು ಗ್ರಾಮೀಣ ಭಾಗದಲ್ಲಿ ವಾಸ ಮಾಡುವವರಿದ್ದಾರೆ. ಜಿಲ್ಲೆಯಲ್ಲಿ ಪ್ರತಿ ಒಂದು ಚದರ ಕೀ.ಮೀ.ಗೆ 234 ಜನರು ವಾಸ ಮಾಡುತ್ತಿದ್ದಾರೆ (ಭಾರತೀಯ ಜನಗಣತಿ, 2011).

**ಶೈಕ್ಷಣಿಕ ಹಿನ್ನೆಲೆ**

ರಾಜ್ಯದಲ್ಲಿ ಇದು ಅತೀ ಕಡಿಮೆ ಸಾಕ್ಷರತೆಯನ್ನು ಹೊಂದಿದ ಜಿಲ್ಲೆಯಾಗಿದೆ. ರಾಜ್ಯದ 30 ಜಿಲ್ಲೆಗಳಲ್ಲಿ ಕೆಳಗಿನಿಂದ ಸಾಕ್ಷರತೆಯ ಪ್ರಮಾಣದಲ್ಲಿ ನಾಲ್ಕನೆಯ ಸ್ಥಾನದಲ್ಲಿದೆ. ಕಲಬುರಗಿ ಜಿಲ್ಲೆಯು ಹೈದರಾಬಾದ್ ಪ್ರದೇಶದಲ್ಲಿದೆ. ಈ ಪ್ರದೇಶವು ಅತಿ ಹಿಂದುಳಿದ ಪ್ರದೇಶವೆಂದು ಗುರುತಿಸಲಾಗಿದೆ. ಜಿಲ್ಲೆಯು ತೀರ ಹಿಂದುಳಿದ ಪ್ರದೇಶವಾಗಿದ್ದು ಮತ್ತು ತೀರ ಕಡಿಮೆಯ ಸಾಕ್ಷರತೆಯನ್ನು ಹೊಂದಿರುತ್ತದೆ. 2011ರ ಭಾರತೀಯ ಜನಗಣತಿಯ ಪ್ರಕಾರ ಜಿಲ್ಲೆಯಲ್ಲಿಯ ಸಾಕ್ಷರತೆಯ ಪ್ರಮಾಣ ಶೇಕಡಾ 65.65 ರಷ್ಟು ಇದ್ದು, ಇದು ರಾಜ್ಯದ ಸಾಕ್ಷರತೆಯ ಪ್ರಮಾಣ ಶೇಕಡಾ 75.61ಕ್ಕಿಂತ ಕಡಿಮೆ ಇದೆ. ಇದು ರಾಜ್ಯದ ಸರಾಸರಿಗಿಂತ ಶೇಕಡಾ 9.96ರಷ್ಟು ಕಡಿಮೆ ಇದೆ. ಲಿಂಗವಾರು ತೆಗೆದುಕೊಂಡಾಗ ಜಿಲ್ಲೆಯಲ್ಲಿಯ ಪುರುಷರು ಶೇಕಡಾ 75.11ರಷ್ಟು ಅಕ್ಷರಸ್ಥರಾಗಿದ್ದರೆ ರಾಜ್ಯದಲ್ಲಿ ಇದು ಶೇಕಡಾ 82.84ರಷ್ಟು ಇರುವುದು ಕಂಡು ಬರುತ್ತದೆ. ಅಕ್ಷರಸ್ಥ ಪುರುಷರಲ್ಲಿ ಕಲಬುರಗಿ ಜಿಲ್ಲೆಯು ರಾಜ್ಯದ ಸರಾಸರಿಗಿಂತ ಶೇಕಡಾ 7.73ರಷ್ಟು ಹಿಂದಿರುವದು ತಿಳಿದು ಬರುತ್ತದೆ. ಮಹಿಳೆಯರಲ್ಲಿ ಸಾಕ್ಷರತೆಯ ಅವಲೋಕವನ್ನು ಮಾಡಿಕೊಂಡಾಗ ಇದಕ್ಕಿಂತಲೂ ವಿಭಿನ್ನವಾದ ಸ್ಥಿತಿ ಕಂಡು ಬರುತ್ತದೆ. ರಾಜ್ಯದಲ್ಲಿ ಮಹಿಳೆಯರು ಶೇಕಡಾ 68.15 ರಷ್ಟು ಸಾಕ್ಷರಸ್ಥರಾಗಿದ್ದರೆ ಕಲಬುರಗಿಯಲ್ಲಿ ಇದು ಶೇಕಡಾ 55.87ರಷ್ಟು ಇರುವದು ತುಂಬ ಕಳವಳಕಾರಿಯಾದ ಅಂಶವಾಗಿದೆ. ಇಲ್ಲಿಯೂ ಕೂಡ ರಾಜ್ಯದ ಸರಾಸರಿಗಿಂತ ಜಿಲ್ಲೆಯ ಮಹಿಳೆಯರು ಶೇಕಡಾ 12.28ರಷ್ಟು ಹಿಂದಿರುವದು ಕಂಡುಬರುತ್ತದೆ. ಇನ್ನು ರಾಜ್ಯದ ಎಲ್ಲಾ 30 ಜಿಲ್ಲೆಗಳಲ್ಲಿ ಸ್ಥಾನದ ಕುರಿತು ಅವಲೋಕಿಸಿದಾಗ ಕಲಬುರಗಿ ಜಿಲ್ಲೆಯು 27ನೇ ಸ್ಥಾನದಲ್ಲಿರುವುದು ಮನವರಿಕೆಯಾಗುತ್ತದೆ (ಭಾರತೀಯ ಜನಗಣತಿ, 2011).

ಶೈಕ್ಷಣಿಕ ಸೌಲಭ್ಯಗಳ ಬಗ್ಗೆ ಹೇಳುವುದಾದರೆ 1980ರಲ್ಲಿ ಕರ್ನಾಟಕ ವಿಶ್ವವಿದ್ಯಾಲಯದಿಂದ ಬೇರೆ ಮಾಡಿ ರಾಜ್ಯ ಸರಕಾರವು ಗುಲಬರ್ಗಾ ವಿಶ್ವವಿದ್ಯಾಲಯವನ್ನು ಸ್ಥಾಪಿಸಿತ್ತು. ಅದೇ ರೀತಿ ಕರ್ನಾಟಕ ಸರಕಾರ ಪ್ರಾದೇಶಿಕ ಅಸಮಾನತೆಯನ್ನು ಗುರುತಿಸಲು ನೇಮಿಸಿದ ನಂಜುಂಡಪ್ಪ ಸಮಿತಿಯ ವರದಿಯಂತೆ ಕೇಂದ್ರ ಸರಕಾರವು 2009ರಲ್ಲಿ ಕರ್ನಾಟಕ ಕೇಂದ್ರಿಯ ವಿಶ್ವವಿದ್ಯಾಲಯವನ್ನು ಸ್ಥಾಪಿಸಿತ್ತು. ಇವೆರಡು ವಿಶ್ವವಿದ್ಯಾಲಯಗಳು ಈ ಭಾಗದಲ್ಲಿ ಉನ್ನತ

ಶಿಕ್ಷಣವನ್ನು ನೀಡುವುದರಲ್ಲಿ ನಿರತವಾಗಿವೆ. ಇವುಗಳ ಜೊತೆಗೆ ಅನೇಕ ಖಾಸಗಿ ಸಂಸ್ಥೆಗಳು ಅನೇಕ ಪ್ರಾಥಮಿಕ, ಪ್ರೌಢ, ಪದವಿ, ಸ್ನಾತಕೊತ್ತರ ಪದವಿ ಕಾಲೇಜುಗಳನ್ನು, ವೈದ್ಯಕೀಯ, ಇಂಜಿನೀಯರಿಂಗ್ ಮತ್ತು ಇತರೆ ತಾಂತ್ರಿಕ ಕಾಲೇಜುಗಳನ್ನು ಸ್ಥಾಪಿಸುವುದರ ಮೂಲಕ ಜಿಲ್ಲೆಯ ಎಲ್ಲಾ ವರ್ಗದ ಜನರಿಗೆ ಶಿಕ್ಷಣವನ್ನು ನೀಡುವುದರಲ್ಲಿ ನಿರತವಾಗಿವೆ. ರಾಜ್ಯ ಸರಕಾರವು ಜಿಲ್ಲೆಯ ಜಿಲ್ಲಾ ಆಸ್ಪತ್ರೆಯನ್ನು ಮೆಡಿಕಲ್ ಕಾಲೇಜು ಮತ್ತು ಆಸ್ಪತ್ರೆಯನ್ನಾಗಿ ಮೇಲ್ದರ್ಜೆಗೆ ಏರಿಸಿದೆ ಇದರಿಂದ ಕೊನೆಪಕ್ಷ ಮೆಡಿಕಲ್ ಕಾಲೇಜಿನಲ್ಲಿರುವ ನುರಿತ ಮತ್ತು ಉನ್ನತ ತರಬೇತಿ ಪಡೆದ ವೈದ್ಯರು ಗ್ರಾಮೀಣ ಮತ್ತು ನಗರ ಪ್ರದೇಶದಿಂದ ಬರುವ ಬಡ ರೋಗಿಗಳಿಗೆ ಉಚಿತವಾಗಿ ಆರೋಗ್ಯ ಸೇವೆಗಳನ್ನು ನೀಡುವಲ್ಲಿ ನಿರತರಾಗಿದ್ದಾರೆ.

**ಆರ್ಥಿಕ ಹಿನ್ನೆಲೆ**

ಕಲಬುರಗಿ ಜಿಲ್ಲೆಯಲ್ಲಿನ ಅನೇಕ ಕುಟುಂಬಗಳ ಮೂಲ ಕಸಬು ಕೃಷಿ ಪ್ರಧಾನವಾಗಿದೆ. ಈ ಜಿಲ್ಲೆಯ ಒಟ್ಟು ಆಂತರಿಕ ಉತ್ಪನ್ನಕ್ಕೆ ಶೇಕಡಾ 30ಕ್ಕಿಂತ ಹೆಚ್ಚಿನ ಪ್ರಮಾಣ ಕೃಷಿಯಿಂದ ಬರುತ್ತದೆ. ಕೃಷಿಯು ಹೆಚ್ಚಾಗಿ ಒಣ ಭೂಮಿಯಿಂದ ಕೂಡಿದೆ. ಒಟ್ಟಾರೆಯಾಗಿ ಜಿಲ್ಲೆಯಲ್ಲಿ ಅತಿ ಹೆಚ್ಚಿನ ಪ್ರಮಾಣದಲ್ಲಿ ಮಳೆಯನ್ನೇ ಅವಲಂಭಿಸಿದ ಕೃಷಿ ಚಟುವಟಿಕೆಗಳಿವೆ. ಜಿಲ್ಲೆಯಲ್ಲಿರುವ ಅನೇಕ ಕುಟುಂಬಗಳ ಸದಸ್ಯರು ಜಿಲ್ಲೆಯ ವಿವಿಧ ತಾಲೂಕಿನಲ್ಲಿರುವ ಅನೇಕ ಸಣ್ಣ ಮತ್ತು ಭಾರೀ ಕೈಗಾರಿಕೆಯಲ್ಲಿ ಪೂರ್ಣ ಅಥವಾ ಅರೆಕಾಲಿಕವಾಗಿ ಕೆಲಸದಲ್ಲಿ ನಿರತರಾಗಿದ್ದಾರೆ. ಈ ಜಿಲ್ಲೆಯು ರಾಜ್ಯದಲ್ಲಿಯೇ ಅತಿ ಹೆಚ್ಚಿನ ಪ್ರಮಾಣದಲ್ಲಿ ತೊಗರಿ ಬೆಳೆಯುವ ಪ್ರದೇಶಗಳಲ್ಲಿ ಒಂದಾಗಿದೆ. ಆದ್ದರಿಂದ ಇದನ್ನು ಕರ್ನಾಟಕ ರಾಜ್ಯದ 'ತೊಗರಿಯ ಕಣಜ' ಎಂದು ಕರೆಯುತ್ತಾರೆ.

**ಧಾರವಾಡ ಜಿಲ್ಲೆಯ ಪರಿಚಯ**

ಧಾರವಾಡ ಜಿಲ್ಲೆಯನ್ನು ಕರ್ನಾಟಕದ ಸಾಂಸ್ಕೃತಿಕ ರಾಜಧಾನಿ ಎಂದು ಕರೆಯುತ್ತಾರೆ. ಜಿಲ್ಲೆಯಲ್ಲಿ ಅನೇಕ ಸ್ವಾತಂತ್ರ್ಯಪೂರ್ವ ಮತ್ತು ನಂತರದಲ್ಲಿ ಚಳುವಳಿಗಳು ರೂಪುಗೊಂಡಿವೆ. ಅದರಲ್ಲಿ ಬಹಳ ಪ್ರಮುಖವಾದುದ್ದು ಎಂದರೆ ಕರ್ನಾಟಕ ಏಕೀಕರಣ ಚಳುವಳಿಯಲ್ಲಿ ಜಿಲ್ಲೆಯು ಬಹಳ ಪ್ರಮುಖವಾದ ಪಾತ್ರವನ್ನು ವಹಿಸಿತ್ತು. ಕನ್ನಡ ಭಾಷೆಗೆ ದೊರಕಿದ ಎಂಟು ಜ್ಞಾನಪೀಠ ಪ್ರಶಸ್ತಿಗಳನ್ನು ಪಡೆದವರಲ್ಲಿ ಮೂರು ಜನ ಅವಿಭಜಿತ ಧಾರವಾಡ ಜಿಲ್ಲೆಗೆ ಸೇರಿದವರಾಗಿದ್ದಾರೆ. ಧಾರವಾಡ ಜಿಲ್ಲೆಯು ತನ್ನದೇ ಆದ ಇತಿಹಾಸವನ್ನು ಹೊಂದಿದ್ದು, ಈ ಜಿಲ್ಲೆಯು 5ನೇ ಶತಮಾನದಲ್ಲಿ ಹಲವಾರು ರಾಜಮನೆತನಗಳಿಂದ ಆಳಲ್ಪಟ್ಟಿತ್ತು. ಈ ರಾಜವಂಶಗಳಲ್ಲಿ ಬಾದಾಮಿ ಚಾಲುಕ್ಯರನ್ನು ಒಳಗೊಂಡು ಪುಣೆಯ ಪೇಶ್ವೆಗಳವರೆಗೂ ಆಳಲ್ಪಟ್ಟಿರುತ್ತದೆ. ಪೇಶ್ವೆಗಳ ಆಳ್ವಿಕೆಯಿಂದ ಈ ಜಿಲ್ಲೆಯಲ್ಲಿ 19 ಶತಮಾನದವರೆಗೂ ಮರಾಠಿ ಪ್ರಾಬಲ್ಯವನ್ನು ಹೊಂದಿತ್ತು. ಮುಂದೆ ಬ್ರಿಟೀಷರ ಆಳ್ವಿಕೆಯಲ್ಲಿ ಧಾರವಾಡವು ವಿಭಾಗೀಯ, ಶೈಕ್ಷಣಿಕ ಮತ್ತು ಆಡಳಿತ

ಕೇಂದ್ರವಾಗಿ ಮುಂದುವರೆದು ಕನ್ನಡ ಭಾಷೆಗೆ ತಮ್ಮ ಆಡಳಿತದಲ್ಲಿ ಪ್ರಥಮ ಆದ್ಯತೆಯನ್ನು ಕೊಟ್ಟಿದ್ದರು. ಧಾರವಾಡ ಜಿಲ್ಲೆಯು ಹಿಂದೂ, ಇಸ್ಲಾಂ, ಜೈನ, ಕ್ರಿಶ್ಚಿಯನ್, ಸಿಖ್, ಬೌದ್ಧ ಮುಂತಾದ ಧರ್ಮದ ಜನಸಂಖ್ಯೆಯನ್ನು ಒಳಗೊಂಡಿದ್ದು ಹಿಂದೂ ಧರ್ಮಿಯರು ಬಹುಸಂಖ್ಯಾತರಾಗಿದ್ದಾರೆ. ಈ ಜಿಲ್ಲೆಯು ಕೃಷಿಯನ್ನು ಪ್ರಧಾನ ಉದ್ಯೋಗವನ್ನಾಗಿ ಹೊಂದಿದ್ದು, ಒಣ ಬೇಸಾಯುವನ್ನು ನಂಬಿ ಜನರು ತಮ್ಮ ಜೀವನೋಪಾಯುದ ಮೂಲ ಕಸಬನ್ನಾಗಿಸಿಕೊಂಡಿದ್ದಾರೆ. ಸರಾಸರಿ ಜನಸಂಖ್ಯೆಯಲ್ಲಿ ಕೆಲವೊಂದಿಷ್ಟು ಜನರು ಬೇರೆ ಬೇರೆ ಕೆಲಸದಲ್ಲಿ ತೊಡಗಿದ್ದಾರೆ.

ಈ ಜಿಲ್ಲೆಯು ಧಾರವಾಡ ನಗರವನ್ನು ಕೇಂದ್ರವನ್ನಾಗಿ ಹೊಂದಿದ್ದು. 17 ತಾಲ್ಲೂಕುಗಳನ್ನು ಒಳಗೊಂಡು ವಿಶಾಲವಾದ ಅಖಂಡ ಧಾರವಾಡ ಜಿಲ್ಲೆಯಾಗಿತ್ತು. ನಂತರ ಜಿಲ್ಲಾ ವಿಭಜನೆಯಿಂದಾಗಿ ಗದಗ, ಹಾವೇರಿ, ಧಾರವಾಡ ಜಿಲ್ಲೆಗಳಾಗಿ 1997ರಲ್ಲಿ ಜನ್ಮತಾಳಿದವು. ಅದರಲ್ಲಿ ಧಾರವಾಡ ಜಿಲ್ಲೆಗೆ ಧಾರವಾಡ, ಹುಬ್ಬಳ್ಳಿ, ಕಲಘಟಗಿ, ಕುಂದಗೋಳ ಹಾಗೂ ನವಲಗುಂದ ತಾಲೂಕುಗಳು ಸೇರ್ಪಡೆ ಆಗಿದ್ದು, ಅವುಗಳು ಐತಿಹಾಸಿಕ, ಸಂಸ್ಕೃತಿಕ, ಕಲಾತ್ಮಕ ಮತ್ತು ಸಾಹಿತ್ಯಿಕ ಸೇರಿದಂತೆ ವಿವಿಧ ಪರಂಪರೆಗಳನ್ನು ಹೊಂದಿದೆ. ಜಿಲ್ಲೆಯು ಉತ್ತರ ಕರ್ನಾಟಕದಲ್ಲಿಯೆ ಒಂದು ಪ್ರಮುಖವಾದ ಶೈಕ್ಷಣಿಕ ಕೇಂದ್ರವಾಗಿದೆ. ಈ ಜಿಲ್ಲೆಯಲ್ಲಿ ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ ಕೃಷಿ ವಿಶ್ವವಿದ್ಯಾಲಯ ಮತ್ತು ಕರ್ನಾಟಕ ರಾಜ್ಯ ಕಾನೂನು ವಿಶ್ವವಿದ್ಯಾಲಯಗಳಿವೆ. ಈ ಎಲ್ಲಾ ಉನ್ನತ ಶಿಕ್ಷಣ ಸಂಸ್ಥೆಗಳಿಂದ ಹಲವಾರು ವಿದ್ಯಾರ್ಥಿಗಳು ತಮ್ಮ ಶಿಕ್ಷಣಗಳನ್ನು ಪಡೆದು ಅನೇಕ ರಾಜ್ಯ ಮತ್ತು ಕೇಂದ್ರ ಸರಕಾರದ ಹಾಗೂ ವಿವಿಧ ಖಾಸಗಿ ಸಂಸ್ಥೆಗಳಲ್ಲಿ ಉನ್ನತವಾದ ಸ್ಥಾನಗಳಲ್ಲಿ ಸೇವೆಗಳನ್ನು ಸಲ್ಲಿಸುತ್ತಿದ್ದಾರೆ (ಧಾರವಾಡ ಜಿಲ್ಲಾ ಮಾನವ ಅಭಿವೃದ್ಧಿ ವರದಿ, 2014).

**ಭೌಗೋಳಿಕ ಹಿನ್ನಲೆ**

ಧಾರವಾಡ ಜಿಲ್ಲೆಯು ಉತ್ತರ ಕರ್ನಾಟಕದ ಪಶ್ಚಿಮ ಭಾಗದಲ್ಲಿದ್ದು ಜಿಲ್ಲೆಯ ವಿಸ್ತೀರ್ಣತೆ 4263 ಚ.ಕಿ.ಮೀ. ಇದ್ದು 15.51 ಉತ್ತರ ಅಕ್ಷಾಂಶ 73.43 ಮತ್ತು 75.25 ಪೂರ್ವ ರೇಖಾಂಶಗಳ ಮಧ್ಯದಲ್ಲಿದೆ. ಉತ್ತರಕ್ಕೆ ಬೆಳಗಾವಿ, ದಕ್ಷಿಣಕ್ಕೆ ಹಾವೇರಿ, ಪೂರ್ವಕ್ಕೆ ಗದಗ ಮತ್ತು ಪಶ್ಚಿಮಕ್ಕೆ ಉತ್ತರ ಕನ್ನಡ ಜಿಲ್ಲೆಗಳೊಂದಿಗೆ ಗಡಿಯನ್ನು ಹಂಚಿಕೊಂಡಿದೆ. ಈ ಜಿಲ್ಲೆಯು ಸಮುದ್ರ ಮಟ್ಟಕ್ಕಿಂತ 80 ಮೀಟರ ಎತ್ತರದಲ್ಲಿದ್ದು ಸಮಶೀತೋಷ್ಣ ಹವಾಗುಣವನ್ನು ಹೊಂದಿದೆ. ಈ ಜಿಲ್ಲೆಯ ಉತ್ತರ ಭಾಗದಲ್ಲಿ ಬೆಳಗಾವಿ, ಪೂರ್ವದಲ್ಲಿ ಗದಗ ಜಿಲ್ಲೆ, ದಕ್ಷಿಣದಲ್ಲಿ ಹಾವೇರಿ ಮತ್ತು ಪಶ್ಚಿಮದಲ್ಲಿ ಉತ್ತರ ಕನ್ನಡ ಜಿಲ್ಲೆಗಳಿವೆ. ಧಾರವಾಡ ಜಿಲ್ಲೆಯು 1997ರವರೆಗೆ ಈಗಿನ ಗದಗ ಮತ್ತು ಹಾವೇರಿ ಜಿಲ್ಲೆಗಳನ್ನು ಒಳಗೊಂಡಿತ್ತು. ಬೆಂಗಳೂರಿನಿಂದ 420 ಕಿ.ಮೀ.ದೂರದಲ್ಲಿರುವ

ಈ ಜಿಲ್ಲೆಯು ರಾಜ್ಯದ ಪ್ರಮುಖ ಪಟ್ಟಣಗಳಲ್ಲಿ ಒಂದಾಗಿದೆ. ಧಾರವಾಡ ಜಿಲ್ಲೆಯು 397 ಕಂದಾಯ ಗ್ರಾಮಗಳನ್ನು ಮತ್ತು 6 ನಗರ ಕೇಂದ್ರಗಳನ್ನು ಒಳಗೊಂಡಿದೆ. ಆರು ನಗರ ಕೇಂದ್ರಗಳಲ್ಲಿ ಜಿಲ್ಲಾ ಕೇಂದ್ರ ಸ್ಥಾನವಾದ ಧಾರವಾಡ ಕೇಂದ್ರ ತಾಲೂಕ ಮತ್ತು ಹುಬ್ಬಳ್ಳಿ ತಾಲೂಕ ಕೇಂದ್ರ ಸ್ಥಾನವನ್ನು ಒಳಗೊಂಡ ರಾಜ್ಯದ ಮಹಾನಗರ ಪಾಲಿಕೆಗಳಲ್ಲಿ ಒಂದಾದ ಹುಬ್ಬಳ್ಳಿ ಧಾರವಾಡ ಮಹಾನಗರ ಪಾಲಿಕೆಯು ಒಂದಾಗಿರುತ್ತದೆ. ಧಾರವಾಡ ಜಿಲ್ಲೆಯು ಮಲೆನಾಡು ಮತ್ತು ಬಯಲು ಪ್ರದೇಶದ ನಡುವಿನ ಪ್ರವೇಶದ್ವಾರವೆಂದು ಪರಿಗಣಿತವಾಗಿದೆ. ಧಾರವಾಡ ನಗರದ ವಾತವರಣ ಮತ್ತು ಪರಿಸರದಿಂದ ಅನೇಕ ಸರಕಾರಿ ನೌಕರರು ತಮ್ಮ ಸೇವೆಯಿಂದ ನಿವೃತ್ತಿಯಾದ ನಂತರದಲ್ಲಿ ಇಲ್ಲಯೇ ನೆಲೆಸಬೇಕೆಂದು ನಿರ್ಧರಿಸಿ ನೆಲಸಿರುವುದ್ದರಿಂದ ನಗರಕ್ಕೆ ನಿವೃತ್ತರ 'ಸ್ವರ್ಗ'ವೆಂದು ಉಲ್ಲೇಖಿಸಲ್ಪಡುತ್ತದೆ (ಧಾರವಾಡ ಜಿಲ್ಲಾ ಮಾನವ ಅಭಿವೃದ್ಧಿ ವರದಿ, 2014)..

**ರಾಜಕೀಯ ಹಿನ್ನೆಲೆ**

ರಾಜಕೀಯಕ್ಕೆ ಸಂಬಂಧಪಟ್ಟಂತೆ ಹೇಳುವುದಾದರೆ ಈ ಜಿಲ್ಲೆಯು ರಾಜ್ಯಕ್ಕೆ ಎರಡು ಮುಖ್ಯಮಂತ್ರಿಗಳನ್ನು ನೀಡಿದ ಮತ್ತು ಸತತವಾಗಿ ರಾಜಕೀಯದಲ್ಲಿ ಮುಂಚೂಣಿಯಲ್ಲಿರುವ ಜಿಲ್ಲೆಗಳಲ್ಲಿ ಒಂದಾಗಿದೆ. 1997ರಲ್ಲಿ ಜಿಲ್ಲೆಯು ಮೂರು ಜಿಲ್ಲೆಗಳನ್ನಾಗಿ ವಿಂಗಡಿಸಲಾಗಿ ಗದಗ ಮತ್ತು ಹಾವೇರಿ ಜಿಲ್ಲೆಗಳು ಹಳೆ ಧಾರವಾಡ ಜಿಲ್ಲೆಯ ಅವಿಭಾಜ್ಯ ಅಂಗಗಳಾಗಿದ್ದವು. ಹಾಗಾಗಿ ಜಿಲ್ಲೆಯಲ್ಲಿ ಈಗ ಒಟ್ಟು 7 ವಿಧಾನ ಸಭಾ ಕ್ಷೇತ್ರಗಳು ಅವುಗಳು: ಕುಂದಗೊಳ, ಕಲಘಟಗಿ, ನವಲಗುಂದ, ಧಾರವಾಡ ಗ್ರಾಮೀಣ, ಹುಬ್ಬಳ್ಳಿ ಧಾರವಾಡ ಪಶ್ಚಿಮ, ಪೂರ್ವ ಮತ್ತು ಕೇಂದ್ರ. ಇನ್ನು ವಿಧಾನ ಪರಿಷತ್ತಿನಲ್ಲಿ ಜಿಲ್ಲೆಯಿಂದ ಒಟ್ಟು ಐದು ಜನ ಜಿಲ್ಲೆಯ ವಿವಿಧ ಕ್ಷೇತ್ರಗಳನ್ನು ಪ್ರತಿನಿಧಿಸುತ್ತಿದ್ದಾರೆ. ಅವುಗಳಲ್ಲಿ ಶಿಕ್ಷಕರ ಕ್ಷೇತ್ರವನ್ನು ಜೆಡಿಎಸ್ ಪಕ್ಷ, ಪದವೀಧರ ಕ್ಷೇತ್ರವನ್ನು ಬಿಜೆಪಿ, ಸ್ಥಳೀಯ ಸಂಸ್ಥೆಗಳಿಂದ ಗೆದ್ದು ಒಬ್ಬರು ಕಾಂಗ್ರೆಸ್ ಮತ್ತು ಇನ್ನೊಬ್ಬರು ಬಿಜೆಪಿಯನ್ನು ಪ್ರತಿನಿಧಿಸುತ್ತಿದ್ದಾರೆ. ಆದೇ ರೀತಿಯಾಗಿ ಧಾರವಾಡ ಜಿಲ್ಲೆಯ ಎಲ್ಲಾ ವಿಧಾನ ಸಭಾ ಕ್ಷೇತ್ರಗಳು ಧಾರವಾಡ ಉತ್ತರ ಲೋಕಸಭಾ ಕ್ಷೇತ್ರದ ವ್ಯಾಪ್ತಿಯಲ್ಲಿ ಬರುತ್ತವೆ. ಹಳೆಯ ಧಾರವಾಡ ಜಿಲ್ಲೆಯನ್ನು ಎರಡು ಲೋಕಸಭಾ ಕ್ಷೇತ್ರಗಳಾಗಿ ವಿಂಗಡಿಸಿ ಉತ್ತರ ಲೋಕಸಭಾ ಕ್ಷೇತ್ರ ಮತ್ತು ದಕ್ಷಿಣ ಕ್ಷೇತ್ರಗಳು ಎಂದು ಹೆಸರಿಸಿರುತ್ತಾರೆ ಈ ಎರಡೂ ಕ್ಷೇತ್ರಗಳನ್ನು ಬಿ.ಜೆ.ಪಿ.ಯ ಸದಸ್ಯರು ಪ್ರತಿನಿಧಿಸುತಿದ್ದಾರೆ.

**ಒಟ್ಟು ಜನಸಂಖ್ಯೆಯ ವಿವರ**

ಕೋಷ್ಟಕ 2.1ರಲ್ಲಿ ಅಧ್ಯಯನ ಕೈಗೊಂಡ ಎರಡು ಜಿಲ್ಲೆಗಳು ಹೊಂದಿರುವ ಜನಸಂಖ್ಯೆಯ ವಿವರಣೆಯನ್ನು ಹೇಳಲಾಗಿದೆ. 2011ರ ಜನಗಣತಿಯ ಪ್ರಕಾರ ಧಾರವಾಡ ಜಿಲ್ಲೆಯಲ್ಲಿ 382700

ಕುಟುಂಬಗಳಿವೆ. ಇದರಲ್ಲಿ 160674 ಕುಟುಂಬಗಳು ಜಿಲ್ಲೆಯ ಗ್ರಾಮೀಣ ಭಾಗದಲ್ಲಿವೆ ಮತ್ತು 222026 ಕುಟುಂಬಗಳು ನಗರ ಪ್ರದೇಶದಲ್ಲಿ ವಾಸಿಸುತ್ತಿವೆ. ಇನ್ನು ಒಟ್ಟು ಜನಸಂಖ್ಯೆಯಲ್ಲಿ 1847023 ಇದ್ದು, ಇದರಲ್ಲಿ 937206ರಷ್ಟು ಪುರುಷರಿದ್ದು, 909817ರಷ್ಟು ಮಹಿಳೆಯರಿದ್ದಾರೆ. 2001 ರಿಂದ 2011ರ ಜನಗಣತಿಯ ದಶಕದ ಬೆಳವಣಿಗೆಯು ಶೇಕಡಾ 15.13ರಷ್ಟು ಹೆಚ್ಚಿನ

**ಕೋಷ್ಟಕ 2.1**

**ಜಿಲ್ಲೆಗಳ ಜನಸಂಖ್ಯೆಯ ಪರಿಚಯ**

| ಸೂಚಕಗಳು | ಕಲಬುರಗಿ | ಧಾರವಾಡ |
|---|---|---|
| ಜಿಲ್ಲೆಯ ಒಟ್ಟು ಭೌಗೋಳಿಕ ವಿಸ್ತೀರ್ಣ* | 10951 | 4260 |
| ರಾಜ್ಯದ ಭೌಗೋಳಿಕ ವಿಸ್ತೀರ್ಣದಲ್ಲಿ ಜಿಲ್ಲೆಯ ಪಾಲು* | 5.71 | 2.22 |
| ಒಟ್ಟು ಜನಸಂಖ್ಯೆ | 2566326 | 1847023 |
| ರಾಜ್ಯದ ಒಟ್ಟು ಜನಸಂಖ್ಯೆಯಲ್ಲಿ ಜಿಲ್ಲೆಗಳ ಪಾಲು | 4.2 | 3.02 |
| ಒಟ್ಟು ಪುರುಷರ ಜನಸಂಖ್ಯೆ | 1301755 | 937206 |
| ಒಟ್ಟು ಮಹಿಳೆಯರ ಜನಸಂಖ್ಯೆ | 1264571 | 909817 |
| ಒಟ್ಟು ಗ್ರಾಮೀಣ ಜನಸಂಖ್ಯೆ | 1730775 | 797484 |
| ಒಟ್ಟು ಗ್ರಾಮೀಣ ಪುರುಷರ ಜನಸಂಖ್ಯೆ | 877144 | 409416 |
| ಒಟ್ಟು ಗ್ರಾಮೀಣ ಮಹಿಳೆಯರ ಜನಸಂಖ್ಯೆ | 853631 | 388068 |
| ಒಟ್ಟು ನಗರ ಪ್ರದೇಶದ ಜನಸಂಖ್ಯೆ | 835551 | 1049539 |
| ಒಟ್ಟು ನಗರ ಪ್ರದೇಶದ ಪುರುಷರ ಜನಸಂಖ್ಯೆ | 424611 | 527790 |
| ಒಟ್ಟು ನಗರ ಪ್ರದೇಶದ ಮಹಿಳೆಯರ ಜನಸಂಖ್ಯೆ | 410940 | 521749 |
| 0 ರಿಂದ 6ವರ್ಷದ ಮಕ್ಕಳ ಒಟ್ಟು ಜನಸಂಖ್ಯೆ | 365372 | 219942 |
| 0 ರಿಂದ 6ವರ್ಷದ ಗಂಡು ಮಕ್ಕಳ ಒಟ್ಟು ಜನಸಂಖ್ಯೆ | 188076 | 113127 |
| 0 ರಿಂದ 6ವರ್ಷದ ಹೆಣ್ಣು ಮಕ್ಕಳ ಒಟ್ಟು ಜನಸಂಖ್ಯೆ | 177296 | 106815 |
| 0 ರಿಂದ 6ವರ್ಷದ ಗ್ರಾಮೀಣ ಮಕ್ಕಳ ಒಟ್ಟು ಜನಸಂಖ್ಯೆ | 254972 | 101160 |
| 0 ರಿಂದ 6ವರ್ಷದ ಗ್ರಾಮೀಣ ಗಂಡು ಮಕ್ಕಳ ಒಟ್ಟು ಜನಸಂಖ್ಯೆ | 131174 | 52331 |
| 0 ರಿಂದ 6ವರ್ಷದ ಗ್ರಾಮೀಣ ಹೆಣ್ಣು ಮಕ್ಕಳ ಒಟ್ಟು ಜನಸಂಖ್ಯೆ | 123798 | 48829 |
| 0 ರಿಂದ 6ವರ್ಷದ ನಗರ ಮಕ್ಕಳ ಒಟ್ಟು ಜನಸಂಖ್ಯೆ | 110400 | 118782 |
| 0 ರಿಂದ 6ವರ್ಷದ ನಗರ ಗಂಡು ಮಕ್ಕಳ ಒಟ್ಟು ಜನಸಂಖ್ಯೆ | 56902 | 60796 |
| 0 ರಿಂದ 6ವರ್ಷದ ನಗರ ಹೆಣ್ಣು ಮಕ್ಕಳ ಒಟ್ಟು ಜನಸಂಖ್ಯೆ | 53498 | 57986 |
| ಜನಸಾಂದ್ರತೆ (ಚದರ ಕಿ.ಮೀ.ಗೆ) | 234 | 434 |

ಮಾಹಿತಿಯ ಮೂಲ: 2011ರ ಭಾರತೀಯ ಜನಗಣತಿಯ ಅಂತರ್ಜಾಲತಾಣ www. censusindia.org ದಿಂದ ದತ್ತಾಂಶಗಳನ್ನು ಪಡೆಯಲಾಗಿದೆ.

ಜನಸಂಖ್ಯೆ ಬೆಳವಣಿಗೆಯಾಗಿದೆ. ಪ್ರತಿ ಚದರ ಕಿ.ಮೀಗೆ 433 ಜನರು ವಾಸಿಸುವ ಜನಸಾಂದ್ರತೆ ಜಿಲ್ಲೆಯಲ್ಲಿದೆ ಎಂದು 2011 ಜನಗಣತಿಯಿಂದ ತಿಳಿದು ಬರುತ್ತದೆ.

ಸಾಕ್ಷರತೆಯ ವಿಚಾರಕ್ಕೆ ಬಂದರೆ ಶೇಕಡಾ 80ರಷ್ಟು ಜನರು ಸಾಕ್ಷರತೆಯನ್ನು ಹೊಂದಿದವರಾಗಿದ್ದಾರೆ. ಶೇಕಡಾ 86.37ರಷ್ಟು ಪುರುಷರು ಅಕ್ಷರಸ್ಥರಾಗಿದ್ದಾರೆ ಮತ್ತು ಶೇಕಡಾ 73.46ರಷ್ಟು ಮಹಿಳೆಯರು ಸಾಕ್ಷರತೆಯನ್ನು ಹೊಂದಿವರಾಗಿದ್ದಾರೆ. ಲಿಂಗಾನುಪಾತವು ಪ್ರತಿ ಒಂದು ಸಾವಿರ ಪುರುಷರಿಗೆ 967 ಸ್ತ್ರೀಯರ ಪ್ರಮಾಣವಿದೆ (ಭಾರತೀಯ ಜನಗಣತಿ, 2011).

**ಸಾಕ್ಷರತೆಯ ವಿವರ**

ಧಾರವಾಡದಲ್ಲಿನ ಒಟ್ಟು ಜನಸಂಖ್ಯೆಯಲ್ಲಿ ಒಟ್ಟು ಶೇಕಡಾ 80.30ರಷ್ಟು ಮತ್ತು ಶೇಕಡಾ 86.83 ಪುರುಷರ ಸಾಕ್ಷರತೆಯೊಂದಿಗೆ ರಾಜ್ಯದಲ್ಲಿ 6ನೇ ಸ್ಥಾನ, ಶೇಕಡಾ 73.57ರಷ್ಟು ಮಹಿಳೆಯರ ಸಾಕ್ಷರತೆಯೊಂದಿಗೆ 7ನೇ ಸ್ಥಾನದಲ್ಲಿದೆ. ಜಿಲ್ಲೆಯ ಒಟ್ಟು ಜನಸಂಖ್ಯೆಯಲ್ಲಿ ಶೇಕಡಾ 56.8ರಷ್ಟು ಇದೆ. ಬೆಂಗಳೂರಿನ ನಂತರ ಜಿಲ್ಲೆಯ ಹುಬ್ಬಳ್ಳಿ–ಧಾರವಾಡ ಮಹಾನಗರವು ರಾಜ್ಯದಲ್ಲೇ ಎರಡನೆಯ ದೊಡ್ಡ ನಗರವಾಗಿದೆ.

ಕೋಷ್ಟಕ 2.3ರಲ್ಲಿ ಕೊಟ್ಟಿರುವ ಮಾಹಿತಿಯಂತೆ ಕರ್ನಾಟಕದ ಎಲ್ಲಾ ಜಿಲ್ಲೆಗಳಲ್ಲಿ ಜನಗಣತಿ 2011ರಂತೆ ಜಿಲ್ಲೆಗಳಲ್ಲಿರುವ ಒಟ್ಟು ಕುಟುಂಬಗಳಿಗಿಂತ ರಾಜ್ಯದ ಆಹಾರ ಮತ್ತು ನಾಗರಿಕ ಸರಬರಾಜು ಇಲಾಖೆಯು ವಿತರಿಸಿರುವ ಪಡಿತರ ಚೀಟಿಗಳೇ ಹೆಚ್ಚಾಗಿವೆ. ಇದರಿಂದ ರಾಜ್ಯ ಸರಕಾರದ ಬೊಕ್ಕಸಕ್ಕೆ ಕೋಟ್ಯಾಂತರ ರೂಪಾಯಿಗಳ ನಷ್ಟವಾಗುತ್ತಿರುವುದು ಸ್ಪಷ್ಟವಾಗುತ್ತದೆ (ಭಾರತೀಯ ಜನಗಣತಿ, 2011).

ಕೋಷ್ಟಕ 2.3ರಲ್ಲಿ ಕೊಟ್ಟಿರುವಂತೆ ಸಂಶೋಧನೆಗೆ ಆಯ್ಕೆಮಾಡಿಕೊಂಡ ಜಿಲ್ಲೆಗಳಲ್ಲಿರುವ ಸ್ಥಳೀಯ ಸಂಸ್ಥೆಗಳು, ಸಾರ್ವಜನಿಕ ಶಾಲೆ, ಕಾಲೇಜು, ಅಂಗನವಾಡಿ ಕೇಂದ್ರಗಳು ಮತ್ತು ಜಿಲ್ಲೆಯುಲ್ಲಿರುವ ಒಟ್ಟು ಕೃಷಿ ಮತ್ತು ತೋಟಗಾರಿಕೆ ಪ್ರದೇಶಗಳ ವಿವರಣೆಯನ್ನು ತಿಳಿದುಕೊಳ್ಳಬುಹುದಾಗಿದೆ. ರಾಜ್ಯದಲ್ಲಿ ಭೌಗೋಳಿಕವಾಗಿ ಎರಡನೆಯ ಅತಿ ದೊಡ್ಡ ಜಿಲ್ಲೆಯಾದ ಕಲಬುರಗಿಯಲ್ಲಿ ಒಟ್ಟು ಏಳು ಮತ್ತು ಧಾರವಾಡದಲ್ಲಿ 5 ತಾಲೂಕ ಪಂಚಾಯತಿಗಳು ತಾಲೂಕ ಕೇಂದ್ರಗಳಲ್ಲಿ ಕಾರ್ಯ ನಿರ್ವಹಿಸುತ್ತಿವೆ. ಅದೇ ರೀತಿಯಾಗಿ ತಾಲೂಕ ಪಂಚಾಯತಿಯ ಅಧೀನದಲ್ಲಿ ಬರುವ ಗ್ರಾಮ ಪಂಚಾಯತಿಗಳ ಬಗ್ಗೆ ವಿಶ್ಲೇಷಿಸುವುದಾದರೆ ಕಲಬುರಗಿಯಲ್ಲಿ 220 ಮತ್ತು ಧಾರವಾಡದಲ್ಲಿ 127 ಗ್ರಾಮ ಪಂಚಾಯಿತಿಗಳು ಅನುಕ್ರಮವಾಗಿ 918 ಮತ್ತು 379 ಗ್ರಾಮಗಳ ಪ್ರದೇಶದಲ್ಲಿ ವಾಸಿಸುವ ಎಲ್ಲಾ ಅರ್ಹ ಕುಟುಂಬಗಳಿಗೆ ಸರಕಾರದ ಕಾರ್ಯಕ್ರಮಗಳ ಲಾಭವನ್ನು ಹಸ್ತಾಂತರ ಮಾಡುವಲ್ಲಿ ಬಹಳ ಪ್ರಮುಖವಾದ ಪಾತ್ರವನ್ನು ವಹಿಸುತ್ತಿವೆ. ಇನ್ನು

## ಕೋಷ್ಟಕ 2.2
## ಜನಸಂಖ್ಯೆಯ ಲಿಂಗಾನುಪಾತ ಮತ್ತು ಸಾಕ್ಷರತೆಯ ಪ್ರಮಾಣ

| ಸೂಚಕಗಳು | ಕಲಬುರಗಿ | ಧಾರವಾಡ |
|---|---|---|
| ಒಟ್ಟು ಲಿಂಗಾನುಪಾತ | 971 | 971 |
| ಒಟ್ಟು ಗ್ರಾಮೀಣ ಲಿಂಗಾನುಪಾತ | 973 | 948 |
| ಒಟ್ಟು ನಗರ ಲಿಂಗಾನುಪಾತ | 968 | 989 |
| 0 ರಿಂದ 6ವರ್ಷದೊಳಗಿನ ಒಟ್ಟು ಲಿಂಗಾನುಪಾತ | 943 | 944 |
| 0 ರಿಂದ 6ವರ್ಷದೊಳಗಿನ ಒಟ್ಟು ಗ್ರಾಮೀಣ ಲಿಂಗಾನುಪಾತ | 944 | 933 |
| 0 ರಿಂದ 6ವರ್ಷದೊಳಗಿನ ಒಟ್ಟು ನಗರ ಲಿಂಗಾನುಪಾತ | 940 | 954 |
| ಸಾಕ್ಷರತೆಯ ಒಟ್ಟು ಪ್ರಮಾಣ | 64.9 | 80 |
| ಸಾಕ್ಷರತೆಯ ಒಟ್ಟು ಪುರುಷರ ಪ್ರಮಾಣ | 74.4 | 86.4 |
| ಸಾಕ್ಷರತೆಯ ಒಟ್ಟು ಮಹಿಳೆಯರ ಪ್ರಮಾಣ | 55.1 | 73.5 |
| ಸಾಕ್ಷರತೆಯ ಗ್ರಾಮೀಣ ಪ್ರಮಾಣ | 58.1 | 72.1 |
| ಸಾಕ್ಷರತೆಯ ಗ್ರಾಮೀಣ ಪುರುಷರ ಪ್ರಮಾಣ | 69.1 | 81 |
| ಸಾಕ್ಷರತೆಯ ಗ್ರಾಮೀಣ ಮಹಿಳೆಯರ ಪ್ರಮಾಣ | 46.9 | 62.7 |
| ಸಾಕ್ಷರತೆಯ ಒಟ್ಟು ನಗರ ಪ್ರಮಾಣ | 78.6 | 85.9 |
| ಸಾಕ್ಷರತೆಯ ನಗರ ಪುರುಷರ ಪ್ರಮಾಣ | 85.1 | 90.5 |
| ಸಾಕ್ಷರತೆಯ ನಗರ ಮಹಿಳೆಯರ ಪ್ರಮಾಣ | 71.9 | 81.3 |

ಮಾಹಿತಿಯ ಮೂಲ: 2011ರ ಭಾರತೀಯ ಜನಗಣತಿಯ ಅಂತರ್ಜಾಲತಾಣ www. censusindia.org ದಿಂದ ದತ್ತಾಂಶಗಳನ್ನು ಪಡೆಯಲಾಗಿದೆ.

ಜಿಲ್ಲೆಗಳ ಒಟ್ಟು ಭೌಗೋಳಿಕ ಪ್ರದೇಶದ ಹಂಚಿಕೆಯನ್ನು ನೋಡುವುದಾದರೆ ಕಲಬುರಗಿ ಜಿಲ್ಲೆಯಲ್ಲಿ 353.16ರಷ್ಟು ಮತ್ತು ಧಾರವಾಡದಲ್ಲಿ 352.23ರಷ್ಟು ಪ್ರದೇಶ ಭೂಮಿಯು ಅರಣ್ಯದಿಂದ ಕೂಡಿದೆ. ಕಲಬುರಗಿಯಲ್ಲಿ 9740 ಚದರ ಕಿ.ಮೀ ಪ್ರದೇಶ ಮತ್ತು ಧಾರವಾಡದಲ್ಲಿ 4290 ಚದರ ಕಿ.ಮೀ. ಪ್ರದೇಶದಲ್ಲಿ ಕೃಷಿಗೆ ಸಂಬಂಧಿಸಿದ ಚಟುವಟಿಕೆಗಳಿಗೆ ಮತ್ತು 230 ಚದರ ಕಿ.ಮೀ ಕಲಬುರಗಿ ಮತ್ತು ಧಾರವಾಡದಲ್ಲಿ 254.99 ಚದರ ಕಿ.ಮೀ. ಪ್ರದೇಶದಲ್ಲಿ ತೋಟಗಾರಿಕೆಯ ಚಟುವಟಿಕೆಗಳನ್ನು ಮಾಡಲಾಗುತ್ತಿದೆ. ಇನ್ನು ಜಿಲ್ಲೆಗಳಲ್ಲಿರುವ ಶಿಕ್ಷಣ ಸಂಸ್ಥೆಗಳ ಬಗ್ಗೆ ಹೇಳುವುದಾದರೆ ಕಲಬುರಗಿಯಲ್ಲಿ 2622 ಪ್ರಾಥಮಿಕ ಶಾಲೆಗಳು, 782 ಪ್ರೌಢ ಶಾಲೆಗಳು, 181 ಕಾಲೇಜುಗಳು, 3034 ಅಂಗನವಾಡಿ ಕೇಂದ್ರಗಳು ಮತ್ತು 5 ವೃತ್ತಿಪರ ಕಾಲೇಜುಗಳು ಜಿಲ್ಲೆಯ ವಿದ್ಯಾರ್ಥಿಗಳಿಗೆ

ವಿವಿಧ ಹಂತದ ಶಿಕ್ಷಣವನ್ನು ನೀಡುವಲ್ಲಿ ಕಾರ್ಯನಿರತವಾಗಿವೆ ಎಂದು ಕೋಷ್ಟಕದಿಂದ ತಿಳಿದು ಬರುತ್ತದೆ. ಅದೇ ರೀತಿಯಾಗಿ ಧಾರವಾಡದಲ್ಲಿ 1147 ಪ್ರಾಥಮಿಕ ಶಾಲೆಗಳು, 385 ಪ್ರೌಢಶಾಲೆಗಳು, 194 ಕಾಲೇಜುಗಳು, 7 ವೃತ್ತಿಪರ ಕಾಲೇಜುಗಳು ಮತ್ತು 1160 ಅಂಗನವಾಡಿ ಕೇಂದ್ರಗಳು ಇರುವದು ಕಂಡು ಬರುತ್ತದೆ. ಇದಲ್ಲದೇ ಕಲಬುರಗಿಯಲ್ಲಿ 988 ಮತ್ತು ಧಾರವಾಡದಲ್ಲಿ 590 ಪಡಿತರ ನ್ಯಾಯ ಬೆಲೆ ಅಂಗಡಿಗಳ ಮೂಲಕ ಬಡತನ ರೇಖೆಯ ಕೆಳಗಿರುವ ಕುಟುಂಬಗಳಿಗೆ ಸರಕಾರದಿಂದ ವಿತರಿಸಲಾಗುವ ಆಹಾರ ಪದಾರ್ಥಗಳನ್ನು ವಿತರಿಸಲಾಗುತ್ತಿದೆ. ವಿದ್ಯಾಕಾಶಿ ಎನಿಸಿಕೊಂಡಿರುವ ಧಾರವಾಡದಲ್ಲಿ ಕಲಬುರಗಿಕ್ಕಿಂತ ಹೆಚ್ಚಿನ ಪ್ರಮಾಣದ ಸಾಮಾನ್ಯ ಮತ್ತು ವೃತ್ತಿಪರ ಕಾಲೇಜುಗಳಿವೆ. ಉಳಿದಂತೆ ಅಂಗನವಾಡಿ ಕೇಂದ್ರಗಳು, ಪ್ರಾಥಮಿಕ ಮತ್ತು ಪ್ರೌಢಶಾಲೆಗಳು ಕಲಬುರಗಿ ಜಿಲ್ಲೆಯಲ್ಲಿ ಹೆಚ್ಚಾಗಿವೆ (ಕಲಬುರಗಿ ಜಿಲ್ಲೆಯ ಅಂಕಿಸಂಖ್ಯೆಯ ಪಕ್ಷಿನೋಟ, 2011 ಮತ್ತು ಧಾರವಾಡ ಜಿಲ್ಲೆಯ ಅಂಕಿಸಂಖ್ಯೆಯ ಪಕ್ಷಿನೋಟ, 2011).

**ಕೋಷ್ಟಕ 2.3**

**ಜಿಲ್ಲೆಗಳಲ್ಲಿನ ಮೂಲಭೂತ ಸಾರ್ವಜನಿಕ ಸೌಕರ್ಯಗಳು**

| ಸೂಚಕಗಳು | ಕಲಬುರಗಿ | ಧಾರವಾಡ |
|---|---|---|
| ಜಿಲ್ಲೆಯಲ್ಲಿರುವ ತಾಲೂಕ ಪಂಚಾಯತಿಗಳ ಸಂಖ್ಯೆ* | 7 | 5 |
| ಜಿಲ್ಲೆಯಲ್ಲಿರುವ ಗ್ರಾಮಪಂಚಾಯತಿಗಳ ಸಂಖ್ಯೆ* | 220 | 127 |
| ಜಿಲ್ಲೆಯಲ್ಲಿರುವ ಗ್ರಾಮಗಳ ಸಂಖ್ಯೆ* | 918 | 379 |
| ಒಟ್ಟು ಅರಣ್ಯ ಪ್ರದೇಶ (ಚದರ ಕೀ.ಮೀ.ಗಳಲ್ಲಿ)* | 353.16 | 352.23 |
| ಒಟ್ಟು ಕೃಷಿ ಪ್ರದೇಶ (ಚದರ ಕೀ.ಮೀ.ಗಳಲ್ಲಿ)* | 9740 | 4290 |
| ಒಟ್ಟು ತೋಟಗಾರಿಕೆ ಪ್ರದೇಶ (ಚದರ ಕೀ.ಮೀ.ಗಳಲ್ಲಿ)* | 230 | 254.99 |
| ಒಟ್ಟು ಪ್ರಾಥಮಿಕ ಶಾಲೆಗಳು* | 2622 | 1147 |
| ಒಟ್ಟು ಪ್ರೌಢ ಶಾಲೆಗಳು* | 782 | 385 |
| ಒಟ್ಟು ಕಾಲೇಜುಗಳು* | 181 | 194 |
| ಒಟ್ಟು ಅಂಗನವಾಡಿ ಕೇಂದ್ರಗಳು* | 3034 | 1160 |
| ವೃತ್ತಿಪರ ಕಾಲೇಜುಗಳು* | 5 | 7 |
| ಜಿಲ್ಲೆಗಳಲ್ಲಿರುವ ಪಡಿತರ ನ್ಯಾಯ ಬೆಲೆ ಅಂಗಡಿಗಳು** | 988 | 590 |

ಮಾಹಿತಿಯ ಮೂಲ: * ಕಲಬುರಗಿ ಜಿಲ್ಲೆಯ ಅಂಕಿಸಂಖ್ಯೆಯ ಪಕ್ಷಿನೋಟ, 2011
* ಧಾರವಾಡ ಜಿಲ್ಲೆಯ ಅಂಕಿಸಂಖ್ಯೆಯ ಪಕ್ಷಿನೋಟ, 2011).

### ಕುಟುಂಬಗಳು ಹೊಂದಿರುವ ಶೌಚಾಲಯದ ಮಾಹಿತಿ

ಸಂಶೋಧನೆಗೆ ಆಯ್ಕೆ ಮಾಡಿಕೊಂಡ ಜಿಲ್ಲೆ ಮತ್ತು ತಾಲೂಕಿನ ಗ್ರಾಮೀಣ ಮತ್ತು ನಗರ ಪ್ರದೇಶದಲ್ಲಿನ ಕುಟುಂಬಗಳು ಹೊಂದಿರುವ ಶೌಚಾಲಯದ ಮಾಹಿತಿ, 2011ರ ಜನಗಣತಿಯ ಮಾಹಿತಿಯನ್ನು ಬಳಸಿಕೊಂಡು ಕೋಷ್ಟಕ 5ರಲ್ಲಿ ತೋರಿಸಿರುವಂತೆ ವಿಶ್ಲೇಷಣೆಯನ್ನು

ಮಾಡಲಾಗಿದೆ. ಇದರಲ್ಲಿ ಒಟ್ಟು ನಾಲ್ಕು ಘಟ್ಟಳಾಗಿ ವಿಶ್ಲೇಷಣೆಯನ್ನು ಕೈಗೊಳ್ಳಲಾಗಿದೆ ಅವುಗಳೆಂದರೆ ಕಲಬುರಗಿ ಮತ್ತು ಅದರಲ್ಲಿ ಆಯ್ಕೆಯಾದ ತಾಲೂಕ ಮತ್ತು ಧಾರವಾಡ ಮತ್ತು ಅದರಲ್ಲಿ ಆಯ್ಕೆಯಾದ ತಾಲೂಕಗಳಲ್ಲಿರುವ ಒಟ್ಟು ಕುಟುಂಬಗಳು ಮತ್ತು ನಗರ ಹಾಗೂ ಗ್ರಾಮೀಣ ಪ್ರದೇಶಗಳಗನುಗುಣವಾಗಿ ನೋಡಲಾಗಿದೆ.

ಮೊದಲನೆಯದಾಗಿ ಕಲಬರುಗಿ ಜಿಲ್ಲೆಯಲ್ಲಿ ಒಟ್ಟು ಶೇಕಡಾ 25.50ರಷ್ಟು ಕುಟುಂಬಗಳು ಶೌಚಾಲಯದ ಸೌಲಭ್ಯವನ್ನು ಹೊಂದಿವೆ ಮತ್ತು ಬಾಕಿ ಉಳಿದ ಶೇಕಡಾ 74.50ರಷ್ಟು ಕುಟುಂಬಗಳು ಯಾವುದೇ ರೀತಿಯ ಶೌಚಾಲಯದ ಸೌಲಭ್ಯವನ್ನು ಹೊಂದಿಲ್ಲ. ಶೌಚಾಲಯದ ಸೌಲಭ್ಯವನ್ನು ಹೊಂದಿರದೇ ಇರುವ ಕುಟುಂಬಗಳಲ್ಲಿ ಶೇಕಡಾ 5.50ರಷ್ಟು ಸರಕಾರದಿಂದ ಕಟ್ಟಿಸಿದ ಸಾರ್ವಜನಿಕ ವ್ಯವಸ್ಥೆಯ ಮೇಲೆ ಅವಲಂಬಿಸಿದ್ದರೆ ಉಳಿದ ಶೇಕಡಾ 69ರಷ್ಟು ಕುಟುಂಬಗಳು ಬಯಲು ಪ್ರದೇಶಗಳಲ್ಲಿ ದಿನನಿತ್ಯದ ಕಾರ್ಯಗಳನ್ನು ಮುಗಿಸುತ್ತಾರೆ. ಇದೇ ಮಾಹಿತಿಯನ್ನು ನಗರ ಮತ್ತು ಗ್ರಾಮೀಣ ಪ್ರದೇಶಕ್ಕನುಗುಣವಾಗಿ ನೋಡಿದರೆ ಪರಿಸ್ಥಿತಿ ಇನ್ನೂ ಶೋಚನಿಯವಾಗುತ್ತದೆ. ಕೇವಲ ಶೇಕಡಾ 4.50ರಷ್ಟು ಜಿಲ್ಲೆಯ ಗ್ರಾಮೀಣ ಕುಟುಂಬಗಳಿಗೆ ಶೌಚಾಲಯದ ವ್ಯವಸ್ಥೆ ಇದೆ. ಶೇಕಡಾ 95.50ರಷ್ಟು ಕುಟುಂಬಗಳಿಗೆ ಯಾವುದೇ ರೀತಿಯ ಶೌಚಾಲಯದ ವ್ಯವಸ್ಥೆ ಇಲ್ಲದೆ ಇರುವುದು ಕೋಷ್ಟಕದಿಂದ ತಿಳಿದು ಬರುತ್ತದೆ. ಇದರಲ್ಲಿ ಶೇಕಡಾ 90ಕ್ಕಿಂತ ಹೆಚ್ಚಿನ ಪ್ರಮಾಣದ ಕುಟುಂಬಗಳು ಬಯಲನ್ನೇ ತಮ್ಮ ಶೌಚಾಲಯದ ವ್ಯವಸ್ಥೆಯನ್ನಾಗಿ ಮಾಡಿಕೊಂಡಿದ್ದಾರೆ. ಬಾಕಿ ಉಳಿದ ಶೇಕಡಾ 5.30ರಷ್ಟು ಕುಟುಂಬಗಳು ಮಾತ್ರ ಗಾಮೀಣ ಪ್ರದೇಶದಲ್ಲಿ ಲಭ್ಯವಿರುವ ಸಮುದಾಯ ಶೌಚಾಲಯುಗಳನ್ನು ಉಪಯೋಗಿರುತ್ತಿರುವದು ಕಂಡುಬರುತ್ತದೆ. ಆದರೆ ಜಿಲ್ಲೆಯ ನಗರ ಪ್ರದೇಶದಲ್ಲಿನ ಪರಿಸ್ಥಿತಿ ಸ್ವಲ್ಪ ಭಿನ್ನವಾಗಿದೆ. ನಗರದಲ್ಲಿನ ಕುಟುಂಬಗಳ ಬಗ್ಗೆ ಹೇಳುವುದಾದರೆ ಶೇಕಡಾ 68.20ರಷ್ಟು ಕುಟುಂಬಗಳು ಶೌಚಾಲಯದ ವ್ಯವಸ್ಥೆಯನ್ನು ಹೊಂದಿವೆ ಆದರೂ ಕೂಡ ಇಲ್ಲಿ ಶೇಕಡಾ 31ಕ್ಕಿಂತ ಹೆಚ್ಚಿನ ಕುಟುಂಬಗಳಿಗೆ ಇನ್ನೂ ಶೌಚಾಲಯದ ಸೌಲಭ್ಯವಿಲ್ಲದೆ ಇರುವುದು ಕೋಷ್ಟಕದಿಂದ ತಿಳಿದು ಬರುತ್ತದೆ. ಶೇಕಡಾ 25ಕ್ಕಿಂತ ಹೆಚ್ಚಿನ ಪ್ರಮಾಣದ ನಗರ ಪ್ರದೇಶದಲ್ಲಿನ ಕುಟುಂಬಗಳು ಸಹ ನಗರ ಪ್ರದೇಶಗಳಲ್ಲಿರುವ ಖಾಲಿ ಜಾಗವನ್ನೇ ಅವಲಂಬಿಸಿರುವದು ಕೋಷ್ಟಕದಿಂದ ತಿಳಿದು ಬರುತ್ತದೆ. ಇನ್ನು ಅಧ್ಯಯನಕ್ಕೆ ಆಯ್ಕೆಯಾದ ತಾಲೂಕ ಸೇಡಂದಲ್ಲಿ ಶೇಕಡಾ 14ರಷ್ಟು ಕುಟುಂಬಗಳು ಶೌಚಾಲಯದ ಸೌಲಭ್ಯವನ್ನು ಹೊಂದಿವೆ. ಉಳಿದ ಶೇಕಡಾ 86ರಷ್ಟು ಕುಟುಂಬಗಳು ಶೌಚಾಲಯದ ಸೌಲಭ್ಯದಿಂದ ವಂಚಿತಗೊಂಡಿವೆ. ಇನ್ನು ಶೇಕಡಾ 79ರಷ್ಟು ಸೇಡಂ ತಾಲೂಕಿನಲ್ಲಿರುವ ಒಟ್ಟು ಕುಟುಂಬಗಳಿಗೆ ಯಾವುದೇ ರೀತಿಯ ಸೌಲಭ್ಯವಿಲ್ಲದೇ ಇರುವದು ಕಂಡು ಬರುತ್ತದೆ. ಕೇವಲ ಶೇಕಡಾ 6.90ರಷ್ಟು ಕುಟುಂಬಗಳು ಸರಕಾರದಿಂದ ನಿರ್ಮಿಸಲ್ಪಟ್ಟ ಸಮುದಾಯದ ಶೌಚಾಲಯದ ಮೇಲೆ ಅವಲಂಬಿತರಾಗಿರುವದು ತಿಳಿದುಬರುತ್ತದೆ.

ತಾಲೂಕಿನ ನಗರ ಮತ್ತು ಗ್ರಾಮೀಣ ಪ್ರದೇಶಾನುಸಾರವಾಗಿ ನೋಡುವುದಾದರೆ ಇಲ್ಲಿಯೂ ಸಹ ಜಿಲ್ಲೆಯಲ್ಲಿನ ಅಂಶದಂತೆ ಕೇವಲ ಶೇಕಡಾ 6.10ರಷ್ಟು ಕುಟುಂಬಗಳಿಗೆ ಶೌಚಾಲಯದ ವ್ಯವಸ್ಥೆ ಇದೆ ಮತ್ತು ಶೇಕಡಾ 93.90ರಷ್ಟು ಕುಟುಂಬಗಳಿಗೆ ಯಾವುದೇ ರೀತಿಯ ವ್ಯವಸ್ಥೆ ಇಲ್ಲ. ಇದರಲ್ಲಿ ಶೇಕಡಾ 86.10ರಷ್ಟು ಕುಟುಂಬಗಳು ಹೆಚ್ಚಾಗಿ ಹೊರಗಿನ ಪ್ರದೇಶಗಳಾದ ನದಿ, ಹಳ್ಳ ಮತ್ತು ಗ್ರಾಮಗಳ ಸುತ್ತಲೂ ಇರುವ ಹೊಲ ಗದ್ದೆಗಳ ಮೇಲೆ ಹೆಚ್ಚಾಗಿ ಅವಲಂಬಿತರಾಗಿದ್ದಾರೆ. ಇನ್ನು ನಗರ ಪ್ರದೇಶದಲ್ಲಿ ಪರಿಸ್ಥಿತಿ ಕೊಂಚ ಭಿನ್ನವಾಗಿರುವುದು ಕಂಡು ಬರುತ್ತದೆ. ಇಲ್ಲಿ ಶೇಕಡಾ 43.30ರಷ್ಟು ಕುಟುಂಬಗಳು ಶೌಚಾಲಯದ ವ್ಯವಸ್ಥೆಯನ್ನು ಹೊಂದಿವೆ ಮತ್ತು ಶೇಕಡಾ 56.70ರಷ್ಟು ಕುಟುಂಬಗಳು ಯಾವುದೇ ರೀತಿಯ ಸೌಲಭ್ಯಗಳು ಇಲ್ಲವೆಂದು ಮತ್ತು ಶೇಕಡಾ 53ರಷ್ಟು ಕುಟುಂಬಗಳು ನಗರ ಪ್ರದೇಶದಲ್ಲಿನ ಬಯಲಿನ ಮೇಲೆ ಹೆಚ್ಚಾಗಿ ಅವಲಂಬಿತವಾಗಿವೆ (ಭಾರತೀಯ ಜನಗಣತಿ, 2011).

**ಕೋಷ್ಟಕ 2.4**

**ಜಿಲ್ಲೆಗಳಲ್ಲಿನ ಶೇಕಡಾವಾರು ಕುಟುಂಬಗಳು ಹೊಂದಿರುವ ಶೌಚಾಲಯದ ಮಾಹಿತಿ**

| ಜಿಲ್ಲೆ/ತಾಲೂಕು | ಗ್ರಾಮೀಣ/ ನಗರ ಪ್ರದೇಶ | ಶೌಚಾಲಯದ ಸೌಲಭ್ಯವನ್ನು ಹೊಂದಿರುವ ಕುಟುಂಬಗಳು | ಶೌಚಾಲಯದ ಸೌಲಭ್ಯವನ್ನು ಹೊಂದಿರದ ಕುಟುಂಬಗಳು | ಪರ್ಯಾಯ ವ್ಯವಸ್ಥೆ | |
|---|---|---|---|---|---|
| | | | | ಸಾರ್ವಜನಿಕ ಶೌಚಾಲಯ | ಬಯಲು ಪ್ರದೇಶ |
| ಧಾರವಾಡ ಜಿಲ್ಲೆ | ಒಟ್ಟು | 57.0 | 43 | 3.5 | 39.5 |
| | ಗ್ರಾಮೀಣ | 23.1 | 76.9 | 1.5 | 75.4 |
| | ನಗರ | 82.0 | 18.0 | 5.0 | 13.0 |
| ಧಾರವಾಡ ತಾಲೂಕು | ಒಟ್ಟು | 30.1 | 69.9 | 2.3 | 67.6 |
| | ಗ್ರಾಮೀಣ | 26.4 | 73.6 | 2.2 | 71.4 |
| | ನಗರ | 77.0 | 23.0 | 4.5 | 18.5 |
| ಕಲಬುರಗಿ ಜಿಲ್ಲೆ | ಒಟ್ಟು | 25.5 | 74.5 | 5.5 | 69.0 |
| | ಗ್ರಾಮೀಣ | 4.5 | 95.5 | 5.3 | 90.3 |
| | ನಗರ | 68.2 | 31.8 | 5.9 | 25.9 |
| ಸೇಡಂ ತಾಲೂಕು | ಒಟ್ಟು | 14.0 | 86.0 | 6.9 | 79.0 |
| | ಗ್ರಾಮೀಣ | 6.1 | 93.9 | 7.8 | 86.1 |
| | ನಗರ | 43.3 | 56.7 | 3.8 | 53.0 |

ಮಾಹಿತಿಯ ಮೂಲ: 2011ರ ಭಾರತೀಯ ಜನಗಣತಿಯ ಅಂತರ್ಜಾಲತಾಣ www. censusindia.org ದಿಂದ ದತ್ತಾಂಶಗಳನ್ನು ಪಡೆಯಲಾಗಿದೆ.

ಧಾರವಾಡ ಜಿಲ್ಲೆಯಲ್ಲಿ ಶೌಚಾಲಯದ ಪರಿಸ್ಥಿತಿಯನ್ನು ನೋಡುವುದಾದರೆ ಒಟ್ಟಾರೆಯಾಗಿ ಶೇಕಡಾ 57ರಷ್ಟು ಕುಟುಂಬಗಳು ಶೌಚಾಲಯದ ವ್ಯವಸ್ಥೆಯನ್ನು ಹೊಂದಿರುವದು ತಿಳಿದುಬರುತ್ತದೆ. ಇದರಲ್ಲಿ ಶೇಕಡಾ 43ರಷ್ಟು ಕುಟುಂಬಗಳಿಗೆ ಮಾತ್ರ ಯಾವುದೇ ರೀತಿಯ ಶೌಚಾಲಯದ ವ್ಯವಸ್ಥೆ ಇಲ್ಲ. ಶೇಕಡಾ 39.50ರಷ್ಟು ಕುಟುಂಬಗಳು ತಮ್ಮ ಕುಟುಂಬಗಳ ಸದಸ್ಯರು ಮಲ-

ಮೂತ್ರಗಳ ವಿಸರ್ಜನೆಯನ್ನು ಮಾಡಲು ಗ್ರಾಮ/ನಗರ ಪ್ರದೇಶದ ಸುತ್ತಲೂ ಇರುವ ಬಯಲಿನ ಮೇಲೆ ಹೆಚ್ಚಾಗಿ ಅವಲಂಬಿತರಾಗಿರುವದು ಕೋಷ್ಟಕದಿಂದ ತಿಳಿದು ಬರುತ್ತದೆ. ಕೇವಲ ಶೇಕಡಾ 3.50ರಷ್ಟು ಕುಟುಂಬಗಳು ಮಾತ್ರ ಸರಕಾರ ಅಥವಾ ಇತರೆ ಸಂಘ ಸಂಸ್ಥೆಗಳಿಂದ ನಿರ್ಮಿಸಿದ ಸಮುದಾಯ ಶೌಚಾಲಯವನ್ನು ಬಳಸುತ್ತಿದ್ದಾರೆ ಎಂದು 2011ರ ಜನಗಣತಿಯ ಅಂಕಿ ಅಂಶಗಳಿಂದ ತಿಳಿದುಬರುತ್ತದೆ. ಇದನ್ನೇ ನಗರ ಮತ್ತು ಗ್ರಾಮೀಣ ಪ್ರದೇಶಾನುಸಾರವಾಗಿ ವಿಶ್ಲೇಷಿಸಿದರೆ ಶೇಕಡಾವಾರು ಮಾಹಿತಿಯಲ್ಲಿ ಅಲ್ಪ-ಸ್ವಲ್ಪ ಬದಲಾವಣೆಯಾಗ ಬಹುದು. ಶೇಕಡಾ 23.10ರಷ್ಟು ಗ್ರಾಮೀಣ ಕುಟುಂಬಗಳು ಮಾತ್ರ ಶೌಚಾಲಯದ ವ್ಯವಸ್ಥೆಯನ್ನು ಹೊಂದಿವೆ. ಬಾಕಿ ಉಳಿದ ಶೇಕಡಾ 76.90ರಷ್ಟು ಕುಟುಂಬಗಳಿಗೆ ಯಾವುದೇ ರೀತಿಯ ಶೌಚಾಲಯದ ವ್ಯವಸ್ಥೆ ಇಲ್ಲ. ಇನ್ನು ಶೇಕಡಾ 75.40ರಷ್ಟು ಕುಟುಂಬಗಳು ಬಯಲನ್ನೇ ಅವಲಂಬಿಸಿರವುದು ಕಂಡು ಬರುತ್ತದೆ. ಕೇವಲ ಶೇಕಡಾ 1.50ರಷ್ಟು ಕುಟುಂಬಗಳು ಮಾತ್ರ ಸಾರ್ವಜನಿಕ ಶೌಚಾಲಯದ ವ್ಯವಸ್ಥೆಯ ಮೇಲೆ ಅವಲಂಬಿತರಾಗಿರುವುದು ಕೋಷ್ಟಕದಿಂದ ತಿಳಿದುಬರುತ್ತದೆ (ಭಾರತೀಯ ಜನಗಣತಿ 2011).

ಆದರೆ ಈ ಪರಿಸ್ಥಿತಿಯು ನಗರ ಪ್ರದೇಶದಲ್ಲಿ ಗ್ರಾಮೀಣ ಪ್ರದೇಶಕ್ಕಿಂತ ವಿರುದ್ಧವಾಗಿದೆ. ಧಾರವಾಡ ಜಿಲ್ಲೆಯ ನಗರ ಪ್ರದೇಶದಲ್ಲಿನ ಶೇಕಡಾ 82ರಷ್ಟು ಕುಟುಂಬಗಳು ಶೌಚಾಲಯದ ವ್ಯವಸ್ಥೆಯನ್ನು ಹೊಂದಿವೆ. ಕೇವಲ ಶೇಕಡಾ 18ರಷ್ಟು ಕುಟುಂಬಗಳಿಗೆ ಯಾವುದೇ ರೀತಿಯ ಶೌಚಾಲಯದ ವ್ಯವಸ್ಥೆ ಇಲ್ಲ. ಇನ್ನು ಶೇಕಡಾ 13ರಷ್ಟು ಕುಟುಂಬಗಳು ನಗರ ಪ್ರದೇಶದಲ್ಲಿನ ಬಯಲಿನ ಮೇಲೆ ಅವಲಂಬಿತವಾಗಿವೆ ಎಂದು ಗೊತ್ತಾಗುತ್ತದೆ. ಧಾರವಾಡ ಜಿಲ್ಲೆಯ ಧಾರವಾಡ ತಾಲೂಕಿನಲ್ಲಿ ಶೇಕಡಾ 30.10ರಷ್ಟು ಕುಟುಂಬಗಳು ಶೌಚಾಲಯದ ಸೌಲಭ್ಯವನ್ನು ಹೊಂದಿವೆ ಉಳಿದ ಶೇಕಡಾ 69.90ರಷ್ಟು ಕುಟುಂಬಗಳು ಶೌಚಾಲಯದ ಸೌಲಭ್ಯದಿಂದ ವಂಚಿತಗೊಂಡಿವೆ. ಇನ್ನು ಶೇಕಡಾ 67.90ರಷ್ಟು ಧಾರವಾಡ ತಾಲೂಕಿನಲ್ಲಿರುವ ಒಟ್ಟು ಕುಟುಂಬಗಳಿಗೆ ಯಾವುದೇ ರೀತಿಯ ಸೌಲಭ್ಯವಿಲ್ಲದೇ ಇರುವದು ಕಂಡು ಬರುತ್ತದೆ. ಕೇವಲ ಶೇಕಡಾ 2.30ರಷ್ಟು ಕುಟುಂಬಗಳು ಸರಕಾರದಿಂದ ನಿರ್ಮಿಸಲ್ಪಟ್ಟ ಸಮುದಾಯದ ಶೌಚಾಲಯದ ಮೇಲೆ ಅವಲಂಬಿತರಾಗಿರುವದು ತಿಳಿದುಬರುತ್ತದೆ. ತಾಲೂಕಿನ ನಗರ ಮತ್ತು ಗ್ರಾಮೀಣ ಪ್ರದೇಶಾನುಸಾರವಾಗಿ ನೋಡುವುದಾದರೆ ಇಲ್ಲಿಯೂ ಸಹ ಜಿಲ್ಲೆಯಲ್ಲಿನ ಅಂಶದಂತೆ ಕೇವಲ ಶೇಕಡಾ 26.40ರಷ್ಟು ಕುಟುಂಬಗಳಿಗೆ ಶೌಚಾಲಯದ ವ್ಯವಸ್ಥೆ ಇದೆ ಮತ್ತು ಶೇಕಡಾ 93.90ರಷ್ಟು ಕುಟುಂಬಗಳಿಗೆ ಯಾವುದೇ ರೀತಿಯ ಶೌಚಾಲಯದ ವ್ಯವಸ್ಥೆ ಇಲ್ಲ. ಇದರಲ್ಲಿ ಶೇಕಡಾ 73.60ರಷ್ಟು ಕುಟುಂಬಗಳು ಹೆಚ್ಚಾಗಿ ಹೊರಗಿನ ಬಯಲು ಪ್ರದೇಶಗಳಾದ ನದಿ, ಹಳ್ಳ ಮತ್ತು ಗ್ರಾಮಗಳ ಸುತ್ತಲೂ ಇರುವ ಹೊಲ ಗದ್ದೆಗಳ ಮೇಲೆ ಹೆಚ್ಚಾಗಿ ಅವಲಂಬಿತರಾಗಿದ್ದಾರೆ. ಇನ್ನು ನಗರ ಪ್ರದೇಶದಲ್ಲಿ ಪರಿಸ್ಥಿತಿ ಕೊಂಚ ಭಿನ್ನವಾಗಿರುವದು ಕಂಡುಬರುತ್ತದೆ. ಇಲ್ಲಿ ಶೇಕಡಾ 77ರಷ್ಟು ಕುಟುಂಬಗಳು ಶೌಚಾಲಯದ

ವ್ಯವಸ್ಥೆಯನ್ನು ಹೊಂದಿವೆ ಮತ್ತು ಶೇಕಡಾ 23ರಷ್ಟು ಕುಟುಂಬಗಳು ಯಾವುದೇ ರೀತಿಯ ಸೌಲಭ್ಯಗಳು ಇಲ್ಲವೆಂದು ಮತ್ತು ಶೇಕಡಾ 18.50ರಷ್ಟು ಕುಟುಂಬಗಳು ನಗರ ಪ್ರದೇಶದಲ್ಲಿನ ಬಯಲಿನ ಮೇಲೆ ಹೆಚ್ಚಾಗಿ ಅವಲಂಬಿತವಾಗಿರುವದು ಜನಗಣತಿಯ 2011ರ ಮಾಹಿತಿಯಿಂದ ತಿಳಿದುಬರುತ್ತದೆ (ಭಾರತೀಯ ಜನಗಣತಿ 2011).

ಕೋಷ್ಟಕ 2.5ರಲ್ಲಿ ತಿಳಿಸಿದಂತೆ ಅಧ್ಯಯನ ಕೈಗೊಂಡ ಸಂಶೋಧನೆಗೆ ಆಯ್ಕೆ ಮಾಡಿಕೊಂಡ ಜಿಲ್ಲೆ ಮತ್ತು ತಾಲೂಕಿನ ಗ್ರಾಮೀಣ ಮತ್ತು ನಗರ ಪ್ರದೇಶದಲ್ಲಿನ ಕುಟುಂಬಗಳು ಕುಡಿಯುವ ನೀರಿಗಾಗಿ ಬಳಸುವ ಪ್ರಮುಖ ಮೂಲದ ಮಾಹಿತಿಯನ್ನು 2011ರಲ್ಲಿ ನಡೆದ ಜನಗಣತಿಯ ಮಾಹಿತಿಯಲ್ಲಿ ಕಂಡಂತೆ. ಧಾರವಾಡ ಜಿಲ್ಲೆಯಲ್ಲಿ ಒಟ್ಟಾರೆಯಾಗಿ ಶೇಕಡಾ 59.6ರಷ್ಟು ಕಟುಂಬಗಳಿಗೆ ಕುಡಿಯಲು ಶುದ್ಧೀಕರಿಸಿದ ನಳದಿಂದ ಕುಡಿಯುವ ನೀರು ಸಿಗುತ್ತಿದ್ದರೆ ಉಳಿದ ಶೇಕಡಾ 40ರಷ್ಟು ಕುಟುಂಬಗಳು ಇತರೆ ಕುಡಿಯುವ ನೀರಿನ ಮೂಲಗಳಾದ ಶುದ್ಧೀಕರಿಸದೆ ನಳದಿಂದ ಪೂರೈಕೆ, ತೆರೆದ / ಮುಚ್ಚದೆ ಇರುವ ಬಾವಿಯಿಂದ, ಹ್ಯಾಂಡ್ ಪಂಪ್, ಟ್ಯೂಬ್ವೆಲ್/ ಬೋರ್ವೆಲ್, ನದಿ/ ಕಾಲುವೆ ಮತ್ತು ಟ್ಯಾಂಕ್/ ಹೊಂಡಗಳ ಮೇಲೆ ಹೆಚ್ಚಾಗಿ ಅವಲಂಬಿತವಾಗಿವೆ. ಇದೇ ಮಾಹಿತಿಯನ್ನು ಜಿಲ್ಲೆಯ ಗ್ರಾಮೀಣ ಮತ್ತು ನಗರ ಪ್ರದೇಶದಲ್ಲಿನ ಕುಟುಂಬಗಳ ಬಗ್ಗೆ ನೋಡುವುದಾದರೆ ಗ್ರಾಮೀಣದಲ್ಲಿರುವ ಶೇಕಡಾ 26.4ರಷ್ಟು ಕುಟುಂಬಗಳಿಗೆ ಮತ್ತು ನಗರದಲ್ಲಿನ

**ಕೋಷ್ಟಕ 2.5**

**ಜಿಲ್ಲೆಗಳಲ್ಲಿನ ಶೇಕಡಾವಾರು ಕುಟುಂಬಗಳು ಕುಡಿಯುವ ನೀರಿನ ಮೂಲದ ಮಾಹಿತಿ**

| ಜಿಲ್ಲೆ/ ತಾಲೂಕು | ಗ್ರಾಮೀಣ/ ನಗರ ಪ್ರದೇಶ | ಕುಡಿಯುವ ನೀರಿನ ಪ್ರಮುಖ ಮೂಲ | | | | | | | |
|---|---|---|---|---|---|---|---|---|---|
| | | ಶುದ್ಧೀಕರಿಸಿ ನಳದಿಂದ ಪೂರೈಕೆ | ಶುದ್ಧೀಕರಿಸದೆ ನಳದಿಂದ ಪೂರೈಕೆ | ತೆರೆದ / ಮುಚ್ಚದೆ ಇರುವ ಬಾವಿಯಿಂದ | ಹ್ಯಾಂಡ್ ಪಂಪ್ | ಟ್ಯೂಬ್ವೆಲ್/ ಬೋರ್ವೆಲ್ | ನದಿ/ ಕಾಲುವೆ | ಟ್ಯಾಂಕ್/ ಹೊಂಡ | ಇತರೆ ಮೂಲ |
| ಧಾರವಾಡ ಜಿಲ್ಲೆ | ಒಟ್ಟು | 59.6 | 21.1 | 0.6 | 1.8 | 9.1 | 0.7 | 6.0 | 0.7 |
| | ಗ್ರಾಮೀಣ | 26.4 | 41.7 | 1.2 | 2.9 | 13.1 | 0.1 | 13.9 | 0.5 |
| | ನಗರ | 84.1 | 5.9 | 0.3 | 1.0 | 6.2 | 1.2 | 0.2 | 0.9 |
| ಧಾರವಾಡ ತಾಲೂಕು | ಒಟ್ಟು | 30.8 | 41.9 | 0.5 | 6.6 | 19.0 | 0.2 | 0.0 | 0.5 |
| | ಗ್ರಾಮೀಣ | 31.2 | 40.1 | 0.6 | 6.9 | 20.2 | 0.2 | 0.0 | 0.4 |
| | ನಗರ | 26.2 | 64.5 | 0.1 | 3.5 | 4.0 | 0.0 | 0.0 | 1.4 |
| ಕಲಬುರಗಿ ಜಿಲ್ಲೆ | ಒಟ್ಟು | 35.7 | 21.1 | 10.0 | 15.1 | 14.7 | 1.4 | 0.1 | 0.8 |
| | ಗ್ರಾಮೀಣ | 22.5 | 24 | 14.4 | 20.1 | 15.2 | 1.9 | 0.1 | 0.7 |
| | ನಗರ | 62.6 | 15.2 | 1.1 | 4.9 | 13.7 | 0.6 | 0.1 | 1.2 |
| ಸೇಡಂ ತಾಲೂಕು | ಒಟ್ಟು | 27.6 | 31.2 | 6.2 | 18.6 | 14.2 | 0.8 | 0.2 | 0.3 |
| | ಗ್ರಾಮೀಣ | 21.6 | 34.3 | 7.5 | 21.3 | 12.9 | 1.0 | 0.0 | 0.3 |
| | ನಗರ | 50.0 | 19.7 | 1.3 | 8.6 | 18.8 | 0.0 | 1.0 | 0.3 |

ಮಾಹಿತಿಯ ಮೂಲ: 2011ರ ಭಾರತೀಯ ಜನಗಣತಿಯ ಅಂತರ್ಜಾಲತಾಣ www. censusindia.org ದಿಂದ ದತ್ತಾಂಶಗಳನ್ನು ಪಡೆಯಲಾಗಿದೆ.

ಶೇಕಡಾ 84.1ರಷ್ಟು ಕುಟುಂಬಗಳಿಗೆ ಶುದ್ಧೀಕರಿಸಿದ ಮೂಲದಿಂದ ಕುಡಿಯುವ ನೀರಿನ ಸರಬರಾಜು ಆಗುತ್ತಿರುವದು ತಿಳಿದುಬರುತ್ತದೆ. ಆದ್ದರಿಂದ ಗ್ರಾಮೀಣ ಭಾಗದಲ್ಲಿನ ಶೇಕಡಾ 41.7ರಷ್ಟು ಕುಟುಂಬಗಳಿಗೆ ನೀರನ್ನು ಶುದ್ಧೀಕರಿಸದೆ ಮತ್ತು ಶೇಕಡಾ 13.9ರಷ್ಟು ಕುಟುಂಬಗಳು ಟ್ಯಾಂಕ್ ಮತ್ತು ಹೊಂಡದಿಂದ ತಮ್ಮ ಕುಟುಂಬಗಳಿಗೆ ಬೇಕಾಗುವ ನೀರನ್ನು ಪಡೆಯುತ್ತಿರುವದು ಕಂಡು ಬರುತ್ತದೆ (ಭಾರತೀಯ ಜನಗಣತಿ 2011).

ಕಲಬುರಗಿ ಜಿಲ್ಲೆಯಲ್ಲಿ ಒಟ್ಟಾರೆಯಾಗಿ ಶೇಕಡಾ 59.6ರಷ್ಟು ಕಟುಂಬಗಳಿಗೆ ಕುಡಿಯಲು ಶುದ್ಧೀಕರಿಸಿದ ನಳದಿಂದ ಕುಡಿಯುವ ನೀರು ಸಿಗುತ್ತಿದ್ದರೆ ಉಳಿದ ಶೇಕಡಾ 40ರಷ್ಟು ಕುಟುಂಬಗಳು ಇತರೆ ಕುಡಿಯುವ ನೀರಿನ ಮೂಲಗಳಾದ ಶುದ್ಧೀಕರಿಸದೆ ನಳದಿಂದ ಪೂರೈಕೆ, ತೆರೆದ / ಮುಚ್ಚದೆ ಇರುವ ಬಾವಿಯಿಂದ, ಹ್ಯಾಂಡ್ ಪಂಪ್, ಟ್ಯೂಬ್ವೆಲ್/ಬೋರ್ವೆಲ್, ನದಿ/ ಕಾಲುವೆ ಮತ್ತು ಟ್ಯಾಂಕ್/ ಹೊಂಡಗಳ ಮೇಲೆ ಹೆಚ್ಚಾಗಿ ಅವಲಂಬಿತವಾಗಿವೆ. ಇದೇ ಮಾಹಿತಿಯನ್ನು ಜಿಲ್ಲೆಯ ಗ್ರಾಮೀಣ ಮತ್ತು ನಗರ ಪ್ರದೇಶದಲ್ಲಿನ ಕುಟುಂಬಗಳ ಬಗ್ಗೆ ನೋಡುವುದಾದರೆ ಗ್ರಾಮೀಣದಲ್ಲಿರುವ ಶೇಕಡಾ 26.4ರಷ್ಟು ಕುಟುಂಬಗಳಿಗೆ ಮತ್ತು ನಗರದಲ್ಲಿನ ಶೇಕಡಾ 84.1ರಷ್ಟು ಕುಟುಂಬಗಳಿಗೆ ಶುದ್ಧೀಕರಿಸಿದ ಮೂಲದಿಂದ ಕುಡಿಯುವ ನೀರಿನ ಸರಬರಾಜು ಆಗುತ್ತಿರುವುದು ತಿಳಿದುಬರುತ್ತದೆ. ಆದ್ದರಿಂದ ಗ್ರಾಮೀಣ ಭಾಗದಲ್ಲಿನ ಶೇಕಡಾ 41.7ರಷ್ಟು ಕುಟುಂಬಗಳಿಗೆ ನೀರನ್ನು ಶುದ್ದೀಕರಿಸದೆ ಮತ್ತು ಶೇಕಡಾ 13.9ರಷ್ಟು ಕುಟುಂಬಗಳು ಟ್ಯಾಂಕ್ ಮತ್ತು ಹೊಂಡದಿಂದ ತಮ್ಮ ಕುಟುಂಬಗಳಿಗೆ ಬೇಕಾಗುವ ನೀರನ್ನು ಪಡೆಯುತ್ತಿರುವದು ಕಂಡು ಬರುತ್ತದೆ (ಭಾರತೀಯ ಜನಗಣತಿ 2011).

**ಕೊಂಕನಳ್ಳಿ ಗ್ರಾಮದ ಪರಿಚಯ**

ಕಲಬುರಗಿ ಜಿಲ್ಲೆಯಲ್ಲಿ ಅಧ್ಯಯನಕ್ಕೆ ಆಯ್ಕೆ ಮಾಡಿಕೊಂಡ ಗ್ರಾಮವು ಜಿಲ್ಲಾ ಕೇಂದ್ರದಿಂದ 45 ಕಿ.ಮೀ.ದೂರದಲ್ಲಿ ರಾಜ್ಯ ಹೆದ್ದಾರಿಯಾದ ವಾಗ್ದಾರಿ-ರಿಬ್ಬನಪಲ್ಲಿ ಮೇಲೆ ಬರುತ್ತದೆ. ಇದು ಕಲುಬುರಗಿ ಜಿಲ್ಲೆಯ ಸೇಡಂ ತಾಲೂಕಿನಲ್ಲಿ ಬರುತ್ತದೆ. ಈ ಗ್ರಾಮವು ತಾಲೂಕ ಕೇಂದ್ರದಿಂದ 5 ಕಿ.ಮೀ. ದೂರದಲ್ಲಿದೆ. ಈ ಗ್ರಾಮವು ನೀಲಹಳ್ಳಿ ಗ್ರಾಮ ಪಂಚಾಯಿತಿಯ ಅಡಿಯಲ್ಲಿ ಬರುವ ಏಳು ಗ್ರಾಮಗಳ ಪೈಕಿ ಕೊಂಕನಳ್ಳಿ ಎಂಬ ಗ್ರಾಮವು ಒಂದಾಗಿದೆ. ಈಗಾಗಲೆ ಹೇಳಿರುವ ಹಾಗೆ ಈ ಗ್ರಾಮವು ಕರ್ನಾಟಕದ ಈಶಾನ್ಯ ಭಾಗದಲ್ಲಿದೆ. ಈ ಗ್ರಾಮದ ಆಯ್ಕೆಯಲ್ಲಿ ಲಾಟರಿ ವಿಧಾನವನ್ನು ಅಳವಡಿಸಿಕೊಳ್ಳಲಾಗಿದೆ. ಆದ್ದರಿಂದ ಈ ಒಂದು ಗ್ರಾಮದಲ್ಲಿ ಪೂರ್ಣಪ್ರಮಾಣದ ಕ್ಷೇತ್ರಕಾರ್ಯವನ್ನು ಕೈಗೊಳ್ಳಲಾಯಿತ್ತು. ಈ ಗ್ರಾಮ ಪಂಚಾಯಿತಿಯಲ್ಲಿರುವ ಒಟ್ಟು ಏಳು ಗ್ರಾಮಗಳಲ್ಲಿ ಕೊಂಕನಳ್ಳಿ ಎಂಬ ಗ್ರಾಮವನ್ನು ಪಂಚಾಯಿತಿಯ ಅಭಿವೃದ್ಧಿ ಅಧಿಕಾರಿ, ಗ್ರಾಮ ಪಂಚಾಯತಿಯ ಸದಸ್ಯರನ್ನು ಮತ್ತು ಗ್ರಾಮದ ಮುಂಖಡರನ್ನು ಭೇಟಿಯಾಗಿ ಸಂಶೋಧನೆಯ ಉದ್ದೇಶಗಳನ್ನು ತಿಳಿಸಿ ಅಧ್ಯಯನಕ್ಕೆ ಆಯ್ಕೆ ಮಾಡಿಕೊಳ್ಳಲಾಯಿತು.

ಈ ಗ್ರಾಮದವರ ಹೇಳಿಕೆ ಮತ್ತು ಇತಿಹಾಸಕಾರರ ಪ್ರಕಾರ ಈ ಊರು ಹಿಂದೆ ರಾಷ್ಟ್ರಕೂಟರ ಕಾಲದಲ್ಲಿ ಟಂಕಶಾಲೆಯಾಗಿತ್ತು ಎಂಬ ಪ್ರತೀತಿ ಇದೆ. ಗ್ರಾಮದ ಇತಿಹಾಸದ ಕುರಿತು ಗ್ರಾಮದ ಹಿರಿಯರಲ್ಲಿ ವಿಚಾರಿಸಿದಾಗ ಈ ಹಳ್ಳಿಯು ಹಿಂದೆ ರಾಷ್ಟ್ರಕೂಟರ ಕಾಲದಲ್ಲಿ ಅವರ ಟಂಕಶಾಲೆಯಾಗಿತ್ತು. ಟಂಕಶಾಲೆ ಎಂದರೆ 'ಖಜಾನೆ' ಎಂದು ತಿಳಿದುಬರುತ್ತದೆ. ಇದು ಇದ್ದರೂ ಇರಬಹುದು ಏಕೆಂದರೆ ಈ ಗ್ರಾಮವು ರಾಷ್ಟ್ರಕೂಟರ ರಾಜಧಾನಿಯಾಗಿದ್ದ ಮಾನ್ಯಖೇಟದಿಂದ ಕೇವಲ 10 ಕಿ.ಮೀ. ದೂರದಲ್ಲಿದೆ. ಈ ಗ್ರಾಮದಿಂದಲೇ ರಾಷ್ಟ್ರಕೂಟರ ಆರ್ಥಿಕ ವ್ಯವಹಾರವು ನಡೆಯುತ್ತಿತ್ತು ಎಂದು ಗ್ರಾಮದ ಹಿರಿಯರೊಬ್ಬರು ಹೇಳಿರುತ್ತಾರೆ. ಅಲ್ಲದೇ ಸೇಡಂ ನಗರದಲ್ಲಿನ ಸಾಹಿತಿಗಳಾದ ಶ್ರೀ ಗುರುಶಾಂತಯ್ಯ ಮಠಪತಿಯವರು ಹೇಳುವ ಪ್ರಕಾರ ರಾಷ್ಟ್ರಕೂಟ ರಾಜ್ಯದಲ್ಲಿ ಅವರ ರಾಜ್ಯಧಾನಿಯ ಹತ್ತಿರ ಇರುವ ಎಲ್ಲ ಗ್ರಾಮಗಳನ್ನು ಒಂದೊಂದು ಚಟುವಟಿಕೆಗಳಿಗಾಗಿ ಮೀಸಲಿರಿಸಿದ್ದರು ಎಂದು ನೆನಪಿಸಿಕೊಳ್ಳುತ್ತಾರೆ. ಅದೇ ರೀತಿಯಾಗಿ ಕೊಂಕನಳ್ಳಿಯು ರಾಷ್ಟ್ರಕೂಟರ ಮುಖ್ಯ ಖಜಾನೆಯ ಕೇಂದ್ರಸ್ಥಾನವಾಗಿ ಕಾರ್ಯನಿರ್ವಹಿಸುತ್ತಿತ್ತು ಎಂದು ಹೇಳಿದರು. ಆದ್ದರಿಂದ ಟಂಕಶಾಲೆ ಎಂದು ಕರೆಯಿಸಿಕೊಳ್ಳುತ್ತಿದ್ದ ಈ ಗ್ರಾಮವು ಕಾಲಾನುಕ್ರಮದಲ್ಲಿ ಇಂದು ಕೊಂಕನಳ್ಳಿಯಾಗಿರಬಹುದು ಎಂದು ಸ್ಥಳೀಯ ಕನ್ನಡ ಸಾಹಿತಿಗಳು ಹೇಳಿದ್ದಾರೆ.

ಈ ಗ್ರಾಮದ ಬಹುತೇಕ ಕುಟುಂಬಗಳು ಕೃಷಿ ಮತ್ತು ಕೃಷಿಗೆ ಸಂಬಂಧಿಸಿದ ಕಾರ್ಯಗಳಲ್ಲಿ ನಿರತರಾಗಿರುತ್ತಾರೆ. ಕೃಷಿ ಅಲ್ಲದೆ ಜಿಲ್ಲೆ ಮತ್ತು ಹತ್ತಿರದ ತಾಲೂಕ ಕೇಂದ್ರಗಳಲ್ಲಿನ ಕೈಗಾರಿಕೆಗಳಲ್ಲಿ ದಿನಗೂಲಿ ಮತ್ತು ಖಾಯಂ ನೌಕರರಾಗಿ ಸಹ ಕೆಲವೊಂದು ಉದ್ದಿಮೆಗಳಲ್ಲಿ ಕಾರ್ಯ ನಿರ್ವಹಿಸುತ್ತಾರೆ. ಈ ಗ್ರಾಮದಲ್ಲಿ ಒಟ್ಟು **393** ಪಡಿತರ ಚೀಟಿಗಳಲ್ಲಿ ಕಡುಬಡತನದ ಕುಟುಂಬಗಳು (ಎಎವೈ) **85,** ಬಡತನ ರೇಖೆಗಿಂತ ಮೇಲಿನ ಕುಟುಂಬಗಳು (ಎಪಿಎಲ್) **60** ಮತ್ತು **248** ಬಡತನ ರೇಖೆಗಿಂತ ಕೆಳಗಿನ (ಬಿಪಿಎಲ್) ಕುಟುಂಬಗಳಿವೆ. ಅಧ್ಯಯನಕ್ಕೆ ಆಯ್ಕೆ ಮಾಡಿಕೊಂಡಿರುವ ಗ್ರಾಮದಲ್ಲಿರುವ ಎಲ್ಲಾ ಕುಟುಂಬಗಳಿಗೆ ಪ್ರತಿ ತಿಂಗಳು ಆಹಾರ ಧಾನ್ಯಗಳು ಶ್ರೀ ದೇವಕಿ ಮಹಿಳಾ ಮಂಡಳದವತಿಯಿಂದ ವಿತರಿಸಲಾಗುತ್ತಿದೆ. ಈ ಮಹಿಳಾ ಮಂಡಳವು ಗ್ರಾಮದಲ್ಲಿ ಆರ್ಥಿಕವಾಗಿ ಪ್ರಬಲ ಜಾತಿಯಾದ ಲಿಂಗಾಯತ ಜಾತಿಗೆ ಸೇರಿದವರಾಗಿದ್ದಾರೆ. ಇವರು ಸ್ಥಳೀಯ ಶಾಸಕರಿಗೆ ಅತಿ ಹತ್ತಿರದ ವ್ಯಕ್ತಿಯಾಗಿದ್ದಾರೆ. ಇದು ಮಹಿಳಾ ಮಂಡಳಕ್ಕೆ ಹಂಚಿಕೆಯಾಗಿದ್ದರೂ ಸಹ ಸಂಪೂರ್ಣವಾಗಿ ಒಂದೇ ಕುಟುಂಬದ ಹಿಡಿತದಲ್ಲಿದೆ. ಮಹಿಳಾ ಮಂಡಳದ ಯಾವೊಬ್ಬ ಸದಸ್ಯರು ಕೂಡ ಈ ಒಂದು ನ್ಯಾಯ ಬೆಲೆಯ ಅಂಗಡಿಯಲ್ಲಿ ಇರುವುದಿಲ್ಲ. ಮಹಿಳಾ ಮಂಡಲದ ಎಲ್ಲಾ ಕೆಲಸ ಕಾರ್ಯಗಳನ್ನು ಕಾರ್ಯದರ್ಶಿಯ ಪತಿಯವರು ನೋಡಿಕೊಳ್ಳುತ್ತಾರೆ.

**ನಿಗದಿ ಗ್ರಾಮದ ಪರಿಚಯ**

ಈ ಗ್ರಾಮವು ಜಿಲ್ಲಾ ಕೇಂದ್ರ ಧಾರವಾಡದಿಂದ ಸುಮಾರು 15 ಕಿ.ಮೀ. ಅಂತರದಲ್ಲಿದೆ ಮತ್ತು ಈ ಗ್ರಾಮವು ಗ್ರಾಮ ಪಂಚಾಯತಿಯ ಕೇಂದ್ರ ಸ್ಥಾನವು ಆಗಿರುತ್ತದೆ. ಈ ಒಂದು ಕ್ಷೇತ್ರಕಾರ್ಯ ಮಾಡುವುದಕ್ಕಿಂತಲೂ ಮುಂಚೆ ಹಲವಾರು ಸಂದರ್ಭದಲ್ಲಿ ನಿಗದಿ ಗ್ರಾಮ ಪಂಚಾಯಿತಿಯ ಕಾರ್ಯದರ್ಶಿ ಮತ್ತು ಗ್ರಾಮದಲ್ಲಿರುವ ಪ್ರಾಥಮಿಕ ಕೃಷಿ ಪತ್ತಿನ ಸಹಕಾರಿ ಸಂಘದ ಕಾರ್ಯದರ್ಶಿಯನ್ನು ಭೇಟಿಯಾಗಿ ಗ್ರಾಮದಲ್ಲಿರುವ ಒಟ್ಟು ಬಡತನ ರೇಖೆಯ ಕೆಳಗಿರುವ ಕುಟುಂಬಗಳ ಪಟ್ಟಿಯನ್ನು ಪಡೆಯಲಾಗಿದೆ. ಈ ಗ್ರಾಮದಲ್ಲಿರುವ ಕಡುಬಡವರು, ಬಡವರು ಮತ್ತು ಬಡತನ ರೇಖೆಯ ಮೇಲಿರುವ ಕುಟುಂಬಗಳ ಪಟ್ಟಿಯು ಈ ಕೆಳಗಿನಂತಿದೆ ಮತ್ತು ಇದು ಜುಲೈ, 2013 ರವರೆಗೆ ಅನ್ವಯಿಸುವಂತೆ ಮಾತ್ರ. ಏಕೆಂದರೆ ಈ ಪಟ್ಟಿಯೂ ದಿನದಿಂದ ದಿನಕ್ಕೆ ಬದಲಾವಣೆಗೆ ಒಳಪಟ್ಟಿರುತ್ತದೆ ಎಂದು ನ್ಯಾಯ ಬೆಲೆ ಅಂಗಡಿಯ ಕಾರ್ಯದರ್ಶಿಯು ತಿಳಿಸಿರುತ್ತಾರೆ.

ಕೆಳಗಿನ ಕೋಷ್ಟಕದಲ್ಲಿ ಕೊಟ್ಟಿರುವಂತೆ ಅಧ್ಯಯನ ಕೈಗೊಂಡ ಗ್ರಾಮಗಳಲ್ಲಿನ ಒಟ್ಟು ಜನಸಂಖ್ಯೆ, 0–6 ವರ್ಷದ ಒಳಗಿರುವ ಮಕ್ಕಳು, ಪರಿಶಿಷ್ಟ ಜಾತಿ ಮತ್ತು ಪಂಗಡದ ಒಟ್ಟು ಜನಸಂಖ್ಯೆ, ಗ್ರಾಮಗಳಲ್ಲಿನ ಒಟ್ಟು ಪುರುಷ ಮತ್ತು ಮಹಿಳೆಯರಲ್ಲಿ ಎಷ್ಟು ಜನ ಅಕ್ಷರಸ್ಥರು, ಅನಕ್ಷರಸ್ಥರು, ಕೆಲಸಗಾರರು, ಮುಖ್ಯ ಕೆಲಸಗಾರರು, ಕೃಷಿ ಕೂಲಿಗಾರರು, ಗೃಹ ಕೈಗಾರಿಕೆಯಲ್ಲಿ ತೊಡಗಿರುವವರು ಮತ್ತು ಇತರೆ ಕೆಲಸ ಕಾರ್ಯಗಳಲ್ಲಿ ನಿರತರಾಗಿರುವವರ ಮಾಹಿತಿಯನ್ನು ಸ್ವಲ್ಪ ಕಾಲ ಮತ್ತು ದೀರ್ಘ ಕಾಲದವರೆಗೆ ಎಂದು 2011ರ ಜನಗಣತಿಯ ಮಾಹಿತಿಯನ್ನು ಬಳಸಿಕೊಂಡು ವಿಶ್ಲೇಷಿಸಲಾಗಿದೆ. ಮೊದಲನೆಯದಾಗಿ ಕಲಬುರಗಿಯ ಕೊಂಕನಳ್ಳಿ ಗ್ರಾಮದಲ್ಲಿ ಒಟ್ಟು 1004 ಜನರಿದ್ದು ಅವರಲ್ಲಿ 517 ಪುರುಷರು ಮತ್ತು 487 ಮಹಿಳೆಯರು ಇರುತ್ತಾರೆ. ಇವರಲ್ಲಿ 0–6 ವರ್ಷದ ಒಳಗಿನವರು ಒಟ್ಟು 127 ಇದ್ದು 74 ಗಂಡು ಮಕ್ಕಳ ಮತ್ತು 53 ಹೆಣ್ಣು ಮಕ್ಕಳು ಇರುತ್ತಾರೆ. ಒಟ್ಟು ಜನಸಂಖ್ಯೆಯಲ್ಲಿ 272 ಜನರು ಪರಿಶಿಷ್ಟ ಜಾತಿಗೆ ಸೇರಿದವರಾಗಿದ್ದು, ಇದರಲ್ಲಿ 145 ಪುರುಷರು ಮತ್ತು 127 ಸ್ತ್ರೀಯರು ಇರುವುದು ಕಂಡು ಬರುತ್ತದೆ. ಆದರೆ ಪರಿಶಿಷ್ಡ ಪಂಗಡಕ್ಕೆ ಸೇರಿದ ಯಾವುದೇ ಜನರು ಆಯ್ಕೆಯಾದ ಗ್ರಾಮದಲ್ಲಿ ಇಲ್ಲವೆಂದು 2011ರ ಜನಗಣತಿಯಿಂದ ತಿಳಿದುಬರುತ್ತದೆ. ಆದರೆ ಸಂಶೋಧಕರು ಕ್ಷೇತ್ರಕಾರ್ಯವನ್ನು ಮಾಡುವ ಸಮಯದಲ್ಲಿ ಕೆಲವೊಂದು ಕುಟುಂಬಗಳು ಪರಿಶಿಷ್ಟ ಪಂಗಡಕ್ಕೆ ಸೇರಿದ್ದೇವೆ ಎಂದು ಮಾಹಿತಿಯನ್ನು ಹಂಚಿಕೊಂಡಿರುತ್ತಾರೆ. ಇದರ ಕುರಿತು ಗ್ರಾಮಪಂಚಾಯತಿಯ ಸಿಬ್ಬಂದಿಯಲ್ಲಿ ವಿಚಾರಿಸಿದಾಗ 2011 ರಿಂದ ಇಲ್ಲಿಯವರಗೆ ಅನೇಕ ಕುಟುಂಬಗಳು ಬೇರೆ ಊರಿನಿಂದ ಬಂದು ನೆಲೆಸಿದ್ದಾವೆ ಎಂಬ ಕಾರಣವನ್ನು ಹೇಳಿರುತ್ತಾರೆ. ಇನ್ನು ಸಾಕ್ಷರತೆಯ ಬಗ್ಗೆ ಹೇಳುವುದಾದರೆ ಕೊಂಕನಳ್ಳಿ ಗ್ರಾಮದಲ್ಲಿನ ಒಟ್ಟು ಜನಸಂಖ್ಯೆಯಲ್ಲಿ 528 ಅಕ್ಷರಸ್ಥರಲ್ಲಿ

322 ಪುರುಷರು ಹಾಗು 206ರಷ್ಟು ಮಹಿಳೆಯರು ವಿದ್ಯಾವಂತರಾಗಿದ್ದಾರೆ. ಇನ್ನು ಅನಕ್ಷರಸ್ಥರ ಬಗ್ಗೆ ಹೇಳುವುದಾದರೆ ಒಟ್ಟಾರೆಯಾಗಿ 476 ಜನರಲ್ಲಿ 195 ಪುರುಷರು ಮತ್ತು 281 ಮಹಿಳೆಯರು ಅನಕ್ಷರಸ್ಥರಾಗಿರುವದು ತಿಳಿದುಬರುತ್ತದೆ (ಭಾರತೀಯ ಜನಗಣತಿ, 2011). ಇಲ್ಲಿ ಒಂದು ಪ್ರಮುಖವಾದ ಅಂಶವೇನೆಂದರೆ ಮಹಿಳೆಯರ ಸಾಕ್ಷರತೆಯ ಪ್ರಮಾಣ ಕಡಿಮೆ ಇರುವುದು ಕಂಡುಬರುತ್ತದೆ.

**ಆರ್ಥಿಕ ಚಟುವಟಿಕೆಗಳಲ್ಲಿ ಭಾಗವಹಿಸುವಿಕೆ**

ಕಲಬುರಗಿಯ ಕೊಂಕನಳ್ಳಿ ಗ್ರಾಮದಲ್ಲಿ ಒಟ್ಟು 480 ಜನರು ವಿವಿಧ ರೀತಿಯ ಕೆಲಸದಲ್ಲಿ ನಿರತರಾಗಿದ್ದಾರೆ. ಇದರಲ್ಲಿ 282 ಪುರುಷರು ಮತ್ತು 198ರಷ್ಟು ಮಹಿಳೆಯರು ಇದ್ದಾರೆ. ಇವರೆಲ್ಲರೂ ಅನೇಕ ರೀತಿಯ ಕೆಲಸ ಕಾರ್ಯಗಳಲ್ಲಿ ನಿರತರಾಗಿದ್ದಾರೆ. ಸುಮಾರು 428 ಜನರು ಪ್ರಮುಖವಾದ ಕೆಲಸವನ್ನು ಮಾಡುತ್ತಿದ್ದಾರೆ ಇವರಲ್ಲಿ 256 ಪುರುಷರು ಮತ್ತು 172 ಮಹಿಳೆಯರು ಎಂದು ಕೆಳಗಿನ ಕೋಷ್ಟಕದ ಸಹಾಯದಿಂದ ಗೊತ್ತಾಗುತ್ತದೆ. ಇನ್ನು ಮುಖ್ಯ ಕೆಲಸಗಾರರನ್ನು ಉಪ ವಿಭಾಗಿಸಿದಾಗ ಸರಿ ಸುಮಾರು ಒಟ್ಟಾರೆಯಾಗಿ 67 ಜನರು ವ್ಯವಸಾಯದಲ್ಲಿ ನಿರತಾಗಿದ್ದಾರೆ, ಇವರಲ್ಲಿ 49 ಜನರು ಪುರುಷರು ಮತ್ತು 18 ಜನರು ಮಾತ್ರ ಮಹಿಳೆಯರಾಗಿದ್ದಾರೆ. ಇನ್ನು ಕೃಷಿಗೆ ಸೇರಿದ ವಿವಿಧ ರೀತಿಯ ಉಪಕೆಲಸಗಳಲ್ಲಿ ಒಟ್ಟಾರೆಯಾಗಿ 254 ಜನರು ಕೃಷಿಗೆ ಸಂಬಂಧಿಸಿದ ಕಾರ್ಯಗಳನ್ನು ಮಾಡುತ್ತಿದ್ದಾರೆ. ಇವರಲ್ಲಿ 115 ಪುರುಷರು ಮತ್ತು 139 ಜನರು ಮಹಿಳೆಯರು ಎಂದು ಕೋಷ್ಟಕದಿಂದ ತಿಳಿದು ಬರುತ್ತದೆ. ಬಹಳ ಪ್ರಮುಖವಾದ ಅಂಶವೇನೆಂದರೆ ಒಟ್ಟಾರೆ ಜನರಲ್ಲಿ 106ರಷ್ಟು ಜನರು ಇತರೆ ಕೆಲಸಗಳಲ್ಲಿ ನಿರತರಾಗಿದ್ದಾರೆ. ಇವರಲ್ಲಿ ಅತಿ ಹೆಚ್ಚಿನವರು ಅಂದರೆ 91ರಷ್ಟು ಜನರು ಪುರುಷರಾಗಿದ್ದಾರೆ ಬಾಕಿ ಉಳಿದ 15ಜನರು ಮಹಿಳೆಯರಾಗಿದ್ದಾರೆ. ಗ್ರಾಮದ ಜನಸಂಖ್ಯೆ ಒಟ್ಟು ಜನರಲ್ಲಿ 52ರಷ್ಟು ಜನರು ಕನಿಷ್ಠ ಮಟ್ಟದ ಕೆಲಸವನ್ನು ಮಾಡುತ್ತಿದ್ದಾರೆ. ಈ ಕನಿಷ್ಟ ಕೆಲಸವನ್ನು ಮತ್ತೆ ಮುಖ್ಯವಾದ ಕನಿಷ್ಟ ಕೆಲಸ ಕೃಷಿ ಮತ್ತು ಕೃಷಿ ಕೂಲಿಗೆ ಸೇರಿದ, ಗೃಹ ಕೈಗಾರಿಕೆ ಮತ್ತು ಇತರೆ ಕೆಲಸವೆಂದು ವಿಂಗಡಿಸಲಾಗಿದೆ. ಆದರೆ ಈ ರೀತಿಯ ಕೆಲಸಕಾರ್ಯಗಳಲ್ಲಿ ಕಾರ್ಯನಿರ್ವಹಿಸುವವರ ಸಂಖ್ಯೆ ಬಹಳ ಕಡಿಮೆ ಎಂದು ಹೇಳಬಹುದು. ಕನಿಷ್ಠ ಕೆಲಸ ಮಾಡುವವರಲ್ಲಿ ಅತಿ ಹೆಚ್ಚಿನವರು 3 ರಿಂದ 6 ತಿಂಗಳ ಅವಧಿ ಅಂದರೆ ಅಲ್ಪಾವಧಿಗೆ ಕೆಲಸ ಮಾಡುವವರು ಹೆಚ್ಚಾಗಿದ್ದಾರೆ. ಒಟ್ಟಾರೆಯಾಗಿ ಕಲಬುರಗಿ ಜಿಲ್ಲೆಯ ಕೊಂಕನಳ್ಳಿಯಲ್ಲಿ ಸರಿ ಸುಮಾರು 524 ಜನರು ವರ್ಷದ ಯಾವುದೇ ದಿನದಲ್ಲಿಯೂ ಸಹ ಕೆಲಸ ಮಾಡುವುದಿಲ್ಲ. ಇದರಲ್ಲಿ 235 ಪುರುಷರು ಮತ್ತು 289ರಷ್ಟು ಮಹಿಳೆಯರು ಇರುವುದು ಕಂಡು ಬರುತ್ತದೆ (ಭಾರತೀಯ ಜನಗಣತಿ, 2011). ಅಂದರೆ ಗ್ರಾಮದ ಒಟ್ಟಾರೆ ಜನಸಂಖ್ಯೆಯ ಶೇಕಡಾ ಅರ್ಧಕ್ಕಿಂತ ಹೆಚ್ಚಿನ ಜನರು ಯಾವುದೇ ಕೆಲಸದಲ್ಲಿ ನಿರತರಾಗಿಲ್ಲ. ಇವರಲ್ಲಿ ಅನೇಕರು ಹಿರಿಯ ವಯಸ್ಸಿನವರು, ಮಕ್ಕಳು ಮತ್ತು ನಿರುದ್ಯೋಗಿಗಳು ಸೇರಿರಬಹುದು.

ಧಾರವಾಡ ಜಿಲ್ಲೆಯ ನಿಗದಿ ಗ್ರಾಮದಲ್ಲಿ ಒಟ್ಟು 2295 ಜನರಿದ್ದು ಅವರಲ್ಲಿ 1193 ಪುರುಷರು ಮತ್ತು 1102 ಮಹಿಳೆಯರು ಇರುತ್ತಾರೆ. ಇವರಲ್ಲಿ 0–6 ವರ್ಷದ ಒಳಗಿನವರು ಒಟ್ಟು 299 ಇದ್ದು 169 ಗಂಡು ಮಕ್ಕಳು ಮತ್ತು 130 ಹೆಣ್ಣು ಮಕ್ಕಳು ಇರುತ್ತಾರೆ. ಒಟ್ಟು ಜನಸಂಖ್ಯೆಯಲ್ಲಿ 95 ಜನರು ಪರಿಶಿಷ್ಟ ಜಾತಿಗೆ ಸೇರಿದವರಾಗಿದ್ದು, ಇದರಲ್ಲಿ 47 ಪುರುಷರು ಮತ್ತು 48 ಸ್ತ್ರೀಯರು ಇರುವುದು ಕಂಡು ಬರುತ್ತದೆ. ಕೇವಲ 6 ಜನರು ಮಾತ್ರ ಪರಿಶಿಷ್ಟ

**ಕೋಷ್ಟಕ 2.6**

**ಗ್ರಾಮಗಳಲ್ಲಿನ ಒಟ್ಟು ಜನಸಂಖ್ಯೆಯ ವಿವರ**

| ಜನಸಂಖ್ಯೆ | ಕೊಂಕನಳ್ಳಿ | | | ನಿಗದಿ | | |
|---|---|---|---|---|---|---|
| | ಒಟ್ಟು | ಪುರುಷರು | ಮಹಿಳೆಯರು | ಒಟ್ಟು | ಪುರುಷರು | ಮಹಿಳೆಯರು |
| ಒಟ್ಟು ಜನಸಂಖ್ಯೆ | 1,004 | 517 | 487 | 2,295 | 1,193 | 1,102 |
| 0 ರಿಂದ 6 ವರ್ಷದ ಒಳಗಿನವರು | 127 | 74 | 53 | 299 | 169 | 130 |
| ಪರಿಶಿಷ್ಟ ಜಾತಿ (ಎಸ್.ಸಿ.) | 272 | 145 | 127 | 95 | 47 | 48 |
| ಪರಿಶಿಷ್ಟ ಪಂಗಡ (ಎಸ್.ಟಿ.) | 0 | 0 | 0 | 6 | 5 | 1 |
| ಅಕ್ಷರಸ್ಥರು | 528 | 322 | 206 | 1,514 | 862 | 652 |
| ಅನಕ್ಷರಸ್ಥರು | 476 | 195 | 281 | 781 | 331 | 450 |
| ಒಟ್ಟು ಕೆಲಸಗಾರರು | 480 | 282 | 198 | 856 | 655 | 201 |
| ಮುಖ್ಯ ಕೆಲಸಗಾರರು | 428 | 256 | 172 | 745 | 597 | 148 |
| ಮುಖ್ಯ ಕೆಲಸಗಾರರು – ವ್ಯವಸಾಯ ಮಾಡುವವರು | 67 | 49 | 18 | 333 | 304 | 29 |
| ಮುಖ್ಯ–ಕೆಲಸಗಾರರು – ಕೃಷಿ ಕೂಲಿಕಾರರು | 254 | 115 | 139 | 184 | 95 | 89 |
| ಮುಖ್ಯ ಕೆಲಸಗಾರರು – ಗೃಹ ಕೈಗಾರಿಕೆಯಲ್ಲಿ ನಿರತರಾಗಿರುವವರು | 1 | 1 | 0 | 31 | 27 | 4 |
| ಮುಖ್ಯ ಕೆಲಸಗಾರರು – ಇತರೆ ಕೆಲಸಗಾರರು | 106 | 91 | 15 | 197 | 171 | 26 |
| ಕನಿಷ್ಠ ಕೆಲಸ ಮಾಡುವವರು | 52 | 26 | 26 | 111 | 58 | 53 |
| ಕನಿಷ್ಠ ಕೆಲಸ ಮಾಡುವವರು – ವ್ಯವಸಾಯ ಮಾಡುವವರು | 1 | 1 | 0 | 10 | 4 | 6 |
| ಕನಿಷ್ಠ ಕೆಲಸ ಮಾಡುವವರು– ಕೃಷಿ ಕೂಲಿಕಾರರು | 38 | 13 | 25 | 48 | 13 | 35 |
| ಕನಿಷ್ಠ ಕೆಲಸ ಮಾಡುವವರು– ಗೃಹ ಕೈಗಾರಿಕೆಯಲ್ಲಿ ನಿರತರಾಗಿರುವವರು | 0 | 0 | 0 | 10 | 6 | 4 |
| ಕನಿಷ್ಠ ಕೆಲಸ ಮಾಡುವವರು– ಇತರೆ ಕೆಲಸಗಾರರು | 13 | 12 | 1 | 43 | 35 | 8 |
| ಕನಿಷ್ಠ ಕೆಲಸ ಮಾಡುವವರು (3–6 ತಿಂಗಳು) | 48 | 24 | 24 | 104 | 52 | 52 |
| ಕನಿಷ್ಠ ಕೆಲಸ ಮಾಡುವವರು – ವ್ಯವಸಾಯ ಮಾಡುವವರು (3–6 ತಿಂಗಳು) | 1 | 1 | 0 | 9 | 3 | 6 |
| ಕನಿಷ್ಠ ಕೆಲಸ ಮಾಡುವವರು– ಕೃಷಿ ಕೂಲಿಕಾರರು (3–6 ತಿಂಗಳು) | 37 | 13 | 24 | 47 | 12 | 35 |
| ಕನಿಷ್ಠ ಕೆಲಸ ಮಾಡುವವರು– ಗೃಹ ಕೈಗಾರಿಕೆಯಲ್ಲಿ ನಿರತರಾಗಿರುವವರು (3–6 ತಿಂಗಳು) | 0 | 0 | 0 | 10 | 6 | 4 |
| ಕನಿಷ್ಠ ಕೆಲಸ ಮಾಡುವವರು– ಇತರೆ ಕೆಲಸಗಾರರು (3–6 ತಿಂಗಳು) | 10 | 10 | 0 | 38 | 31 | 7 |
| ಕನಿಷ್ಠ ಕೆಲಸ ಮಾಡುವವರು (0–3 ತಿಂಗಳು) | 4 | 2 | 2 | 7 | 6 | 1 |
| ಕನಿಷ್ಠ ಕೆಲಸ ಮಾಡುವವರು – ವ್ಯವಸಾಯ ಮಾಡುವವರು (0–3 ತಿಂಗಳು) | 0 | 0 | 0 | 1 | 1 | 0 |
| ಕನಿಷ್ಠ ಕೆಲಸ ಮಾಡುವವರು– ಕೃಷಿ ಕೂಲಿಕಾರರು (0–3 ತಿಂಗಳು) | 1 | 0 | 1 | 1 | 1 | 0 |
| ಕನಿಷ್ಠ ಕೆಲಸ ಮಾಡುವವರು– ಗೃಹ ಕೈಗಾರಿಕೆಯಲ್ಲಿ ನಿರತರಾಗಿರುವವರು (0–3 ತಿಂಗಳು) | 0 | 0 | 0 | 0 | 0 | 0 |
| ಕನಿಷ್ಠ ಕೆಲಸ ಮಾಡುವವರು– ಇತರೆ ಕೆಲಸಗಾರರು (0–3 ತಿಂಗಳು) | 3 | 2 | 1 | 5 | 4 | 1 |
| ಕೆಲಸವಿಲ್ಲದವರು | 524 | 235 | 289 | 1,439 | 538 | 901 |

ಮಾಹಿತಿಯ ಮೂಲ: 2011ರ ಭಾರತೀಯ ಜನಗಣತಿಯ ಅಂತರ್ಜಾಲತಾಣ www. censusindia.org ದಿಂದ ದತ್ತಾಂಶಗಳನ್ನು ಪಡೆಯಲಾಗಿದೆ.

ಪಂಗಡಕ್ಕೆ ಸೇರಿದವರು ಎಂದು 2011 ಜನಗಣತಿಯಿಂದ ತಿಳಿದು ಬರುತ್ತದೆ. ಇವರಲ್ಲಿ 6 ಜನ ಪುರುಷರು ಮತ್ತು ಒಬ್ಬರು ಮಾತ್ರ ಮಹಿಳೆಯರಿದ್ದಾರೆ. ಆದರೆ ಸಂಶೋಧಕರು ಕ್ಷೇತ್ರಕಾರ್ಯವನ್ನು ಮಾಡುವ ಸಮಯದಲ್ಲಿ ಬೇರೆ ಬೇರೆ ಕಡೆಯಿಂದ ಹಲವಾರು ಪರಿಶಿಷ್ಟ ಜಾತಿ ಮತ್ತು ಪಂಗಡಕ್ಕೆ ಸೇರಿದ ಕುಟುಂಬಗಳು ಬಂದು ನೆಲೆಸಿದ್ದಾರೆಂದು ತಿಳಿಸಿದ್ದಾರೆ. ಕುಟುಂಬಗಳಿಂದ ಮಾಹಿತಿಯನ್ನು ಕಲೆಹಾಕುವಾಗ ಕೆಲವೊಂದು ಕುಟುಂಬಗಳು ಪರಿಶಿಷ್ಟ ಪಂಗಡಕ್ಕೆ ಸೇರಿದ್ದೇವೆ ಎಂದು ಮಾಹಿತಿಯನ್ನು ಹಂಚಿಕೊಂಡಿರುತ್ತಾರೆ. ಇದರ ಕುರಿತು ಗ್ರಾಮಪಂಚಾಯತಿಯ ಸಿಬ್ಬಂದಿಯಲ್ಲಿ ವಿಚಾರಿಸಿದಾಗ 2011 ರಿಂದ ಇಲ್ಲಿಯವರೆಗೆ ಅನೇಕ ಕುಟುಂಬಗಳು ಬೇರೆ ಊರಿನಿಂದ ಬಂದು ನೆಲೆಸಿದ್ದಾರೆ ಎಂದು ಕಾರಣವನ್ನು ಹೇಳಿರುತ್ತಾರೆ.

ಸಾಕ್ಷರತೆಯ ಬಗ್ಗೆ ಹೇಳುವುದಾದರೆ ನಿಗದಿ ಗ್ರಾಮದಲ್ಲಿನ ಒಟ್ಟು ಜನಸಂಖ್ಯೆಯಲ್ಲಿ 1514 ಅಕ್ಷರಸ್ಥರಲ್ಲಿ 862 ಪುರುಷರು ಹಾಗು 652ರಷ್ಟು ಮಹಿಳೆಯರು ವಿದ್ಯಾವಂತರಾಗಿದ್ದಾರೆ. ಇನ್ನು ಅನಕ್ಷರಸ್ಥರ ಬಗ್ಗೆ ಹೇಳುವುದಾದರೆ ಒಟ್ಟಾರೆಯಾಗಿ 781 ಜನರಲ್ಲಿ 331 ಪುರುಷರು ಮತ್ತು 450 ಮಹಿಳೆಯರು ಅನಕ್ಷರಸ್ಥರಾಗಿರುವುದು ತಿಳಿದು ಬರುತ್ತದೆ (ಭಾರತೀಯ ಜನಗಣತಿ, 2011). ಕಲಬುರಗಿಯ ಕೊಂಕನಳ್ಳಿಯಂತೆ ನಿಗದಿ ಗ್ರಾಮದಲ್ಲಿಯೂ ಕೂಡ ಒಂದು ಪ್ರಮುಖವಾದ ಅಂಶವೇನೆಂದರೆ ಮಹಿಳೆಯರ ಸಾಕ್ಷರತೆಯ ಪ್ರಮಾಣವು ಕಡಿಮೆ ಇದೆ.

**ಆರ್ಥಿಕ ಚಟುವಟಿಕೆಗಳಲ್ಲಿ ಭಾಗವಹಿಸುವಿಕೆ**

ಧಾರವಾಡ ನಿಗದಿ ಗ್ರಾಮದಲ್ಲಿ ಒಟ್ಟು 856 ಜನರು ವಿವಿಧ ರೀತಿಯ ಕೆಲಸದಲ್ಲಿ ನಿರತರಾಗಿದ್ದಾರೆ. ಇದರಲ್ಲಿ 655 ಪುರುಷರು ಮತ್ತು 201ರಷ್ಟು ಮಹಿಳೆಯರು ಇದ್ದಾರೆ. ಇವರೆಲ್ಲರೂ ಅನೇಕ ರೀತಿಯ ಕೆಲಸ ಕಾರ್ಯಗಳಲ್ಲಿ ನಿರತರಾಗಿದ್ದಾರೆ. ಸುಮಾರು 745 ಜನರು ಪ್ರಮುಖವಾದ ಕೆಲಸವನ್ನು ಮಾಡುತಿದ್ದಾರೆ ಇವರಲ್ಲಿ 597 ಪುರುಷರು ಮತ್ತು 148 ಮಹಿಳೆಯರು ಎಂದು ಕೆಳಗಿನ ಕೋಷ್ಟಕದ ಸಹಾಯದಿಂದ ಗೊತ್ತಾಗುತ್ತದೆ. ಇನ್ನು ಮುಖ್ಯ ಕೆಲಸಗಾರರನ್ನು ಉಪ ವಿಭಾಗಿಸಿದಾಗ ಸರಿ ಸುಮಾರು ಒಟ್ಟಾರೆಯಾಗಿ 333 ಜನರು ವ್ಯವಸಾಯದಲ್ಲಿ ನಿರತಾಗಿದ್ದಾರೆ, ಇವರಲ್ಲಿ 304 ಜನರು ಪುರುಷರು ಮತ್ತು 29 ಜನರು ಮಾತ್ರ ಮಹಿಳೆಯರಾಗಿದ್ದಾರೆ. ಇನ್ನು ಕೃಷಿಗೆ ಸೇರಿದ ವಿವಿಧ ರೀತಿಯ ಉಪ ಕೆಲಸಗಳಲ್ಲಿ ಒಟ್ಟಾರೆಯಾಗಿ 184 ಜನರು ಕೃಷಿಗೆ ಸಂಬಂಧಿಸಿದ ಕಾರ್ಯಗಳನ್ನು ಮಾಡುತ್ತಿದ್ದಾರೆ. ಇವರಲ್ಲಿ 95 ಪುರುಷರು ಮತ್ತು 89 ಜನರು ಮಹಿಳೆಯರು ಮತ್ತು ಒಟ್ಟಾರೆಯಾಗಿ 31 ಜನರು ಗೃಹ ಆಧಾರಿತ ಕೆಲಸಗಳಲ್ಲಿ ನಿರತರಾಗಿದ್ದಾರೆ ಎಂದು ಕೋಷ್ಟಕದಿಂದ ತಿಳಿದು ಬರುತ್ತದೆ. ಬಹಳ ಪ್ರಮುಖವಾದ ಅಂಶವೇನೆಂದರೆ ಒಟ್ಟಾರೆ ಜನರಲ್ಲಿ 197ರಷ್ಟು ಜನರು ಇತರೆ ಕೆಲಸಗಳಲ್ಲಿ ನಿರತರಾಗಿದ್ದಾರೆ. ಇವರಲ್ಲಿ ಅತಿ ಹೆಚ್ಚಿನವರು ಅಂದರೆ 171ರಷ್ಟು ಜನರು ಪುರುಷರಾಗಿದ್ದಾರೆ. ಬಾಕಿ ಉಳಿದ 26 ಜನರು ಮಹಿಳೆಯರಾಗಿದ್ದಾರೆ. ಗ್ರಾಮದ ಜನಸಂಖ್ಯೆ ಒಟ್ಟು ಜನರಲ್ಲಿ 111ರಷ್ಟು ಜನರು ಕನಿಷ್ಠ

ಮಟ್ಟದ ಕೆಲಸವನ್ನು ಮಾಡುತ್ತಿದ್ದಾರೆ. ಈ ಕನಿಷ್ಟ ಕೆಲಸವನ್ನು ಮತ್ತೆ ಮುಖ್ಯವಾದ ಕೆಲಸ, ಕೃಷಿ ಮತ್ತು ಕೃಷಿ ಕೂಲಿಗೆ ಸೇರಿದ, ಗೃಹ ಕೈಗಾರಿಕೆ ಮತ್ತು ಇತರೆ ಕೆಲಸವೆಂದು ವಿಂಗಡಿಸಲಾಗಿದೆ. ಆದರೆ ಈ ರೀತಿಯ ಕೆಲಸಕಾರ್ಯಗಳಲ್ಲಿ ಕಾರ್ಯನಿರ್ವಹಿಸುವವರ ಸಂಖ್ಯೆ ಬಹಳ ಕಡಿಮೆ ಎಂದು ಹೇಳಬಹುದು. ಕನಿಷ್ಟ ಕೆಲಸ ಮಾಡುವರಲ್ಲಿ ಅತಿ ಹೆಚ್ಚಿನವರು 3 ರಿಂದ 6 ತಿಂಗಳ ಅವಧಿ ಅಂದರೆ ಅಲ್ಪಾವಧಿಗೆ ಕೆಲಸ ಮಾಡುವವರು ಹೆಚ್ಚಾಗಿದ್ದಾರೆ. ಒಟ್ಟಾರೆಯಾಗಿ ಧಾರವಾಡ ಜಿಲ್ಲೆಯ ನಿಗದಿಯಲ್ಲಿ ಸರಿ ಸುಮಾರು 1439 ಜನರು ವರ್ಷದ ಯಾವುದೇ ದಿನದಲ್ಲಿಯೂ ಸಹ ಕೆಲಸ ಮಾಡುವುದಿಲ್ಲ. ಇದರಲ್ಲಿ 538 ಪುರುಷರು ಮತ್ತು 901ರಷ್ಟು ಮಹಿಳೆಯರು ಇರುವುದು ಕಂಡುಬರುತ್ತದೆ (ಭಾರತೀಯ ಜನಗಣತಿ, 2011). ಅಂದರೆ ಗ್ರಾಮದ ಒಟ್ಟಾರೆ ಜನಸಂಖ್ಯೆಯ ಶೇಕಡಾ ಅರ್ಧಕ್ಕಿಂತ ಹೆಚ್ಚಿನ ಜನರು ಯಾವುದೇ ಕೆಲಸದಲ್ಲಿ ನಿರತರಾಗಿಲ್ಲ. ಇವರಲ್ಲಿ ಅನೇಕರು ಹಿರಿಯ ವಯಸ್ಸಿನವರು, ಮಕ್ಕಳು ಮತ್ತು ನಿರುದ್ಯೋಗಿಗಳು ಸೇರಿರಬಹುದು (ಭಾರತೀಯ ಜನಗಣತಿ, 2011).

**ಕುಟುಂಬಗಳ ಭೂ-ಹಿಡುವಳಿ**

ಪ್ರತಿ ಗಾಮ ಪಂಚಾಯತಿಯವರು ಸರಕಾರಕ್ಕೆ ಒಂದು ವರದಿಯನ್ನು ಸಲ್ಲಿಸುತ್ತಾರೆ ಅದರಲ್ಲಿ ಆಯಾ ಪಂಚಾಯತಿಯ ಅಡಿಯಲ್ಲಿ ಬರುವ ಎಲ್ಲಾ ಗ್ರಾಮಗಳಲ್ಲಿರುವ ಕುಟುಂಬಗಳು ಮತ್ತು ಅವುಗಳು ಹೊಂದಿರುವ ಆಸ್ತಿ-ಪಾಸ್ತಿಗಳನ್ನು ಜಿಲ್ಲಾ ಪಂಚಾಯತಿಗೆ ಸಲ್ಲಿಸಬೇಕಾಗುತ್ತದೆ. ಆ ವರದಿಗಳಲ್ಲಿ ಉಲ್ಲೇಖಿಸಿದಂತೆ ಗ್ರಾಮಗಳಲ್ಲಿರುವ ಕುಟುಂಬಗಳನ್ನು ಭೂ-ಹಿಡುವಳಿಗಳ ಪ್ರಕಾರ ಅತಿ ಸಣ್ಣ (2.54 ಎಕರೆ), ಸಣ್ಣ (2.54-5.08), ಮಧ್ಯಮ (5.08-25.4ಎಕರೆ), ದೊಡ್ಡ (25.4-ಮೇಲ್ಪಟ್ಟು) ಭೂ ಹಿಡುವಳಿದಾರರು ಎಂದು ವರ್ಗೀಕರಿಸಲಾಗಿದೆ. ಇದರಂತೆ ಕಲಬುರಗಿಯ ಕೊಂಕನಳ್ಳಿಯಲ್ಲಿ 25ರಷ್ಟು ಕುಟುಂಬಗಳು ಅತಿ ಸಣ್ಣ, 12 ಕುಟುಂಬಗಳು ಸಣ್ಣ, 42 ಕುಟುಂಬಗಳು ಮಧ್ಯಮ ಮತ್ತು 23ರಷ್ಟು ಕುಟುಂಬಗಳು ದೊಡ್ಡ ಮಟ್ಟದ ಭೂ

**ಕೋಷ್ಟಕ 2.7**

**ಗ್ರಾಮಗಳಲ್ಲಿರುವ ಕುಟುಂಬಗಳ ಸಂಖ್ಯೆ ಭೂ-ಹಿಡವಳಿಗಳ ಪ್ರಕಾರ**

| ಅಧ್ಯಯನ ಕೈಗೊಂಡ ಗ್ರಾಮಗಳು | ಅತಿ ಸಣ್ಣ (2.54 ಎಕರೆ) | ಸಣ್ಣ (2.54-5.08) | ಮಧ್ಯಮ (5.08-25.4 ಎಕರೆ) | ದೊಡ್ಡ (25.4-ಮೇಲ್ಪಟ್ಟು) | ಒಟ್ಟು |
|---|---|---|---|---|---|
| ಕೊಂಕನಳ್ಳಿ | 25 | 12 | 42 | 23 | 102 |
| ನಿಗದಿ | 33 | 15 | 57 | 39 | 144 |

ಮಾಹಿತಿಯ ಮೂಲ: ನೀಲಹಳ್ಳಿ ಜನಯೋಜನೆ ಜಿಲ್ಲಾ ಪಂಚಾಯತಿ, ಗುಲ್ಬರ್ಗಾ ಸಮಗ್ರ ಪಂಚವಾರ್ಷಿಕ ಅಭಿವೃದ್ಧಿಯ ಮುನ್ನೋಟ (ಸಿಡಿಡಿಪಿ) ಹಿಂದುಳಿದ ಪ್ರದೇಶಾಭಿವೃದ್ಧಿ ನಿಧಿ ಅನುದಾನದಡಿಯಲ್ಲಿ- 2012-13 ರಿಂದ 2016-17.

ನಿಗದಿ : ಜನಯೋಜನೆ ಜಿಲ್ಲಾ ಪಂಚಾಯತಿ, ಧಾರವಾಡ ಸಮಗ್ರ ಪಂಚವಾರ್ಷಿಕ ಅಭಿವೃದ್ಧಿಯ ಮುನ್ನೋಟ (ಸಿಡಿಡಿಪಿ) ಹಿಂದುಳಿದ ಪ್ರದೇಶಾಭಿವೃದ್ಧಿ ನಿಧಿ ಅನುದಾನದಡಿಯಲ್ಲಿ- 2012-13 ರಿಂದ 2016-17.

ಹಿಡುವಳಿದಾರರಾಗಿದ್ದಾರೆ, ಧಾರವಾಡದ ನಿಗದಿಯಲ್ಲಿ ಸುಮಾರು 33 ಕುಟುಂಬಗಳು ಅತಿ ಸಣ್ಣ, 15 ಕುಟುಂಬಗಳು ಸಣ್ಣ, 57 ಕುಟುಂಬಗಳು ಮಧ್ಯಮ ಮತ್ತು ಸುಮಾರು 39 ಕುಟುಂಬಗಳು ದೊಡ್ಡ ಮಟ್ಟದ ಭೂ ಹಿಡುವಳಿದಾರರಾಗಿದ್ದಾರೆ ಎಂದು ಕೆಳಗಿನ ಕೋಷ್ಟಕದಿಂದ ತಿಳಿದು ಬರುತ್ತದೆ (ನೀಲಹಳ್ಳಿ ಮತ್ತು ನಿಗದಿ ಗ್ರಾಮಪಂಚಾಯತಿಗಳ 2013-14ರ ವರದಿ).

**ಕುಟುಂಬಗಳು ಹೊಂದಿರುವ ಮನೆಗಳ ವಸ್ತುಸ್ಥಿತಿ**

ಕೋಷ್ಟಕ 2.8ರಲ್ಲಿ ಅಧ್ಯಯನಕ್ಕೆ ಆಯ್ಕೆ ಮಾಡಿಕೊಂಡ ಎರಡು ಗ್ರಾಮಗಳಲ್ಲಿರುವ ಕುಟುಂಬಗಳು ವಾಸಿಸುವ ಮನೆಗಳ ವಸ್ತು ಸ್ಥಿತಿ ಕುರಿತು ಹೇಳಲಾಗುತ್ತದೆ. ಇದಕ್ಕಾಗಿ 2011ರ ಜನಗಣತಿಯ ಮಾಹಿತಿಯನ್ನು ಬಳಸಿಕೊಳ್ಳಲಾಗಿದೆ. ಜನಗಣತಿಯ ಪ್ರಕಾರ ಅಧ್ಯಯನ ಕೈಗೊಂಡ ಗ್ರಾಮಗಳಲ್ಲಿನ ಕುಟುಂಬಗಳು ಹೊಂದಿರುವ ಮನೆಗಳ ವಸ್ತುಸ್ಥಿತಿಯ ಬಗ್ಗೆ ಹೇಳುವುದಾದರೆ ಮೊದಲಿಗೆ ಮನೆಗಳ ಸ್ಥಿತಿ, ಮನೆಗಳ ಮೇಲ್ಛಾವಣಿಯ ಪ್ರಕಾರಗಳು, ಮನೆಯ ಗೋಡೆಯ ಪ್ರಕಾರಗಳು, ಮನೆಯಲ್ಲಿ ನೆಲಕ್ಕೆ ಹಾಸಿದ ಪ್ರಕಾರಗಳು, ಮನೆಯಲ್ಲಿರುವ ಕೊಠಡಿಗಳ ಸಂಖ್ಯೆ ಮತ್ತು ಕೊನೆಯದಾಗಿ ಮನೆಯ ಮಾಲೀಕತ್ವದ ಕುರಿತು ವಿಶ್ಲೇಷಿಸಲಾಗಿದೆ. ಮೊದಲಿಗೆ ಕಲಬುರಗಿ ಜಿಲ್ಲೆಯ ಕೊಂಕನಳ್ಳಿ ಗ್ರಾಮದಲ್ಲಿನ ಕುಟುಂಬಗಳು ಹೊಂದಿರುವ ಮನೆಯ ಸ್ಥಿತಿಯನ್ನು ಕುರಿತು ಹೇಳುವುದಾದರೆ ಶೇಕಡಾ 97.9ರಷ್ಟು ಕುಟುಂಬಗಳು ಹೊಂದಿರುವ ಮನೆಯು ಉತ್ತಮವಾಗಿದ್ದರೆ ಶೇಕಡಾ 2.1ರಷ್ಟು ಮಾತ್ರ ವಾಸಿಸಲು ಯೋಗ್ಯವಾದ ಮನೆಯನ್ನು ಹೊಂದಿವೆ. ಆದರೆ ಧಾರವಾಡದ ನಿಗದಿಯಲ್ಲಿನ ಕುಟುಂಬಗಳು ಹೊಂದಿರುವ ಮನೆಯ ಸ್ಥಿತಿಯು ಇದಕ್ಕಿಂತ ಭಿನ್ನವಾಗಿದೆ. ನಿಗದಿಯಲ್ಲಿರುವ ಶೇಕಡಾ 75.5ರಷ್ಟು ಕುಟುಂಬಗಳು ಹೊಂದಿರುವ ಮನೆಗಳು ಉತ್ತಮವಾಗಿದ್ದರೆ ಬಾಕಿ ಉಳಿದ ಶೇಕಡಾ 21.7ರಷ್ಟು ಕುಟುಂಬಗಳು ಹೊಂದಿರುವ ಮನೆಗಳು ವಾಸಿಸಲು ಯೋಗ್ಯವಾಗಿರುತ್ತವೆ ಮತ್ತು ಶೇಕಡಾ 2.8ರಷ್ಟು ಕುಟುಂಬಗಳು ಹೊಂದಿರುವ ಮನೆಗಳು ಹಾಳು ಬಿದ್ದಿವೆ ಮತ್ತು ವಾಸಿಸಲು ಯೋಗ್ಯವಾಗಿಲ್ಲ ಎಂದು ಜನಗಣತಿಯ ಅಂಕಿ ಅಂಶಗಳಿಂದ ತಿಳಿದುಬರುತ್ತದೆ.

ಮನೆಯ ಮೇಲ್ಛಾವಣಿಯ ಬಗ್ಗೆ ಹೇಳುವುದಾದರೆ ಕಲಬುರಗಿಯ ಕೊಂಕನಳ್ಳಿ ಗ್ರಾಮದಲ್ಲಿನ ಶೇಕಡಾ 85.1ರಷ್ಟು ಕುಟುಂಬಗಳು ತಮ್ಮ ಸುತ್ತಮುತ್ತಲು ಬಹಳ ಹೇರಳವಾಗಿ ದೊರೆಯುವ ಕಲ್ಲಿನ ಮಾಳಿಗೆಯನ್ನು ಹೊಂದಿದ್ದರೆ ಧಾರವಾಡದಲ್ಲಿಯ ನಿಗದಿ ಗ್ರಾಮದಲ್ಲಿನ ಶೇಕಡಾ 81.1ರಷ್ಟು ಕುಟುಂಬಗಳು ಯಂತ್ರಗಳಿಂದ ಮಾಡಿದ ಹಂಚುಗಳನ್ನು ತಮ್ಮ ಮನೆಯ ಮೇಲ್ಛಾವಣಿಯನ್ನಾಗಿ ಮಾಡಿಕೊಂಡಿರುತ್ತಾರೆ. ಕೊಂಕನಳ್ಳಿಯಲ್ಲಿನ ಶೇಕಡಾ 13.3ರಷ್ಟು ಮತ್ತು ನಿಗದಿಯಲ್ಲಿನ ಕೇವಲ ಶೇಕಡಾ 20.1ರಷ್ಟು ಕುಟುಂಬಗಳ ಮನೆಯ ಮೇಲ್ಛಾವಣಿಯು ಸಿಮೆಂಟ್‌ಮಿಶ್ರಿತ ಕಾಂಕ್ರೀಟ್ನಿಂದ ಕೂಡಿರುವುದು ಕಂಡು ಬರುತ್ತದೆ. ವಿಶ್ಲೇಷಿಸಿ ಹೇಳುದಾದರೆ ಸಿಮೆಂಟ್ ಮತ್ತು ಕಲ್ಲು ಕಲಬುರಗಿ ಜಿಲ್ಲೆಯಲ್ಲಿ ಬಹಳ ಹೇರಳವಾಗಿ ದೊರೆಯುತ್ತಿದ್ದರೂ ಸಹ ಕೊಂಕನಳ್ಳಿಯಲ್ಲಿರುವ ಬಹುತೇಕ

## ಕೋಷ್ಟಕ 2.8
## ಗ್ರಾಮಗಳಲ್ಲಿನ ಕುಟುಂಬಗಳು ಹೊಂದಿರುವ ಮನೆಗಳ ವಸ್ತುಸ್ಥಿತಿ ಶೇಕಡಾವಾರು

| ಸೂಚಕಗಳು | ನಿಗದಿ | ಕೊಂಕನಳ್ಳಿ |
|---|---|---|
| **ಮನೆಗಳ ಸ್ಥಿತಿ** | | |
| ಉತ್ತಮ | 75.5 | 97.9 |
| ವಾಸಿಸಲು ಯೋಗ್ಯ | 21.7 | 2.1 |
| ಹಾಳು ಬಿದ್ದಿರುವ ಮನೆಗಳು | 2.8 | 0 |
| ಒಟ್ಟು | 100 | 100 |
| **ಮನೆಗಳ ಮೇಲಛ್ಛಾವಣಿಯ ಪ್ರಕಾರಗಳು** | | |
| ಹುಲ್ಲು ಮತ್ತು ಬಿದರು | 4.1 | 0 |
| ಕೈಯಿಂದ ಮಾಡಿದ ಹಂಚುಗಳು | 9.5 | 0 |
| ಯಂತ್ರಗಳಿಂದ ಮಾಡಿದ ಹಂಚುಗಳು | 81.1 | 0.5 |
| ಸುಟ್ಟ ಇಟ್ಟಂಗಿಗಳು | 0.2 | 0 |
| ಕಲ್ಲುಗಳಿಂದ ಕೂಡಿದ | 1.5 | 85.1 |
| ತಗಡಿನ ಸೀಟುಗಳು | 1.1 | 4.1 |
| ಕಾಂಕ್ರೀಟ್ | 2.6 | 10.3 |
| **ಮನೆಯ ಗೋಡೆಯ ಪ್ರಕಾರಗಳು** | | |
| ಹುಲ್ಲು ಮತ್ತು ಬಿದಿರು | 0.6 | 0.5 |
| ಮಣ್ಣಿನಿಂದ | 77.8 | 0 |
| ಕಟ್ಟಿಗೆ | 2.6 | 0 |
| ಕಲ್ಲುಗಳಿಂದ | 0.4 | 99.5 |
| ಸುಟ್ಟ ಇಟ್ಟಂಗಿಗಳು | 18.3 | 0 |
| ಕಾಂಕ್ರೀಟ್ | 0.2 | 0 |
| **ಮನೆಯ ನೆಲದ ಪ್ರಕಾರಗಳು** | | |
| ಮಣ್ಣಿನಿಂದ | 77.4 | 1.0 |
| ಕಲ್ಲುಗಳಿಂದ | 19.1 | 90.3 |
| ಸಿಮೆಂಟ್/ಸುಟ್ಟ ಇಟ್ಟಂಗಿಗಳು | 2.0 | 0.0 |
| ಟೈಲ್ಸ್ | 1.5 | 8.7 |
| **ಮನೆಯಲ್ಲಿರುವ ಕೊಠಡಿಗಳ ಸಂಖ್ಯೆ** | | |
| ಕೊಠಡಿಗಳೇ ಇಲ್ಲ | 11.6 | 0 |
| ಒಂದು ಕೊಠಡಿ | 37.2 | 44.6 |
| ಎರಡು ಕೊಠಡಿಗಳು | 38.1 | 27.2 |
| ಮೂರು ಕೊಠಡಿಗಳು | 7.7 | 16.4 |
| ನಾಲ್ಕು ಕೊಠಡಿಗಳು | 4.9 | 7.2 |
| ಐದು ಅಥವಾ ಹೆಚ್ಚಿನ ಕೊಠಡಿಗಳು | 0.4 | 4.6 |
| **ಮನೆಗಳ ಮಾಲಿಕತ್ವದ ಸ್ಥಿತಿ** | | |
| ಸ್ವಂತದ್ದು | 94.2 | 91.3 |
| ಬಾಡಿಗೆ | 5.6 | 8.2 |
| ಇತರೆ | 0.2 | 0.5 |

ಮಾಹಿತಿಯ ಮೂಲ: 2011ರ ಭಾರತೀಯ ಜನಗಣತಿಯ ಅಂತರ್ಜಾಲತಾಣ www. censusindia.org ದಿಂದ ದತ್ತಾಂಶಗಳನ್ನು ಪಡೆಯಲಾಗಿದೆ.

ಮನೆಗಳು ಕಲ್ಲಿನ ಮೇಲ್ಛಾವಣಿಯನ್ನು ಹೊಂದಿವೆ. ಇದರರ್ಥ ಅಲ್ಲಿ ನೈಸರ್ಗಿಕ ಸಂಪತ್ತು ಹೇರಳವಾಗಿ ದೊರಕಿದರೂ ಸಹ ಅವುಗಳನ್ನು ಪಡೆದುಕೊಂಡು ತಮ್ಮ ಮನೆಗಳನ್ನು ಕಟ್ಟಿಕೊಳ್ಳಬಹುದಾಗಿತ್ತು. ಆದರೆ ಕಾಂಕ್ರೀಟ್ ಮತ್ತು ಸಿಮೆಂಟ್ ಈ ಗ್ರಾಮದವರ ಕೈಗೆ ನಿಲುಕಲಾಗದಷ್ಟು ಹೆಚ್ಚಿನ ಬೆಲೆಯಿರಬಹುದೆಂದು ಅಂದಾಜಿಸಬಹುದು. ಆದರೆ ಧಾರವಾಡದಲ್ಲಿನ ನಿಗದಿ ಗ್ರಾಮದಲ್ಲಿರುವ ಕುಟುಂಬಗಳು ಕೊಂಕನಳ್ಳಿಗಿಂತ ಹೆಚ್ಚಿನ ಪ್ರಮಾಣದಲ್ಲಿನ ಕುಟುಂಬಗಳು ಕಾಂಕ್ರೀಟ್ ಮನೆಗಳನ್ನು ಹೊಂದಿವೆ ಎಂಬುದು ಜನಗಣತಿಯ ಅಂಕಿ ಸಂಖ್ಯೆಯಿಂದ ತಿಳಿದುಬರುತ್ತದೆ. ಬಾಕಿ ಉಳಿದ ಮನೆಗಳು ಕೊಂಕನಳ್ಳಿಯಲ್ಲಿ ಶೇಕಡಾ 5 ಮತ್ತು ನಿಗದಿಯಲ್ಲಿ ಶೇಕಡಾ 18ರಷ್ಟು ಕುಟುಂಬಗಳು ವಿವಿಧ ರೀತಿಯಾದ ಮೇಲ್ಛಾವಣಿಯನ್ನು ಹೊಂದಿವೆ. ಇದರಲ್ಲಿ ನಿಗದಿ ಗ್ರಾಮದಲ್ಲಿ ಶೇಕಡಾ 9.5ರಷ್ಟು ಕುಟುಂಬಗಳು ಕೈಯಿಂದ ಮಾಡಲ್ಪಟ್ಟ ಹಂಚುಗಳನ್ನು ಮೇಲ್ಛಾವಣಿಯನ್ನಾಗಿ ಮಾಡಿಕೊಂಡಿರುವದು ಕಂಡುಬರುತ್ತದೆ. ಇನ್ನುಳಿದ ಕುಟುಂಬಗಳ ಮನೆಗಳ ಮೇಲ್ಛಾವಣಿಯು ಶೇಕಡಾ 4.1ರಷ್ಟು ಹುಲ್ಲು ಮತ್ತು ಬಿದಿರು, ಶೇಕಡಾ0.2ರಷ್ಟು ಸುಟ್ಟ ಇಟ್ಟಂಗಿಗಳು, ಶೇಕಡಾ 1.5ರಷ್ಟು ಕಲ್ಲುಗಳಿಂದ ಕೂಡಿದ ಮತ್ತು ಶೇಕಡಾ 1.1ರಷ್ಟು ತಗಡಿನ ಸೀಟುಗಳಿಂದ ಕೂಡಿವೆ. ಕೊಂಕನಳ್ಳಿಯಲ್ಲಿ ಶೇಕಡಾ 4.1ರಷ್ಟು ಕುಟುಂಬಗಳು ತಗಡಿನ ಸೀಟುಗಳನ್ನು ಹೊಂದಿಸಿಕೊಂಡು ಮನೆಗಳ ಮೇಲ್ಛಾವಣಿಯನ್ನಾಗಿ ಮಾಡಿಕೊಂಡಿವೆ (ಭಾರತೀಯ ಜನಗಣತಿ, 2011).

ಕುಟುಂಬಗಳು ಹೊಂದಿರುವ ಮನೆಗಳ ಗೋಡೆ ಮತ್ತು ನೆಲಮಾಳಿಗೆಯ ಪ್ರಕಾರಗಳ ಬಗ್ಗೆ ಹೇಳುವುದಾದರೆ ಕಲಬುರಗಿ ಜಿಲ್ಲೆಯ ಕೊಂಕನಳ್ಳಿ ಗ್ರಾಮದಲ್ಲಿನ ಶೇಕಡಾ 0.5ರಷ್ಟು ಮತ್ತು ಧಾರವಾಡ ಜಿಲ್ಲೆಯ ನಿಗದಿಯಲ್ಲಿನ ಶೇಕಡಾ 0.6ರಷ್ಟು ಕುಟುಂಬಗಳು ಹುಲ್ಲು ಮತ್ತು ಬಿದಿರಿನಿಂದ ಮಾಡಿರುವ ಗೋಡೆಗಳನ್ನು ಆಸರೆಯಾಗಿ ಮಾಡಿಕೊಂಡಿವೆ. ಧಾರವಾಡದ ನಿಗದಿ ಗ್ರಾಮದಲ್ಲಿ ಶೇಕಡಾ 77ರಷ್ಟು ಕುಟುಂಬಗಳು ತಮ್ಮ ಮನೆಯ ನೆಲ ಮತ್ತು ಗೋಡೆಯನ್ನು ನೈಸರ್ಗಿಕವಾಗಿ ದೊರಕುವ ಮಣ್ಣಿನಿಂದ ಮಾಡಿಕೊಂಡಿದ್ದಾರೆ. ಆದರೆ ಕಲಬುರಗಿಯ ಕೊಂಕನಳ್ಳಿಯಲ್ಲಿ ಯಾವುದೇ ಕುಟುಂಬಗಳ ಮನೆಯ ಗೋಡೆಗಳು ಮಣ್ಣಿನಿಂದ ಮಾಡಿರುವುದಿಲ್ಲ. ಕೇವಲ ಶೇಕಡಾ 10ರಷ್ಟು ಕುಟುಂಬಗಳು ಮಾತ್ರ ನೆಲವನ್ನು ಮಣ್ಣಿನಿಂದ ಮಾಡಿಕೊಂಡಿರುವುದು ತಿಳಿದುಬರುತ್ತದೆ. ಇಲ್ಲಿ ಒಂದು ಪ್ರಮುಖವಾದ ವಿಷಯವನ್ನು ಹೇಳಲೇ ಬೇಕಾಗಿರುವುದು ಬಹಳ ಔಚಿತ್ಯವೆನಿಸುತ್ತದೆ. ಅದೇನೆಂದರೆ ಕಲಬುರಗಿಯ ಕೊಂಕನಳ್ಳಿ ಗ್ರಾಮದಲ್ಲಿ ಶೇಕಡಾ 99.5ರಷ್ಟು ಕುಟುಂಬಗಳ ಮನೆಯ ಗೋಡೆ ಮತ್ತು ಶೇಕಡಾ 90.3ರಷ್ಟು ಕುಟುಂಬಗಳ ನೆಲವನ್ನು ಆ ಪ್ರದೇಶದಲ್ಲಿ ಬಹಳ ಹೇರಳವಾಗಿ ದೊರಕುವ ಕಲ್ಲಿನಿಂದ ಮಾಡಿಕೊಂಡಿರುವುದು ಕೋಷ್ಟಕದ ಸಹಾಯದಿಂದ ತಿಳಿದು ಬರುತ್ತದೆ (ಭಾರತೀಯ ಜನಗಣತಿ, 2011). ಬಾಕಿ ಉಳಿದ ಕುಟುಂಬಗಳ ನೆಲ ಮತ್ತು ಮನೆಯ ಗೋಡೆಯನ್ನು ಕಟ್ಟಿಗೆ, ಕಲ್ಲುಗಳಿಂದ, ಸುಟ್ಟ ಇಟ್ಟಂಗಿಗಳು ಮತ್ತು ಟೈಲ್ಸ್‌ಗಳಿಂದ ಮಾಡಿಕೊಂಡಿರುವುದು ಕಂಡು ಬರುತ್ತದೆ.

**ಮನೆಯಲ್ಲಿರುವ ಕೊಠಡಿಗಳ ಸಂಖ್ಯೆ**

ಇಲ್ಲಿಯವರೆಗೆ ಕುಟುಂಬಗಳು ಹೊಂದಿರುವ ಮನೆಗಳ ಸ್ಥಿತಿಯನ್ನು ತಿಳಿದುಕೊಂಡಾಯಿತು. ಇನ್ನು ಆ ಕುಟುಂಬಗಳು ಹೊಂದಿರುವ ಮನೆಗಳಲ್ಲಿರುವ ಒಟ್ಟು ಕೋಣೆಗಳ ಅಥವಾ ಕೊಠಡಿ ಸಂಖ್ಯೆಯನ್ನು 2011ರ ಜನಗಣತಿಯ ಮಾಹಿತಿಯನ್ನು ಬಳಸಿಕೊಂಡು ವಿಶ್ಲೇಷಿಸಲಾಗಿದೆ. ಕಲಬುರಗಿಯ ಕೊಂಕನಳ್ಳಿಯಲ್ಲಿರುವ ಶೇಕಡಾ 44.6ರಷ್ಟು ಮತ್ತು ಧಾರವಾಡದ ನಿಗದಿಯಲ್ಲಿನ ಶೇಕಡಾ 37.2ರಷ್ಟು ಕುಟುಂಬಗಳು ಕೇವಲ ಒಂದು ಕೋಣೆಯನ್ನು ಹೊಂದಿವೆ. ಇನ್ನು ಕೊಂಕನಳ್ಳಿಯಲ್ಲಿ ಶೇಕಡಾ 27.2ರಷ್ಟು ಮತ್ತು ನಿಗದಿಯಲ್ಲಿನ ಶೇಕಡಾ 38.1ರಷ್ಟು ಕುಟುಂಬಗಳು ಎರಡು ಕೋಣೆಗಳು, ಕೊಂಕನಳ್ಳಿಯಲ್ಲಿನ ಶೇಕಡಾ 16.4ರಷ್ಟು ಕುಟುಂಬಗಳು ಮತ್ತು ನಿಗದಿಯಲ್ಲಿನ ಶೇಕಡಾ 7.7ರಷ್ಟು ಕುಟುಂಬಗಳು ಮೂರು ಕೊಣೆಗಳು ಮತ್ತು ಕೊಂಕನಳ್ಳಿಯಲ್ಲಿ ಶೇಕಡಾ 11.8ರಷ್ಟು ಕುಟುಬಗಳು ಮತ್ತು ನಿಗದಿಯಲ್ಲಿಯ ಶೇಕಡಾ 5.3ರಷ್ಟು ಕುಟುಂಬಗಳು 4ಕ್ಕಿಂತ ಹೆಚ್ಚಿನ ಕೋಣೆಗಳನ್ನು ಹೊಂದಿವೆ ಮತ್ತು ಧಾರವಾಡದ ನಿಗದಿಯಲ್ಲಿನ ಶೇಕಡಾ 11.6ರಷ್ಟು ಕುಟುಂಬಗಳು ಯಾವುದೇ ರೀತಿಯ ಕೋಣೆಗಳು ಇಲ್ಲ (ಭಾರತೀಯ ಜನಗಣತಿ, 2011) ಎಂದು ತಿಳಿದುಬರುತ್ತದೆ. ಆದರೆ ಕಲಬುರಗಿಯ ಕೊಂಕನಳ್ಳಿಯಲ್ಲಿರುವ ಎಲ್ಲ ಕುಟುಂಬಗಳು ಒಂದು ಅಥವಾ ಅದಕ್ಕಿಂತ ಹೆಚ್ಚಿನ ಕೋಣೆಗಳನ್ನು ಹೊಂದಿವೆ.

**ಮನೆಗಳ ಮಾಲಿಕತ್ವದ ಸ್ಥಿತಿ**

ಅಧ್ಯಯನ ಕೈಗೊಂಡ ಕಲಬುರಗಿಯ ಕೊಂಕನಳ್ಳಿ ಗ್ರಾಮದಲ್ಲಿನ ಶೇಕಡಾ 91.3ರಷ್ಟು ಕುಟುಂಬಗಳು ಹೊಂದಿರುವ ಮನೆಗಳು ಸ್ವಂತದ್ದಾಗಿದ್ದರೆ ಶೇಕಡಾ 8.2ರಷ್ಟು ಕುಟುಂಬಗಳು ಬಾಡಿಗೆಯ ಮನೆಯನ್ನು ಹೊಂದಿರುವುದು ತಿಳಿದುಬರುತ್ತದೆ. ಅದೇ ರಿತಿ ಧಾರವಾಡದಲ್ಲಿನ ನಿಗದಿ ಗ್ರಾಮದಲ್ಲಿರುವ ಶೇಕಡಾ 94.2ರಷ್ಟು ಕುಟುಂಬಗಳು ಹೊಂದಿರುವ ಮನೆಗಳು ಸ್ವಂತದ್ದಾಗಿದ್ದರೆ ಶೇಕಡಾ 5.6ರಷ್ಟು ಕುಟುಂಬಗಳು ಬಾಡಿಗೆಯ ಮನೆಯಲ್ಲಿದ್ದಾರೆ ಎಂದು 2011ರ ಜನಗಣತಿಯ ಅಂಕಿ ಅಂಶಗಳಿಂದ ತಿಳಿದುಬರುತ್ತದೆ. ಅಧ್ಯಯನ ಕೈಗೊಂಡ ಎರಡು ಗ್ರಾಮಗಳಲ್ಲಿ ಶೇಕಡಾ 1ಕ್ಕಿಂತ ಕಡಿಮೆಯ ಕುಟುಂಬಗಳು ಇತರ ಸ್ವರೂಪದ ಮನೆಗಳ ಒಡೆತನ ಹೊಂದಿರುವುದು ಕಂಡು ಬರುತ್ತದೆ.

**ಕುಟುಂಬಗಳು ಹೊಂದಿರುವ ಮೂಲಭೂತ ಸೌಲಭ್ಯಗಳು**

ಕೆಳಗಿನ 2.9ನೇ ಕೋಷ್ಟಕದಿಂದ ತಿಳಿದುಬರುವುದೇನೆಂದರೆ ಅಧ್ಯಯನ ಕೈಗೊಂಡ ಕಲಬುರಗಿಯ ಕೊಂಕನಳ್ಳಿ ಮತ್ತು ಧಾರವಾಡದ ನಿಗದಿ ಗ್ರಾಮಗಳಲ್ಲಿನ ಎಲ್ಲಾ ಕುಟುಂಬಗಳು ಹೊಂದಿರುವ ಮೂಲಭೂತ ಸೌಕರ್ಯಗಳ ಕುರಿತು 2011ರ ಜನಗಣತಿಯ ಮಾಹಿತಿಯನ್ನು ಬಳಸಿಕೊಂಡು ವಿಶ್ಲೇಷಿಸಲಾಗಿದೆ. ಮೂಲಭೂತ ಸೌಲಭ್ಯಗಳಲ್ಲಿ ಕುಟುಂಬಗಳು ಹೊಂದಿರುವ ನೀರಿನ ವ್ಯವಸ್ಥೆ, ದೀಪದ ವ್ಯವಸ್ಥೆ, ಶೌಚಾಲಯದ ವ್ಯವಸ್ಥೆ, ಸ್ನಾನ ಗೃಹದ ವ್ಯವಸ್ಥೆ, ಒಳಚರಂಡಿ

## ಕೋಷ್ಟಕ 2.9

## ಶೇಕಡಾವಾರು ಕುಟುಂಬಗಳು ಹೊಂದಿರುವ ಮೂಲಭೂತ ಸೌಲಭ್ಯಗಳು

| ಸೂಚಕಗಳು | ನಿಗದಿ | ಕೊಂಕನಳ್ಳಿ |
|---|---|---|
| ಮನೆಗಳ ಕುಡಿಯುವ ನೀರಿನ ಮೂಲ | | |
| ಶುದ್ಧೀಕರಿಸಿದ ಸ್ಥಳದಿಂದ-ನಳದ ಮೂಲಕ ಪಡೆಯುವುದು | 93.8 | 93.3 |
| ನಳದ ಮೂಲಕ ಪಡೆಯುವುದು | 3.2 | 0 |
| ಇತರೆ ಮೂಲದಿಂದ ಪಡೆಯುವುದು | 3 | 6.7 |
| ಮನೆಗಳಿಗೆ ಪಡೆಯುವ ಕುಡಿಯುವ ನೀರು ಪಡೆಯುವ ಸ್ಥಳ | | |
| ಮನೆಯ ಅಂಗಳದಲ್ಲಿ | 53.1 | 41 |
| ಮನೆಯ ಹತ್ತಿರ | 25.6 | 41 |
| ಮನೆಯಿಂದ ದೂರದಲ್ಲಿದೆ | 21.3 | 17.9 |
| ಮನೆಗಳಲ್ಲಿನ ದೀಪದ ವ್ಯವಸ್ಥೆ | | |
| ವಿದ್ಯುತ್ | 92.9 | 89.2 |
| ಸೀಮೆ ಎಣ್ಣೆ | 6.9 | 10.8 |
| ಮನೆಯ ಅಂಗಳದಲ್ಲಿಯೆ ಶೌಚಾಲಯಗಳನ್ನು ಹೊಂದಿರುವ ಕುಟುಂಬಗಳು | 10.5 | 7.2 |
| ಮನೆಯ ಅಂಗಳದಲ್ಲಿ ಶೌಚಾಲಯಗಳನ್ನು ಹೊಂದಿರದೆ ಇರುವ ಕುಟುಂಬಗಳು | 89.5 | 92.8 |
| ಶೌಚಾಲಯದ ಪರ್ಯಾಯ ವ್ಯವಸ್ಥೆ | | |
| ಬಯಲು ಪ್ರದೇಶ | 89.5 | 92.8 |
| ಸ್ನಾನ ಗೃಹದ ವ್ಯವಸ್ಥೆಯನ್ನು ಹೊಂದಿರುವ ಕುಟುಂಬಗಳು | | |
| ಸ್ನಾನ ಗೃಹ | 93.3 | 91.8 |
| ಮೇಲ್ಛಾವಣಿ ಇಲ್ಲದ ಸ್ನಾನ ಗೃಹ | 2.6 | 3.6 |
| ಸ್ನಾನ ಗೃಹದ ವ್ಯವಸ್ಥೆ ಇಲ್ಲದ ಕುಟುಂಬಗಳು | 4.1 | 4.6 |
| ಒಳಚರಂಡಿ ವ್ಯವಸ್ಥೆಯನ್ನು ಹೊಂದಿರುವ ಕುಟುಂಬಗಳು | | |
| ಮುಚ್ಚಿದ ಒಳಚರಂಡಿ | 3.0 | 0.5 |
| ತೆರೆದ ಒಳಚರಂಡಿ | 67.5 | 2.1 |
| ಒಳಚರಂಡಿಯ ವ್ಯವಸ್ಥೆ ಇಲ್ಲ | 29.5 | 97.4 |
| ಅಡುಗೆ ಮಾಡಲು ಬಳಸುವ ಇಂಧನದ ವ್ಯವಸ್ಥೆ | | |
| ಕಟ್ಟಿಗೆ | 86.2 | 91.3 |
| ಬೂಸಾ | 0.6 | 0 |
| ಸೀಮೆ ಎಣ್ಣೆ | 0.2 | 0 |
| ಎಲ್.ಪಿ.ಜಿ/ಪಿ.ಎನ್.ಜಿ | 12.5 | 7.7 |
| ಬಯೊಗ್ಯಾಸ | 0.4 | 1 |
| ಅಡುಗೆ ಮನೆಯ ವ್ಯವಸ್ಥೆ | | |
| ಒಟ್ಟು | 100 | 100 |
| ಮನೆಯ ಒಳಗಡೆ ಅಡುಗೆ | 98.5 | 63.6 |
| ಅಡುಗೆ ಮನೆ ಇದೆ | 98.3 | 61.5 |
| ಅಡುಗೆ ಮನೆ ಇಲ್ಲ | 0.2 | 2.1 |
| ಮನೆಯ ಹೊರಗಡೆ ಅಡುಗೆ | 1.5 | 36.4 |
| ಅಡುಗೆ ಮನೆ ಇದೆ | 0.4 | 5.6 |
| ಅಡುಗೆ ಮನೆ ಇಲ್ಲ | 1.1 | 30.8 |
| ಬ್ಯಾಂಕಿನ ಸೌಲಭ್ಯವನ್ನು ಪಡೆಯುತ್ತಿರುವ ಒಟ್ಟು ಕುಟುಂಬಗಳು | 68.8 | 46.7 |

ಮಾಹಿತಿಯ ಮೂಲ: 2011ರ ಭಾರತೀಯ ಜನಗಣತಿಯ ಅಂತರ್ಜಾಲತಾಣ www. censusindia.org ದಿಂದ ದತ್ತಾಂಶಗಳನ್ನು ಪಡೆಯಲಾಗಿದೆ.

ವ್ಯವಸ್ಥೆ, ಅಡುಗೆಗೆ ಬಳಸುವ ಇಂಧನದ ವ್ಯವಸ್ಥೆ, ಅಡುಗೆ ಮನೆಯ ವ್ಯವಸ್ಥೆ ಮತ್ತು ಶೇಕಡಾವಾರು ಕುಟುಂಬಗಳು ಬ್ಯಾಂಕಿನ ಅನುಕೂಲತೆಯನ್ನು ಪಡೆಯುತ್ತಿರುವ ಮಾಹಿತಿಯನ್ನು ಒಳಗೊಂಡಿರುತ್ತದೆ.

ಅಧ್ಯಯನ ಕೈಗೊಂಡ ಕಲಬುರಗಿಯ ಕೊಂಕನಳ್ಳಿ ಗ್ರಾಮ ಮತ್ತು ಧಾರವಾಡದ ನಿಗದಿ ಗ್ರಾಮದಲ್ಲಿರುವ ಒಟ್ಟು ಕುಟುಂಬಗಳಲ್ಲಿ ಶೇಕಡಾ 93ಕ್ಕಿಂತ ಹೆಚ್ಚಿನ ಕುಟುಂಬಗಳು ತಮ್ಮ ದಿನನಿತ್ಯದ ಬಳಕೆಗೆ ಬೇಕಾಗುವ ನೀರನ್ನು ಶುಧ್ಧೀಕರಿಸಿದ ಸ್ಥಳದಿಂದ ಬರುವ ನಳದ ಮೂಲಕ ಪಡೆಯುತ್ತಿರುವದು 2011ರ ಜನಗಣತಿಯ ಮಾಹಿತಿಯಿಂದ ತಿಳಿದುಬರುತ್ತದೆ. ಬಾಕಿ ಉಳಿದ ಕುಟುಂಬಗಳು ನಳದ ಮೂಲಕ ಪಡೆಯುವುದು ಮತ್ತು ಇತರೆ ಮೂಲದಿಂದ ಪಡೆಯುವುದು ಎಂದು ಕೋಷ್ಟಕದಿಂದ ತಿಳಿದುಬರುತ್ತದೆ. ಇನ್ನು ನೀರನ್ನು ಪಡೆಯುವ ಸ್ಥಳದ ಮಾಹಿತಿಯು ಜನಗಣತಿಯಿಂದ ತಿಳಿದುಬರುವುದೇನೆಂದರೆ ಕಲಬುರಗಿಯ ಕೊಂಕನಳ್ಳಿ ಗ್ರಾಮದಲ್ಲಿನ ಶೇಕಡಾ 41ರಷ್ಟು ಕುಟುಂಬಗಳು ಮನೆಯ ಅಂಗಳದಲ್ಲಿಯ ನಲ್ಲಿಯಿಂದ ಮತ್ತು ಅಷ್ಟೇ ಪ್ರತಿಶತದಷ್ಟು ಕುಟುಂಬಗಳು ಮನೆಯ ಹತ್ತಿರದಲ್ಲಿರುವ ನಳದಿಂದ ತರುತ್ತಾರೆ ಆದರೆ ಶೇಕಡಾ 17.9ರಷ್ಟು ಕುಟುಂಬಗಳು ಮನೆಯಿಂದ ದೂರದಲ್ಲಿರುವ ಸ್ಥಳದಿಂದ ನೀರನ್ನು ತರುತ್ತಾರೆ ಎಂದು ಹೇಳಿರುವುದು ಜನಗಣತಿಯ ಮಾಹಿತಿಯಿಂದ ತಿಳಿದುಬರುತ್ತದೆ. ಇನ್ನು ಧಾರವಾಡದಲ್ಲಿನ ನಿಗದಿ ಗ್ರಾಮದಲ್ಲಿರುವ ಒಟ್ಟು ಕುಟುಂಬಗಳಲ್ಲಿ ಶೇಕಡಾ 53.1ರಷ್ಟು ಮನೆಯ ಅಂಗಳದಲ್ಲಿರುವ ನಳ/ನಲ್ಲಿಯಿಂದ, ಶೇಕಡಾ 25.6ರಷ್ಟು ಕುಟುಂಬಗಳು ಮನೆಯಿಂದ ಸ್ವಲ್ಪ ದೂರದಲ್ಲಿರುವ ಸ್ಥಳದಿಂದ ಮತ್ತು ಶೇಕಡಾ 21.3ರಷ್ಟು ಕುಟುಂಬಗಳು ಮನೆಯಿಂದ ದೂರದಲ್ಲಿರುವ ಸ್ಥಳದಿಂದ ಕುಟುಂಬಗಳಿಗೆ ಪ್ರತಿನಿತ್ಯ ಬೇಕಾಗುವ ನೀರನ್ನು ಪಡೆಯುತ್ತಿದ್ದಾರೆ ಎಂಬುದು ತಿಳಿದು ಬರುತ್ತದೆ (ಭಾರತೀಯ ಜನಗಣತಿ, 2011).

ಕುಟುಂಬಗಳು ಹೊಂದಿರುವ ದೀಪದ ವ್ಯವಸ್ಥೆಯ ಬಗ್ಗೆ ಹೇಳುವುದಾದರೆ ಕಲಬುರಗಿಯ ಕೊಂಕನಳ್ಳಿಯಲ್ಲಿ ಶೇಕಡಾ 89.2ರಷ್ಟು ಮತ್ತು ಧಾರವಾಡದ ನಿಗದಿಯಲ್ಲಿನ ಶೇಕಡಾ 92.9ರಷ್ಟು ಕುಟುಂಬಗಳು ವಿದ್ಯುತ್ ಸಂಪರ್ಕವನ್ನು ಹೊಂದಿವೆ ಮತ್ತು ಬಾಕಿ ಉಳಿದ ಶೇಕಡಾವಾರು ಕುಟುಂಬಗಳು ಸೀಮೆ ಎಣ್ಣೆಯ ದೀಪದ ಮೇಲೆ ಅವಲಂಬಿತವಾಗಿವೆ. ಮುಂದುವರೆದು ಅಧ್ಯಯನ ಕೈಗೊಂಡ ಎರಡು ಗ್ರಾಮಗಳಲ್ಲಿನ ಶೌಚಾಲಯವ ವ್ಯವಸ್ಥೆಯ ಬಗ್ಗೆ ಹೇಳುವುದಾದರೆ ಕಲಬುರಗಿಯಲ್ಲಿನ ಕೊಂಕನಳ್ಳಿ ಗ್ರಾಮದಲ್ಲಿರುವ ಕೇವಲ ಶೇಕಡಾ 7.2ರಷ್ಟು ಕುಟುಂಬಗಳು ಮಾತ್ರ ಮನೆಯ ಅಂಗಳದಲ್ಲಿಯೇ ಶೌಚಾಲಯಗಳನ್ನು ಹೊಂದಿರುತ್ತವೆ. ಶೇಕಡಾ 92.8ರಷ್ಟು ಕುಟುಂಬಗಳು, ಮನೆಯ ಅಂಗಳದಲ್ಲಿ ಶೌಚಾಲಯಗಳನ್ನು ಹೊಂದಿರದೆ ಶೌಚಾಲಯದ ಪರ್ಯಾಯ ವ್ಯವಸ್ಥೆಯಾದ ಬಯಲು ಪ್ರದೇಶವನ್ನು ಹೆಚ್ಚಾಗಿ ಅವಲಂಬಿಸಿವೆ. ಇನ್ನು ಧಾರವಾಡಲ್ಲಿಯ ನಿಗದಿ ಗ್ರಾಮದಲ್ಲಿಯೂ ಸಹ ಪರಿಸ್ಥಿತಿ ಅಷ್ಟೇನೂ ವ್ಯತ್ಯಾಸವಾಗಿಲ್ಲ. ಇಲ್ಲಿ ಶೇಕಡಾ 10.5ರಷ್ಟು ಕುಟುಂಬಗಳು ಶೌಚಾಲಯದ ವ್ಯವಸ್ಥೆಯನ್ನು ಹೊಂದಿದ್ದರೆ, ಶೇಕಡಾ 89.5ರಷ್ಟು ಕುಟುಂಬಗಳು ಯಾವುದೇ ರೀತಿಯ ಶೌಚಾಲಯದ ವ್ಯವಸ್ಥೆಯನ್ನು ಹೊಂದಿರದೆ ಬಯಲು ಪ್ರದೇಶವನ್ನೇ ತಮ್ಮ ಶೌಚಾಲಯವನ್ನಾಗಿ ಮಾಡಿಕೊಂಡಿವೆ. ಈ ಮೇಲಿನ

ಮಾಹಿತಿಯಿಂದ ಒಂದು ಅಂಶ ಬಹಳ ಸ್ಪಷ್ಟವಾಗಿ ತಿಳಿದುಬರುವುದೇನೆಂದರೆ ಗ್ರಾಮೀಣ ಪ್ರದೇಶದಲ್ಲಿರುವ ಅನೇಕ ಕುಟುಂಬಗಳು ಶೌಚಾಲಯದ ವ್ಯವಸ್ಥೆಯನ್ನೇ ಹೊಂದಿಲ್ಲ ಇನ್ನು ಸ್ವಚ್ಛ ಭಾರತ ಕಲ್ಪನೆಯು ಯೋಜನೆ ಎಷ್ಟರ ಮಟ್ಟಿಗೆ ಗುರಿ ಮುಟ್ಟುತ್ತದೆ ಎಂದು ನೋಡಿಕೊಳ್ಳಬೇಕಾಗಿದೆ.

ಕುಟುಂಬಗಳು ಹೊಂದಿರುವ ಸ್ನಾನಗೃಹ ವ್ಯವಸ್ಥೆಯ ಕುರಿತು ಹೇಳುವುದಾದರೆ ಕಲಬುರಗಿ ಜಿಲ್ಲೆಯ ಕೊಂಕನಳ್ಳಿಯಲ್ಲಿನ ಶೇಕಡಾ 91.8ರಷ್ಟು ಮತ್ತು ಧಾರವಾದ ಜಿಲ್ಲೆಯ ನಿಗದಿ ಗ್ರಾಮದಲ್ಲಿನ ಶೇಕಡಾ 93.3ರಷ್ಟು ಕುಟುಂಬಗಳು ಸ್ನಾನ ಗೃಹದ ವ್ಯವಸ್ಥೆಯನ್ನು ಹೊಂದಿರುತ್ತವೆ ಎಂದು ಕೋಷ್ಟಕದಿಂದ ತಿಳಿದುಬರುತ್ತದೆ. ಬಾಕಿ ಉಳಿದ ಎಲ್ಲ ಕುಟುಂಬಗಳಿಗೆ ಸ್ನಾನ ಗೃಹ ಇದ್ದರೂ ಅವುಗಳಿಗೆ ಮೇಲ್ಛಾವಣಿ ಇಲ್ಲದ ಮತ್ತು ಸ್ನಾನ ಗೃಹದ ವ್ಯವಸ್ಥೆಯೇ ಇಲ್ಲದ ಕುಟುಂಬಗಳಾಗಿರುತ್ತವೆ ಎಂದು ತಿಳಿದುಬರುತ್ತದೆ. ಇನ್ನು ಮನೆಯ ಹೊರಗಿರುವ ಸ್ವಚ್ಛತೆಯ ಬಗ್ಗೆ ಹೇಳುವುದಾದರೆ ಧಾರವಾಡದ ನಿಗದಿ ಗ್ರಾಮದಲ್ಲಿನ ಶೇಕಡಾ 3ರಷ್ಟು ಕುಟುಂಬಗಳು ಮುಚ್ಚಿದ ಒಳಚರಂಡಿ ವ್ಯವಸ್ಥೆಯನ್ನು ಹೊಂದಿರುತ್ತವೆ ಮತ್ತು ಕಲಬುರಗಿಯ ಕೊಂಕನಳ್ಳಿಯಲ್ಲಿರುವ ಕೇವಲ ಶೇಕಡಾ 0.5ರಷ್ಟು ಕುಟುಂಬಗಳು ಮಾತ್ರ ಮುಚ್ಚಿದ ಒಳಚರಂಡಿ ವ್ಯವಸ್ಥೆಯನ್ನು ಹೊಂದಿರುತ್ತವೆ. ಧಾರವಾಡದಲ್ಲಿಯ ನಿಗದಿ ಗ್ರಾಮದಲ್ಲಿನ ಶೇಕಡಾ 67.5ರಷ್ಟು ಕುಟುಂಬಗಳು ತೆರೆದ ಒಳಚರಂಡಿ ವ್ಯವಸ್ಥೆಯನ್ನು ಹೊಂದಿದ್ದರೆ ಕಲಬುರಗಿಯ ಕೊಂಕನಳ್ಳಿಯಲ್ಲಿ ಇದು ಕೇವಲ ಶೇಕಡಾ 2.1ರಷ್ಟು ಮಾತ್ರ ಇರುತ್ತದೆ. ಒಳಚರಂಡಿಯ ವ್ಯವಸ್ಥೆ ಇಲ್ಲ, ಮುಂದುವರೆದು ಕಲಬುರಗಿಯ ಕೊಂಕನಳ್ಳಿಯಲ್ಲಿರುವ ಶೇಕಡಾ 91.3ರಷ್ಟು ಕುಟುಂಬಗಳು ಅಡುಗೆ ಮಾಡಲು ಕಟ್ಟಿಗೆಯನ್ನು ಬಳಸುತ್ತಾರೆ ಮತ್ತು ಧಾರವಾಡದ ನಿಗದಿಯಲ್ಲಿರುವ ಶೇಕಡಾ 86.2 ಕುಟುಂಬಗಳು ಕಟ್ಟಿಗೆಯನ್ನು ಬಳಸಿಕೊಂಡು ಅಡುಗೆಯನ್ನು ಮಾಡುತ್ತಾರೆ ಎಂದು 2011ರ ಜನಗಣತಿಯ ಮಾಹಿತಿಯಿಂದ ತಿಳಿದು ಬರುತ್ತದೆ. ಕಲಬುರಗಿಯ ಕೊಂಕನಳ್ಳಿ ಗ್ರಾಮದಲ್ಲಿರುವ ಶೇಕಡಾ 7.7ರಷ್ಟು ಮತ್ತು ಧಾರವಾಡದಲ್ಲಿನ ಶೇಕಡಾ 12.5ರಷ್ಟು ಕುಟುಂಬಗಳು ಮಾತ್ರ ಎಲ್.ಪಿ.ಜಿ/ ಪಿ.ಎನ್.ಜಿ, ಇಂಧನದ ವ್ಯವಸ್ಥೆಯನ್ನು ಹೊಂದಿವೆ ಎಂದು ಕೋಷ್ಟಕದಿಂದ ತಿಳಿದು ಬರುತ್ತದೆ. ಬಾಕಿ ಉಳಿದ ಎಲ್ಲಾ ಕುಟುಂಬಗಳು ಬೂಸಾ, ಸೀಮೆ ಎಣ್ಣೆ ಮತ್ತು ಬೈಯೊಗ್ಯಾಸ್‌ನ ಸಹಾಯದಿಂದ ಅಡುಗೆ ಮಾಡುತ್ತಾರೆ. ಮುಂದುವರೆದು ಅಡುಗೆ ಮನೆಯ ವ್ಯವಸ್ಥೆಯ ಬಗ್ಗೆ ಹೇಳುವುದಾದರೆ ಕಲಬುರಗಿಯಲ್ಲಿರುವ ಶೇಕಡಾ 63.6ರಷ್ಟು ಮತ್ತು ಧಾರವಾಡದ ನಿಗದಿಯಲ್ಲಿರುವ ಶೇಕಡಾ 98.5ರಷ್ಟು ಕುಟುಂಬಗಳು ಪ್ರತ್ಯೇಕವಾದ ಅಡುಗೆ ಮನೆಯನ್ನು ಮನೆಯ ಒಳಗೆ ಹೊಂದಿರುತ್ತವೆ. ಕಲಬುರಗಿಯಲ್ಲಿರುವ ಶೇಕಡಾ 36.4ರಷ್ಟು ಕುಟುಂಬಗಳು ಮತ್ತು ಧಾರವಾಡದ ನಿಗದಿಯಲ್ಲಿರುವ ಶೇಕಡಾ 1.5ರಷ್ಟು ಕುಟುಂಬಗಳು ಮನೆಯ ಹೊರಗೆ ಅಡುಗೆ ಮನೆಯನ್ನು ಹೊಂದಿರುವುದು ಕಂಡುಬರುತ್ತದೆ. ಇಲ್ಲಿ ಅತಿ ಹೆಚ್ಚಿನ ಪ್ರಮಾಣದ ಕುಟುಂಬಗಳು ಕಲಬುರಗಿಯ ಕೊಂಕನಳ್ಳಿಯಲ್ಲಿ ಶೇಕಡಾ 36.4ರಷ್ಟು ಕುಟುಂಬಗಳು ತಮ್ಮ ಕುಟುಂಬಗಳ ಸದಸ್ಯರಿಗೆ ಬೇಕಾಗುವ ಆಹಾರವನ್ನು

ಮನೆಯೇ ಹೊರಗಡೆ ಮಾಡುತ್ತಿರುವುದು ಬಹಳ ಶೋಚನಿಯವಾಗಿದೆ. ಕಲಬರಗಿಯ ಕೊಂಕನಳ್ಳಿ ಗ್ರಾಮದಲ್ಲಿರುವ ಶೇಕಡಾ 30.8ರಷ್ಟು ಕುಟುಂಬಗಳಿಗೆ ಯಾವುದೇ ರೀತಿಯ ಪ್ರತ್ಯೇಕವಾದ ಅಡುಗೆ ಮನೆಯೆ ಇಲ್ಲದಿರುವದು 2011ರ ಜನಗಣತಿಯ ಮಾಹಿತಿಯಿಂದ ತಿಳಿದು ಬರುತ್ತದೆ, ಕಲಬುರಗಿಯ ಕೊಂಕನಳ್ಳಿ ಗ್ರಾಮದಲ್ಲಿರುವ ಶೇಕಡಾ 46.7ರಷ್ಟು ಮತ್ತು ಧಾರವಾಡಲ್ಲಿಯ ನಿಗದಿ ಗ್ರಾಮದಲ್ಲಿರುವ ಶೇಕಡಾ 68.8ರಷ್ಟು ಕುಟುಂಬಗಳು ಬ್ಯಾಂಕಿನ ಸೌಲಭ್ಯವನ್ನು ಪಡೆಯುತ್ತಿರುವ ಕುಟುಂಬಗಳಿವೆ (ಭಾರತೀಯ ಜನಗಣತಿ, 2011) ಎಂದು ತಿಳಿದು ಬರುತ್ತದೆ.

**ಕುಟುಂಬಗಳು ಹೊಂದಿರುವ ಸಂಪರ್ಕ ಸಾಧನಗಳು**

ಕೋಷ್ಟಕ 2.10ರಲ್ಲಿ ತಿಳಿಸಿರುವಂತೆ ಅಧ್ಯಯನ ಕೈಗೊಂಡ ಗ್ರಾಮದ ಕುಟುಂಬಗಳು ಹೊಂದಿರುವ ಸಂಪರ್ಕ ಸಾಧನಗಳು ಮತ್ತು ಇತ್ತೀಚಿನ ಕಾಲದಲ್ಲಿ ಎಲ್ಲಾ ಕುಟುಂಬಗಳು ಅತಿ ಹೆಚ್ಚು ಅವಲಂಬಿತವಾಗಿರುವ ವಸ್ತುಗಳ ಬಗ್ಗೆ ಮಾಹಿತಿಯನ್ನು ಕಲೆ ಹಾಕಲಾಗಿದೆ. 2011ರ ಜನಗಣತಿಯ ಪ್ರಕಾರ ಅಧ್ಯಯನ ಕೈಗೊಂಡ ಕಲಬುರಗಿಯ ಕೊಂಕನಳ್ಳಿ ಗ್ರಾಮದಲ್ಲಿನ ಶೇಕಡಾ 11.3ರಷ್ಟು ಕುಟುಂಬಗಳು ರೇಡಿಯೊ, ಶೇಕಡಾ 51.3ರಷ್ಟು ಕುಟುಂಬಗಳು ದೂರದರ್ಶನ, ಶೇಕಡಾ 2.0ರಷ್ಟು ಕುಟುಂಬಗಳು ಗಣಕಯತ್ರ (ಕಂಪ್ಯೂಟರ್), ಶೇಕಡಾ 69.7ರಷ್ಟು ಕುಟುಂಬಗಳು ದೂರವಾಣಿ/ಮೊಬೈಲ ಸಂಪರ್ಕ, ಶೇಕಡಾ 6.2ರಷ್ಟು ಕುಟುಂಬಗಳು ಬೈಸಿಕಲ್/ಸ್ಕೂಟರ್/ಮೋಟರ್ ಸೈಕಲ್, ಶೇಕಡಾ 22.1ರಷ್ಟು ಕುಟುಂಬಗಳು ಮೇಲಿನ ಯಾವುದೇ ಸಾಧನಗಳು ಹೊಂದಿಲ್ಲವೆಂದು 2011 ಜನಗಣತಿಯ ಮಾಹಿತಿಯಿಂದ ತಿಳಿದು ಬರುತ್ತದೆ. ಬಾಕಿ ಉಳಿದ ಶೇಕಡಾವಾರು ಕುಟುಂಬಗಳು ಕಾರ್/ಜೀಪ್/ವ್ಯಾನ್, ಸ್ಕೂಟರ್/ಮೋಟರ್ ಸೈಕಲ್, ಕಾರ್/ಜೀಪ್/ವ್ಯಾನ್, ಗಣಕ ಯಂತ್ರ ಮತ್ತು ದೂರವಾಣಿಗಳನ್ನು ಹೊಂದಿರುವುದು ಕೋಷ್ಟಕದಿಂದ ತಿಳಿದು ಬರುತ್ತದೆ.

ಮುಂದುವರೆದು, ಧಾರವಾಡ ನಿಗದಿ ಗ್ರಾಮದಲ್ಲಿನ ಶೇಕಡಾ 19.4ರಷ್ಟು ಕುಟುಂಬಗಳು ರೇಡಿಯೊ, ಶೇಕಡಾ 40.2ರಷ್ಟು ಕುಟುಂಬಗಳು ದೂರದರ್ಶನ, ಶೇಕಡಾ 39.5ರಷ್ಟು ಕುಟುಂಬಗಳು ಗಣಕಯತ್ರ (ಕಂಪ್ಯೂಟರ್), ಶೇಕಡಾ 90.3ರಷ್ಟು ಕುಟುಂಬಗಳು ದೂರವಾಣಿ/ಮೊಬೈಲ ಸಂಪರ್ಕ, ಶೇಕಡಾ 13.5ರಷ್ಟು ಕುಟುಂಬಗಳು ಬೈಸಿಕಲ್/ಸ್ಕೂಟರ್/ಮೋಟರ್ ಸೈಕಲ್, ಕೇವಲ ಶೇಕಡಾ 2.4ರಷ್ಟು ಕುಟುಂಬಗಳು ಮಾತ್ರ ಮೇಲಿನ ಯಾವುದೇ ಸಾಧನಗಳು ಹೊಂದಿಲ್ಲವೆಂದು 2011 ಜನಗಣತಿಯ ಮಾಹಿತಿಯಿಂದ ತಿಳಿದು ಬರುತ್ತದೆ. ಇದು ಕಲಬುರಗಿಯ ಕೊಂಕನಳ್ಳಿಗಿಂತ ಬಹಳ ಕಡಿಮೆ ಇದೆ. ಕೊಂಕನಳ್ಳಿ ಗ್ರಾಮದಲ್ಲಿ ಅತಿ ಹೆಚ್ಚಿನ ಕುಟುಂಬಗಳು ಈ ರೀತಿಯ ಸಾಮಾನುಗಳನ್ನು ಹೊಂದಿರುವುದಿಲ್ಲ. ಬಾಕಿ ಉಳಿದ ಶೇಕಡಾವಾರು ಕುಟುಂಬಗಳು ಕಾರ್/ಜೀಪ್/ವ್ಯಾನ್, ಸ್ಕೂಟರ್/ಮೋಟರ್ ಸೈಕಲ್, ಕಾರ್/ಜೀಪ್/ವ್ಯಾನ್, ಗಣಕ ಯಂತ್ರ ಮತ್ತು ದೂರವಾಣಿಗಳನ್ನು ಹೊಂದಿರುವುದು ಕೋಷ್ಟಕದಿಂದ ತಿಳಿದುಬರುತ್ತದೆ (ಭಾರತೀಯ ಜನಗಣತಿ, 2011).

**ಕೋಷ್ಟಕ 2.10**
**ಕುಟುಂಬಗಳು ಹೊಂದಿರುವ ಸಂಪರ್ಕ ಸಾಧನಗಳು ಶೇಕಡಾವಾರು**

| ಸಂಪರ್ಕ ಸಾಧನಗಳು | ನಿಗದಿ | ಕೊಂಕನಳ್ಳಿ |
|---|---|---|
| ರೇಡಿಯೊ | 19.4 | 11.3 |
| ದೂರದರ್ಶನ | 40.2 | 51.3 |
| ಗಣಕಯತ್ರ (ಕಂಪ್ಯೂಟರ್) | 39.5 | 2.0 |
| ದೂರವಾಣಿ/ಮೊಬೈಲ ಸಂಪರ್ಕ | 90.3 | 69.7 |
| ಬೈಸಿಕಲ್ | 50.5 | 21.0 |
| ಸ್ಕೂಟರ್/ಮೋಟರ್ ಸೈಕಲ್ | 13.5 | 6.2 |
| ಕಾರ್/ಜೀಪ್/ವ್ಯಾನ್ | 1.5 | 0.5 |
| ಸ್ಕೂಟರ್/ಮೋಟರ್ ಸೈಕಲ್, ಕಾರ್/ಜೀಪ್/ವ್ಯಾನ್, ಗಣಕ ಯಂತ್ರ ಮತ್ತು ದೂರವಾಣಿಗಳನ್ನು ಹೊಂದಿರುವ ಕುಟುಂಬಗಳು | 3.7 | 0.5 |
| ಯಾವುದು ಇಲ್ಲ | 2.4 | 22.1 |

ಮಾಹಿತಿಯ ಮೂಲ: 2011ರ ಭಾರತೀಯ ಜನಗಣತಿಯ ಅಂತರ್ಜಾಲತಾಣ www. censusindia.org ದಿಂದ ದತ್ತಾಂಶಗಳನ್ನು ಪಡೆಯಲಾಗಿದೆ.

ಅಧ್ಯಯನ ಕೈಗೊಂಡ ಗ್ರಾಮಗಳಲ್ಲಿನ ಒಟ್ಟು ಕುಟುಂಬಗಳ ವೃತ್ತಿಯನುಸಾರವಾಗಿ ವಿಂಗಡಣೆಯನ್ನು ಕೆಳಗಿನ ಕೋಷ್ಟಕದಲ್ಲಿ ಕಾಣಬಹುದಾಗಿದೆ. ಕಲಬುರಗಿಯ ಕೊಂಕನಳ್ಳಿ ಗ್ರಾಮಪಂಚಾಯತಿಯವರು ಸಿದ್ಧಪಡಿಸಿದ ವರದಿಯಂತೆ ಒಟ್ಟು 241 ಕುಟುಂಬಗಳಲ್ಲಿ 71 ಕೃಷಿ ಕುಟುಂಬಗಳು, 88 ಕೃಷಿ ಕಾರ್ಮಿಕರ ಕುಟುಂಬಗಳು, 39 ಭೂರಹಿತ ಕುಟುಂಬಗಳು, 4 ಕುಶಲ ಕರ್ಮಿಗಳ ಕುಟುಂಬಗಳು, 18 ವ್ಯಾಪಾರ ಅವಲಂಬಿತ ಕುಟುಂಬಗಳು, 13 ಖಾಸಗಿ ನೌಕರಿ ಅವಲಂಬಿತ ಕುಟುಂಬಗಳು, 8 ಸರ್ಕಾರಿ ನೌಕರಿ ಅವಲಂಬಿತ ಕುಟುಂಬಗಳಾಗಿದ್ದರೆ, ಇನ್ನು ಧಾರವಾಡದ ನಿಗದಿಯಲ್ಲಿನ ಪಂಚಾಯತಿಯ ಪ್ರಕಾರ ಗ್ರಾಮದಲ್ಲಿ ಒಟ್ಟು 283 ಕುಟುಂಬಗಳಲ್ಲಿ 94 ಕೃಷಿ ಕುಟುಂಬಗಳು, 79 ಕೃಷಿ ಕಾರ್ಮಿಕರ ಕುಟುಂಬಗಳು, 31 ಭೂರಹಿತ ಕುಟುಂಬಗಳು, 7 ಕುಶಲಕರ್ಮಿಗಳ ಕುಟುಂಬಗಳು, 21 ವ್ಯಾಪಾರ ಅವಲಂಬಿತ ಕುಟುಂಬಗಳು, 35 ಖಾಸಗಿ ನೌಕರಿ ಅವಲಂಬಿತ ಕುಟುಂಬಗಳು, 16 ಸರ್ಕಾರಿ ನೌಕರಿ ಅವಲಂಬಿತ ಕುಟುಂಬಗಳಾಗಿವೆ ಎಂದು ಕೋಷ್ಟಕದಿಂದ ತಿಳಿದು ಬರುತ್ತದೆ (ನೀಲಹಳ್ಳಿ ಮತ್ತು ನಿಗದಿ ಗ್ರಾಮಪಂಚಯತಿಗಳ 2013-14ರ ವರದಿ).

**ಕೋಷ್ಟಕ 2.11**
**ಒಟ್ಟು ಕುಟುಂಬಗಳ ಸಂಖ್ಯೆ ವೃತ್ತಿಯ ವಿವರಣೆ**

| ಸೂಚಕಗಳು | ಕೊಂಕನಳ್ಳಿ | ನಿಗದಿ |
|---|---|---|
| ಕುಟುಂಬಗಳ ಸಂಖ್ಯೆ | 241 | 283 |
| ಕೃಷಿ ಕುಟುಂಬಗಳ ಸಂಖ್ಯೆ | 71 | 94 |
| ಕೃಷಿ ಕಾರ್ಮಿಕರ ಕುಟುಂಬಗಳ ಸಂಖ್ಯೆ | 88 | 79 |
| ಭೂರಹಿತ ಕುಟುಂಬಗಳ ಸಂಖ್ಯೆ | 39 | 31 |
| ಕುಶಲ ಕರ್ಮಿಗಳ ಕುಟುಂಬಗಳ ಸಂಖ್ಯೆ | 4 | 7 |
| ವ್ಯಾಪಾರ ಅವಲಂಬಿತ ಕುಟುಂಬಗಳ ಸಂಖ್ಯೆ | 18 | 21 |
| ಖಾಸಗಿ ನೌಕರಿ ಅವಲಂಬಿತ ಕುಟುಂಬಗಳ ಸಂಖ್ಯೆ | 13 | 35 |
| ಸರ್ಕಾರಿ ನೌಕರಿ ಅವಲಂಬಿತ ಕುಟುಂಬಗಳ ಸಂಖ್ಯೆ | 8 | 16 |

ಮಾಹಿತಿಯ ಮೂಲ: ನೀಲಹಳ್ಳಿ ಜನಯೋಜನೆ ಜಿಲ್ಲಾ ಪಂಚಾಯತಿ, ಗುಲ್ಬರ್ಗಾ ಸಮಗ್ರ ಪಂಚವಾರ್ಷಿಕ ಅಭಿವೃದ್ಧಿಯ ಮುನ್ನೋಟ (ಸಿಡಿಡಿಪಿ) ಹಿಂದುಳಿದ ಪ್ರದೇಶಾಭಿವೃದ್ಧಿ ನಿಧಿ ಅನುದಾನದಡಿಯಲ್ಲಿ– 2012–13 ರಿಂದ 2016–17.

ನಿಗದಿ : ಜನಯೋಜನೆ ಜಿಲ್ಲಾ ಪಂಚಾಯತಿ, ಧಾರವಾಡ ಸಮಗ್ರ ಪಂಚವಾರ್ಷಿಕ ಅಭಿವೃದ್ಧಿಯ ಮುನ್ನೋಟ (ಸಿಡಿಡಿಪಿ) ಹಿಂದುಳಿದ ಪ್ರದೇಶಾಭಿವೃದ್ಧಿ ನಿಧಿ ಅನುದಾನದಡಿಯಲ್ಲಿ– 2012–13 ರಿಂದ 2016–17.

## ಉಪಸಂಹಾರ

ಅಧ್ಯಯನಕ್ಕೆ ಆಯ್ಕೆ ಮಾಡಿಕೊಂಡ ಎರಡು ಗ್ರಾಮಗಳ ಪರಿಚಯವನ್ನು ತಿಳಿದುಕೊಂಡ ಮೇಲೆ ಆಯಾಯ ಗ್ರಾಮಗಳಲ್ಲಿ ಆಯ್ಕೆಯಾದ ಕುಟುಂಬಗಳನ್ನು ಸಂದರ್ಶಿಸಿ ಕಲೆಹಾಕಿದ ಮಾಹಿತಿಯ ವಿಶ್ಲೇಷಣೆಯನ್ನು ಮುಂದಿನ ಅಧ್ಯಾಯದಲ್ಲಿ ತಿಳಿದುಕೊಳ್ಳಬಹುದಾಗಿದೆ. ಇನ್ನು ಒಂದು ಬಹಳ ಪ್ರಮುಖವಾದ ವಿಷಯವೇನೆಂದರೆ ಧಾರವಾಡ ಜಿಲ್ಲೆಯ ನಿಗದಿ ಗ್ರಾಮವು ಮಲೆನಾಡು ಮತ್ತು ಹೆಚ್ಚಿನ ಮಳೆ ಬೀಳುವ ಪ್ರದೇಶವಾಗಿದೆ. ಆದರೆ ಕಲಬುರಗಿಯ ಕೊಂಕನಳ್ಳಿ ಗ್ರಾಮವು ಕೇವಲ ಮಳೆಯನ್ನೇ ನಂಬಿಕೊಂಡು ವ್ಯವಸಾಯ ಮಾಡುವ ಹೆಚ್ಚಿನ ಕುಟುಂಬಗಳನ್ನು ಕಾಣಬಹುದಾಗಿದೆ. ಅದು ಹೆಚ್ಚಾಗಿ ಬೇರೆಯವರ ಹೊಲಳಲ್ಲಿ ಕೂಲಿಯಾಗಿ ಅಥವಾ ಒಂದು ವರ್ಷದ ಮಟ್ಟಿಗೆ ಜೀತವಿದ್ದು ದುಡಿಯಲು ಬಾಯಿಮಾತಿನ ಕಾರಾರು ಮಾಡಿಕೊಂಡಿರುತ್ತಾರೆ. ಆದರೆ ಈ ರೀತಿಯ ವ್ಯವಸ್ಥೆಯು ನಿಗದಿಯಲ್ಲಿ ಸಂಶೋಧಕರ ಗಮನಕ್ಕೆ ಬಂದಿರುವುದಿಲ್ಲ.

**ಕೊನೆಟಿಪ್ಪಣಿ:**

1. ಯು. ಎನ್. ಡಿ. ಪಿ. (2014) *ಕಲಬುರಗಿ ಜಿಲ್ಲಾ ಮಾನವ ಅಭಿವೃದ್ಧಿ ವರದಿ*, ಪುಟ; 9–22.
2. *ಕಲಬುರಗಿ ಜಿಲ್ಲಾ ಜನಗಣತಿ ಕೈಪಿಡಿ* (2011) ಪುಟ;17–18.
3. ಯು. ಎನ್. ಡಿ. ಪಿ. (2014) *ಕಲಬುರಗಿ ಜಿಲ್ಲಾ ಮಾನವ ಅಭಿವೃದ್ಧಿ ವರದಿ*, ಪುಟ;9–22.
4. ಅದೇ, ಪುಟ; 9–22.
5. ಕರ್ನಾಟಕ ಸರ್ಕಾರ (1993) *ಕರ್ನಾಟಕ ಸ್ಟೇಟ್ ಗೆಜೆಟೀಯರ್*, ಕಲಬುರಗಿ ಜಿಲ್ಲೆ: ಪು: 1–2.
6. *ಕಲಬುರಗಿ ಮಾನವ ಅಭಿವೃದ್ಧಿ ವರದಿ* (2014) ಪುಟ;9–22.
7. ಅದೇ, ಪುಟ;9–12.
8. ಅದೇ, ಪುಟ;9–12.
9. ಅದೇ, ಪುಟ;9–12.
10. ಭಾರತೀಯ ಜನಗಣತಿ (2011) ಅಂತರಜಾಲತಾಣ www.censusindia.orgದಿಂದ ದತ್ತಾಂಶವನ್ನು ಪಡೆಯಲಾಗಿದೆ.
11. ಅದೇ, ಜನಗಣತಿಯ ಅಂತರಜಾಲತಾಣ.
12. ಯು. ಎನ್. ಡಿ. ಪಿ. (2014) *ಧಾರವಾಡ ಜಿಲ್ಲಾ ಮಾನವ ಅಭಿವೃದ್ಧಿ ವರದಿ*, ಪುಟ–23–38.
13. ಅದೇ, ಪುಟ–23–38.
14. ಭಾರತೀಯ ಜನಗಣತಿ (2011) ಅಂತರಜಾಲತಾಣ www.censusindia.orgದಿಂದ ದತ್ತಾಂಶವನ್ನು ಪಡೆಯಲಾಗಿದೆ.
15. ಅದೇ, ಜನಗಣತಿಯ ಅಂತರಜಾಲತಾಣ www.censusindia.org.
16. ಕಲಬುರಗಿ ಜಿಲ್ಲೆಯ ಅಂಕಿ ಸಂಖ್ಯೆಯ ಪಕ್ಷಿನೋಟ–2011.
17. ಧಾರವಾಡ ಜಿಲ್ಲೆಯ ಅಂಕಿ ಸಂಖ್ಯೆಯ ಪಕ್ಷಿನೋಟ–2011.
18. ಭಾರತೀಯ ಜನಗಣತಿ (2011) ಅಂತರಜಾಲತಾಣ www.censusindia.org ದಿಂದ ದತ್ತಾಂಶವನ್ನು ಪಡೆಯಲಾಗಿದೆ.
19. ಅದೇ, ಜನಗಣತಿಯ ಅಂತರಜಾಲತಾಣ www.censusindia.org.
20. ಅದೇ, ಜನಗಣತಿಯ ಅಂತರಜಾಲತಾಣ www.censusindia.org.
21. ಅದೇ, ಜನಗಣತಿಯ ಅಂತರಜಾಲತಾಣ www.censusindia.org.
22. ಅದೇ, ಜನಗಣತಿಯ ಅಂತರಜಾಲತಾಣ www.censusindia.org.
23. ಅದೇ, ಜನಗಣತಿಯ ಅಂತರಜಾಲತಾಣ www.censusindia.org.

24. ಅದೇ, ಜನಗಣತಿಯ ಅಂತರಜಾಲತಾಣ www.censusindia.org.

25. ಅದೇ, ಜನಗಣತಿಯ ಅಂತರಜಾಲತಾಣ www.censusindia.org.

26. ಅದೇ, ಜನಗಣತಿಯ ಅಂತರಜಾಲತಾಣ www.censusindia.org.

27. ಅದೇ, ಜನಗಣತಿಯ ಅಂತರಜಾಲತಾಣ www.censusindia.org.

28. ನೀಲಹಳ್ಳಿ ಗ್ರಾಮ ಪಂಚಾಯತಿಯ 2013–14ರ ವರದಿ.

29. ನಿಗದಿ, ಗ್ರಾಮಪಂಚಾಯತಿಯ 2013–14ರ ವರದಿ.

30. ಭಾರತೀಯ ಜನಗಣತಿ (2011) ಅಂತರಜಾಲ ತಾಣದಿಂದ ದತ್ತಾಂಶವನ್ನು ಪಡೆಯಲಾಗಿದೆ.

31. ಅದೇ, ಜನಗಣತಿಯ ಅಂತರಜಾಲತಾಣ www.censusindia.org.

32. ಅದೇ, ಜನಗಣತಿಯ ಅಂತರಜಾಲತಾಣ www.censusindia.org.

33. ಅದೇ, ಜನಗಣತಿಯ ಅಂತರಜಾಲತಾಣ www.censusindia.org.

34. ಅದೇ, ಜನಗಣತಿಯ ಅಂತರಜಾಲತಾಣ www.censusindia.org.

35. ನೀಲಹಳ್ಳಿ ಗ್ರಾಮ ಪಂಚಾಯತಿಯ 2013–14ರ ವರದಿ.

36. ನಿಗದಿ, ಗ್ರಾಮಪಂಚಾಯತಿಯ 2013–14ರ ವರದಿ.



## ಅಧ್ಯಾಯ ೩

# ಬಡತನದ ಮಾಪನ ಮತ್ತು ಬಡತನ ನಿವಾರಣೆಯ ಕ್ರಮಗಳು

**ಪೀಠಿಕೆ**

ಭಾರತ ಸರಕಾರವು ದೇಶದಲ್ಲಿನ ಬಡವರನ್ನು ಲೆಕ್ಕ ಹಾಕಲು ಹಲವಾರು ಸಮಿತಿಗಳನ್ನು ರಚಿಸಿದೆ. ಸಮಿತಿಗಳು ಕೊಟ್ಟ ಸಲಹೆ ಸೂಚನೆಗಳನ್ನು ಆಧಾರವಾಗಿಟ್ಟುಕೊಂಡು ದೇಶದಲ್ಲಿರುವ ಬಡವರ ಪ್ರಮಾಣವನ್ನು ಯೋಜನಾ ಅಯೋಗವು ಪ್ರಕಟಿಸುತ್ತದೆ. ಇದಕ್ಕಾಗಿ ಇಲ್ಲಿಯವರೆಗೆ ಸರಕಾರವು ನೇಮಿಸಿದ ಸಮಿತಿಗಳ ಬಗ್ಗೆ ಸಂಕ್ಷಿಪ್ತವಾಗಿ ಕೆಳಗಿನ ಭಾಗದಲ್ಲಿ ವಿವರಿಸಲಾಗಿದೆ. ಇವುಗಳ ಸಲಹೆ ಸೂಚನೆಗಳನ್ನು ಪರಿಗಣನೆಗೆ ತೆಗೆದುಕೊಂಡು ಯೋಜನಾ ಆಯೋಗವು ಕೇಂದ್ರ ಸರಕಾರಕ್ಕೆ ಒಂದು ನಿರ್ದಿಷ್ಟವಾದ ಕಾರ್ಯಸೂಚಿಯನ್ನು ಒದಗಿಸುತ್ತದೆ. ಆಯೋಗವು ಒದಗಿಸಿದ ಕಾರ್ಯಸೂಚಿಯ ಮೇರೆಗೆ ಸರಕಾರಗಳು ದೇಶದಲ್ಲಿರುವ ಬಡತನ ರೇಖೆಯ ಕೆಳಗಿರುವ ಕುಟುಂಬಗಳ ಎಲ್ಲ ರೀತಿಯ ಅಭಿವೃದ್ಧಿಗಾಗಿ ಹಲವಾರು ಕಾರ್ಯಕ್ರಮಗಳನ್ನು ರೂಪಿಸಿವೆ ಸರಕಾರಗಳು ಬಡತನದ ಕೆಳಗಿರುವ ಕುಟುಂಬಗಳ ಕಲ್ಯಾಣಕ್ಕಾಗಿ ಹಾಕಿಕೊಂಡಿರುವ ಕಾರ್ಯಕ್ರಮಗಳನ್ನು ಪ್ರಸ್ತುತ ಅಧ್ಯಾಯದಲ್ಲಿ ಚರ್ಚಿಸಲಾಗಿದೆ.

**ಭಾರತದಲ್ಲಿ ಬಡತನವನ್ನು ಅಳತೆ ಮಾಡುವ ವಿಧಾನದ ಹಿನ್ನೆಲೆ**

ಭಾರತವು ಸ್ವತಂತ್ರ ಪಡೆಯುವದಕ್ಕಿಂತ ಮೊದಲು ದಾದಾ ಭಾಯಿ ನವರೋಜಿಯವರು ತಮ್ಮ ಪುಸ್ತಕ 'ಬಡತನ ಮತ್ತು ಬ್ರಿಟಿಷರ ಆಡಳಿತ'ದಲ್ಲಿ ದೇಶದಲ್ಲಿರುವ ಬಡತನದ ಮೇಲೆ ಬರೆದ ಮೊಟ್ಟ ಮೊದಲ ಕೃತಿಯಾಗಿದೆ. ಇದರ ನಂತರದಲ್ಲಿ ರಾಷ್ಟ್ರೀಯ ಯೋಜನಾ ಸಮಿತಿಯು ಒಂದು ವರದಿಯನ್ನು ಸಿದ್ಧಪಡಿಸಿ ಕನಿಷ್ಟ ಜೀವನ ಮಟ್ಟದ ಜೀವನವನ್ನು ನಡೆಸಲು ಬೇಕಾದ ವ್ಯಾಖ್ಯೆಯನ್ನು ಹೇಳುತ್ತದೆ. ಅಖಿಲ ಭಾರತೀಯ ಕಾಂಗ್ರೆಸ್ಸಿನ ಸಮಿತಿಯು ನೆಹರುರವರ ಅಧ್ಯಕ್ಷತೆಯಲ್ಲಿ ಒಂದು ಸಮಿತಿಯನ್ನು ರಚಿಸಿ ಬಡತನದ ಬಗ್ಗೆ ವರದಿ ಮಾಡಲು ಹೇಳಿದಾಗ ಸಮಿತಿಯು ಕೆಳಗಿನಂತೆ ತನ್ನ ವರದಿಯಲ್ಲಿ ಸೂಚಿಸಿತ್ತು (ವೈದ್ಯನಾಥನ್, 2001). ಭೌತಿಕವಾಗಿ ಮತ್ತು ಸಾಮಾಜಿಕವಾಗಿ ಅತ್ಯಂತ ಸುಖಿಯಾಗಿ ಜೀವಿಸಲು ಒಂದು ನಿರ್ದಿಷ್ಟ ಸಮಯದಲ್ಲಿ ಕನಿಷ್ಟ ಮಟ್ಟದ ಜೀವನವನ್ನು ನಡೆಸಲು ಬೇಕಾಗುವ ಸೌಲಭ್ಯಗಳನ್ನು ದೊರಕಿಸಿಕೊಡುವುದು ಸರಕಾರದ ಎಲ್ಲಾ ಅಭಿವೃದ್ಧಿ ಕಾರ್ಯಕ್ರಮಗಳ ಗುರಿಯಾಗಿರಬೇಕು ಎಂದು ಸೂಚಿಸಿದ್ದಾರೆ.

1962ರ ಒಂದು ಸೆಮಿನಾರ್‌ನಲ್ಲಿ ದೇಶದ ಅನೇಕ ಅರ್ಥಶಾಸ್ತ್ರಜ್ಞರು, ರಾಜಕೀಯ ಮುಖಂಡರು ಮತ್ತು ಅನೇಕ ಸಾಮಾಜಿಕ ಹೋರಾಟಗಾರರು ಒಂದು ಹೊಸ ಅರ್ಥವನ್ನು ನೀಡುತ್ತಾ ದೇಶದಲ್ಲಿರುವ ಎಲ್ಲಾ ನಾಗರಿಕರಿಗೆ ಒಂದು ನಿರ್ದಿಷ್ಟ ಅವದಿಯಲ್ಲಿ ಉತ್ತಮ

ಜೀವನವನ್ನು ನಡೆಸಲು ಕನಿಷ್ಟಮಟ್ಟದ ಸೌಲಭ್ಯಗಳನ್ನು ದೊರಕಿಸಿ ಕೊಡುವುದು. ಗ್ರಾಮೀಣ ಭಾಗದಲ್ಲಿ ಪ್ರತಿ ತಿಂಗಳ ಆದಾಯ ರೂಪಾಯಿ 20 ಮತ್ತು ನಗರ ಪ್ರದೇಶದಲ್ಲಿ ರೂಪಾಯಿ 25ಕ್ಕಿಂತ ಕಡಿಮೆ ಇರುವವರನ್ನು ಬಡವರೆಂದು ಪರಿಗಣಿಸಿ ಸಂವಿಧಾನದ ಪ್ರಕಾರ ಆರೋಗ್ಯದ ಮತ್ತು ಶಿಕ್ಷಣ ವೆಚ್ಚವನ್ನು ರಾಜ್ಯವು ವಹಿಸಿಕೊಳ್ಳಬೇಕು ಎಂದು ತಿಳಿಸಿತ್ತು. ಇದು ಅಭಿವೃದ್ಧಿಯ ಲಾಭವನ್ನು ಪಡೆಯದೆ ಇರುವವರನ್ನು ಕೇಂದ್ರೀಕರಿಸಿಕೊಂಡಿರಬೇಕು ಎಂದು ಲೇಖಕರು ಉಲ್ಲೇಖಿಸಿದ್ದಾರೆ (ವೈದ್ಯನಾಥನ್, 2001).

1962ರಲ್ಲಿ ಯೋಜನಾ ಆಯೋಗವು ದೇಶದಲ್ಲಿರುವ ಜನಸಂಖ್ಯೆಯು ಕನಿಷ್ಟ ಮಟ್ಟದ ಜೀವನವನ್ನು ನಡೆಸಲು ಇರಬೇಕಾದ ಸವಲತ್ತುಗಳ ಬಗ್ಗೆ ಅಧ್ಯಯನ ಕೈಗೊಳ್ಳಲು ಒಂದು ವರ್ಕಿಂಗ್ ಗ್ರೂಫ್ (ಸಮಿತಿ) ರಚಿಸಿತ್ತು. ಈ ಸಮಿತಿಯು ಗ್ರಾಮೀಣ ಪ್ರದೇಶದಲ್ಲಿನ ಐದು ಜನರು ಇರುವ ಒಂದು ಕುಟುಂಬಕ್ಕೆ ರಾಷ್ಟ್ರೀಯ ಕನಿಷ್ಟ ಅನುಭೋಗದ ವೆಚ್ಚವು ಪ್ರತಿ ತಿಂಗಳಿಗೆ 100 ರೂಪಾಯಿಕ್ಕಿಂತ ಕಡಿಮೆ ಇರಬಾರದು ಅಥವಾ 1960–61ರ ಬೆಲೆಗಳ ಆಧಾರದ ಮೇಲೆ ಹೇಳುವುದಾದರೆ 20 ರೂಪಾಯಿಕ್ಕಿಂತ ಹೆಚ್ಚಿನ ತಲಾ ಆದಾಯ ಹೊಂದಿರಬೇಕು. ನಗರ ಪ್ರದೇಶಕ್ಕೆ ಇದು 125 ರೂಪಾಯಿ ಪ್ರತಿ ತಿಂಗಳು ಅಥವಾ 25 ರೂಪಾಯಿಕ್ಕಿಂತ ಹೆಚ್ಚಿನ ತಲಾ ಆದಾಯ ಹೊಂದಿರಬೇಕು ಎಂದು ಶಿಫಾರಸ್ಸು ಮಾಡಿತ್ತು (ವೈದ್ಯನಾಥನ್, 2001). ಆದರೆ ಸಮಿತಿಯು ಆರೋಗ್ಯ ಮತ್ತು ಶಿಕ್ಷಣದ ಮೇಲಿನ ವೆಚ್ಚವನ್ನು ರಾಜ್ಯ ಸರಕಾರಗಳೇ ನಿರ್ವಹಿಸುತ್ತವೆ ಎಂದು ಹೇಳಿ ಈ ವೆಚ್ಚವನ್ನು ಇದರಲ್ಲಿ ಸೇರಿಸಿಲ್ಲ ಎಂದು ತನ್ನ ವರದಿಯನ್ನು ಕೇಂದ್ರ ಸರಕಾರಕ್ಕೆ ಸಲ್ಲಿಸಿತ್ತು.

ಈ ಸಮಿತಿಯು 1958ರಲ್ಲಿ ರಾಷ್ಟ್ರೀಯ ವೈದ್ಯಕೀಯ ಸಂಶೋಧನಾ ಸಂಸ್ಥೆ (ನ್ಯಾಷನಲ್ ಕೌನಸಿಲ್ ಆಫ್ ಮೆಡಿಕಲ್ ರಿಸರ್ಚ)ಯವರು ನೀಡಿದ ಸಮತೋಲನ ಆಹಾರ ಮತ್ತು ಪೌಷ್ಟಿಕಾಂಶದ ಅಂಶಗಳನ್ನು ಸೇರಿಸಿಕೊಂಡು ನೀಡಿದ ಸಮಿತಿಯ ಶಿಫಾರಸ್ಸನ್ನು ದೇಶ ಮತ್ತು ಎಲ್ಲಾ ರಾಜ್ಯಗಳಲ್ಲಿ 1960 ಮತ್ತು 1970ರಲ್ಲಿ ಉಪಯೋಗಿಸಲ್ಪಟ್ಟಿದೆ. ಮತ್ತೆ ಯೋಜನಾ ಆಯೋಗವು ಜುಲೈ 1977ರಲ್ಲಿ ಪ್ರೊಫೆಸರ್ ವೈ.ಕೆ.ಅಲಘರವರ ಅಧ್ಯಕ್ಷತೆಯಲ್ಲಿ 'ಪ್ರೊಜೆಕ್ಸನ್ ಆಫ್ ಮಿನಿಮಂ ನೀಡ್ಸ್ ಆ್ಯಂಡ್ ಎಫೆಕ್ಟವ್ಹ್ ಕನಜುಮಸನ್ ಡಿಮ್ಯಾಂಡ್' ಎಂದು ಒಂದು ಟಾಸಕ್ ಫೋರ್ಸನ್ನು ರಚಿಸುತ್ತದೆ. ಈ ಸಮಿತಿಯು 1979 ಜನೇವರಿಯಲ್ಲಿ ತನ್ನ ವರದಿಯನ್ನು ಯೋಜನಾ ಆಯೋಗಕ್ಕೆ ಸಲ್ಲಿಸುತ್ತದೆ ಮತ್ತು ಯೋಜನಾ ಆಯೋಗವು ಅದೇ ತಿಂಗಳಿನಲ್ಲಿ ಸಮಿತಿಯ ಎಲ್ಲಾ ಶಿಫಾರಸ್ಸುಗಳನ್ನು ಅಂಗೀಕರಿಸುತ್ತದೆ. ಈ ಸಮಿತಿಯು ಅಂದಾಜು ಕ್ಯಾಲರಿ ತೆಗೆದುಕೊಳ್ಳುವ ಆಧಾರದ ಮೇಲೆ ದೇಶದ ಗ್ರಾಮೀಣ ಮತ್ತು ನಗರದಲ್ಲಿ ವಾಸ ಮಾಡುವ ಜನಸಂಖ್ಯೆಯನ್ನು ಬಡತನದ ರೇಖೆಯ ಮೇಲಿನವರು ಮತ್ತು ಕೆಳಗಿನವರು ಎಂದು ನಿರ್ಧರಿಸುತ್ತದೆ. ಇದು ಗ್ರಾಮೀಣ ಪ್ರದೇಶದಲ್ಲಿ 2400 ಕ್ಯಾಲರಿ ತಲಾ ಆದಾಯ ಪ್ರತಿ ದಿನ ಮತ್ತು 2100

ಕ್ಯಾಲರಿ ತಲಾ ಆದಾಯ ಪ್ರತಿ ದಿನ ನಗರ ಪ್ರದೇಶಕ್ಕೆ ನಿಗದಿಪಡಿಸಲಾಯಿತು (ವೈದ್ಯನಾಥನ್, 2001). ಈ ಕ್ಯಾಲರಿಗಳನ್ನು ಆಧಾರವಾಗಿಟ್ಟುಕೊಂಡು ಗ್ರಾಮೀಣ ಮತ್ತು ನಗರ ಪ್ರದೇಶದಲ್ಲಿನ ಬಡತನ ರೇಖೆಯನ್ನು ನಿರ್ಧರಿಸಲಾಯಿತ್ತು. ಪ್ರತಿ ವರ್ಷದ ಬಡತನ ರೇಖೆಯು ಕ್ಯಾಲರಿಯು ಪ್ರತಿ ವರ್ಷದ ಬೆಲೆಯ ಮೇಲೆ ನಿರ್ಧರಿಸಲಾಗುತ್ತದೆ (ರಮ್ಯ ವಿಜಯ ಮತ್ತು ಇತರರು, 2013 ಮತ್ತು ರಂಗರಾಜನ್, 2014).

ಪುನಃ ಯೋಜನಾ ಆಯೋಗವು ಬಡತನದ ಪ್ರಮಾಣ ಮತ್ತು ರೇಖೆಯನ್ನು ಪುನರ್ ಪರಿಶೀಲಿಸಲು ನುರಿತ ತಜ್ಞರ ಸಮಿತಿಯನ್ನು ಪ್ರೊಫೆಸರ್ ಲಕಡಾವಾಲಾರವರ ಅಧ್ಯಕ್ಷತೆಯಲ್ಲಿ 1989ರ ಸಪ್ಟೆಂಬರ್‌ನಲ್ಲಿ ರಚಿಸಲಾಯಿತ್ತು. ಈ ಸಮಿತಿಯು 1993ರಲ್ಲಿ ತನ್ನ ವರದಿಯನ್ನು ಸರಕಾರಕ್ಕೆ ಸಲ್ಲಿಸಿತ್ತು. ಆದರೆ ಸರಕಾರವು ಮಾರ್ಚ 1997ರಲ್ಲಿ ಈ ಸಮಿತಿಯ ವರದಿಯನ್ನು ಅಧಿಕೃತವಾಗಿ ಅಂಗೀಕರಿಸಿ ಬಡತನದ ರೇಖೆಯನ್ನು ಮತ್ತು ಪ್ರಮಾಣವನ್ನು ಘೋಷಣೆ ಮಾಡಲಾಯಿತ್ತು. ಈ ಸಮಿತಿಯು ಯಾವುದೇ ರೀತಿಯ ಬಡತನ ರೇಖೆಯನ್ನು ಹೇಳದೆ ವೈ.ಕೆ.ಅಲಘ ಸಮಿತಿಯು ಹೇಳಿದ ಮಾನದಂಡವನ್ನೆ ಆಧಾರವಾಗಿಟ್ಟುಕೊಂಡು ಬೆಲೆಯ ಆಧಾರದ ಮೇಲೆ ಗ್ರಾಮೀಣ ಮತ್ತು ನಗರ ಪ್ರದೇಶ ಮತ್ತು ಆಯಾ ರಾಜ್ಯಗಳ ಅನುಸಾರವಾಗಿ ಸಮಿತಿಯು ತನ್ನ ಬಡತನದ ರೇಖೆಯನ್ನು ಮರು ಸೃಷ್ಟಿಸಿತ್ತು.

ಇಷ್ಟಕ್ಕೆ ತೃಪ್ತಿ ಪಡದ ಕೇಂದ್ರ ಸರಕಾರವು ಮತ್ತೆ ಡಿಸೆಂಬರ್ 2005ರಲ್ಲಿ ಪ್ರೊಫೆಸರ್ ಸುರೇಶ ತೆಂಡೂಲಕರ್ ಅವರ ಅಧ್ಯಕ್ಷತೆಯಲ್ಲಿ ನುರಿತ ತಜ್ಞರ ಸಮಿತಿಯನ್ನು ರಚಿಸುತ್ತದೆ. ಈ ಸಮಿತಿಯು 1993–94ರ ಎನ್‌ಎಸ್‌ಎಸ್‌ಒನ 50ನೇ ಸುತ್ತಿನ, 1999–2000ರ 55ನೇ ಸುತ್ತಿನ ಮತ್ತು 2004–05ರ 61ನೇ ಸುತ್ತಿನ ಗ್ರಾಹಕರ ವೆಚ್ಚದ ಮಾಹಿತಿಯನ್ನು ಬಳಸಿಕೊಂಡು ಲಕಡಾವಾಲ್ ಸಮಿತಿಯ ಕಾರ್ಯ ವಿಧಾನವನ್ನು ಬಳಸಿಕೊಂಡು ಬಡತನದ ರೇಖೆಯನ್ನು ನೀಡಿತ್ತು. ಆದರೆ ಈ ಸಮಿತಿಯು ತನ್ನದೆ ಆದ ಯಾವುದೇ ರೀತಿಯ ಹೊಸ ವಿಧಾನವನ್ನು ಬಳಸಿಕೊಂಡಿಲ್ಲ ಎಂದು ಹೇಳಬಹುದು. ಈ ಸಮಿತಿಯ ಪ್ರಕಾರ ದೇಶದಲ್ಲಿ ಮತ್ತು ಎಲ್ಲಾ ರಾಜ್ಯಗಳಲ್ಲಿ ಜನಸಂಖ್ಯೆಯನ್ನು ಅವರ ಪ್ರತಿ ತಿಂಗಳ ತಲಾ ಆದಾಯದ ಮೇಲೆ ಬಡತನದ ರೇಖೆಯನ್ನು ನಿರ್ಧರಿಸಿದ್ದಾರೆ. ಈ ಸಮಿತಿಯ ಪ್ರಕಾರ 2004–05ರಲ್ಲಿ ಕರ್ನಾಟಕದ ಗ್ರಾಮೀಣ ಭಾಗದಲ್ಲಿ 418 ರೂಪಾಯಿಕ್ಕಿಂತ ಕಡಿಮೆ ಇರುವವರನ್ನು, 2009–10ರಲ್ಲಿ ಇದು 629 ರೂಪಾಯಿ ಮತ್ತು 2010–12ರಲ್ಲಿ ಇದು 902 ರೂಪಾಯಿಕ್ಕಿಂತ ಕಡಿಮೆ ತಿಂಗಳ ತಲಾ ಆದಾಯ ಇರುವವರನ್ನು ಬಡವರೆಂದು ಕರೆಯಬಹುದು ಎಂದು ಹೇಳಲಾಗಿದೆ. ನಗರ ಪ್ರದೇಶದಲ್ಲಿ 588 ರೂಪಾಯಿ, 908 ರೂಪಾಯಿ ಮತ್ತು 1089 ರೂಪಾಯಿ ಅನುಕ್ರಮವಾಗಿ 2004–05, 2009–10 ಮತ್ತು 2011–12ರಲ್ಲಿ ತಿಂಗಳ ತಲಾ ಆದಾಯದ ಬಗ್ಗೆ ಸಮಿತಿಯು ಉಲ್ಲೇಖಿಸಿದೆ. ಇದನ್ನು ಪರಿಶೀಲಿಸಲು ಕೇಂದ್ರ ಸರಕಾರವು ಪ್ರೊಫೆಸರ್ ರಂಗರಾಜನ್‌ರವರ

ಅಧ್ಯಕ್ಷತೆಯಲ್ಲಿ ಒಂದು ಪುನರ್ ಪರಿಶೀಲನಾ ಸಮಿತಿಯನ್ನು ನೇಮಿಸಿತ್ತು. ಈ ಸಮಿತಿಯು ಕ್ಯಾಲರಿ, ಪ್ರೋಟಿನ್, ಕೊಬ್ಬಿನಾಂಶ ಮತ್ತು ದಿನದ ತಲಾ ಆದಾಯವನ್ನು ಪರಿಗಣಿಸಿಕೊಂಡು ಹೊಸ ರೀತಿಯ ಬಡತನದ ರೇಖೆಯನ್ನು ಗ್ರಾಮೀಣ, ನಗರ ಪ್ರದೇಶಗಳಿಗೆ ಬೇರೆ ಬೇರೆಯಾಗಿ ವಿಶ್ಲೇಷಿಸಿದೆ. ಈ ಸಮಿತಿಯ ಮತ್ತೊಂದು ವಿಶೇಷತೆ ಎಂದರೆ ವಯಸ್ಸು, ಲಿಂಗ ಮತ್ತು ಕೆಲಸದ ಆಧಾರದ ಮೇಲೆ ಕ್ಯಾಲರಿಯನ್ನು ಪರಿಗಣಿಸಿದೆ (ರಂಗರಾಜನ್, 2014).

ಬಡತನ ಎಂಬುದು ಆದಾಯವನ್ನು ಮೀರಿ ಹೋಗಿದೆ. ಇದು ಸಾಮಾಜಿಕ, ಆರ್ಥಿಕ ಮತ್ತು ಸರಕಾರಗಳನ್ನು ದಾಟಿದೆ. ಆದ್ದರಿಂದ ಎಲ್ಲಾ ಸರಕಾರಗಳ ಬಡತನ ನಿವಾರಣೆಯ ಕಾರ್ಯಕ್ರಮಗಳಲ್ಲಿ ಆಹಾರ, ವಸತಿ, ಉದ್ಯೋಗ, ಕುಡಿಯುವ ನೀರು, ಶೌಚಾಲಯ ಕಟ್ಟಿಸಿಕೊಡುವದು ಮತ್ತು ಶಿಕ್ಷಣಕ್ಕೆ ಶಿಷ್ಯವೇತನಗಳ ರೂಪದಲ್ಲಿ ಹಲವಾರು ಯೋಜನೆಗಳನ್ನು ಪ್ರಕಟಿಸುವುದು ಸರ್ವೇಸಾಮಾನ್ಯ. ಇದರಿಂದ ದೇಶದಲ್ಲಿರುವ ಜನರ ಜೀವನವನ್ನು ಆರ್ಥಿಕ ಮತ್ತು ಸಾಮಾಜಿಕವಾಗಿ ಸುಧಾರಣೆ ತರುವ ದೃಷ್ಟಿಯಿಂದ ದೇಶವು ಸ್ವಾತಂತ್ರ್ಯಾನಂತರ ಹಲವಾರು ಕಾರ್ಯಕ್ರಮಗಳನ್ನು ಕೇಂದ್ರ ಸರ್ಕಾರ ಜಾರಿಗೆ ತಂದಿದೆ. ಈ ಎಲ್ಲಾ ಯೋಜನೆಗಳ ಪ್ರಮುಖವಾದ ಅಥವ ಏಕೈಕ ಉದ್ದೇಶವೇನೆಂದರೆ ದೇಶದಲ್ಲಿರುವ ಬಡತನವನ್ನು ಕಡಿಮೆಗೊಳಿಸಿ ಬಡವರ್ಗಗಳ ಆರ್ಥಿಕ ಮತ್ತು ಸಾಮಾಜಿಕ ಜೀವನ ಮಟ್ಟವನ್ನು ಸುಧಾರಿಸುವಲ್ಲಿ ಸಹಕರಿಸುವುದು. ಆದರೆ ಈ ಎಲ್ಲಾ ಯೋಜನೆಗಳು ನಿರೀಕ್ಷಿತ ಗುರಿಯನ್ನು ಮುಟ್ಟುವಲ್ಲಿ ವಿಫಲಗೊಂಡಿವೆ ಎಂದು ಹೇಳಬಹುದು. ಏಕೆಂದರೆ ಯೋಜನೆಗಳನ್ನು ಮೇಲಿನ ಅಧಿಕಾರಿಗಳು ತಳಮಟ್ಟದಲ್ಲಿನ ವಾಸ್ತವಿಕತೆಯನ್ನು ಮರೆಮಾಚಿ ಸಿದ್ಧಪಡಿಸಿರುತ್ತಾರೆ.

**ಸಮಗ್ರ ಗ್ರಾಮೀಣ ಅಭಿವೃದ್ಧಿ ಯೋಜನೆ**

ಸಮಗ್ರ ಗ್ರಾಮೀಣ ಅಭಿವೃದ್ಧಿ ಯೋಜನೆಯು ದೇಶದ ಗ್ರಾಮೀಣ ಭಾಗದಲ್ಲಿರುವ ಬಡತನವನ್ನು ಕಡಿಮೆಗೊಳಿಸುವಲ್ಲಿ ಒಂದು ಪ್ರಮುಖವಾದ ಯೋಜನೆಯಾಗಿದೆ. ಈ ಯೋಜನೆಯಲ್ಲಿ ಆಯ್ಕೆಯಾದ ಗ್ರಾಮೀಣ ಭಾಗದಲ್ಲಿರುವ ಬಡತನ ರೇಖೆಯ ಕೆಳಗಿರುವ ಕುಟುಂಬಗಳನ್ನು ಬಡತನದಿಂದ ಮೇಲೆತ್ತುವುದಾಗಿದೆ. ಯೋಜನೆಯಲ್ಲಿ ಆಯ್ಕೆಯಾದ ಕುಟುಂಬಗಳಿಗೆ ಉತ್ಪಾದನೆಗೆ ಸಹಕಾರಿಯಾಗುವ ಸ್ವತ್ತುಗಳು ಅಥವ ವಸ್ತುಗಳನ್ನು ಕೊಟ್ಟು ಆ ಕುಟುಂಬಗಳ ಉತ್ಪಾದನೆಯನ್ನು ಹೆಚ್ಚಿಸುವುದರಿಂದ ಅವುಗಳ ಆದಾಯವನ್ನು ಹೆಚ್ಚಿಸಿ ಅವುಗಳನ್ನು ಬಡತನ ರೇಖೆಯ ಕೆಳಗಿನಿಂದ ಮೇಲೆತ್ತುವದು. ಕುಟುಂಬಗಳಿಗೆ ವಿತರಿಸುವ ಸ್ವತ್ತುಗಳು ಅಥವಾ ಆಸ್ತಿಗಳು ಕುಟುಂಬಗಳು ವಾಸಿಸುವ ಪ್ರದೇಶಗಳಿಲ್ಲಿರುವ ಸರಕಾರದ ಪ್ರಾಥಮಿಕ, ಮಾಧ್ಯಮಿಕ ಮತ್ತು ಸಹಕಾರಿ ಹಣಕಾಸು ಸಂಸ್ಥೆಗಳ ಮೂಲಕ ಆರ್ಥಿಕವಾಗಿ ಸಬ್ಸಿಡಿಯ ರೂಪದಲ್ಲಿ ವಿತರಿಸಲಾಗುವದು (ಯೋಜನಾ ಆಯೋಗ, 2014).

ಸಮಗ್ರ ಗ್ರಾಮೀಣ ಅಭಿವೃದ್ಧಿ ಯೋಜನೆಯನ್ನು ದೇಶದ ಆಯ್ದ ಕೆಲ ತಾಲೂಕಗಳಲ್ಲಿ 1978-79ರಲ್ಲಿ ಜಾರಿಗೆ ತರಲಾಯಿತ್ತು ಮತ್ತು 1980 ಅಕ್ಟೋಬರ 2ರಂದು ದೇಶದ ಎಲ್ಲಾ ಭಾಗಕ್ಕೆ ವಿಸ್ತರಿಸಿ ಗ್ರಾಮೀಣ ಪ್ರದೇಶದ ಬಡವರಿಗೆ ಸಹಾಯಧನ ಮತ್ತು ವಿವಿಧ ಯೋಜನೆಗಳಲ್ಲಿ ಉದ್ಯೋಗಕ್ಕಾಗಿ ಬ್ಯಾಂಕಿನ ಸಾಲವನ್ನು ಕೊಡಮಾಡಲಾಯಿತ್ತು. ಇದರಡಿಯಲ್ಲಿ ಗ್ರಾಮೀಣ ಯುವಕರಿಗೆ ಸ್ವ-ಉದ್ಯೋಗದ ತರಬೇತಿ, ಗ್ರಾಮೀಣ ಪ್ರದೇಶದಲ್ಲಿನ ಮಹಿಳೆಯರ ಮತ್ತು ಮಕ್ಕಳ ಅಭಿವೃದ್ಧಿ, ಗ್ರಾಮೀಣ ಪ್ರದೇಶದಲ್ಲಿನ ಕುಶಲಕರ್ಮಿಗಳಿಗೆ ಸುಧಾರಿತ ಸಲಕರಣೆಗಳನ್ನು ಒದಗಿಸುವದು ಮತ್ತು ಗಂಗಾ ಕಲ್ಯಾಣ ಯೋಜನೆ ಸಮಗ್ರ ಗ್ರಾಮೀಣ ಅಭಿವೃದ್ಧಿ ಯೋಜನೆಯ ಉಪಯೋಜನೆಗಳಾಗಿ ಗ್ರಾಮೀಣ ಭಾಗದಲ್ಲಿನ ಬಡ ಜನರ ವಿವಿಧ ಬೇಡಿಕೆಗಳನ್ನು ಪೂರೈಸಲು ಜಾರಿಗೆ ಬಂದವು. 1991ರ ಏಪ್ರಿಲ್ ಒಂದರಂದು ಸಮಗ್ರ ಗ್ರಾಮೀಣ ಅಭಿವೃದ್ಧಿ ಯೋಜನೆ ಮತ್ತು ಇತರೆ ಸಹ ಅಥವಾ ಉಪ ಯೋಜನೆಗಳನ್ನು, ಮಿಲಿಯನ್ ಬಾವಿ ಯೋಜನೆಯನ್ನು ಸೇರಿಸಿ **"ಸ್ವರ್ಣಜಯಂತಿ ಗ್ರಾಮ ಸ್ವ-ರೋಜ್‌ಗಾರ್"** ಎಂಬ ಹೊಸ ಹೆಸರಿನೊಂದಿಗೆ ಯೋಜನೆಯನ್ನು ಜಾರಿಗೆ ತರಲಾಯಿತ್ತು. ಇದರಡಿಯಲ್ಲಿ ಬಡತನ ರೇಖೆಯ ಕೆಳಗಿರುವ ಕುಟುಂಬಗಳಿಗೆ ಯಂತ್ರ ಉಪಕರಣಗಳು, ವ್ಯವಹಾರ ಪ್ರಾರಂಭಿಸಲು ಹಣಕಾಸಿನ ನೆರವು ಈ ಯೋಜನೆಯಲ್ಲಿ ಬಡತನ ರೇಖೆಯ ಕೆಳಗಿನ ಕುಟುಂಬಗಳು ಪಡೆಯಬಹುದಾಗಿದೆ (ಯೋಜನಾ ಆಯೋಗ, 2014).

ಸಮಗ್ರ ಗ್ರಾಮೀಣ ಅಭಿವೃದ್ಧಿ ಯೋಜನೆ ಪ್ರಾರಂಭವಾದಾಗಿನಿಂದಲೂ 1998-99ರ ವರೆಗೆ ದೇಶದಲ್ಲಿನ 53.50 ಮಿಲಿಯನ್ ಬಡತನ ರೇಖೆಯ ಕೆಳಗಿರುವ ಕುಟುಂಬಗಳಿಗೆ ಐಆರ್‌ಡಿಪಿ ಯೋಜನೆಯಿಂದ 13700 ಕೋಟಿ ರೂಪಾಯಿಗಳ ಅನುದಾನವನ್ನು ಭಾರತ ಸರಕಾರವು ಖರ್ಚು ಮಾಡಿದೆ. ಒಂಬತ್ತನೆಯ ಪಂಚವಾರ್ಷಿಕ ಯೋಜನೆಯ ಅವಧಿಯ ಮೊದಲ ಎರಡು ವರ್ಷಗಳಲ್ಲಿ 3.37 ಮಿಲಿಯನ್ ಕುಟುಂಬಗಳು ಯೋಜನೆಯಿಂದ ಅನುಕೂಲತೆಯನ್ನು ಪಡೆದಿವೆ. ಇದರಲ್ಲಿ ಶೇಕಡಾ 46ರಷ್ಟು ಪರಿಶಿಷ್ಟ ಜಾತಿ/ಪಂಗಡದವರು ಮತ್ತು ಶೇಕಡಾ 35ರಷ್ಟು ಮಹಿಳೆಯರು ಇರುವದು ಪ್ರಮುಖವಾಗಿದೆ. ಇದಕ್ಕಾಗಿ ಈ ಒಂದು ಅವಧಿಯಲ್ಲಿ 2466 ಕೋಟಿ ರೂಪಾಯಿಗಳ ರಿಯಾಯಿತಿಯು ಸೇರಿದಂತೆ ಒಟ್ಟು 6431 ಕೋಟಿ ರೂಪಾಯಿಗಳ ಹೂಡಿಕೆಯನ್ನು ಮಾಡಲಾಗಿದೆ. ಈ ಕಾರ್ಯಕ್ರಮ ಆರಂಭವಾದ 20 ವರ್ಷಗಳಿಂದ ಇಷ್ಟೆಲ್ಲಾ ಕೋಟಿಗಟ್ಟಲೆ ಹಣವನ್ನು ಹೂಡಿಕೆ ಮಾಡಿದ್ದರೂ ದೇಶದಲ್ಲಿರುವ ಬಡವರ ಸಂಖ್ಯೆಯಲ್ಲಿ ಯಾವುದೇ ರೀತಿಯ ವ್ಯತ್ಯಾಸವಾಗಿಲ್ಲ. ಅಂದರೆ ಯೋಜನೆ ಪ್ರಾರಂಭದ ಸಮಯದಲ್ಲಿದ್ದ 55 ಮಿಲಿಯನ್ ಬಡವರಲ್ಲಿನ ಸಂಖ್ಯೆಯು ಅಷ್ಟಕ್ಕೆ ಸೀಮಿತವಾಗಿರುವದು ಕಂಡುಬರುತ್ತದೆ. ಈ ಯೋಜನೆಯ ಕುರಿತು ಅನೇಕ ಸಂಶೋಧಕರು, ರಾಷ್ಟ್ರೀಯ ಮತ್ತು

ಅಂತರಾಷ್ಟ್ರೀಯ ಮಟ್ಟದಲ್ಲಿ ಅಧ್ಯಯನಗಳು ನಡೆದಿವೆ. ಈ ಎಲ್ಲ ಅಧ್ಯಯನಗಳಿಂದ ಈ ಯೋಜನೆಯ ಕುರಿತು ಪರಿಕಲ್ಪನೆ ಮತ್ತು ಹಲವಾರು ಆಡಳಿತ್ಮಾಕ ತೊಂದರೆಗಳಿಂದ ಕೂಡಿದೆ ಎಂದು ಅಭಿಪ್ರಾಯಪಟ್ಟಿವೆ (ಯೋಜನಾ ಆಯೋಗ, 2014).

**ಉದ್ಯೋಗ ಆಧಾರಿತ ಯೋಜನೆಗಳು**

ಉದ್ಯೋಗಾಧರಿತ ಅಥವಾ ಕೂಲಿಯಾಧಾರಿತ ಯೋಜನೆಗಳು ಬಡತನ ನಿವಾರಣೆಯಲ್ಲಿ ಒಂದು ಪ್ರಮುಖವಾದ ಕಾರ್ಯಕ್ರಮಗಳು ಮತ್ತು ಇವುಗಳಿಂದ ಬಹು ಉದ್ದೇಶಗಳನ್ನು ಇಟ್ಟುಕೊಂಡು ಯೋಜನೆಗಳನ್ನು ರೂಪಿಸಲಾಗಿದೆ. ಈ ಯೋಜನೆಗಳು ಕೇವಲ ಕೃಷಿ ಚಟುವಟಿಕೆಗಳು ಇಲ್ಲದ ಅವಧಿಯಲ್ಲಿ ಅಲ್ಲದೆ ಬರಗಾಲ, ಅತಿವೃಷ್ಟಿ ಮತ್ತು ಇತರೆ ನೈಸರ್ಗಿಕ ವಿಕೋಪಗಳು ಸಂಭವಿಸಿದಾಗ ಕೂಡ ಈ ಯೋಜನೆಗಳು ಉಪಯೋಗವಿರುತ್ತದೆ. ಈ ಯೋಜನೆಗಳು ಗ್ರಾಮೀಣ ಪ್ರದೇಶದಲ್ಲಿ ಮೂಲಭೂತ ಸೌಕರ್ಯಗಳು ನಿರ್ಮಿಸುತ್ತವೆ. ಯೋಜನೆಗಳಿಂದ ಜನರು ಸಾರ್ವಜನಿಕ ಕಾರ್ಯಕ್ರಮಗಳಲ್ಲಿ ತೊಡಗಿಕೊಳ್ಳುವುದರಿಂದ ಮಾರುಕಟ್ಟೆಯಲ್ಲಿ ಕೂಲಿಯ ದರವನ್ನು ಹೆಚ್ಚಾಗಿ ಜನರನ್ನು ಆಕರ್ಷಿಸಿಸುತ್ತದೆ. ಇದರಿಂದ ಕಾರ್ಮಿಕರ ಪೂರೈಕೆಯನ್ನು ಕಡಿಮೆಗೊಳಿಸಿ ಬೇಡಿಕೆಯನ್ನು ನಿರ್ಮಿಸಿಸುತ್ತವೆ. ಕ್ರಿ.ಶ.1970ರ ದಶಕದಲ್ಲಿ ದೇಶದಲ್ಲಿದ್ದ ಆಹಾರದ ಕೊರತೆಯನ್ನು ಹೋಗಲಾಡಿಸಿ ನಂತರದಲ್ಲಿ ಉದ್ಯೋಗ ಯೋಜನೆಗಳನ್ನು ಪ್ರಾರಂಭಿಸಲಾಯಿತ್ತು. ಈ ಮೊದಲು ಇದ್ದ ರಾಷ್ಟ್ರೀಯ ಗ್ರಾಮೀಣ ಭೂ-ರಹಿತ ಉದ್ಯೋಗ ಕಾರ್ಯಕ್ರಮ, ಗ್ರಾಮೀಣ ಭೂ ರಹಿತಿಗೆ ಉದ್ಯೋಗ ಖಾತ್ರಿ ಯೋಜನೆಗಳನ್ನು ಆರನೇ ಮತ್ತು ಏಳನೇ ಯೋಜನೆಗಳಲ್ಲಿ ಪ್ರಾರಂಭಿಸಲಾಯಿತ್ತು. ನಂತರದಲ್ಲಿ ಏಪ್ರಿಲ್ 1989ರಲ್ಲಿ ಈ ಎರಡು ಯೋಜನೆಗಳನ್ನು ಕೂಡಿಸಿ ಜವಾಹರ್ ರೋಜ್‌ಗಾರ್ ಯೋಜನೆಯನ್ನು ಜಾರಿಗೆ ತರಲಾಯಿತ್ತು. ಈ ಯೋಜನೆಯಡಿಯಲ್ಲಿ ಅನೇಕರಿಗೆ ಉದ್ಯೋಗ ಅವಕಾಶಗಳನ್ನು ದೊರಕಿಸಿಕೊಟ್ಟಿದೆ ಮತ್ತು ಸಮುದಾಯದಲ್ಲಿ ಸಾಮಾಜಿಕ ಆಸ್ತಿಗಳನ್ನು ನಿರ್ಮಾಣ ಮಾಡಲಾಗಿದೆ. ಅವುಗಳಲ್ಲಿ ಗ್ರಾಮೀಣ ರಸ್ತೆ ಮತ್ತು ಸಾರ್ವಜನಿಕ ಕಟ್ಟಡಗಳು ಸೇರಿವೆ. ಏಪ್ರಿಲ್ 1 1999ರಲ್ಲಿ ಈ ಯೋಜನೆಯನ್ನು ಜವಾಹರ್ ಗ್ರಾಮ ಸಮೃದ್ಧಿ ಯೋಜನೆ ಎಂದು ಹೆಸರಿಸಲಾಯಿತ್ತು. ಇದರಡಿಯಲ್ಲಿ ಕೈಗೊಳ್ಳುವ ಕಾಮಗಾರಿಗಳಲ್ಲಿ ಶೇಕಡಾ 60:40ರಂತೆ ಕೂಲಿ ಕಾರ್ಮಿಕರು/ ಸಲಕರಣೆಗಳನ್ನು ಬಳಸಬಹುದೆಂದು ನಿಯಮ ರೂಪಿಸಲಾಯಿತ್ತು. ಆದರೆ ಕ್ಷೇತ್ರದಲ್ಲಿ ಇದರಂತೆ ಕಾರ್ಯಗತಗೊಳ್ಳುವುದು ಬಹಳ ಕಷ್ಟಕರವಾಗಿದೆ.

**ಉದ್ಯೋಗ ಖಾತ್ರಿ ಯೋಜನೆ**

ಈ ಯೋಜನೆಯು 1993ರ ರಾಷ್ಟ್ರಪಿತರಾದ ಶ್ರೀ ಮೋಹನಚಂದ್ ಕರಮಚಂದ್ ಗಾಂಧೀಜಿಯವರ ಜಯಂತಿಯ ದಿನವಾದ ಅಕ್ಟೋಬರ್ ಎರಡರಂದು ದೇಶದ 1772 ಬ್ಲಾಕ್‌ಗಳಲ್ಲಿ ಜಾರಿಗೆ ತರಲಾಯಿತ್ತು. ಈ ಬ್ಲಾಕ್‌ಗಳು ಗುಡ್ಡಗಾಡು ಪ್ರದೇಶ, ಮರಳುಗಾಡು, ಬರಗಾಲ

ಪೀಡಿತ ಪ್ರದೇಶ ಮತ್ತು ಬೆಟ್ಟಗುಡ್ಡಗಳಿಂದ ಪ್ರದೇಶಗಳಲ್ಲಿ ಮಾತ್ರ ಪ್ರಾರಂಭಿಸಲಾಯಿತ್ತು. ಈಗಾಗಲೇ ಪರಿಷ್ಕರಿಸಿದ ಸಾರ್ವಜನಿಕ ವಿತರಣಾ ವ್ಯವಸ್ಥೆ ಕಾರ್ಯಕ್ರಮವೂ ಜಾರಿಯಲ್ಲಿದ್ದ ಪ್ರದೇಶಗಳನ್ನು ಮಾತ್ರ ಆಯ್ಕೆ ಮಾಡಿಕೊಳ್ಳಲಾಯಿತ್ತು. ನಂತರದಲ್ಲಿ ಉದ್ಯೋಗ ಖಾತ್ರಿ ಯೋಜನೆಯು ದೇಶದ ಎಲ್ಲ ಕಡೆ ವಿಸ್ತರಿಸಲಾಯಿತು. ಈ ಯೋಜನೆಯ ಪ್ರಮುಖವಾದ ಉದ್ದೇಶವೇನೆಂದರೆ ಹೆಚ್ಚುವರಿ ವೇತನಗಳ ರೂಪದಲ್ಲಿ ಗ್ರಾಮೀಣ ಪ್ರದೇಶದಲ್ಲಿನ ಬಡವರಿಗೆ ಕೆಲಸದ ಅಭಾವ ಅಥವ ಉದ್ಯೋಗದ ತೀವ್ರವಾದ ಕೊರತೆಯಾದಾಗ ಕೈಯಿಂದ ಮಾಡುವ ಉದ್ಯೋಗಗಳ ಅವಕಾಶಗಳನ್ನು ಸೃಷ್ಟಿಸುವುದು. ಈ ಯೋಜನೆಯ ಎರಡನೆಯ ಉದ್ದೇಶವೇನೆಂದರೆ ಸುಸ್ಥಿರ ಉದ್ಯೋಗ ಅವಕಾಶ ಮತ್ತು ಅಭಿವೃದ್ಧಿಗಾಗಿ ಬಾಳಿಕೆ ಬರುವ ಸಮುದಾಯ, ಸಾಮಾಜಿಕ ಮತ್ತು ಆರ್ಥಿಕತೆಯನ್ನು ಸೃಷ್ಟಿಸುವುದು. ಈ ಯೋಜನೆಯು ಗ್ರಾಮೀಣ ಪ್ರದೇಶದಲ್ಲಿರುವ ಎಲ್ಲ ಪಂಗಡಗಳ ಬಡವರಿಗಾಗಿ ಜಾರಿಯಲ್ಲಿ ತರಲಾಯಿತ್ತು. ಯೋಜನೆಯಲ್ಲಿ ಕನಿಷ್ಟ ಮಟ್ಟದ ವೇತನವನ್ನು ನಿಗದಿ ಮಾಡಿರುವದ್ದರಿಂದ ಕೌಶಲ್ಯರಹಿತ ಜನರನ್ನು ಸೆಳೆಯುವ ಉದ್ದೇಶದಿಂದ ಜಾರಿ ಮಾಡಲಾಯಿತು (ಯೋಜನಾ ಆಯೋಗ, 2014).

**ಗ್ರಾಮೀಣ ವಸತಿ ಯೋಜನೆ**

ಈ ಯೋಜನೆಯು 1985–86ರಲ್ಲಿ ಪ್ರಾರಂಭವಾಯಿತ್ತು. ಇದರಡಿಯಲ್ಲಿ ಇಂದಿರಾ ಆವಾಸ್ ಯೋಜನೆಯು ಒಂದು ಪ್ರಮುಖವಾದ ಕಾರ್ಯಕ್ರಮವಾಗಿದ್ದು ಗ್ರಾಮೀಣ ಪ್ರದೇಶದಲ್ಲಿನ ಬಡತನ ರೇಖೆಯ ಕೆಳಗಿರುವ ಕುಟುಂಬಗಳಿಗೆ ಉಚಿತವಾಗಿ ವಸತಿಗಳನ್ನು ಒದಗಿಸುವುದು. ಮತ್ತು ಪರಿಶಿಷ್ಟ ಜಾತಿ/ಪಂಗಡಗಳನ್ನು ಗುರಿಯನ್ನಾಗಿಸುವುದು ಮತ್ತು ಉಚಿತ ಜೀತದಾಳುಗಳು. ಪ್ರಾರಂಭದಲ್ಲಿ ಇದು ಜವಹಾರ ರೋಜ್‌ಗಾರ ಯೋಜನೆಯೊಂದಿಗೆ ಕೂಡಿಸಿ ಪ್ರಾರಂಭಿಸಲಾಯಿತ್ತು ಆದರೆ 1996ರಲ್ಲಿ ಗ್ರಾಮೀಣ ಪ್ರದೇಶದಲ್ಲಿನ ಬಡವರಿಗಾಗಿಯೇ ವಸತಿ ಯೋಜನೆಯಾಗಿ ಹೊರಹೊಮ್ಮಿತು. 1996ರಲ್ಲಿ ಇಂದಿರಾ ಆವಾಸ ಯೋಜನೆಯನ್ನು ರಾಷ್ಟ್ರೀಯ ವಸತಿ ಮತ್ತು ಇಂದಿರಾ ಆವಾಸ್ ಯೋಜನೆಯ ನಿಯಮಾವಳಿ 1998ರಲ್ಲಿ ರಚಿಸಲಾಯಿತ್ತು. ಇದರಡಿಯಲ್ಲಿ ಗ್ರಾಮೀಣ ಪ್ರದೇಶದಲ್ಲಿರುವ ಎಲ್ಲಾ ಬಡವರಿಗೆ ಒಂದು ಸೂರನ್ನು ಒದಗಿಸುವಲ್ಲಿ ಪ್ರಯತ್ನಿಸಲಾಗಿದೆ.

ವಸತಿ ಯೋಜನೆಗಳಲ್ಲಿ ಹಲವಾರು ರೀತಿಯ ಯೋಜನೆಗಳಿವೆ ಅವುಗಳಲ್ಲಿ ಇಂದಿರಾ ಆವಾಸ್, ಅಂಬೇಡಕರ ವಸತಿ ಯೋಜನೆ, ಬಸವಾ ವಸತಿ ಯೋಜನೆ, ರಾಜೀವ್ ವಸತಿ ಯೋಜನೆ ಹೀಗೆ ಹಲವಾರು ವಸತಿ ಯೋಜನೆಗಳ ಅಡಿಯಲ್ಲಿ ವಸತಿ ಇಲ್ಲದ ಬಡತನ ರೇಖೆಯ ಕೆಳಗಿನ ಕುಟುಂಬಗಳಿಗೆ ಸೂರನ್ನು ಒದಗಿಸುವ ಉದ್ದೇಶದೊಂದಿಗೆ ಪ್ರಾರಂಭವಾಗಿವೆ. ವಸತಿ ಯೋಜನೆಯಲ್ಲಿ ಕೇಂದ್ರ ಸರಕಾರ ಮತ್ತು ರಾಜ್ಯ ಸರಕಾರಗಳ ಅನುದಾನದ ಅಡಿಯಲ್ಲಿ ಈ ಕೆಳಗಿನ ಯೋಜನೆಗಳು ಕರ್ನಾಟಕ ರಾಜ್ಯದಲ್ಲಿ ಪ್ರಸ್ತುತವಾಗಿ ಜಾರಿಯಲ್ಲಿವೆ.

**ಗ್ರಾಮೀಣ ಆಶ್ರಯ ಯೋಜನೆ**

ರಾಜ್ಯದಲ್ಲಿರುವ ಎಲ್ಲಾ ವರ್ಗದ ಕುಟುಂಬಗಳಿಗೆ ಪ್ರತಿ ಮನೆಗೆ ಆರ್ಥಿಕ ಸಹಾಯ ಗರಿಷ್ಠ ರೂ. 40000ರವು ಸಾಲದ ಹಾಗೂ ಸಹಾಯಧನದ ರೂಪದಲ್ಲಿ ಆದರೆ ಈ ಆರ್ಥಿಕ ಸಹಾಯ ಒದಗಿಸುವ ವಿಧಾನಗಳಾದ ಸಾಲ ಅಥವಾ ಸಹಾಯಧನದ ಮೊತ್ತದ ಮಿತಿಯನ್ನು ಸರ್ಕಾರವು ಆಗಿಂದ್ದಾಗೆ ನಿಗದಿಪಡಿಸಬಹುದಾದ ಮಾರ್ಪಾಡುಗಳಿಗೆ ಒಳಪಟ್ಟಿರುತ್ತದೆ. ಈ ಯೋಜನೆಯಲ್ಲಿ ವಿವಿಧ ವರ್ಗದ ಕುಟುಂಬಗಳಿಗೆ ನಿಗದಿಪಡಿಸಿದ ಆರ್ಥಿಕ ಮತ್ತು ಸಾಲದ ಸಹಾಯಧನದ ವಿವರಣೆ ಈ ಕೆಳಗಿನಂತಿದೆ ಅ) ಸಾಲ ಸಾಮಾನ್ಯ ವರ್ಗದ ಫಲಾನುಭವಿಗಳಿಗೆ ಗರಿಷ್ಠ ರೂ 20000, ಪರಿಶಿಷ್ಟ ಜಾತಿ/ಪಂಗಡದ ಫಲಾನುಭವಿಗಳಿಗೆ 40000/ ಫಲಾನುಭವಿಯ ಸ್ವಸಹಾಯ ವಂತಿಗೆ ಈ ಯೋಜನೆಯಡಿಯಲ್ಲಿ ಒದಗಿಸಲಾಗುವ ಆರ್ಥಿಕ ಸಹಾಯದ ಜೊತೆಗೆ, ಫಲಾನುಭವಿಯು ತನ್ನ ಸಾಮರ್ಥ್ಯ ಹಾಗೂ ವಸತಿಯ ಅವಶ್ಯಕತೆಗೆ ಅನುಸಾರವಾಗಿ ಸಾಧ್ಯವಾದಷ್ಟು ಸ್ವಂತ ಉಳಿತಾಯ ಹೂಡಿಕೆ ಮಾಡಿ ಹೆಚ್ಚಿನ ಹಾಗೂ ಉತ್ತಮ ಸೌಲಭ್ಯಗಳನ್ನು ಹೊಂದಬಹುದು. ಸರಕಾರವು ಕೊಟ್ಟಿರುವ ಸಾಲದ ಹಣಕ್ಕೆ ವಾರ್ಷಿಕ ಶೇಕಡಾ 11ರ ಬಡ್ಡಿಯ ದರವನ್ನು ವಿಧಿಸಲಾಗುತ್ತದೆ. ಇದನ್ನು ಮರುಪಾವತಿಯ ಹಣ ಮತ್ತು ಅವಧಿ: ಅಸಲು ಬಡ್ಡಿ ಸೇರಿ ಮಾಸಿಕ ಸಮಕಂತು ಗರಿಷ್ಟ 180 ಮಾಸಿಕ ಸಮಾನ ಕಂತುಗಳು ರೂ. 20000/– ಸಾಲಕ್ಕೆ ಮಾಸಿಕ ಸಮಕಂತು ರೂ. 230/–, ಒಟ್ಟಾರೆಯಾಗಿ ಫಲಾನುಭವಿಯು ಪ್ರತಿ ತಿಂಗಳು ಮರುಪಾವತಿ ಸಲುವಾಗಿ ಅಗತ್ಯವಾದ ಮೊತ್ತವನ್ನು ಸತತವಾಗಿ ಉಳಿತಾಯ ಮಾಡುವುದು ಅಪೇಕ್ಷನೀಯವಾಗಿದೆ. ಸಾಲದ ಮೊತ್ತ ಹೆಚ್ಚಾದಲ್ಲಿ ಅದಕ್ಕೆ ತಕ್ಕಂತೆ ಉಳಿತಾಯ ಮಾಡುವುದು ಮತ್ತು ಪ್ರತಿ ತಿಂಗಳ ಮರುಪಾವತಿ ಕಂತಿನ ಮೊತ್ತ ಸಹ ಹೆಚ್ಚಾಗುತ್ತದೆ (ಕರ್ನಾಟಕ ಸರಕಾರ, 2014).

ಎಷ್ಟೆಲ್ಲಾ ಷರತ್ತುಗಳು ಇದ್ದರೂ ಸಹ ಸರಕಾರ ಈ ಯೊಜನೆಗೆ ಅರ್ಹತೆಗಳು ಮತ್ತು ಕೆಲ ಷರತ್ತುಗಳನ್ನು ಪ್ರಕಟಿಸಿರುತ್ತದೆ. ಅವುಗಳು ಈ ಕೆಳಗಿನಂತೆ ಇವೆ 1. ಫಲಾನುಭವಿಯು ಕರ್ನಾಟಕ ರಾಜ್ಯದ ಪ್ರಜೆಯಾಗಿದ್ದು ಯಾವುದೇ ಗ್ರಾಮೀಣ ಪ್ರದೇಶದಲ್ಲಿ ವಾಸವಾಗಿರಬೇಕು ಮತ್ತು ಗ್ರಾಮ ಸಭಾದ ನಿವೇಶನ ರಹಿತ/ವಸತಿರಹಿತರ ಪಟ್ಟಿಯಲ್ಲಿ ಸೇರಿರಬೇಕು. 2. ಫಲಾನುಭವಿಯು ಆರ್ಥಿಕವಾಗಿ ಹಿಂದುಳಿದಿದ್ದ, ವಾರ್ಷಿಕ ಆದಾಯವು ಬಡತನ ರೇಖೆಗಿಂತ ಕೆಳಗಿರುವವರಿಗೆ ನಿಗದಿಪಡಿಸಿರುವ ಮಿತಿಗಿಂತ ಕಡಿಮೆ ಇರಬೇಕು ಈ ಮಿತಿಯು ಪ್ರಸ್ತುತವಾಗಿ ವಾರ್ಷಿಕ ರೂ. 11800/– ಆಗಿರುತ್ತದೆ. 3. ಮನೆ/ನಿವೇಶನ ಹಕ್ಕುಪತ್ರವನ್ನು ಹೆಂಡತಿ ಹೆಸರಿನಲ್ಲಿ ವಿತರಿಸಬೇಕು. ಒಂದು ವೇಳೆ ಅವಿವಾಹಿತ ಪುರುಷರು ಮತ್ತು ವಿಧುರರು ಆಯ್ಕೆಯಾಗಿದ್ದಲ್ಲಿ ಅವರ ಹೆಸರಿನಲ್ಲಿ ಹಕ್ಕುಪತ್ರ ವಿತರಿಸಬಹುದು. 4. ಬೇರೆ ಯಾವುದೇ ಯೋಜನೆ/ಇಲಾಖೆಯಿಂದ ಈಗಾಗಲೇ ವಸತಿ ಸೌಲಭ್ಯ ಪಡೆದಿರಬಾರದು. 5. ನಿಯಮಾನುಸಾರ ಪರಿಶಿಷ್ಟ ಜಾತಿ/ ಪಂಗಡದವರಿಗೆ ಮೀಸಲಾತಿ ಇರುತ್ತದೆ (ಕರ್ನಾಟಕ ಸರಕಾರ, 2014).

ಷರತ್ತುಗಳು ಮುಗಿದ ನಂತರದಲ್ಲಿ ಫಲಾನುಭವಿಗಳ ಆಯ್ಕೆ ಪ್ರಕ್ರೀಯೆ ನಡೆಯುತ್ತದೆ. ಇದು ಈಗಾಗಲೇ ಸಮೀಕ್ಷೆ ಮೂಲಕ ನಿವೇಶನ ರಹಿತರ ಪಟ್ಟಿ ಹಾಗೂ ಸ್ವಂತ ನಿವೇಶನವನ್ನು ಹೊಂದಿದ್ದು ಮನೆ ಇಲ್ಲದವರ ಪಟ್ಟಿಯನ್ನು ತಯಾರಿಸಲಾಗುತ್ತದೆ, ಆ ಪಟ್ಟಿಯಲ್ಲಿ ಇನ್ನೂ ಸೇರ್ಪಡೆ ಆಗದೇ ಇರುವ ನೈಜ ಮತ್ತು ಅರ್ಹ ಅಭ್ಯರ್ಥಿಗಳನ್ನು ಸೇರಿಸಿ ಮತ್ತು ಅನರ್ಹ ಅಭ್ಯರ್ಥಿಗಳಿದ್ದರೆ ಅಂತಹವರನ್ನು ಪಟ್ಟಿಯಿಂದ ತೆಗೆದು ಹಾಕಿ ಪರಿಷ್ಕೃತ ಪಟ್ಟಿಯನ್ನು ಗ್ರಾಮ ಪಂಚಾಯಿತಿಗಳು ಗ್ರಾಮ ಸಭೆಗಳ ಮೂಲಕ ತಯಾರಿಸಬೇಕು. ಇಂತಹ ಪರಿಷ್ಕೃತ ಪಟ್ಟಿಯಲ್ಲಿ ಇರುವ ಫಲಾನುಭವಿಗಳನ್ನು ಮಾತ್ರ ಗ್ರಾಮಸಭೆಗಳಲ್ಲಿ ಆಯ್ಕೆ ಮಾಡಬೇಕಾಗುತ್ತದೆ.

ಮನೆಗಳ ವಿಸ್ತೀರ್ಣ ಮತ್ತು ವಿನ್ಯಾಸ ಸರಕಾರ ನಿಗದಿಪಡಿಸಿದ ಮಾದರಿಯಲ್ಲಿಯೇ ಇರಬೇಕು. ಆ ಮನೆಯು ಕನಿಷ್ಟ 20 ಚ.ಮೀ. ನೆಲಗಟ್ಟು ವಿಸ್ತೀರ್ಣ ಇರುವಂತೆ ಮನೆ ನಿರ್ಮಿಸಬೇಕು ಎಂಬ ನಿಯಮವಿದೆ. ಇದಕ್ಕಾಗಿ ಯಾವುದೇ ನಕ್ಷೆ ಅಥವಾ ವಿನ್ಯಾಸ ನಿಗದಿಪಡಿಸಿರುವುದಿಲ್ಲ. ಆದರೆ ಫಲಾನುಭವಿಗಳಿಗೆ ಅನುಕೂಲವಾಗುವಂತೆ ಮಣ್ಣು, ಹವಾಗುಣ, ಪರಿಸ್ಥಿತಿ, ಸ್ಥಳೀಯವಾಗಿ ಲಭ್ಯವಿರುವ ಸಾಮಗ್ರಿಗಳ ಬಳಕೆ ಇತ್ಯಾದಿ ಅಂಶಗಳನ್ನು ಪರಿಗಣಿಸಿ ಪ್ರದೇಶವಾರು ಮತ್ತು ಬದಲಿ ವಿನ್ಯಾಸಗಳನ್ನು ಅನುಸರಿಸಬಹುದು. ಮನೆ ನಿರ್ಮಾಣದ ಪ್ರತಿ ಹಂತದಲ್ಲಿಯೂ ಫಲಾನುಭವಿಯು ಸಕ್ರಿಯವಾಗಿ ಪಾಲ್ಗೊಂಡು ಒಳ್ಳೆಯ ಗುಣಮಟ್ಟದ ಹಾಗೂ ಹೆಚ್ಚಿನ ಸೌಲಭ್ಯಗಳನ್ನು ಹೊಂದಬಹುದು. ಇಂದಿರಾ ಆವಾಸ್ ಯೋಜನೆಯಲ್ಲಿ ಇರುವಂತೆ ಸುಧಾರಿತ ಒಲೆ ನೈರ್ಮಲೀಕರಣ, ನಕ್ಷೆ ಸುಧಾರಿತ ಕಟ್ಟಡ ಉಪಕರಣಗಳ ಬಳಕೆ ಇತ್ಯಾದಿ ಅಂಶಗಳು ಹೆಚ್ಚುವರಿಯಾಗಿ ಯತಾವತ್ ಈ ಯೋಜನೆಗೂ ಸಹ ಅನ್ವಯಿಸಬಹುದಾಗಿದೆ. ಇವುಗಳಲ್ಲದೆ ಫಲಾನುಭವಿಯು ಸಾಲದ ಮೊತ್ತವನ್ನು 180 ಸಮ ಕಂತುಗಳಲ್ಲಿ ತೀರಿಸಲು ಒಪ್ಪಬೇಕಾಗಿರುತ್ತದೆ. ಫಲಾನುಭವಿಯು ತನ್ನ ಪಾಲಿನ ವಂತಿಗೆಯ ಹಣವನ್ನು ಭರಿಸಲು ಸಿದ್ಧರಿರಬೇಕು. ಸಾಲದ ಕಂತುಗಳನ್ನು ತೀರಿಸಲು ನಿಗದಿಪಡಿಸಿದ ಬ್ಯಾಂಕುಗಳಲ್ಲಿ ಉಳಿತಾಯ ಖಾತೆ ಹಾಗೂ ಪಿಗ್ಮಿ ಖಾತೆ ತೆರೆದಿರಬೇಕು ಅಥವಾ ಗ್ರಾಮ ಪಂಚಾಯಿತಿ ಮೂಲಕ ಮರುಪಾವತಿ ಮಾಡಬಹುದು. ಸಾಲ ಮರುಪಾವತಿ ಆಗುವವರೆಗೆ ಫಲಾನುಭವಿಗೆ ಕೇವಲ ಮನೆಯ ಸ್ವಾಧೀನವನ್ನು ಉಪಯೋಗಕ್ಕೆ ಮಾತ್ರ ಕೊಡಲಾಗುವುದು ಹಾಗೂ ಸಾಲ ತೀರಿದ ನಂತರ ಸ್ವತ್ತಿನ ಒಡೆತನವನ್ನು ವರ್ಗಾವಣೆ ಮಾಡಲಾಗುವುದು. ಒಟ್ಟಾರೆ ಆಗಿಂದ್ದಾಗೆ ಸರ್ಕಾರವು ಗ್ರಾಮೀಣ ಆಶ್ರಯ ಯೋಜನೆ ಅನುಷ್ಠಾನಕ್ಕೆ ಸಂಬಂಧಿಸಿದಂತೆ ವಿಧಿಸಬಹುದಾದ ನಿಯಮ ಮತ್ತು ಷರತ್ತುಗಳನ್ನು ತಪ್ಪದೇ ಪಾಲಿಸಬೇಕು. ಹಂಚಿಕೆಯಾದ ಮನೆ ನಿರ್ಮಾಣ ಮಾಡುವ ಕ್ರಮವು ಸಹ ಸರಕಾರವೇ ನಿಯಂತ್ರಿಸುತ್ತದೆ.

ಯೋಜನೆಗಳ ಮೂಲಕ ಹಂಚಿಕೆಯಾದ ಮನೆಗಳನ್ನು ಈ ಕೆಳಗಿನ ಷರತ್ತಿನಂತೆ ಕಟ್ಟಿಕೊಳ್ಳಬೇಕು.

1. ಸ್ವಂತ ಫಲಾನುಭವಿಗಳಿಂದ 2. ಏಜೆನ್ಸಿ ಮೂಲಕ. ಫಲಾನುಭವಿಯೇ ತನ್ನ ಸ್ವಂತ ಮನೆಯನ್ನು ಸ್ಥಳೀಯವಾಗಿ ಅನುಮೋದಿತ ನಕ್ಷೆಗನುಗುಣವಾಗಿ ಕಟ್ಟಿಕೊಳ್ಳಬಹುದು ಇದಕ್ಕಾಗಿ ಬೇಕಾಗುವ

ಹಣವನ್ನು ಕಾಮಗಾರಿ ಆದೇಶ ಹೊರಡಿಸಿ ನಿಗದಿತ ಕಂತುಗಳಲ್ಲಿ ಹಣವನ್ನು ನೇರವಾಗಿ ಫಲಾನುಭವಿಗಳ ಬ್ಯಾಂಕ್ ಖಾತೆ ಮೂಲಕ ನೀಡಲಾಗುವುದು. ಅಥವಾ 2. ಫಲಾನುಭವಿಯು ಇಚ್ಛಿಸಿದಲ್ಲಿ, ನಿಗಮವು ನೇಮಿಸುವ ಯಾವುದಾದರೊಂದು ಸಂಸ್ಥೆಯ ಮೂಲಕ ಮನೆ ಕಟ್ಟಿಸಿಕೊಡಲಾಗುವುದು. ಸರಕಾರವು ನೇಮಿಸುವ ಸಂಸ್ಥೆಗಳು ನಿರ್ಮಿತಿ ಕೇಂದ್ರ, ಭೂಸೇನಾ ನಿಗಮ, ಜಿಲ್ಲಾ ಪಂಚಾಯಿತಿ, ತಾಂತ್ರಿಕ ವಿಭಾಗ, ಸರ್ಕಾರೇತರ ಸಂಸ್ಥೆ ಮತ್ತು ಇತ್ಯಾದಿ. ಈ ಮೇಲಿನ ಎಲ್ಲಾ ಷರತ್ತುಗಳ ಹೊರತಾಗಿ ಸರಕಾರವು ಈ ಕೇಳಗಿನ ಷರತ್ತುಗಳನ್ನು ವಿಧಿಸುತ್ತದೆ. ಫಲಾನುಭವಿಗಳು ಪ್ರತಿ ತಿಂಗಳು ಸಾಲದ ಸಮಕಂತುಗಳನ್ನು ತೀರಿಸಲು ಅನುಗುಣವಾಗುವಂತೆ ಹಣವನ್ನು ತಪ್ಪದೇ ಉಳಿಸಬೇಕು. ಸಮಕಂತುಗಳನ್ನು ಪಾವತಿ ಮಾಡಲು ವಿಫಲವಾದಲ್ಲಿ ಅಂತಹವರ ಮನೆಯನ್ನು ವಾಪಸ್ಸು ಪಡೆದು ಇತರೆ ಅರ್ಹ ಫಲಾನುಭವಿಗೆ ಹಂಚಿಕೆ ಮಾಡಬಹುದಾಗಿರುತ್ತದೆ ಅಥವಾ ವಿಲೇವಾರಿ ಮಾಡಿ ಬಂದ ಹಣವನ್ನು ಬಾಕಿ ಮೊತ್ತಕ್ಕೆ ಹೊಂದಿಸಿಕೊಳ್ಳಬಹುದಾಗಿರುತ್ತದೆ (ಕರ್ನಾಟಕ ಸರಕಾರ, 2014).

**ಅಂಬೇಡ್ಕರ್ ವಸತಿ ಯೋಜನೆ**

ಈ ಯೋಜನೆಯಡಿಯಲ್ಲಿ ಗ್ರಾಮೀಣ ಪ್ರದೇಶದಲ್ಲಿನ ಆರ್ಥಿಕವಾಗಿ ಹಿಂದುಳಿದ ಪರಿಶಿಷ್ಟ ಜಾತಿ ಮತ್ತು ಪಂಗಡಗಳಿಗೆ ಸೇರಿದ ಎಲ್ಲ ಅರ್ಹ ಕುಟುಂಬಗಳಿಗೆ ಸಹಾಯಧನದ ರೂಪದಲ್ಲಿ ಗರಿಷ್ಠ ರೂಪಾಯಿ 40000 ನೀಡಲಾಗುವುದು. ಈ ಆರ್ಥಿಕ ಸಹಾಯಕ್ಕೆ ಸರ್ಕಾರವು ಆಗಿಂದ್ದಾಗೆ ನಿಗದಿಪಡಿಸಬಹುದಾದ ಮಾರ್ಪಾಡುಗಳಿಗೆ ಒಳಪಟ್ಟಿರುತ್ತದೆ. ಅ) ಈ ಯೋಜನೆಯಲ್ಲಿ ಯಾವುದೇ ರೀತಿಯ ಸಾಲ ಸೌಲಭ್ಯದ ವ್ಯವಸ್ಥೆ ಇರುವುದಿಲ್ಲ, ಇನ್ನು ಆ) ಸಹಾಯಧನವನ್ನು ಸಾಮಾಜಿಕ ಪಂಗಡಗಳಗನುಗುಣವಾಗಿ ಹೇಳುವುದಾದರೆ ಪರಿಶಿಷ್ಟ ಜಾತಿ/ಪಂಗಡದ ಫಲಾನುಭವಿಗಳಿಗೆ ರೂ. 40000/–. 2. ಪ್ರತಿ ಮನೆಗೆ ಆರ್ಥಿಕ ಸಹಾಯ ಇ) ಫಲಾನುಭವಿಯ ಸ್ವಸಹಾಯ ವಂತಿಗೆ ಈ ಯೋಜನೆಯಡಿಯಲ್ಲಿ ಒದಗಿಸಲಾಗುವ ಆರ್ಥಿಕ ಸಹಾಯಧನದ ಜೊತೆಗೆ, ಫಲಾನುಭವಿಯು ತನ್ನ ಸಾಮರ್ಥ್ಯ ಹಾಗೂ ವಸತಿಯ ಅವಶ್ಯಕತೆಗೆ ಅನುಸಾರವಾಗಿ ಸಾಧ್ಯವಾದಷ್ಟು ಸ್ವಂತ ಉಳಿತಾಯ ಹೂಡಿಕೆ ಮಾಡಿ ಹೆಚ್ಚಿನ ಹಾಗೂ ಉತ್ತಮ ಸೌಲಭ್ಯಗಳನ್ನು ಹೊಂದಬಹುದು. ಈ ಸಾಲದ ಮೊತ್ತಕ್ಕೆ ಯಾವುದೇ ರೀತಿಯ ಬಡ್ಡಿಯ ದರ ಅನ್ವಯಿಸುವುದಿಲ್ಲ 5. ಮರುಪಾವತಿಯ ಹಣ ಮತ್ತು ಅವಧಿ: (ಅಸಲು+ಬಡ್ಡಿ ಸೇರಿ ಮಾಸಿಕ ಸಮಕಂತು) ಸಾಲ ಇಲ್ಲದೇ ಇರುವುದರಿಂದ ಅನ್ವಯಿಸುವುದಿಲ್ಲ 6. ಅರ್ಹತೆ ಮತ್ತು ಷರತ್ತುಗಳು 1. ಫಲಾನುಭವಿಯು ಕರ್ನಾಟಕ ರಾಜ್ಯದ ಪ್ರಜೆಯಾಗಿದ್ದು ಯಾವುದೇ ಗ್ರಾಮೀಣ ಪ್ರದೇಶದಲ್ಲಿ ವಾಸವಾಗಿರಬೇಕು ಮತ್ತು ಗ್ರಾಮ ಸಭಾದ ನಿವೇಶನ ರಹಿತ/ವಸತಿರಹಿತರ ಪಟ್ಟಿಯಲ್ಲಿ ಸೇರಿರಬೇಕು. 2. ಫಲಾನುಭವಿಯು ಆರ್ಥಿಕವಾಗಿ ಹಿಂದುಳಿದಿದ್ದ, ವಾರ್ಷಿಕ ಆದಾಯವು ಬಡತನ ರೇಖೆಗಿಂತ ಕೆಳಗಿರುವವರಿಗೆ ನಿಗದಿಪಡಿಸಿರುವ ಮಿತಿಗಿಂತ ಕಡಿಮೆ ಇರಬೇಕು (ಪ್ರಸ್ತುತ ಮಿತಿಯು ವಾರ್ಷಿಕ

ರೂ. 11800/– ಆಗಿರುತ್ತದೆ.) 3. ಮನೆ/ನಿವೇಶನ ಹಕ್ಕುಪತ್ರವನ್ನು ಹೆಂಡತಿ ಹೆಸರಿನಲ್ಲಿ ವಿತರಿಸಬೇಕು. ಒಂದು ವೇಳೆ ಅವಿವಾಹಿತ ಪುರುಷರು ಮತ್ತು ವಿಧುರರು ಆಯ್ಕೆಯಾಗಿದ್ದಲ್ಲಿ ಅವರ ಹೆಸರಿನಲ್ಲಿ ಹಕ್ಕುಪತ್ರ ವಿತರಿಸಬಹುದು. 4. ಬೇರೆ ಯಾವುದೇ ಯೋಜನೆ/ಇಲಾಖೆಯಿಂದ ಈಗಾಗಲೇ ವಸತಿ ಸೌಲಭ್ಯ ಪಡೆದಿರಬಾರದು. 5. ಫಲಾನುಭವಿಯು ಪರಿಶಿಷ್ಟ ಜಾತಿ/ ಪಂಗಡಕ್ಕೆ ಸೇರಿರಬೇಕು. 6. ಫಲಾನುಭವಿಗಳ ಆಯ್ಕೆ : ಈಗಾಗಲೇ ಸಮೀಕ್ಷೆ ಮೂಲಕ ನಿವೇಶನ ರಹಿತರ ಪಟ್ಟಿ ಹಾಗೂ ಸ್ವಂತ ನಿವೇಶನವನ್ನು ಹೊಂದಿದ್ದು ಮನೆ ಇಲ್ಲದವರ ಪಟ್ಟಿಯನ್ನು ಸಮೀಕ್ಷೆ ಮೂಲಕ 2003 ರಲ್ಲಿ ತಯಾರಿಸಲಾಗಿದ್ದು, ಆ ಪಟ್ಟಿಯಲ್ಲಿ ಇನ್ನೂ ಸೇರ್ಪಡೆ ಆಗದೇ ಇರುವ ನೈಜ ಮತ್ತು ಅರ್ಹ ಅಭ್ಯರ್ಥಿಗಳನ್ನು ಸೇರಿಸಿ ಮತ್ತು ಅನರ್ಹ ಅಭ್ಯರ್ಥಿಗಳಿದ್ದರೆ ಅಂತಹವರನ್ನು ಪಟ್ಟಿಯಿಂದ ತೆಗೆದು ಹಾಕಿ ಆಗಿಂದ್ದಾಗೆ ಪರಿಷ್ಕೃತ ಪಟ್ಟಿಯನ್ನು ಗ್ರಾಮ ಪಂಚಾಯಿತಿಗಳು ಗ್ರಾಮ ಸಭೆಗಳ ಮೂಲಕ ತಯಾರಿಸಲಾಗುತ್ತಿರುತ್ತದೆ. ಇಂತಹ ಪರಿಷ್ಕೃತ ಪಟ್ಟಿಯಲ್ಲಿ ಇರುವ ಫಲಾನುಭವಿಗಳನ್ನು ಮಾತ್ರ ನಿಯಮಾನುಸಾರ ಕರೆಯಲಾದ ಗ್ರಾಮಸಭೆಗಳಲ್ಲಿ ಆಯ್ಕೆ ಮಾಡಬೇಕಾಗುತ್ತದೆ. 7. ಮನೆಗಳ ವಿಸ್ತೀರ್ಣ ಮತ್ತು ವಿನ್ಯಾಸ: ಕನಿಷ್ಟ 20 ಚ.ಮೀ. ನೆಲಗಟ್ಟು ವಿಸ್ತೀರ್ಣ ಇರುವಂತೆ ಮನೆ ನಿರ್ಮಿಸಬೇಕು. ಇದಕ್ಕಾಗಿ ಯಾವುದೇ ನಕ್ಷೆ ಅಥವಾ ವಿನ್ಯಾಸ ನಿಗದಿಪಡಿಸಿರುವುದಿಲ್ಲ. ಆದರೆ ಫಲಾನುಭವಿಗಳಿಗೆ ಅನುಕೂಲವಾಗುವಂತೆ ಮಣ್ಣು, ಹವಾಗುಣ, ಪರಿಸ್ಥಿತಿ, ಸ್ಥಳೀಯವಾಗಿ ಲಭ್ಯವಿರುವ ಸಾಮಗ್ರಿಗಳ ಬಳಕೆ ಇತ್ಯಾದಿ ಅಂಶಗಳನ್ನು ಪರಿಗಣಿಸಿ ಪ್ರದೇಶವಾರು ಮತ್ತು ಬದಲಿ ವಿನ್ಯಾಸಗಳನ್ನು ಅನುಸರಿಸಬಹುದು. ಮನೆ ನಿರ್ಮಾಣದ ಪ್ರತಿ ಹಂತದಲ್ಲಿಯೂ ಫಲಾನುಭವಿಯು ಸಕ್ರಿಯವಾಗಿ ಪಾಲ್ಗೊಂಡು ಒಳ್ಳೆಯ ಗುಣಮಟ್ಟದ ಹಾಗೂ ಹೆಚ್ಚಿನ ಸೌಲಭ್ಯಗಳನ್ನು ಹೊಂದಬಹುದು. 8. ಇಂದಿರಾ ಆವಾಸ್ ಯೋಜನೆಯಲ್ಲಿ ಇರುವಂತೆ ಸುಧಾರಿತ ಒಲೆ ನೈರ್ಮಲೀಕರಣ, ನಕ್ಷೆ ಸುಧಾರಿತ ಕಟ್ಟಡ ಉಪಕರಣಗಳ ಬಳಕೆ ಇತ್ಯಾದಿ ಅಂಶಗಳು ಹೆಚ್ಚುವರಿಯಾಗಿ ಯತಾವತ್ ಈ ಯೋಜನೆಗೂ ಸಹಾ ಅನ್ವಯಿಸಬಹುದಾಗಿದೆ. 9. ಫಲಾನುಭವಿಯು ತನ್ನ ಪಾಲಿನ ವಂತಿಗೆಯ ಹಣವನ್ನು ಭರಿಸಲು ಸಿದ್ಧರಿರಬೇಕು. (ಅವಶ್ಯವಿದ್ದಲ್ಲಿ ಮಾತ್ರ) 15 ವರ್ಷಗಳು ಮುಗಿಯುವವರೆಗೆ ಫಲಾನುಭವಿಗೆ ಕೇವಲ ಮನೆಯ ಸ್ವಾಧೀನವನ್ನು ಉಪಯೋಗಕ್ಕೆ ಮಾತ್ರ ಕೊಡಲಾಗುವುದು ಹಾಗೂ 15 ವರ್ಷಗಳ ನಂತರ ಸ್ವತ್ತಿನ ಒಡೆತನವನ್ನು ವರ್ಗಾವಣೆ ಮಾಡಲಾಗುವುದು. ಒಟ್ಟಾರೆ ಆಗಿಂದ್ದಾಗೆ ಸರ್ಕಾರವು ಗ್ರಾಮೀಣ ಆಶ್ರಯ ಯೋಜನೆ ಅನಷ್ಠಾನಕ್ಕೆ ಸಂಬಂಧಿಸಿದಂತೆ ವಿಧಿಸಬಹುದಾದ ನಿಯಮ ಮತ್ತು ಷರತ್ತುಗಳನ್ನು ತಪ್ಪದೇ ಪಾಲಿಸಬೇಕು. 7. ಮನೆ ನಿರ್ಮಾಣ ಮಾಡುವ ಕ್ರಮ 1. ಸ್ವಂತ ಫಲಾನುಭವಿಗಳಿಂದ 2. ಏಜೆನ್ಸಿ ಮೂಲಕ 1. ಫಲಾನುಭವಿಯೇ ತನ್ನ ಸ್ವಂತ ಮನೆಯನ್ನು ಸ್ಥಳೀಯವಾಗಿ ಅನುಮೋದಿತ ನಕ್ಷೆಗನುಗುಣವಾಗಿ ಕಟ್ಟಿಕೊಳ್ಳಬಹುದು ಇದಕ್ಕಾಗಿ ಕಾಮಗಾರಿ ಆದೇಶ ಹೊರಡಿಸಿ ನಿಗದಿತ ಕಂತುಗಳಲ್ಲಿ ಹಣವನ್ನು ನೇರವಾಗಿ ಫಲಾನುಭವಿಗಳ ಬ್ಯಾಂಕ್ ಖಾತೆ ಮೂಲಕ ನೀಡಲಾಗುತ್ತದೆ. 2. ಫಲಾನುಭವಿಯು ಇಚ್ಛಿಸಿದಲ್ಲಿ, ನಿಗಮವು ನೇಮಿಸುವ

ಯಾವುದಾದರೊಂದು ಸಂಸ್ಥೆಯ ಮೂಲಕ ಮನೆ ಕಟ್ಟಿಸಿಕೊಡಲಾಗುವುದು. ಇವುಗಳಲ್ಲಿ ಪ್ರಮುಖವಾದವು ನಿರ್ಮಿತಿ ಕೇಂದ್ರ, ಭೂಸೇನಾ ನಿಗಮ, ಜಿಲ್ಲಾ ಪಂಚಾಯಿತಿ, ತಾಂತ್ರಿಕ ವಿಭಾಗ, ಸರ್ಕಾರೇತರ ಸಂಸ್ಥೆ ಮತ್ತು ಇತ್ಯಾದಿ 8. ಇತರೆ ವಿಷಯಗಳು: ಫಲಾನುಭವಿಗಳ 15 ವರ್ಷ ತುಂಬುವ ಮೊದಲು ಮನೆಯನ್ನು ಪರಭಾರೆ ಮಾಡಲು ಯತ್ನಿಸಿದಲ್ಲಿ ಅಂತಹವರ ಮನೆಯನ್ನು ಮುಟ್ಟುಗೋಲು ಹಾಕಿಕೊಳ್ಳಬಹುದಾಗಿರುತ್ತದೆ ಹಾಗೂ ಅಂತಹ ಮನೆಯನ್ನು ಇತರೆ ಅರ್ಹ ಫಲಾನುಭವಿಗೆ ಹಂಚಿಕೆ ಮಾಡಲಾಗುವುದು ಅಥವಾ ವಿಲೇವಾರಿ ಮಾಡಿ ಹಣವನ್ನು ವಾಪಸ್ಸು ಪಡೆಯಲಾಗುವುದು (ಕರ್ನಾಟಕ ಸರಕಾರ, 2014).

**ನಗರ ಆಶ್ರಯ ವಸತಿ ಯೋಜನೆ**

ನಗರ ಆಶ್ರಯ ವಸತಿ ಯೋಜನೆಯಲ್ಲಿ ಫಲಾನುಭವಿಗಳಿಗೆ ಗರಿಷ್ಠ ರೂ. 25000 ಗಳ ಮೂಲಕ ಕುಟುಂಬಗಳಿಗೆ ಆರ್ಥಿಕ ಸಹಾಯವನ್ನು ಒದಗಿಸಲಾಗುತ್ತದೆ. ಇದು ಸರ್ಕಾರವು ಆಗಿಂದ್ದಾಗೆ ನಿಗದಿಪಡಿಸಬಹುದಾದ ಮಾರ್ಪಾಡುಗಳಿಗೆ ಒಳಪಟ್ಟಿರುತ್ತದೆ ವಿಧಾನಗಳು: ಅ) ಸಾಲ ಎಲ್ಲಾ ವರ್ಗದ ಫಲಾನುಭವಿಗಳಿಗೆ ಗರಿಷ್ಠ ರೂ 25000/– ಆ) ಸಹಾಯಧನ ಅನ್ವಯಿಸುವುದಿಲ್ಲ 2. ಪ್ರತಿ ಮನೆಗೆ ಆರ್ಥಿಕ ಸಹಾಯ ಇ) ಫಲಾನುಭವಿಯ ಸ್ವಸಹಾಯ ವಂತಿಗೆ ಅ) ಕನಿಷ್ಠ ರೂ. 5000/– ಕಡ್ಡಾಯವಾಗಿ ಯೋಜನೆಯ ಭಾಗವಾಗಿ ಸ್ವ ವಂತಿಗೆ ಹೂಡಬೇಕು. ಆ) ಈ ಯೋಜನೆಯಡಿಯಲ್ಲಿ ಒದಗಿಸಲಾಗುವ ಆರ್ಥಿಕ ಸಹಾಯದ ಜೊತೆಗೆ, ಫಲಾನುಭವಿಯು ತನ್ನ ಸಾಮರ್ಥ್ಯ ಹಾಗೂ ವಸತಿಯ ಅವಶ್ಯಕತೆಗೆ ಅನುಸಾರವಾಗಿ ಸಾಧ್ಯವಾದಷ್ಟು ಸ್ವಂತ ಉಳಿತಾಯ ಹೂಡಿಕೆ ಮಾಡಿ ಹೆಚ್ಚಿನ ಹಾಗೂ ಉತ್ತಮ ಸೌಲಭ್ಯಗಳನ್ನು ಹೊಂದಬಹುದು. ಬಡ್ಡಿಯ ದರ 11% ವಾರ್ಷಿಕ (ಸಾಲದ ಮೊತ್ತಕ್ಕೆ) 4. ಮರುಪಾವತಿಯ ಹಣ ಮತ್ತು ಅವಧಿ: (ಅಸಲು+ಬಡ್ಡಿ ಸೇರಿ ಮಾಸಿಕ ಸಮಕಂತು) ಗರಿಷ್ಟ 180 ಮಾಸಿಕ ಸಮಾನ ಕಂತುಗಳು ರೂ. 10000/– ಸಾಲಕ್ಕೆ ಮಾಸಿಕ ಸಮಕಂತು ರೂ. 115/–, ರೂ. 25000/– ಸಾಲಕ್ಕೆ ಮಾಸಿಕ ಸಮಕಂತು ರೂ. 290/– (ಒಟ್ಟಾರೆ ಫಲಾನುಭವಿಯು ಪ್ರತಿ ತಿಂಗಳು ಮರುಪಾವತಿ ಸಲುವಾಗಿ ಅಗತ್ಯವಾದ ವೊತ್ತವನ್ನು ಸತತವಾಗಿ ಉಳಿತಾಂಯು ವಾಡುವುದು ಅಪೇಕ್ಷಣೀಯವಾಗಿದೆ.) ಸಾಲದ ಮೊತ್ತ ಹೆಚ್ಚಾದಲ್ಲಿ ಅದಕ್ಕೆ ತಕ್ಕಂತೆ ಉಳಿತಾಯ ಮಾಡುವುದು ಮತ್ತು ಪ್ರತಿ ತಿಂಗಳ ಮರುಪಾವತಿ ಕಂತಿನ ಮೊತ್ತ ಸಹ ಹೆಚ್ಚಾಗುತ್ತದೆ. 5. ಅರ್ಹತೆ ಮತ್ತು ಷರತ್ತುಗಳು 1. ಫಲಾನುಭವಿಯು ಕರ್ನಾಟಕ ರಾಜ್ಯದ ಪ್ರಜೆಯಾಗಿದ್ದು ಯಾವುದೇ ನಗರ ಪ್ರದೇಶದಲ್ಲಿ ವಾಸವಾಗಿರಬೇಕು ಮತ್ತು ನಗರಸಭಾದ ನಿವೇಶನ ರಹಿತ/ವಸತಿರಹಿತರ ಪಟ್ಟಿಯಲ್ಲಿ ಸೇರಿರಬೇಕು. 2. ಫಲಾನುಭವಿಯು ಆರ್ಥಿಕವಾಗಿ ಹಿಂದುಳಿದಿದ್ದು, ವಾರ್ಷಿಕ ಆದಾಯವು ಬಡತನ ರೇಖೆಗಿಂತ ಕೆಳಗಿರುವವರಿಗೆ ನಿಗದಿಪಡಿಸಿರುವ ಮಿತಿಗಿಂತ ಕಡಿಮೆ ಇರಬೇಕು (ಪ್ರಸ್ತುತ ಮಿತಿಯು ವಾರ್ಷಿಕ ರೂ. 11800/– ಆಗಿರುತ್ತದೆ.) 3. ಮನೆ/ನಿವೇಶನ ಹಕ್ಕುಪತ್ರವನ್ನು

ಹೆಂಡತಿ ಹೆಸರಿನಲ್ಲಿ ವಿತರಿಸಬೇಕು. ಒಂದು ವೇಳೆ ಅವಿವಾಹಿತ ಪುರುಷರು ಮತ್ತು ವಿಧುರರು ಆಯ್ಕೆಯಾಗಿದ್ದಲ್ಲಿ ಅವರ ಹೆಸರಿನಲ್ಲಿ ಹಕ್ಕುಪತ್ರ ವಿತರಿಸಬಹುದು. 4. ಬೇರೆ ಯಾವುದೇ ಯೋಜನೆ/ಇಲಾಖೆಯಿಂದ ಈಗಾಗಲೇ ವಸತಿ ಸೌಲಭ್ಯ ಪಡೆದಿರಬಾರದು. 5. ನಿಯಮಾನುಸಾರ ಪರಿಶಿಷ್ಟ ಜಾತಿ/ ಪಂಗಡದವರಿಗೆ ಮೀಸಲಾತಿ ಇರುತ್ತದೆ (ಕರ್ನಾಟಕ ಸರಕಾರ, 2014).

ಫಲಾನುಭವಿಗಳ ಆಯ್ಕೆ: ಈಗಾಗಲೇ ಸಮೀಕ್ಷೆ ಮೂಲಕ ನಿವೇಶನ ರಹಿತರ ಪಟ್ಟಿ ಹಾಗೂ ಸ್ವಂತ ನಿವೇಶನವನ್ನು ಹೊಂದಿದ್ದು ಮನೆ ಇಲ್ಲದವರ ಪಟ್ಟಿಯನ್ನು ಸಮೀಕ್ಷೆ ಮೂಲಕ ತಯಾರಿಸಲಾಗಿದ್ದು, ಆ ಪಟ್ಟಿಯಲ್ಲಿ ಇನ್ನೂ ಸೇರ್ಪಡೆ ಆಗದೇ ಇರುವ ನೈಜ ಮತ್ತು ಅರ್ಹ ಅಭ್ಯರ್ಥಿಗಳನ್ನು ಸೇರಿಸಿ ಮತ್ತು ಅನರ್ಹ ಅಭ್ಯರ್ಥಿಗಳಿದ್ದರೆ ಅಂತಹವರನ್ನು ಪಟ್ಟಿಯಿಂದ ತೆಗೆದು ಹಾಕಿ ಆಗಿಂದ್ದಾಗೆ ಪರಿಷ್ಕೃತ ಪಟ್ಟಿಯನ್ನು ನಗರಸಭೆಗಳು ತಯಾರಿಸುತ್ತಿದ್ದು ಈ ಪಟ್ಟಿಯನ್ನು ಪ್ರತಿ ಪಟ್ಟಣ ಪ್ರದೇಶಕ್ಕೆ ಪ್ರತ್ಯೇಕವಾಗಿ ನೇಮಕ ಆಗಿರುವ ಆಶ್ರಯ ಸಮಿತಿಗೆ ಒದಗಿಸಲಾಗುತ್ತದೆ. ಹಾಗೂ ಆಶ್ರಯ ಸಮಿತಿಯು ಈ ಪಟ್ಟಿಯ ಆಧಾರದ ಮೇಲೆ ಫಲಾನುಭವಿಗಳ ಆಯ್ಕೆ ಮಾಡುತ್ತದೆ. 7. ಮನೆಗಳ ವಿಸ್ತೀರ್ಣ ಮತ್ತು ವಿನ್ಯಾಸ : ಕನಿಷ್ಟ 25 ಚ.ಮೀ. ನೆಲಗಟ್ಟು ವಿಸ್ತೀರ್ಣ ಇರುವಂತೆ ಮನೆ ನಿರ್ಮಿಸಬೇಕು. ಇದಕ್ಕಾಗಿ ಯಾವುದೇ ನಕ್ಷೆ ಅಥವಾ ವಿನ್ಯಾಸ ನಿಗದಿಪಡಿಸಿರುವುದಿಲ್ಲ. ಆದರೆ ಫಲಾನುಭವಿಗಳಿಗೆ ಅನುಕೂಲವಾಗುವಂತೆ ಮಣ್ಣು, ಹವಾಗುಣ, ಪರಿಸ್ಥಿತಿ, ಸ್ಥಳೀಯವಾಗಿ ಲಭ್ಯವಿರುವ ಸಾಮಗ್ರಿಗಳ ಬಳಕೆ ಇತ್ಯಾದಿ ಅಂಶಗಳನ್ನು ಪರಿಗಣಿಸಿ ಪ್ರದೇಶವಾರು ಮತ್ತು ಬದಲಿ ವಿನ್ಯಾಸಗಳನ್ನು ಅನುಸರಿಸಬಹುದು. ಮನೆ ನಿರ್ಮಾಣದ ಪ್ರತಿ ಹಂತದಲ್ಲಿಯೂ ಫಲಾನುಭವಿಯು ಸಕ್ರಿಯವಾಗಿ ಪಾಲ್ಗೊಂಡು ಒಳ್ಳೆಯ ಗುಣಮಟ್ಟದ ಹಾಗೂ ಹೆಚ್ಚಿನ ಸೌಲಭ್ಯಗಳನ್ನು ಹೊಂದಬಹುದು. 8. ಫಲಾನುಭವಿಯು ಸಾಲದ ಮೊತ್ತವನ್ನು 180 ಸಮ ಕಂತುಗಳಲ್ಲಿ ತೀರಿಸಲು ಒಪ್ಪಬೇಕಾಗಿರುತ್ತದೆ. 9. ಫಲಾನುಭವಿಯು ತನ್ನ ಪಾಲಿನ ವಂತಿಗೆಯ ಹಣವನ್ನು ಭರಿಸಲು ಸಿದ್ಧರಿರಬೇಕು. (ಅವಶ್ಯವಿದ್ದಲ್ಲಿ ಮಾತ್ರ) 10. ಸಾಲದ ಕಂತುಗಳನ್ನು ತೀರಿಸಲು ನಿಗದಿಪಡಿಸಿದ ಬ್ಯಾಂಕುಗಳಲ್ಲಿ ಉಳಿತಾಯ ಖಾತೆ ಹಾಗೂ ಜನತಾ / ಪಿಗ್ಮಿ ಖಾತೆ ತೆರೆದಿರಬೇಕು ಅಥವಾ ಗ್ರಾಮ ಪಂಚಾಯಿತಿ ಮೂಲಕ ಮರುಪಾವತಿ ಮಾಡಬಹುದು. 11. ಸಾಲ ಮರುಪಾವತಿ ಆಗುವವರೆಗೆ ಫಲಾನುಭವಿಗೆ ಕೇವಲ ಮನೆಯ ಸ್ವಾಧೀನವನ್ನು ಉಪಯೋಗಕ್ಕೆ ಮಾತ್ರ ಕೊಡಲಾಗುವುದು ಹಾಗೂ ಸಾಲ ತೀರಿದ ನಂತರ ಸ್ವತ್ತಿನ ಒಡೆತನವನ್ನು ವರ್ಗಾವಣೆ ಮಾಡಲಾಗುವುದು. ಒಟ್ಟಾರೆ ಆಗಿಂದ್ದಾಗೆ ಸರ್ಕಾರವು ಗ್ರಾಮೀಣ ಆಶ್ರಯ ಯೋಜನೆ ಅನುಷ್ಠಾನಕ್ಕೆ ಸಂಬಂಧಿಸಿದಂತೆ ವಿಧಿಸಬಹುದಾದ ನಿಯಮ ಮತ್ತು ಷರತ್ತುಗಳನ್ನು ತಪ್ಪದೇ ಪಾಲಿಸಬೇಕು. 6. ಮನೆ ನಿರ್ಮಾಣ ಮಾಡುವ ಕ್ರಮ 1. ಸ್ವಂತ ಫಲಾನುಭವಿಗಳಿಂದ 2. ಏಜೆನ್ಸಿ ಮೂಲಕ 1. ಫಲಾನುಭವಿಯೇ ತನ್ನ ಸ್ವಂತ ಮನೆಯನ್ನು ಸ್ಥಳೀಯವಾಗಿ ಅನುಮೋದಿತ ನಕ್ಷೆಗನುಗುಣವಾಗಿ ಕಟ್ಟಿಕೊಳ್ಳಬಹುದು (ಇದಕ್ಕಾಗಿ ಕಾಮಗಾರಿ ಆದೇಶ ಹೊರಡಿಸಿ ನಿಗದಿತ

ಕಂತುಗಳಲ್ಲಿ ಹಣವನ್ನು ನೇರವಾಗಿ ಫಲಾನುಭವಿಗಳ ಬ್ಯಾಂಕ್ ಖಾತೆ ಮೂಲಕ ನೀಡಲಾಗುವುದು.) ಅಥವಾ 2. ಫಲಾನುಭವಿಯು ಇಚ್ಛಿಸಿದಲ್ಲಿ, ನಿಗಮವು ನೇಮಿಸುವ ಯಾವುದಾದರೊಂದು ಸಂಸ್ಥೆಯ ಮೂಲಕ ಮನೆ ಕಟ್ಟಿಸಿಕೊಡಲಾಗುವುದು. (ನಿರ್ಮಿತಿ ಕೇಂದ್ರ, ಭೂಸೇನಾ ನಿಗಮ, ಜಿಲ್ಲಾ ಪಂಚಾಯಿತಿ, ತಾಂತ್ರಿಕ ವಿಭಾಗ, ಸರ್ಕಾರೇತರ ಸಂಸ್ಥೆ ಇತ್ಯಾದಿ) 7. ಇತರೆ ವಿಷಯಗಳು: ಫಲಾನುಭವಿಗಳು ಪ್ರತಿ ತಿಂಗಳು ಸಾಲದ ಸಮಕಂತುಗಳನ್ನು ತೀರಿಸಲು ಅನುಗುಣವಾಗುವಂತೆ ಹಣವನ್ನು ತಪ್ಪದೇ ಉಳಿಸಬೇಕು. ಸಮಕಂತುಗಳನ್ನು ಪಾವತಿ ಮಾಡಲು ವಿಫಲವಾದಲ್ಲಿ ಅಂತಹವರ ಮನೆಯನ್ನು ವಾಪಸ್ಸು ಪಡೆದು ಇತರೆ ಅರ್ಹ ಫಲಾನುಭವಿಗೆ ಹಂಚಿಕೆ ಮಾಡಬಹುದಾಗಿರುತ್ತದೆ ಅಥವಾ ವಿಲೇವಾರಿ ಮಾಡಿ ಬಂದ ಹಣವನ್ನು ಬಾಕಿ ಮೊತ್ತಕ್ಕೆ ಹೊಂದಿಸಿಕೊಳ್ಳಬಹುದಾಗಿರುತ್ತದೆ (ಕರ್ನಾಟಕ ಸರಕಾರ, 2014).

**ವಸತಿ ನಿವೇಶನ ಹಂಚಿಕೆ ಯೋಜನೆ**

ಈ ಯೋಜನೆಯನ್ನು ರಾಜ್ಯ ಸರ್ಕಾರವು 1992–93ರಲ್ಲಿ ಜಾರಿಗೊಳಿಸಿದೆ. ಈ ಯೋಜನೆಯು ನಗರ ಮತ್ತು ಗ್ರಾಮೀಣ ಪ್ರದೇಶದಲ್ಲಿ ಆರ್ಥಿಕವಾಗಿ ಹಿಂದುಳಿದ ವಸತಿ ರಹಿತ ಫಲಾನುಭವಿಗಳಿಗೆ ವಸತಿ ಸೌಕರ್ಯ ಒದಗಿಸುವ ಒಂದು ರಾಜ್ಯ ಸರ್ಕಾರ ಪ್ರಾಯೋಜಕತ್ವದ ಯೋಜನೆಯಾಗಿರುತ್ತದೆ. ಈ ಯೋಜನೆಯಡಿಯಲ್ಲಿ ಪ್ರತಿ ಫಲಾನುಭವಿಯ ವಾರ್ಷಿಕ ಆದಾಯ ರೂ.32,000/– ಆಗಿರುತ್ತದೆ ಈ ಹಿಂದೆ ರೂ.11,800/–ಗಳಾಗಿತ್ತು. 2000–01 ರಿಂದ 2012–13ರ ವರೆಗೆ 2,78, 894 ನಿವೇಶನಗಳನ್ನು ಹಂಚಿಕೆ ಮಾಡಲಾಗಿದೆ (ಕರ್ನಾಟಕ ಸರಕಾರ, 2014).

ಇಂದಿರಾ ಆವಾಸ್ ಯೋಜನೆ ಇದು ಕೇಂದ್ರ ಪುರಸ್ಕೃತ ಯೋಜನೆಯಾಗಿದೆ. ಈ ಯೋಜನೆಯನ್ನು 1989–90ರಲ್ಲಿ ಜಾರಿಗೊಳಿಸಲಾಯಿತು ಮತ್ತು ಜನವರಿ 1996 ರಿಂದ ಸ್ವತಂತ್ರವಾಯಿತು. ಈ ಯೋಜನೆಯುನ್ನು ಬಡತನ ರೇಖೆಗಿಂತ ಕೆಳಗಿನವರಿಗಾಗಿ ಅನುಷ್ಠಾನಗೊಳಿಸಲಾಯಿತು. ಈ ಯೋಜನೆಯನ್ನು ಗ್ರಾಮೀಣ ಪ್ರದೇಶದ ವಸತಿ ರಹಿತ ಕುಟುಂಬದವರಿಗಾಗಿ ಅನುಷ್ಠಾನಗೊಳಿಸಲಾಗುತ್ತಿದೆ. ಈ ಯೋಜನೆಯ ಮಾರ್ಗಸೂಚಿಯಂತೆ, ಒಟ್ಟು ನೀಡಿರುವ ಗುರಿಯಲ್ಲಿ 60% ಪರಿಶಿಷ್ಟ ಪಂಗಡ ಮತ್ತು ಪರಿಶಿಷ್ಟ ವರ್ಗದವರಿಗಾಗಿ, 15% ಅಲ್ಪಸಂಖ್ಯಾತರಿಗಾಗಿ ಮತ್ತು ಉಳಿದ 25% ಸಾಮಾನ್ಯ ವರ್ಗದವರಿಗಾಗಿ ಮೀಸಲಾಗಿಡಲಾಗಿರುತ್ತದೆ. 2013–14ನೇ ಸಾಲಿನಿಂದ ಕೇಂದ್ರ ಸರ್ಕಾರವು ಪ್ರತಿ ಮನೆಗೆ ನೀಡಲಾಗುವ ಸಹಾಯಧನದ ಮೊತ್ತವನ್ನು ರೂ.45,000/– ರಿಂದ 70,000/–ಕ್ಕೆ ಹೆಚ್ಚಿಸಿದ್ದು, ರಾಜ್ಯ ಸರ್ಕಾರವು ಇದನ್ನು ರೂ.1.20 ಲಕ್ಷಕ್ಕೆ ಹೆಚ್ಚಿಸಿದ್ದು, ಹೆಚ್ಚುವರಿ ಸಹಾಯಧನದ ಮೊತ್ತವನ್ನು ರಾಜ್ಯ ಸರ್ಕಾರವು ಭರಿಸುತ್ತದೆ. ಈ ಯೋಜನೆಯನ್ನು 1996 ರಿಂದ 2004–05ರವರೆಗೆ ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆಯಿಂದ ಅನುಷ್ಠಾನಗೊಳಿಸಲಾಗುತ್ತಿತ್ತು, ಇದನ್ನು

2004–05ನೇ ಸಾಲಿನಿಂದ ವಸತಿ ನಿಗಮಕ್ಕೆ ವರ್ಗಾಯಿಸಲಾಗಿರುತ್ತದೆ. 2004–05 ರಿಂದ 2012–13ರವರೆಗೆ 6.37 ಲಕ್ಷ ಮನೆಗಳನ್ನು ನಿರ್ಮಿಸಲಾಗಿದೆ. 2013–14ನೇ ಸಾಲಿಗೆ 1 ಲಕ್ಷ ಮನೆಗಳ ಗುರಿಗೆ ಎದುರಾಗಿ 98815 ಮನೆಗಳನ್ನು ಮಾರ್ಚ್ 2014ರ ಅಂತ್ಯದವರೆಗೆ ನಿರ್ಮಿಸಲಾಗಿದೆ. ಇದಕ್ಕಾಗಿ ರೂ.793.28 ಕೋಟಿಗಳ ಅನುದಾನವನ್ನು ಒದಗಿಸಲಾಗಿದೆ. (ಕರ್ನಾಟಕ ಸರಕಾರ, 2014).

**ಕೂಲಿಗಾಗಿ ಕಾಳು ಯೋಜನೆ**

ಈ ಯೋಜನೆಯು ಉದ್ಯೋಗ ಖಾತ್ರಿ ಯೋಜನೆಯ ಒಂದು ಉಪ ಯೋಜನೆಯಾಗಿ 2000–01ರಲ್ಲಿ ತೀವ್ರ ಬರಗಾಲ ಪೀಡಿತ ರಾಜ್ಯಗಳಾದ ಛತ್ತಿಸ್ಘಡ್, ಉತ್ತರಾಂಚಲ, ಗುಜರಾತ, ರಾಜಸ್ಥಾನ, ಮಹಾರಾಷ್ಟ್ರ, ಹಿಮಾಚಲ ಪ್ರದೇಶ, ಮಧ್ಯಪ್ರದೇಶ ಮತ್ತು ಒರಿಸ್ಸಾಗಳಲ್ಲಿ ಜಾರಿಗೆ ತರಲಾಯಿತ್ತು. ಈ ಯೋಜನೆಯಲ್ಲಿ ಜನರಿಗೆ ಉದ್ಯೋಗವನ್ನು ನೀಡಿ ಅವರ ಶ್ರಮಕ್ಕೆ ಹಣವನ್ನು ನೀಡದೆ ದವಸ ಧಾನ್ಯಗಳನ್ನು ವಿತರಿಸಿ ಆಹಾರ ಭದ್ರತೆಯನ್ನು ಒದಗಿಸುವ ಉದ್ದೇಶವನ್ನು ಹೊಂದಿತ್ತು. ಈ ಕಾಳುಗಳನ್ನು ಎಲ್ಲರಿಗೂ ಉಚಿತವಾಗಿ ವಿತರಿಸಲಾಗುತ್ತದೆ. ಈ ಮೇಲಿನ ಎಲ್ಲಾ ಕಾರ್ಯಕ್ರಮಗಳನ್ನು ಕೂಡಿಸಿ ಸಂಪೂರ್ಣ ಗ್ರಾಮೀಣ ರೋಜಗಾರ್ ಯೋಜನೆ ಎಂದು ಸೆಪ್ಟೆಂಬರ್, 2001ರಲ್ಲಿ ಜಾರಿಗೆ ತರಲಾಯಿತ್ತು. ಆದರೆ ಮೊದಲ್ಲಿದ್ದ ಎಲ್ಲಾ ಯೋಜನೆಗಳ ಮೂಲ ಉದ್ದೇಶಗಳಾದ ಗ್ರಾಮೀಣ ಬಡ ಜನರಿಗೆ ಉದ್ಯೋಗ ಒದಗಿಸುವದು, ಗ್ರಾಮೀಣ ಪ್ರದೇಶದಲ್ಲಿ ಬಾಳಿಕೆ ಬರುವ ಸಾರ್ವಜನಿಕ ಆಸ್ತಿಗಳನ್ನು ನಿರ್ಮಿಸುವದು ಮತ್ತು ಆಹಾರದ ಅನುಕೂಲತೆಯನ್ನು ಒದಗಿಸಿ ಗ್ರಾಮೀಣ ಜನರಿಗೆ ಪೌಷ್ಟಿಕ ಆಹಾರದ ಭದ್ರತೆಯ ಅವಕಾಶವನ್ನು ದೊರಕಿಸಿ ಕೊಡುವದು (ಯೋಜನಾ ಆಯೋಗ, 2014).

**ಸಾಮಾಜಿಕ ಭದ್ರತೆಯ ಯೋಜನೆಗಳು**

1990ರ ದಶಕದಲ್ಲಿನ ಸರಕಾರಗಳು ಪ್ರಜಾಪ್ರಭುತ್ವ ವಿಕೇಂದ್ರೀಕರಣ ಮತ್ತು ಕೇಂದ್ರ ಸರಕಾರ ಪ್ರಾಯೋಜಕತೆಯಲ್ಲಿ ಪ್ರಾರಂಭವಾದ ಸಾಮಾಜಿಕ ಭದ್ರತೆ ಕಾರ್ಯಕ್ರಮಗಳು ಬಹಳ ಪ್ರಮುಖವಾದವು. ರಾಷ್ಟ್ರೀಯ ಸಾಮಾಜಿಕ ಭದ್ರತೆ ಯೋಜನೆಯನ್ನು ಅಗಸ್ಟ್ 1995ರಲ್ಲಿ ರಾಜ್ಯಗಳ 41 ಮತ್ತು 42 ಡೈರೆಕ್ಟಿವ್ ಪ್ರಿನ್ಸಿಪಲ್ಸ್‌ಗಳ ಪ್ರಕಾರ ಈ ಕೆಳಗಿನ ಮೂರು ಯೋಜನೆಗಳನ್ನು ಪ್ರಾರಂಭಿಸಲಾಯಿತ್ತು. ಒಂದು ರಾಷ್ಟ್ರೀಯ ವೃದ್ಧಾಪ್ಯ ವೇತನ, ಎರಡನೆಯದು ರಾಷ್ಟ್ರೀಯ ಕುಟುಂಬ ಲಾಭ ಯೋಜನೆ ಮತ್ತು ಕೊನೆಯದಾಗಿ ರಾಷ್ಟ್ರೀಯ ಮಾತೃತ್ವ ಲಾಭ ಯೋಜನೆ (ಯೋಜನಾ ಆಯೋಗ, 2014).

**ಭೂ ಸುಧಾರಣೆ ಯೋಜನೆ**

ದೇಶದ್ರು ಸ್ವಾತಂತ್ರ ಪೂರ್ವದಲ್ಲೂ ಭೂ ಸುಧಾರಣೆಯು ರಾಷ್ಟ್ರೀಯ ಕಾರ್ಯಕ್ರಮಗಳಲ್ಲಿ ಸ್ಥಾನ ಪಡೆದಿತ್ತು. ತದನಂತರದಲ್ಲಿ ಈ ಯೋಜನೆಯು ಪುನರ್ ಸುಧಾರಣೆಯ ಯೋಜನೆಯಾಗಿ

ಜಾಲ್ತಿಯಲ್ಲಿದೆ. ಕೃಷಿ ಭೂ ಒಡೆತನದ ಸಿಲಿಂಗನ್ನು ಪ್ರಥಮ ಬಾರಿಗೆ 1950ರ ಮಧ್ಯದಲ್ಲಿ ಜಾರಿಗೆ ತರಲಾಯಿತ್ತು. ಈ ಯೋಜನೆಯಲ್ಲಿ ಗ್ರಾಮೀಣ ಭಾಗದಲ್ಲಿರುವ ಭೂ ರಹಿತ ಕೃಷಿಕರಿಗೆ ಭೂಮಿಯನ್ನು ಒದಗಿಸಿರುವದರಿಂದ ಪಂಚವಾರ್ಷಿಕ ಯೋಜನೆಗಳಲ್ಲಿ ಕೃಷಿಯ ಉತ್ಪನ್ನದಲ್ಲಿ ಏರಿಕೆಯಾಗಿರುವದು ಕಂಡು ಬರುತ್ತದೆ.

**ಸಾರ್ವಜನಿಕ ವಿತರಣಾ ವ್ಯವಸ್ಥೆ**

ಈ ಕಾರ್ಯಕ್ರಮದಿಂದ ದೇಶದಲ್ಲಿರುವ ಎಲ್ಲಾ ಬಡ ಕುಟುಂಬಗಳಿಗೆ ಮಾರುಕಟ್ಟೆ ದರಕ್ಕಿಂತಲೂ ಕಡಿಮೆ ದರದಲ್ಲಿ ದಿನನಿತ್ಯ ಬೇಕಾಗುವ ಆಹಾರ ಧಾನ್ಯಗಳನ್ನು ನ್ಯಾಯ ಬೆಲೆ ಅಂಗಡಿಗಳ ಮೂಲಕ ಪ್ರತಿ ತಿಂಗಳು ವಿತರಿಸುವುದಾಗಿದೆ. ದೇಶದಲ್ಲಿರುವ ಸುಮಾರು ನಾಲ್ಕು ಲಕ್ಷದ ಅರವತ್ತೆರಡು ಸಾವಿರ ನ್ಯಾಯ ಬೆಲೆ ಅಂಗಡಿಗಳ ಮೂಲಕ ವಾರ್ಷಿಕ ರೂಪಾಯಿ 30000ದಷ್ಟು ಆಹಾರ ಪದಾರ್ಥಗಳನ್ನು ರಾಷ್ಟ್ರದಲ್ಲಿರುವ 160 ಮಿಲಿಯನ್ ಕುಟುಂಬಗಳಿಗೆ ದವಸ ಧಾನ್ಯಗಳನ್ನು ವಿತರಿಸಲಾಗುತ್ತಿದೆ. ಈ ಸಾರ್ವಜನಿಕ ವಿತರಣಾ ವ್ಯವಸ್ಥೆಯು ಪ್ರಪಂಚದಲ್ಲಿಯೇ ಅತಿ ದೊಡ್ಡ ಜಾಲವಾಗಿದೆ. ಆಯಾ ಸರಕಾರಗಳ ಚುನಾವಣೆಯ ಪ್ರಣಾಳಿಕೆಯಂತೆ ಮತ್ತು ದೇಶದಲ್ಲಿರುವ ಅತಿ ಹೆಚ್ಚಿನ ಬಡತನ ರೇಖೆಯ ಕೆಳಗಿರುವ ಕುಟುಂಬಗಳನ್ನು ಸೆಳೆಯಲು ಒಂದು ರೂಪಾಯಿಗೆ ಒಂದು ಕೆಜಿಯಂತೆ ದವಸ ಧಾನ್ಯಗಳನ್ನು ವಿತರಿಸಿದರೆ ಇನ್ನು ಕೆಲವು ಸರಕಾರಗಳು ಸ್ವಲ್ಪ ಹೆಚ್ಚಿನ ದರದಲ್ಲಿ ವಿತರಿಸುತ್ತವೆ (ಯೋಜನಾ ಆಯೋಗ, 2014). ಒಟ್ಟಾರೆ ಬಡವರೇ ನಮ್ಮ ದೇಶದ ವಿವಿಧ ರಾಜ್ಯಗಳಲ್ಲಿ ನಡೆಯುವ ಚುನಾವಣೆಗಳಲ್ಲಿ ಬಹಳ ಪ್ರಮುಖವಾದ ಪಾತ್ರವನ್ನು ವಹಿಸುತ್ತಾರೆ ಮತ್ತು ಎಲ್ಲ ರಾಜಕೀಯ ಪಕ್ಷಗಳ ಚುನಾವಣೆಯ ಪ್ರಣಾಣಿಕೆಗಳು ಹೆಚ್ಚಾಗಿ ಬಡವರಿಗೆ ಬೇಕಾಗಿರುವ ದಿನನತ್ಯದ ಊಟ, ಉದ್ಯೋಗ, ವಸತಿ, ಶಿಕ್ಷಣ ಮತ್ತು ಆರೋಗ್ಯದ ಸೇವೆಗಳನ್ನು ಕೊಡುತ್ತೆವೆ ಎಂದು ಘೋಷಿಸಿಕೊಳ್ಳುತ್ತವೆ ಆದರೆ ಇಂದಿಗೂ ಸಹ 40 ಕೋಟಿಗಿಂತಲೂ ಹೆಚ್ಚಿನ ಜನರು ಮೇಲೆ ಹಳೀದ ದಿನ ನತ್ಯದ ಅಗತ್ಯದ ಸೇವೆಗಳಿಲ್ಲದೆ ಪರದಾಡುತ್ತಿದ್ದಾರೆ (ಚಂದ್ರ ಪೂಜಾರಿ, 2008).

**ಶೈಕ್ಷಣಿಕ ಯೋಜನೆಗಳು**

ಶೈಕ್ಷಣಿಕ ಕ್ಷೇತ್ರದಲ್ಲಿಯೂ ಸಹ ದೇಶದಲ್ಲಿರುವ ಜನರಿಗೆ ಸಾಕ್ಷರನ್ನಾಗಿಸಲು ಸರಕಾರವು ಅನೇಕ ಕಾರ್ಯಕ್ರಮಗಳ ಮೂಲಕ ಯೋಜನೆಗಳನ್ನು ಅನುಷ್ಠಾನಗೊಳಿಸುತ್ತಿದೆ. ಆದ್ದರಿಂದ ದೇಶದಲ್ಲಿನ ನಾಗರಿಕರಿಗೆ ಕಲಿಯಲು ಒಂದು ಉತ್ತಮವಾದ ವಾತಾವರಣವನ್ನು ನಿರ್ಮಿಸಿಬೇಕೆಂದು ಸರಕಾರವು 1987-88ರಲ್ಲಿ ಕಪ್ಪು ಹಲಗೆ ಎಂಬ ಯೋಜನೆಯಡಿಯಲ್ಲಿ ಶಾಲೆಗಳಲ್ಲಿಯ ಕಲೆಯುವ ಕೊಠಡಿಗಳ ಪರಿಸರ, ಹೆಚ್ಚುವರಿ ಶಿಕ್ಷಕರು, ಕಲಿಕೆಯ ವಿವಿಧ ಉಪಕರಣಗಳನ್ನು ಮತ್ತು ಮೂರನೆಯ ಹೆಚ್ಚುವರಿ ಶಿಕ್ಷಕರನ್ನು ತೆಗೆದುಕೊಳ್ಳುವ ಅನುಕೂಲತೆಯನ್ನು ಮಾಡಲಾಯಿತ್ತು. ಇದರಡಿಯಲ್ಲಿ 1994ರಲ್ಲಿ ಜಿಲ್ಲಾ ಪ್ರಾಥಮಿಕ ಶಿಕ್ಷಣ ಕಾರ್ಯಕ್ರಮವನ್ನು ಜಾಗತಿಕ ಬ್ಯಾಂಕಿನ, ಯುರೋಪಿಯನ್

ಒಕ್ಕೂಟ, ಮತ್ತು ಇಂಗ್ಲೆಂಡ ಸರಕಾರಗಳ ನೆರವಿನಿಂದ ಪ್ರಾರಂಭಿಸಲಾಯಿತ್ತು (ಕರ್ನಾಟಕ ಸರಕಾರ, 2014).

ಶಾಲೆಗೆ ಬರುವ ಮಕ್ಕಳ ಸಂಖ್ಯೆಯನ್ನು ಹೆಚ್ಚಿಸುವ ಮತ್ತು ಎಲ್ಲಾ ಮಕ್ಕಳಿಗೆ ಪೌಷ್ಟಿಕತೆಯ ಆಹಾರವನ್ನು ಒದಗಿಸುವ ದೃಷ್ಟಿಯಿಂದ 1995ರಲ್ಲಿ ಮಧ್ಯಾಹ್ನದ ಬಿಸಿ ಊಟದ ಕಾರ್ಯಕ್ರಮವನ್ನು ಜಾರಿಗೆ ತರಲಾಯಿತ್ತು. ಪ್ರಥಮ ಬಾರಿಗೆ ಈ ಯೋಜನೆಯು ತಮಿಳನಾಡು ರಾಜ್ಯದಲ್ಲಿ ಮೊದಲಿಗೆ ಜಾರಿಗೆ ತಂದು ನಂತರದಲ್ಲಿ ಎಲ್ಲಾ ರಾಜ್ಯಗಳಿಗೆ ವಿಸ್ತರಿಸಲಾಯಿತ್ತು. ಒಂಬತ್ತನೆ ಯೋಜನೆಯ ಕೊನೆಯಲ್ಲಿ ಸರ್ವ ಶಿಕ್ಷಾ ಅಭಿಯಾನವನ್ನು ರಚಿಸಿ ಸರ್ವರಿಗೂ ಪೂರ್ವ ಪ್ರಾಥಮಿಕ ಶಿಕ್ಷಣವನ್ನು ನೀಡುವ ಉದ್ದೇಶದೊಂದಿಗೆ ಪ್ರಾರಂಭಿಸಲಾಯಿತ್ತು. 2010ರ ಹೊತ್ತಿಗೆ ದೇಶದಲ್ಲಿರುವ ಎಲ್ಲ 6 ರಿಂದ 14ವರ್ಷದ ಮಕ್ಕಳಿಗೆ ಪ್ರಾಥಮಿಕ ಶಿಕ್ಷಣವನ್ನು ನೀಡುವ ಗುರಿಯನ್ನು ಇಟ್ಟುಕೊಳ್ಳಲಾಗಿತ್ತು ಆದರೆ ಇದು ಸಾಧ್ಯವಾಗಿಲ್ಲ (ಕರ್ನಾಟಕ ಸರಕಾರ, 2014). ತೀರ ಇತ್ತೀಚಿಗೆ ಶಿಕ್ಷಣ ಪಡೆಯುವುದು ಮಕ್ಕಳ ಹಕ್ಕಾಗಿ 2009ರಲ್ಲಿ ಪ್ರಾರಂಭವಾದರೂ ಅದೂ ಕೂಡ ಉಳ್ಳವರ ಪಾಲಾಗುತ್ತಿದೆ ಎಂದು ಅನೇಕ ಪತ್ರಿಕೆ ಮತ್ತು ದೃಶ್ಯ ಮಾಧ್ಯಮಗಳಲ್ಲಿ ಪ್ರಕಟಣೆಗೊಂಡಿವೆ. ಅನೇಕ ರೀತಿಯ ಅಸಮಾನತೆಗಳು ಪ್ರತಿನಿತ್ಯ ಮಾಧ್ಯಮಗಳಲ್ಲಿ ವರದಿಯಾಗುತ್ತಿರುತ್ತವೆ. ಆದರೆ ಈ ಮೇಲಿನ ಎಲ್ಲಾ ಕಾರ್ಯಕ್ರಮಗಳ ಫಲವಾಗಿ ದೇಶದಲ್ಲಿರುವ ಬಡತನ ರೇಖೆಯ ಕೆಳಗಿನ ಕುಟುಂಬಗಳಿಗೆ ಅಲ್ಪ ಪ್ರಮಾಣದಲ್ಲಾದರೂ ಕಾರ್ಯಕ್ರಮಗಳ ಲಾಭಗಳು ದೊರಕುತ್ತಿವೆ.

ಇವುಗಳಲ್ಲದೆ ಸರಕಾರವು ಗ್ರಾಮೀಣ ಭಾಗದಲ್ಲಿನ ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡ, ಇತರೆ ಹಿಂದುಳಿದ ಮತ್ತು ಆರ್ಥಿಕವಾಗಿ ಹಿಂದುಳಿದ ವರ್ಗದ ವಿದ್ಯಾರ್ಥಿಗಳಿಗೆ ನಗರ ಪ್ರದೇಶದಲ್ಲಿರುವ ಶಾಲೆಗಳಿಗೆ ಹೋಗಿ ಅಧ್ಯಯನವನ್ನು ಕೈಗೊಳ್ಳಲು ಅನುಕೂಲವಾಗುವಂತೆ ಉಳಿದುಕೊಳ್ಳಲು ಉಚಿತ ಊಟ ಮತ್ತು ಹಾಸ್ಟೆಲ್ (ವಸತಿ) ಸೌಲಭ್ಯವನ್ನು ಒದಗಿಸಲಾಗುತ್ತಿದೆ. ರಾಜ್ಯದ ಆಯ್ದ ಭಾಗಗಳಲ್ಲಿ ಬಾಲಕ ಮತ್ತು ಬಾಲಕಿಯರಿಗಾಗಿ ಕಸ್ತೂರ ಬಾ, ನವೋದಯ ಮತ್ತು ಮೊರಾರ್ಜಿ ವಸತಿ ಶಾಲೆಗಳನ್ನು ತೆರೆಯುವುದರ ಮೂಲಕ ಅನೇಕ ಬಡತನ ರೇಖೆಯ ಕೆಳಗಿನ ವಿದ್ಯಾರ್ಥಿಗಳಿಗೆ ಅನುಕೂಲವಾಗಿದೆ. ಇವುಗಳ ಜೊತೆಗೆ ಶಾಲೆಗೆ ಬರುವ ಮತ್ತು ಶಾಲೆಯಿಂದ ಹೊರಗುಳಿಯುವ ವಿದ್ಯಾರ್ಥಿಗಳಿಗಾಗಿ ಅನೇಕ ರೀತಿಯ ಶಿಷ್ಯವೇತನದ ಕಾರ್ಯಕ್ರಮಗಳನ್ನು ಸರಕಾರವು ಜಾರಿ ಮಾಡಿದೆ. 2006–07ರಲ್ಲಿ ಕನಾಟಕ ಸರಕಾರವು ರಾಜ್ಯದ ಸರಕಾರಿ ಮತ್ತು ಅನುದಾನಿತ ಪ್ರೌಢಶಾಲೆಯಲ್ಲಿ ಎಂಟನೇ ತರಗತಿಯಲ್ಲಿ ಅಭ್ಯಾಸ ಮಾಡುತ್ತಿರುವ ಬಡತನ ರೇಖೆಯ ಕೆಳಗಿರುವ ವಿದ್ಯಾರ್ಥಿನಿಯರಿಗೆ ಉಚಿತವಾಗಿ ಸೈಕಲ್‌ನ್ನು ವಿತರಿಸಲಾಗುತ್ತಿದೆ. 1 ರಿಂದ 10ನೇ ತರಗತಿಯ ವರೆಗೆ ಸರಕಾರಿ ಶಾಲೆಯಲ್ಲಿ ಅಭ್ಯಾಸ ಮಾಡುತ್ತಿರುವ ಎಲ್ಲ ಮಕ್ಕಳಿಗೆ ಉಚಿತವಾಗಿ ಶೂ ಮತ್ತು ಸಾಕ್ಸಗಳನ್ನು ವಿತರಿಸಲಾಗುತ್ತದೆ. ಇದಲ್ಲದೆ ಸರಕಾರಿ ಮತ್ತು ಅನುದಾನಿತ ಶಾಲೆಗಳಲ್ಲಿ 1 ರಿಂದ 10ನೇ ತರಗತಿಯಲ್ಲಿ ಅಭ್ಯಾಸ

ಮಾಡುತ್ತಿರುವ ಎಲ್ಲ ಮಕ್ಕಳಿಗೆ ಉಚಿತವಾಗಿ ಪಠ್ಯ ಪುಸ್ತಕಗಳನ್ನು ಕೊಡಲಾಗುತ್ತದೆ. ಇದಲ್ಲದೆ ಪರಿಶಿಷ್ಟ ಜಾತಿ ಮತ್ತು ಪಂಗಡದ ವಿದ್ಯಾರ್ಥಿಗಳಿಗೆ ಪ್ರತಿವರ್ಷ ಆರು ನೋಟ್ ಬುಕ್ ಗಳನ್ನು ವಿತರಿಸಲಾಗುತ್ತದೆ (ಕರ್ನಾಟಕ ಸರಕಾರ, 2014). ಆದರೆ ಈ ನೋಟ್ ಬುಕ್ಸ್‌ಗಳು ಒಂದು ವರ್ಷಕ್ಕೆ ಸಾಕಾಗುವುದ್ದಿಲ್ಲ ಎಂದು ಅನೇಕ ಕುಟುಂಬಗಳು ಮಾಹಿತಿಯನ್ನು ಕಲೆಹಾಕುವ ಸಮಯದಲ್ಲಿ ಮಾಹಿತಿಯನ್ನು ಹಂಚಿಕೊಂಡಿರುವದು ತಿಳಿದುಬರುತ್ತದೆ. ಬಾಕಿ ಅವಧಿಗೆ ಬೇಕಾಗುವ ನೋಟ್ ಬುಕ್ಸ್‌ಗಳನ್ನು ಮಾರುಕಟ್ಟೆಯಿಂದ ತಂದು ಮಕ್ಕಳು ತಮ್ಮ ಅಭ್ಯಾಸವನ್ನು ಮುಂದುವರೆಸುತ್ತಾರೆ. ಇದಕ್ಕಾಗಿ ಕುಟುಂಬಗಳು ತಮ್ಮ ಆದಾಯದಲ್ಲಿನ ಉಳಿತಾಯವನ್ನು ಮಕ್ಕಳ ಶಿಕ್ಷಣ, ಆರೋಗ್ಯಕ್ಕಾಗಿ ಮತ್ತು ಮನೆಗೆ ಅಗತ್ಯವಿರುವ ಸಾಮಾನುಗಳನ್ನು ಕೊಂಡುಕೊಳ್ಳುವುದಕ್ಕಾಗಿ ವ್ಯಯಿಸಬೇಕಾಗುತ್ತದೆ (ಅನಿರುದ್ಧ ಕೃಷ್ಣ, 2004). ಕುಟುಂಬಗಳು ಮಾಡುವ ಆರೋಗ್ಯ, ಶಿಕ್ಷಣ, ಆಹಾರ ಮತ್ತು ಇತರೆ ಖರ್ಚನ್ನು ಮುಂದಿನ ಅಧ್ಯಾಯದಲ್ಲಿ ಹೆಚ್ಚಿನ ರೀತಿಯಲ್ಲಿ ವಿಶ್ಲೇಷಿಸಲಾಗಿದೆ.

**ಆರೋಗ್ಯ ಯೋಜನೆಗಳು**

ಇನ್ನು ಶಿಕ್ಷಣ, ವಸತಿ, ಆಹಾರವಾದ ಮೇಲೆ ದುಡಿದು ತಿನ್ನಲು ಬಹಳ ಅವಶ್ಯಕವಾದದ್ದು ಜನರ ಆರೋಗ್ಯ. ಜನರ ಆರೋಗ್ಯದ ಮಟ್ಟವನ್ನು ಕಾಯ್ದುಕೊಳ್ಳಲು ಸರಕಾರವು ಅನೇಕ ರೀತಿಯ ಆರೋಗ್ಯ ಕಾರ್ಯಕ್ರಮಗಳನ್ನು ಜಾರಿಯಲ್ಲಿ ತಂದಿರುತ್ತದೆ. ಅದರಲ್ಲಿ ಬಹಳ ಪ್ರಮುಖವಾದವು ಮತ್ತು ಸರಕಾರದಿಂದ ನೇರವಾಗಿ ಫಲಾನುಭವಿಗೆ ದೊರಕುತ್ತಿರುವ ಕಾರ್ಯಕ್ರಮಗಳನ್ನು ಈ ಮುಂದಿನ ಭಾಗದಲ್ಲಿ ಚರ್ಚಿಸಲಾಗಿದೆ. ಸರಕಾರವು ರಾಜ್ಯದ ಎಲ್ಲ ಜಿಲ್ಲೆ ಮತ್ತು ತಾಲೂಕ ಕೇಂದ್ರಗಳಲ್ಲಿ ಜಿಲ್ಲಾ ಆಸ್ಪತ್ರೆ ಮತ್ತು ಸಾರ್ವಜನಿಕ ತಾಲೂಕ ಆಸ್ಪತ್ರೆಗಳನ್ನು ತೆಗೆದು ಆಯಾ ಪ್ರದೇಶದಲ್ಲಿರುವ ಎಲ್ಲ ಧರ್ಮ, ಜಾತಿ ಮತ್ತು ವರ್ಗದ ಜನರಿಗೆ ಕಡಿಮೆ ಮೊತ್ತದ ಬಳಕೆದಾರರ ಶುಲ್ಕವನ್ನು ವಿಧಿಸಿ ಅನೇಕ ಸೇವೆಗಳನ್ನು ಒದಗಿಸುತ್ತಿದೆ. ಜಿಲ್ಲಾ ಮತ್ತು ತಾಲೂಕ ಆಸ್ಪತ್ರೆಗಳಲ್ಲದೆ ಸಮುದಾಯ ಆರೋಗ್ಯ ಕೇಂದ್ರ, ಪ್ರಾಥಮಿಕ ಆರೋಗ್ಯ ಕೇಂದ್ರ ಮತ್ತು ಉಪ ಆರೋಗ್ಯ ಕೇಂದ್ರಗಳಲ್ಲಿಯೂ ಸಹ ಹೊರ ರೋಗಿಗಳಿಗೆ ಮತ್ತು ಒಳ ರೋಗಿಗಳಿಗೆ ಆಯಾ ಆರೋಗ್ಯ ಸಂಸ್ಥೆಗಳ ವ್ಯವಸ್ಥಾಪನಾ ಸಮಿತಿಯ ನಿರ್ಧಾರದಂತೆ ಬಳಕೆದಾರರ ಶುಲ್ಕವನ್ನು ನಿಗದಿಪಡಿಸಲಾಗುತ್ತದೆ. ಆದರೆ ಈ ಎಲ್ಲಾ ಆರೋಗ್ಯ ಕೇಂದ್ರಗಳಲ್ಲಿ ಪ್ರಸವ ಪೂರ್ವ, ಪ್ರಸವ ನಂತರದ, ಹೆರಿಗೆ ಮತ್ತು ಶಿಶುವಿನ ಆರೋಗ್ಯಕ್ಕೆ ಸಂಬಂಧಿಸಿದ ಎಲ್ಲಾ ಸೇವೆಗಳು ಉಚಿತವಾಗಿ ಒದಗಿಸಲಾಗುತ್ತದೆ. ಇವುಗಳಲ್ಲದೆ ಈ ಎಲ್ಲಾ ಆರೋಗ್ಯ ಕೇಂದ್ರಗಳಲ್ಲದೆ ಖಾಸಗಿ ಆಸ್ಪತ್ರೆಗಳಲ್ಲಿಯೂ ಸಹ ಕುಟುಂಬ ಶಸ್ತ್ರಚಿಕಿತ್ಸೆ ಮಾಡಿಸಿಕೊಂಡ ಬಡತನ ರೇಖೆಯ ಕೆಳಗಿನ ಕುಟುಂಬದ, ಪರಿಶಿಷ್ಟ ಜಾತಿ ಮತ್ತು ಪಂಗಡದ ಮಹಿಳೆಯರಿಗೆ ಸಹಾಯಧನದ ರೂಪದಲ್ಲಿ ಕ್ರಮವಾಗಿ ರೂಪಾಯಿ 600 ಮತ್ತು 1500ಗಳನ್ನು ಕೊಡುವ ಒಂದು ಯೋಜನೆಯು ಕೂಡ ಜಾರಿಯಲ್ಲಿ ಇರುತ್ತದೆ.

ಇವುಗಳ ಜೊತೆಗೆ ಸರಕಾರವು ಕೆಲವೊಂದು ಖಾಸಗಿ ವೈದ್ಯಕೀಯ ಕಾಲೇಜು ಮತ್ತು ಆಸ್ಪತ್ರೆಗಳೊಡನೆ ಒಡಂಬಡಿಕೆ ಮಾಡಿಕೊಂಡು ಪರಿಶಿಷ್ಟ ಜಾತಿ, ಪಂಗಡದ ಮತ್ತು ಬಡತನ ರೇಖೆಯ ಕೆಳಗಿನ ಕುಟುಂಬಗಳ ಸದಸ್ಯರು ತೀವ್ರವಾದ ಕಾಯಿಲೆಯಿಂದ ಬಳಲುತ್ತಿದ್ದರೆ ಆಸ್ಪತ್ರೆಯ ಎಲ್ಲ ಖರ್ಚುನ್ನು ಸರಕಾರವೇ ಭರಿಸುವ ಯೋಜನೆಗೆ ವಾಜಪೇಯಿ ಆರೋಗ್ಯಶ್ರೀ ಎಂದು ಕರೆಯಲ್ಪಡುತ್ತದೆ (ಕರ್ನಾಟಕ ಸರಕಾರ, 2015). ಮೊದಲಿಗೆ ಈ ಯೋಜನೆಯು ರಾಜ್ಯದ ಹಿಂದುಳಿದ ಆರು ಜಿಲ್ಲೆಗಳಿಗೆ ಸೀಮಿತವಾಗಿತ್ತು. ನಂತರದಲ್ಲಿ ಎಲ್ಲ 30 ಜಿಲ್ಲೆಗಳಿಗೆ ವಿಸ್ತರಿಸಲಾಯಿತ್ತು. ಮುಂದುವರೆದು ಸರಕಾರವು ಅನೇಕ ಯೋಜನೆಗಳನ್ನು ತಾಯಿ ಮತ್ತು ಮಕ್ಕಳ ಆರೋಗ್ಯಕ್ಕೆ ಸಂಬಂಧಿಸಿದ ಕಾರ್ಯಕ್ರಮಗಳನ್ನು ಜಾರಿಯಲ್ಲಿ ತಂದಿರುತ್ತವೆ. ಅವು ಈ ಕೆಳಗಿನಂತಿವೆ.

**ಜನನಿ ಸುರಕ್ಷಾ ಯೋಜನೆ**

ಇದು ಭಾರತ ಸರಕಾರದ ಯೋಜನೆಯಾಗಿದೆ ಆಸ್ಪತ್ರೆಯ ಹೆರಿಗೆಯನ್ನು ಉತ್ತೇಜಿಸಿ ತಾಯಿ ಮತ್ತು ಮಗುವಿನ ಮರಣ ಪ್ರಮಾಣವನ್ನು ಕಡಿಮೆ ಮಾಡುವುದೇ ಇದರ ಮುಖ್ಯ ಉದ್ದೇಶವಾಗಿದೆ. ಈ ಯೋಜನೆಯಲ್ಲಿ ಗರ್ಭಿಣಿಯರಿಗೆ ಆರ್ಥಿಕ ಸಹಾಯವನ್ನು ನೀಡಲಾಗುತ್ತಿದ್ದು. ಎರಡು ಜೀವಂತ ಜನನಗಳಿಗೆ ಸಿಮಿತವಾಗಿರುತ್ತದೆ. ಮನೆಯಲ್ಲಿ ಹೆರಿಗೆಯಾದರೆ ರೂ.500, ಸಂಸ್ಥಿಕ ಹೆರಿಗೆ ನಗರ ಪ್ರದೇಶದಲ್ಲಿ ರೂ.600/–, ಸಾಂಸ್ಥಿಕ ಹೆರಿಗೆ ಗ್ರಾಮೀಣ ಪ್ರದೇಶದಲ್ಲಿ ರೂ.700/–, ಸಿಜೆರಿಯನ್ ಶಸ್ತ್ರಚಿಕಿತ್ಸೆ ರೂ.1500/–ನೋಂದಾಯಿತ ಖಾಸಗಿ ಆಸ್ಪತ್ರೆಗಳಲ್ಲಿ ಈ ರೀತಿ ಆರ್ಥಿಕ ಸಹಾಯ ನೀಡಲಾಗುತ್ತದೆ. ಫಲಾನುಭವಿಗಳು: ಬಡತನ ರೇಖೆಗಿಂತ ಕೆಳಗೆ ಇರುವವರು, ಪರಿಶಿಷ್ಟ ಜಾತಿ/ಪರಿಶಿಷ್ಟ ಪಂಗಡ, ಎರಡು ಜೀವಂತ ಜನನಗಳಿಗೆ ಮಾತ್ರ ಸೀಮಿತ, ತಾಯಿಯ ವಯಸ್ಸು 19ವರ್ಷಕ್ಕಿಂತ ಮೇಲ್ಪಟ್ಟಿರಬೇಕು, ಗರ್ಭಿಣಿ ತಪಾಸಣೆ, ಟಿಟಿ, ಚುಚುಮದ್ದು, ಕಬ್ಬಿಣಾಂಶ ಮಾತ್ರೆ ಪಡೆದಿರಬೇಕು., ಸೌಲಭ್ಯಗಳು ದೊರಕುವ ಸ್ಥಳ ಉಪಕೇಂದ್ರ ಮತ್ತು ಪ್ರಾಥಮಿಕ ಆರೋಗ್ಯ ಕೇಂದ್ರ, ಸಂಪರ್ಕಿಸಬೇಕಾದ ವ್ಯಕ್ತಿಗಳಾದ ಆಶಾ ಕಾರ್ಯಕರ್ತೆ, ಕಿರಿಯ ಮಹಿಳಾ ಆರೋಗ್ಯ ಸಹಾಯಕಿ ಮತ್ತು ಅಂಗನವಾಡಿ ಕಾರ್ಯಕರ್ತೆ, ದೊರೆಯುವ ಲಾಭಗಳು: ತಾಯಿ ಹಾಗೂ ಮಗುವಿಗೆ ಪೌಷ್ಠಿಕ ಆಹಾರ ತೆಗೆದುಕೊಳ್ಳಲು ಆರ್ಥಿಕವಾಗಿ ಸಹಾಯ ನೀಡುವುದು (ಕರ್ನಾಟಕ ಸರಕಾರ, 2015).

**ಜನನಿ ಶಿಶು ಸುರಕ್ಷಾ ಕಾರ್ಯಕ್ರಮ (ಜೆ.ಎಸ್.ಎಸ್.ಕೆ.)**

ತುರ್ತು ಹೆರಿಗೆ ಸೇವೆಯು ಅಗತ್ಯವಿರುವ ಗರ್ಭಿಣಿಯರನ್ನು ಗ್ರಾಮಾಂತರ ಪ್ರದೇಶಗಳಿಂದ ತಾಲೂಕಾ ಕೇಂದ್ರ ಹಾಗೂ ಜಿಲ್ಲಾ ಕೇಂದ್ರಕ್ಕೆ ಕರೆದೊಯ್ಯಲು ನೀಡುವ ಒಂದು ವಾಹನದ ವ್ಯವಸ್ಥೆಯನ್ನು ಒದಗಿಸುವ ಕಾರ್ಯಕ್ರಮ ಇದಾಗಿದೆ. ದೊರೆಯುವ ಸೌಲಭ್ಯಗಳು: ಹೆರಿಗೆ ವೇಳೆಯಲ್ಲಿ ಏನಾದರೂ ತುರ್ತು ಸಂದರ್ಭಗಳು ಬಂದರೆ ಈ ವಾಹನದ ಮೂಲಕ ಗ್ರಾಮಾಂತರ ಪ್ರದೇಶಗಳಲ್ಲಿನ ಗರ್ಭಿಣಿಯರನ್ನು ತಾಲೂಕು ಹಾಗೂ ಜಿಲ್ಲಾ ಕೇಂದ್ರಗಳಿಗೆ ತಕ್ಷಣ

ಕರದೊಯ್ಯಲಾಗುತ್ತದೆ. ಫಲಾನುಭವಿಗಳು: ತುರ್ತು ಹೆರಿಗೆ ಸೇವೆಯ ಅಗತ್ಯವಿರುವ ಗರ್ಭಿಣಿಯರು. ದೊರೆಯುವ ಲಾಭಗಳು: ಈ ವಾಹನಗಳು ಕೇವಲ ಗರ್ಭಿಣಿ ಸ್ತ್ರೀಯರನ್ನು ಗ್ರಾಮಾಂತರ ಪ್ರದೇಶದಿಂದ ಹತ್ತಿರದ ಆರೋಗ್ಯ ಸಂಸ್ಥೆಗಳಿಗೆ ತಲುಪಿಸುತ್ತದೆ. ಈ ವಾಹನದ ಚಾಲಕರ ಮೊಬೈಲಗಳನ್ನು ಆಶಾ ಹಾಗೂ ಕಿರಿಯ ಮಹಿಳಾ ಆರೋಗ್ಯ ಸಹಾಯಕರಿಗೆ ನೀಡಲಾಗಿರುತ್ತದೆ.

ಗರ್ಭಿಣಿಗೆ ಅಗತ್ಯವಿರುವ ಪ್ರಸೂತಿ ಪೂರ್ವ, ಪ್ರಸೂತಿ ವೇಳೆ ಮತ್ತು ಪ್ರಸೂತಿ ನಂತರದ ಆರೋಗ್ಯ ಸೇವೆಗಳು ಮತ್ತು ರೋಗದ ವಿರುದ್ಧ ರಕ್ಷಣೆ ಉಚಿತವಾಗಿ ಹಾಗೂ ಸಕಾಲದಲ್ಲಿ ಸಿಗುವಂತಾಗಲು ಸರ್ಕಾರ ಒಂದು ಹೊಸ ಕಾರ್ಯಕ್ರಮ ಪ್ರಾರಂಭ ಮಾಡಿದೆ. ಈ ಯೋಜನೆಯಲ್ಲಿ ಸಾರ್ವಜನಿಕ ಸಂಸ್ಥೆಯಲ್ಲಿ ಹೆರಿಗೆಗೆ ಸಂಬಂಧಿಸಿದ ಎಲ್ಲಾ ವೆಚ್ಚಗಳನ್ನು ಸರ್ಕಾರವೇ ಭರಿಸುತ್ತದೆ ಅಲ್ಲದೆ ಯಾವುದೇ ವಿಧವಾದ ಸೇವಾ ಶುಲ್ಕಗಳನ್ನು ವಿಧಿಸುವುದಿಲ್ಲ. ಗರ್ಭಿಣಿಗೆ ಅಗತ್ಯವಿರುವ ಪ್ರಸೂತಿ ಪೂರ್ವ, ಪ್ರಸೂತಿ ವೇಳೆ, ಪ್ರಸೂತಿ ನಂತರದ ಆರೋಗ್ಯ ಸೇವೆಗಳು ಮತ್ತು ರೋಗದ ವಿರುದ್ಧ ರಕ್ಷಣೆ ಉಚಿತವಾಗಿ ಹಾಗೂ ಸಕಾಲದಲ್ಲಿ ದೊರೆಯುವದು. ದೊರೆಯುವ ಸೌಲಭ್ಯಗಳು: ಗರ್ಭಿಣಿಗೆ ಉಚಿತ ಹೆರಿಗೆ ಸೇವೆ ಹಾಗೂ ಸಿಜಿರಿಯನ್ ಶಸ್ತ್ರಚಿಕಿತ್ಸೆ, ಉಚಿತ ವೈದ್ಯಕೀಯ ತಪಾಸಣೆಗಳು, ಗರ್ಭಿಣಿಗೆ ಉಚಿತ ಆಹಾರ ವಿತರಣೆ– 2 ದಿನಗಳು ಸಾಮಾನ್ಯ ಹೆರಿಗೆಗೆ ಹಾಗೂ 7 ದಿನಗಳವರೆಗೆ ಸಿಜೇರಿಯನ್ ಹೆರಿಗೆ ಆದಲ್ಲಿ, ಉಚಿತ ರಕ್ತದ ಪೂರೈಕೆ, ಮನೆಯಿಂದ ಆಸ್ಪತ್ರೆಯವರೆಗೆ ಉಚಿತ ಸಾರಿಗೆ, ಉಚಿತ ಸಾರಿಗೆ ವ್ಯವಸ್ಥೆ ಮೇಲ್ಮಟ್ಟದ ಆಸ್ಪತ್ರೆಗೆ ಸಾಗಿಸಲು ಮಗುವಿಗೆ: ಉಚಿತ ವೈದ್ಯಕೀಯ ತಪಾಸಣೆಗಳು, ಉಚಿತ ಚಿಕಿತ್ಸೆ, ಉಚಿತ ರಕ್ತ ಪೂರೈಕೆ, ಮನೆಯಿಂದ ಆಸ್ಪತ್ರೆವರೆಗೆ ಉಚಿತ ಸಾರಿಗೆ.ಫಲಾನುಭವಿಗಳು: ಬಾಣಂತಿಯರು ಹಾಗೂ ಮಕ್ಕಳು (ಜನನದಿಂದ 1ವರ್ಷದವರೆಗೆ ವರೆಗೆ)ಸೌಲಭ್ಯ ದೊರೆಯುವ ಸ್ಥಳಗಳು: ಪ್ರಾಥಮಿಕ ಆರೋಗ್ಯ ಕೇಂದ್ರ/ತಾಲ್ಲೂಕು ಆಸ್ಪತ್ರೆಗಳು/ಜಿಲ್ಲಾ ಆಸ್ಪತ್ರೆಗಳು ಸಂಪರ್ಕಿಸಬೇಕಾದ ವ್ಯಕ್ತಿಗಳು: ಆಶಾ ಕಾರ್ಯಕರ್ತೆ/ಕಿರಿಯ ಮಹಿಳಾ ಆರೋಗ್ಯ ಸಹಾಯಕಿಯರು/ಪ್ರಾ.ಆ.ಕೇಂದ್ರದ ವೈದ್ಯಾಧಿಕಾರಿಗಳು/ ತಾಲೂಕಾ ಆಸ್ಪತ್ರೆ/ಜಿಲ್ಲಾ ಆಸ್ಪತ್ರೆ ವೈದ್ಯಾಧಿಕಾರಿಗಳು ದೊರೆಯುವ ಲಾಭಗಳು: ಗರ್ಭಿಣಿಯರಿಗೆ ಹಾಗೂ ನವಜಾತ ಶಿಶುಗಳಿಗೆ ಉಚಿತವಾಗಿ ವೈದ್ಯಕೀಯ ಸೌಲಭ್ಯಗಳನ್ನು ಒದಗಿಸುವುದು (ಕರ್ನಾಟಕ ಸರಕಾರ, 2015).

**ಮಡಿಲು ಕಿಟ್ ಯೋಜನೆ**

ಬಾಣಂತನಕ್ಕೆ ಬೇಕಾದ 19 ವಸ್ತುಗಳಿರುವ ಒಂದು ಕಿಟ್ಟನ್ನು ತಾಯಿಗೆ ಹೆರಿಗೆ ನಂತರ ನೀಡುವ ಕಾರ್ಯಕ್ರಮವೇ 'ಮಡಿಲು ಯೋಜನೆ'. ಈ ಯೋಜನೆಯನ್ನು ರಾಷ್ಟದಲ್ಲಿಯೇ ಪ್ರಥಮ ಬಾರಿಗೆ ಕರ್ನಾಟಕ ಸರಕಾರವು ಸೆಪ್ಟಂಬರ್ 15, 2007 ರಂದು ಅನುಷ್ಠಾನಗೊಳಿಸಿದೆ. ಗರ್ಭಿಣಿಯರು ಸರಕಾರಿ ಆಸ್ಪತ್ರೆಗಳಲ್ಲಿ ಹೆರಿಗೆ ಮಾಡಿಸಿಕೊಳ್ಳಲು ಪ್ರೋತ್ಸಾಹಿಸಿ, ತಾಯಿ ಮತ್ತು ಮಗುವಿನ ಆರೋಗ್ಯ ಕಾಪಾಡಿ, ತಾಯಂದಿರ ಮರಣ ಮತ್ತು ಶಿಶು ಮರಣ ಪ್ರಮಾಣವನ್ನು

ಗಣನೀಯವಾಗಿ ತಗ್ಗಿಸುವ ಉದ್ದೇಶದಿಂದ ಈ ಯೋಜನೆ ಜಾರಿಗೊಳಿಸಲಾಗಿದೆ. ಈ ಯೋಜನೆಯಲ್ಲಿ ತಾಯಿಗೆ ಉಚಿತವಾಗಿ ಬಾಣಂತನಕ್ಕೆ ಬೇಕಾಗುವ ಸಾಮಗ್ರಿಗಳನ್ನು ಈ ಮಡಿಲು ಕಿಟ್ ಒಳಗೊಂಡಿರುತ್ತದೆ. ಈ ಕಿಟ್‌ನಲ್ಲಿ ತಾಯಿಗಾಗಿ ಇರುವಂತಹ ವಸ್ತುಗಳು ಸೊಳ್ಳೆಪರದೆ, ಜಮಖಾನೆ, ಬೆಡ್‌ಶೀಟ್, ತಾಯಿಗೆ ದಪ್ಪನೆಯಹೊದಿಕೆ, ತಾಯಿಗೆ ಸೋಪು, ಬಟ್ಟೆ ಸೋಪು, ತಾಯಿಗೆ ಹೊಟ್ಟೆಗೆ ಕಟ್ಟುವ ಬಟ್ಟೆ, ಸೇನಿಟರಿ ಪ್ಯಾಡ್, ತಾಯಿಗೆ ಬಾಚಣಿಕೆಯೊಂದಿಗೆ ಕೊಬ್ಬರಿ ಎಣ್ಣೆ, ತಾಯಿಗೆ ಟಾವೆಲ್, ಟೂತ್ ಪೇಸ್ಟ್‌ವಿತ್ ಬ್ರಷ್. ಮಗುವಿಗೆ ರಬ್ಬರ ಶೀಟ್, ಬೆಡ್ ಶೀಟ್, ಮಗುವಿಗೆ ಹೊದಿಕೆ, ಮೈ ತೊಳೆಯುವ ಸಾಬೂನು, ಡೈಪರ್, ಜಬಲಾ, ಸ್ವೆಟರ್, ಕುಲಾವಿ, ಕಾಲಚೀಲ ಮತ್ತು ಪ್ಲಾಸ್ಟಿಕ್ ಬ್ಯಾಗ್. ಸೌಲಭ್ಯದೊರೆಯುವ ಸ್ಥಳಗಳು ಉಪಕೇಂದ್ರ, ಪ್ರಾಥಮಿಕ ಆರೋಗ್ಯ ಕೇಂದ್ರ ಮತ್ತು ಎಲ್ಲ ಸರಕಾರಿ ಆಸ್ಪತ್ರೆಗಳಲ್ಲಿ ಮತ್ತು ಯೋಜನೆಯ ಲಾಭವನ್ನು ಪಡೆಯುವುದಕ್ಕಾಗಿ ಸಂಪರ್ಕಿಸಬೇಕಾದ ವ್ಯಕ್ತಿಗಳು, ಆಶಾ ಕಾರ್ಯಕರ್ತೆ, ಕಿರಿಯ ಮಹಿಳಾ ಆರೋಗ್ಯ ಸಹಾಯಕಿ, ವೈದ್ಯರು. ಈ ಯೋಜನೆಯಲ್ಲಿ ದೊರೆಯುವ ಲಾಭಗಳು ಮಗು ಹುಟ್ಟಿದ ತಕ್ಷಣವೇ ಅವಶ್ಯವಿರುವ ವಸ್ತುಗಳನ್ನು ಮಡಿಲು ಕಿಟ್ಟುಗಳು ಪೂರೈಸುತ್ತವೆ (ಕರ್ನಾಟಕ ಸರಕಾರ, 2015).

**ನಗು–ಮಗು ಕಾರ್ಯಕ್ರಮ**

ಹೆರಿಗೆಯಾದ ತಾಯಂದಿರನ್ನು ಮತ್ತು ಮಕ್ಕಳನ್ನು ಆಸ್ಪತ್ರೆಯಿಂದ ಸುರಕ್ಷಿತವಾಗಿ ಮನೆಗೆ ಕಳುಹಿಸುವ ವ್ಯವಸ್ಥೆಯನ್ನು ಕಲ್ಪಿಸುವುದೇ ನಗು–ಮಗು ವಾಹನ. ದೊರೆಯುವ ಸೌಲಭ್ಯಗಳು: ತಾಯಿ ಮತ್ತು ಮಗುವನ್ನು ಆಸ್ಪತ್ರೆಯಿಂದ ನಗು–ಮಗು ಎಂಬ ವಾಹನದಲ್ಲಿ ಮನೆಯವರೆಗೆ ಉಚಿತವಾಗಿ ಕರೆದುಕೊಂಡು ಹೋಗಿ ತಲುಪಿಸುವುದು. ಪ್ರಲಾನುಭವಿಗಳು: ಎಫ್.ಆರ್.ಯು.ಗಳಲ್ಲಿ ಹೆರಿಗೆಯಾದ ತಾಯಿ ಮತ್ತು ಮಗು. ದೊರೆಯುವ ಲಾಭಗಳು: ನವಜಾತ ಶಿಶುಗಳನ್ನು ಸುರಕ್ಷಿತವಾಗಿ ಆಸ್ಪತ್ರೆಯಿಂದ ಮನೆಗೆ ತಲುಪಿಸುವುದು (ಕರ್ನಾಟಕ ಸರಕಾರ, 2015).

ಈ ರೀತಿಯಾಗಿ ಕೇಂದ್ರ ಮತ್ತು ರಾಜ್ಯ ಸರಕಾರಗಳು ಬಡತನ ರೇಖೆಯ ಕೆಳಗಿರುವ ಕುಟುಂಬಗಳ ಅಭಿವೃದ್ಧಿಗಾಗಿ ಅನೇಕ ಕಾರ್ಯಕ್ರಮಗಳನ್ನು ಹಾಕಿಕೊಂಡರೂ ಸಹ ಅವುಗಳು ಹಾಕಿಕೊಂಡಿರುವ ಗುರಿಗಳನ್ನು ಮುಟುವಲ್ಲಿ ಸಫಲತೆಯನ್ನು ಕಂಡಿಲ್ಲ (ಚಂದ್ರ ಪೂಜಾರಿ, 2013, ಇಂದಿರಾ ಹಿರ್ವೆ, 2003). ಆದರೆ ಬಡತನ ರೇಖೆಯ ಕೆಳಗಿನ ಕುಟುಂಬಗಳಿಗಾಗಿ ಇರುವ ಕಾರ್ಯಕ್ರಮಗಳ ಲಾಭವನ್ನು ಬಡವರಲ್ಲದವರು ಬಳಸಿಕೊಂಡು ಕಾರ್ಯಕ್ರಮಗಳ ಲಾಭವನ್ನು ಸಹ ಅವರಿಗೆ ತಲುಪದಂತೆ ನೋಡಿಕೊಳ್ಳುವಲ್ಲಿ ಯಶಸ್ವಿಯಾಗಿದ್ದಾರೆ (ರಾಘಬೇಂದ್ರ ಜಾ ಮತ್ತು ಇತರರು, 2009). ಇದಕ್ಕೆ ಮೂಲ ಕಾರಣ ಗ್ರಾಮಗಳಲ್ಲಿನ ಪ್ರಬಲ ಜಾತಿ ಮತ್ತು ರಾಜಕೀಯವಾಗಿ ಬಲಿಷ್ಠವಾಗಿರುವ ಕುಟುಂಬಗಳು ಸರಕಾರಗಳು ಜಾರಿ ತಂದಿರುವ ಅಭಿವೃದ್ಧಿ ಕಾರ್ಯಕ್ರಮಗಳಲ್ಲಿ ಭಾಗವಹಿಸಿ ತಮ್ಮ ಅನುಕೂಲಕ್ಕೆ ತಕ್ಕಂತೆ ಜಾತಿ ಮತ್ತು ರಾಜಕೀಯ

ಅಧಿಕಾರವನ್ನು (ಶ್ರೀನಿವಾಸನ್ ಎಂ. ಎನ್. 1976, ತಿಮ್ಮಯ್ಯಾ ಜಿ, 1983) ಬಳಸಿಕೊಂಡು ಬಡತನ ರೇಖೆಯ ಕೆಳಗಿರುವ ಕುಟುಂಬಗಳಿಗೆ ಅನಾನುಕೂಲತೆಯನ್ನು ಸೃಷ್ಟಿಸಿ ಸರಕಾರದ ಕಾರ್ಯಕ್ರಮಗಳ ವಿಫಲತೆ ಎಂದು ತೋರಿಸುತ್ತಿದ್ದಾರೆ. ಸದ್ಯದ ವಾಸ್ತವಿಕ ಅಂಶವೇಂದರೆ ಶೇಕಡಾ 57ರಷ್ಟು ಆಹಾರ ಪದಾರ್ಥಗಳು ತಲುಪಬೇಕಾದ ಜನರಿಗೆ ಮುಟ್ಟುತ್ತಿಲ್ಲ (ಕರ್ನಾಟಕ ಲೋಕಾಯುಕ್ತ, 2012). ಆದರೆ ಕರ್ನಾಟಕ ಸರಕಾರವು 2014ರಲ್ಲಿ ಜಾರಿಗೆ ತಂದಿರುವ ಒಂದು ರೂಪಾಯಿಗೆ ಒಂದು ಕೆ.ಜಿ.ಅಕ್ಕಿಯ ಕಾರ್ಯಕ್ರಮದಿಂದ ಅನೇಕ ಬಡ ಕುಟುಬಗಳಿಗೆ ತಲುಪಿದೆ ಎಂದು ಮುಂದಿನ ಅಧ್ಯಾಯದಲ್ಲಿ ವಿಶ್ಲೇಷಿಸಲಾಗಿದೆ. ಆದರೆ ಇದರಲ್ಲಿ 40ಲಕ್ಷದಷ್ಟು ನಕಲಿ ಬಡತನ ರೇಖೆಯ ಕೆಳಗಿನ ಕುಟುಂಬಗಳಾಗಿವೆ (ಕರ್ನಾಟಕ ಲೋಕಾಯುಕ್ತ, 2012).

ಕಾಲಕ್ಕೆ ತಕ್ಕಂತೆ ಮೇಲೆ ಹೇಳಿದ ಆರೋಗ್ಯ ಕಾರ್ಯಕ್ರಮಗಳನ್ನು ಜಾರಿಯಲ್ಲಿ ತಂದರು ಸಹ ಮತ್ತು ಸರಕಾರಿ ಆರೋಗ್ಯ ಕೇಂದ್ರಗಳು ಮತ್ತು ಆಸ್ಪತ್ರೆಗಳು ಇದ್ದರೂ ಕೂಡ ಸರಕಾವು ಪ್ರತಿ ಐದು ವರ್ಷಕೊಮ್ಮೆ ನಡೆಸುವ ಆರೋಗ್ಯ ಸಮೀಕ್ಷೆಯ ಪ್ರಕಾರ ಕರ್ನಾಟಕ ರಾಜ್ಯದಲ್ಲಿರುವ ಎಲ್ಲಾ ಕುಟುಂಬಗಳು  ಸುಮಾರು 300 ರೂಪಾಯಿಗಳ ವರೆಗೆ ಆರೋಗ್ಯದ ಮೇಲೆ ಖರ್ಚುಮಾಡುತ್ತವೆ (ಭಾರತ ಸರಕಾರ, 2012). ಅದೇ ರೀತಿಯಾಗಿ ಸರಕಾರದ ಬಡತನ ನಿವಾಹರಣೆಯ ಕಾರ್ಯಕ್ರಮಗಳಲ್ಲಿ ಕುಟುಂಬಗಳ ಪಟ್ಟಿಯನ್ನು ಮಾಡುವಾಗ ಶೇಕಡಾ 23ರಷ್ಟು ಫಲಾನುಭವಿಗಳ ಆಯ್ಕೆಯು ತಪ್ಪಾಗಿರುತ್ತದೆ ಮತ್ತು ಆಯ್ಕೆಗೆ ಇರುವ ಮಾನದಂಡಗಳನ್ನು ಪರಿಪೂರ್ಣವಾಗಿ ಅನುಸರಿಸಿರುವುದ್ದಿಲ್ಲ (ಚಚಡಿ ಎನ್.ಜಿ. 1988) ಇದಕ್ಕೆ ಮೂಲ ಕಾರಣ ಜಾತಿಯ ಪ್ರಬಲತೆ ಮತ್ತು ಗ್ರಾಮೀಣ ಭಾಗದಲ್ಲಿನ ಪ್ರಸುತ್ತ ರಾಜಕೀಯ ವ್ಯವಸ್ಥೆ ಮತ್ತು ಇತರೆ ಸಾಮಾಜಿಕ ಕಾರಣಗಳು (ಶ್ರೀನಿವಾಸನ್ ಎಂ. ಎನ್. 1976, ತಿಮ್ಮಯ್ಯಾ ಜಿ, 1983). ಆದ್ದರಿಂದ ಈಗ ಸರಕಾರದ ಎಲ್ಲಾ ಬಡತನ ನಿವಾಹರಣೆಯ ಕಾರ್ಯಕ್ರಮಗಳಿಗೆ ಕುಟುಂಬದ ಸದಸ್ಯರ ಆಧಾರ ಚೀಟಿ ಮತ್ತು ಹೆಬ್ಬೆಟ್ಟಿನ ಗುರುತು ಕಡ್ಡಾಯ ಮಾಡಿರುವುದ್ದರಿಂದ ಸ್ವಲ್ಪಮಟ್ಟಿಗಾದರೂ ಕಾರ್ಯಕ್ರಮಗಳ ಲಾಭವನ್ನು ಅರ್ಹರಾದ ಕುಟುಂಬಗಳಿಗೆ ಮುಟ್ಟಿಸಬಹುದೆಂದು ಅಂದಾಜಿಸಲಾಗಿದೆ (ಸಂತೋಷ ಮ್ಹೆರೊತ್ರಾ, 2010).  ಆದ್ದರಿಂದ ಸರಕಾರಗಳು ಯಾವುದೇ ಕಾರ್ಯಕ್ರಮಗಳು ಮಾಡುವಾಗ ಕೆಲವೊಂದು ಷರತ್ತುಗಳ ಮೂಲಕ ಕುಟುಂಬಗಳು ಹೊಂದಿರುವ ಬ್ಯಾಂಕ್ ಖಾತೆಗಳಿಗೆ ಹಣವನ್ನು ನೇರವಾಗಿ ವರ್ಗಾಹಿಸುವಂತಾಗಬೇಕು (ಸಂತೋಷ ಮ್ಹೆರೊತ್ರಾ, 2010). ಆದರೆ ಈ ರೀತಿಯಾಗಿ ಮಾಡುವುದ್ದರಿಂದ ದೇಶದಲ್ಲಿನ ಅನೇಕ ಕುಟುಂಬಗಳ ಸದಸ್ಯರು ಅನಕ್ಷರಸ್ಥರಾಗಿರುವುದ್ದರಿಂದ ಬ್ಯಾಂಕ್ ವ್ಯವಹಾರವನ್ನು ಮಾಡಲು ಬರುವುದ್ದಿಲ್ಲ ಮತ್ತು ಇದಕ್ಕಾಗಿ ಒಂದು ಪ್ರತ್ಯೇಕ ದಲ್ಲಾಳಿಗಳ ವ್ಯವಸ್ಥೆ ಹುಟ್ಟುಕೊಳ್ಳುವ ಸಂಭವ ಹೆಚ್ಚಾಗಿರುತ್ತದೆ ಎಂದು ಹೇಳಬಹುದು.

**ಉಪಸಂಹಾರ**

ಯಾವುದೇ ಸರಕಾರಗಳು ಬಡತನ ನಿವಾರಣೆಯ ಕಾರ್ಯಕ್ರಮಗಳನ್ನು ಮಾಡಿ ಕಾರ್ಯಾಚರಣೆಗೆ ತಂದರೆ ಅವುಗಳು ಸರಕಾರವು ಪ್ರತಿನಿಧಿಸುವ ಪಕ್ಷದ ಕಾರ್ಯಕರ್ತರನ್ನು ಮತ್ತು ಶಾಸಕರನ್ನು ಓಲೈಸುವ ಕಡೆಗೆ ಹೆಚ್ಚಿನ ಗಮನವನ್ನು ಕೊಡುತ್ತವೆ. ಇಲ್ಲಿ ಜನಸಾಮಾನ್ಯರ ಹಿತಾಸಕ್ತಿ ಬಹಳ ಕಡಿಮೆ ಇರುವುದನ್ನು ಮನಗಾಣಬಹುದು. ಬಡತನ ರೇಖೆಯ ಕೆಳಗಿರುವ ಕುಟುಂಬಗಳಲ್ಲಿ ಸರಕಾರದ ಯೋಜನೆಗಳ ಲಾಭವನ್ನು ಪಡೆಯಬೇಕಾದರೆ ಆಯಾಯ ಯೋಜನೆಗಳಿಗೆ ಬೇಕಾಗುವ ಕಾಗದ ಪತ್ರಗಳನ್ನು ಕೊಡಬೇಕಾಗುತ್ತದೆ. ಅನೇಕ ಕುಟುಂಬಗಳಲ್ಲಿ ಕಾಗದ ಪತ್ರಗಳು ಇಲ್ಲದೇ ಇರುವುದರಿಂದ ಯೋಜನೆಯ ಲಾಭವನ್ನು ಪಡೆಯುವದರಿಂದ ಅನೇಕ ಬಡ ಕುಟುಂಬಗಳು ವಂಚಿತವಾಗುತ್ತವೆ. ಉದಾಹರಣೆಗಾಗಿ ತಾಯಿ ಮತ್ತು ಮಕ್ಕಳ ಆರೋಗ್ಯ ಯೋಜನೆಯಾದ ಜನನಿ ಸುರಕ್ಷಾ ಯೋಜನೆಯಲ್ಲಿ ಮನೆಯಲ್ಲಿ ಹೆರಿಗೆಯಾದರೆ ರೂಪಾಯಿ 500 ಮತ್ತು ಸಂಸ್ಥೆಯಲ್ಲಿ ಹೆರಿಗೆಯಾದರೆ ರೂಪಾಯಿ 700 ಕೊಡಬೇಕು ಎಂದು ನಿಯಮವಿದೆ. ಇದಕ್ಕಾಗಿ ಅವರು ಪಡಿತರ ಚೀಟಿಯ ಬಿಪಿಎಲ್ ಕಾರ್ಡ, ತಾಯಿ ಕಾರ್ಡ, ತಾಯಿಯ ಭಾವ ಚಿತ್ರ, ಜಾತಿ ಪ್ರಮಾಣ ಪತ್ರ ಮತ್ತು ಕಿರಿಯ ಮಹಿಳಾ ಆರೋಗ್ಯ ಸಹಾಯಕಿ ಕೇಳಿದ ಎಲ್ಲಾ ಕಾಗದ ಪತ್ರಗಳನ್ನು ಕೊಡಬೇಕಾಗುತ್ತದೆ. ಈ ಲಾಭವನ್ನು ಹೆರಿಗೆಯಾಗಿ ಒಂದು ವಾರದ ಒಳಗೆ ಫಲಾನುಭವಿ ಖಾತೆಗೆ ವರ್ಗಮಾಡಬೇಕು. ಆದರೆ ವಾಸ್ತವದಲ್ಲಿ ಇದು ಕಾರ್ಯ ನಿರ್ವಹಿಸುತ್ತಿಲ್ಲ. ಇದಕ್ಕೆ ಕಾರಣ ಬಡ ಕುಟುಂಬಗಳಲ್ಲಿ ಸರಿಯಾದ ಕಾಗದ ಪತ್ರಗಳು ಇಲ್ಲದೆ ಇರುವದು. ಆದ್ದರಿಂದ ಯಾವುದೇ ಕಾರ್ಯಕ್ರಮಗಳನ್ನು ರೂಪಿಸಬೇಕಾದರೆ ಬಡತನ ರೇಖೆಯ ಕುಟುಂಬಗಳನ್ನು ಗಮನದಲ್ಲಿಟ್ಟುಕೊಂಡು ಕಾರ್ಯಕ್ರಮಗಳನ್ನು ಕಾರ್ಯಗತಕ್ಕೆ ತಂದರೆ ಅವುಗಳ ಉದ್ದೇಶಗಳು ಜನರನ್ನು ಮುಟುವಲ್ಲಿ ಸಫಲತೆಯನ್ನು ಕಾಣಬಹುದಾಗಿದೆ.

**ಕೊನೆಟಿಪ್ಪಣಿ**


1. ಎ. ವೈದ್ಯನಾಥನ್ (2001) *"ಪಾವರ್ಟಿ ಆ್ಯಂಡ್ ಪಾಲಿಸಿ", ಎಕನಾಮಿಕಲ್ ಆ್ಯಂಡ್ ಪೊಲಿಟಿಕಲ್ ವೀಕ್ಲಿ,* ಸಂಪುಟ–36, ನಂ.21, ಪುಟ–1807–1822.
2. ಅದೇ, ಪುಟ–1807–1822.
3. ಅದೇ, ಪುಟ–1807–1822.
4. ಅದೇ, ಪುಟ–1807–1822.
5. ರಮ್ಯ ವಿಜಯ, ರಾಹುಲ್ ಲಾಹೋಟಿ ಮತ್ತು ಹೇಮಾ ಸ್ವಾಮಿನಾಥನ್ (2013) *"ಮೂವ್ವಿಂಗ್ ಫ್ರಮ್ ಹೌಸ್ಹೋಲ್ಡ್ ಟೂ ಇಂಡ್ವಿಜಿವಲ್: ಮಲ್ಟಿಡೈಮೆನ್ಷನಲ್ ಪಾವರ್ಟಿ ಅನಲೈಸ್ಸ್"* ಭಾರತೀಯ ವ್ಯವಹಾರ ನಿರ್ವಹಣೆ ಸಂಸ್ಥೆ, ಬೆಂಗಳೂರು, ವರ್ಕಿಂಗ್ ಪೇಪರ್ ನಂ.404, ಪುಟ–1–37.
6. ಸಿ.ರಂಗರಾಜನ್ (2014) ಬಡತನ ರೇಖೆಯ ಕೆಳಗಿರುವ ಕುಟುಂಬಗಳನ್ನು ಪುನರಪರಿಶೀಲಿಸಿ ಕೇಂದ್ರಕ್ಕೆ ವರದಿ ಸಲ್ಲಿಸಲು ಸರಕಾರವು ನೇಮಿಸಿದ ಸಮಿತಿಯ ವರದಿ, ಪುಟ–1–87.
7. ಅದೇ, ಪುಟ–1–87.
8. ಯೋಜನಾ ಆಯೋಗ (2014) ಯೋಜನಾ ಆಯೋಗದ ಅಂತರಜಾಲತಾಣ www.planningcommission.nic.inದಿಂದ ಪಡೆಯಲಾಗಿದೆ.
9. ಅದೇ, ಯೋಜನಾ ಆಯೋಗದ ಅಂತರಜಾಲತಾಣ
10. ಅದೇ, ಯೋಜನಾ ಆಯೋಗದ ಅಂತರಜಾಲತಾಣ
11. ಕರ್ನಾಟಕ ಸರಕಾರ (2014) ಸರಕಾರದ ವಸತಿ ಇಲಾಖೆಯ ವಾರ್ಷಿಕ ವರದಿ–2014, ಬೆಂಗಳೂರು. www.ashraya.in.
12. ಅದೇ, ಸರಕಾರದ ವಸತಿ ಇಲಾಖೆಯ ವಾರ್ಷಿಕ ವರದಿ, www.ashraya.in.
13. ಅದೇ, ಸರಕಾರದ ವಸತಿ ಇಲಾಖೆಯ ವಾರ್ಷಿಕ ವರದಿ, www.ashraya.in.
14. ಅದೇ, ಸರಕಾರದ ವಸತಿ ಇಲಾಖೆಯ ವಾರ್ಷಿಕ ವರದಿ, www.ashraya.in.
15. ಅದೇ, ಸರಕಾರದ ವಸತಿ ಇಲಾಖೆಯ ವಾರ್ಷಿಕ ವರದಿ, www.ashraya.in.
16. ಅದೇ, ಸರಕಾರದ ವಸತಿ ಇಲಾಖೆಯ ವಾರ್ಷಿಕ ವರದಿ, www.ashraya.in.
17. ಯೋಜನಾ ಆಯೋಗ (2014) ಯೋಜನಾ ಆಯೋಗದ ಅಂತರಜಾಲತಾಣ www.planningcommission.nic.inದಿಂದ ಪಡೆಯಲಾಗಿದೆ.
18. ಅದೇ, ಯೋಜನಾ ಆಯೋಗದ ಅಂತರಜಾಲತಾಣ
19. ಅದೇ, ಯೋಜನಾ ಆಯೋಗದ ಅಂತರಜಾಲತಾಣ
20. ಚಂದ್ರ ಪೂಜಾರಿ.ಎಂ. (2008) *'ರಾಜಕೀಯದ ಬಡತನ'* ಸಿದ್ದಾರ್ಥ ಪ್ರಕಾಶನ, ಹೊಸಪೇಟೆ.

21. ಕರ್ನಾಟಕ ಸರಕಾರ (2014) ಶಿಕ್ಷಣ ಇಲಾಖೆಯ ಅಂತರಜಾಲತಾಣ http://www.schooleducation.kar.nic.in. ದಿಂದ ಪಡೆಯಲಾಗಿದೆ.
22. ಅದೇ, ಕರ್ನಾಟಕ ಸರಕಾರದ ಶಿಕ್ಷಣ ಇಲಾಖೆಯ ಅಂತರಜಾಲತಾಣ.
23. ಅದೇ, ಕರ್ನಾಟಕ ಸರಕಾರದ ಶಿಕ್ಷಣ ಇಲಾಖೆಯ ಅಂತರಜಾಲತಾಣ.
24. ಅನಿರುದ್ಧ ಕೃಷ್ಣ (2004) *"ಎಸ್ಕೇಪಿಂಗ್ ಪಾವರ್ಟಿ ಆ್ಯಂಡ್ ಬಿಕಮಿಂಗ್ ಪುವರ್: ಹೂ ಗೇನ್ಸ್ ಆ್ಯಂಡ್ ಹೂ ಲಾಸ್ಟ್", ವರ್ಲ್ಡ್ ಡೆವಲ್‌ಪ್ಮೆಂಟ್,* ವ್ಯಾಲುಂ-32 ನಂ.1 ಪುಟ-232-236.
25. ಕರ್ನಾಟಕ ಸರಕಾರ (2015) ಆರೋಗ್ಯ ಇಲಾಖೆಯ ಅಂತರಜಾಲತಾಣ http://www.karnataka.gov.in/hfw/nhm/pages/home.aspx. ದಿಂದ ಪಡೆಯಲಾಗಿದೆ.
26. ಅದೇ, ಕರ್ನಾಟಕ ಸರಕಾರದ ಆರೋಗ್ಯ ಇಲಾಖೆಯ ಅಂತರಜಾಲತಾಣ.
27. ಅದೇ, ಕರ್ನಾಟಕ ಸರಕಾರದ ಆರೋಗ್ಯ ಇಲಾಖೆಯ ಅಂತರಜಾಲತಾಣ.
28. ಅದೇ, ಕರ್ನಾಟಕ ಸರಕಾರದ ಆರೋಗ್ಯ ಇಲಾಖೆಯ ಅಂತರಜಾಲತಾಣ.
29. ಎಂ.ಚಂದ್ರ ಪೂಜಾರಿ (2013) *'ಅಭಿವೃದ್ಧಿ ಮತ್ತು ಚುನಾವಣೆ ಗೆಲವು', ವಿಜಯ ಕರ್ನಾಟಕ ಜನೇವರಿ 11ರ* ದಿನಪತ್ರಿಕೆ, ಪುಟ-8.
30. ಇಂದಿರಾ ಹಿರ್ವೆ (2003) *ಐಡೆನ್ಟಿಫಿಕೇಶನ್ ಆಫ್ ಬಿಪಿಎಲ್ ಹೌಸ್ಹೋಲ್ಡ್ಸ್ ಫಾರ್ ಪಾವರ್ಟಿ ಆಲಿವ್ಹೆಷನ್ ಪ್ರೋಗ್ರಾಮ್ಸ್, ಎಕೊನೊಮಿಕಲ್ ಪೊಲಿಟಿಕಲ್ ವ್ಹಿಕ್ಲೀ,* ಸಂಪುಟ-38 ನಂ.45, ನವ್ಹೆಂಬರ್, 8-14, ಪುಟ-4803-4808.
31. ರಾಘಬೇಂದ್ರ ಜಾ, ಸಂಬಿತ್ ಭಟ್ಟಾಚಾರ್ಯ, ರಾಘವ್ ಗೈಯ ಮತ್ತು ಶೈಲಶ್ರೀ ಶಂಕರ (2009) *ಕ್ಯಾಪ್ಚರ್ ಆಫ್ ಆ್ಯಂಟಿ-ಪಾವರ್ಟಿ ಪ್ರೋಗ್ರಾಮ್ಸ್: ಆ್ಯನ್ ಅನಾಲಸ್ಸಿ ಆಫ್ ನ್ಯಾಷನಲ್ ರೂರಲ್ ಎಂಪ್ಲಾಯಿಮೆಂಟ್ ಗ್ಯಾರಂಟಿ ಪ್ರೋಗ್ರಾಮ ಇನ್ ಇಂಡಿಯಾ. ಜರ್ನಲ್ ಆಫ್ ಏಷಿಯನ್ ಎಕಾನೊಮಿಕ್ಸ್*-20, ಪುಟ 456-464.
32. ಶ್ರೀನಿವಾಸನ್, ಎಂ.ಎನ್. (1976) *'ದಿ ರಿಮೆಂಬರ್ಡ ವಿಲೇಜ',* ಆಕ್ಸಫರ್ಡ್ ಯುನಿವರ್ಸಿಟಿ ಪ್ರೆಸ್, ನ್ಯೂ ದಿಲ್ಲಿ.
33. ಜಿ. ತಿಮ್ಮಯ್ಯಾ (1983) *"ಕಾಸ್ಟ ಆಂಡ್ ಕ್ಲಾಸ್ ಇನ್ ಕರ್ನಾಟಕ", ಸೋಶಿಯಲ್ ಸೈಂಟಿಸ್ಟ,* ಸಂಪುಟ; 11, ಸಂಚಿಕೆ:117, ಪುಟ; 31-37.
34. ಕರ್ನಾಟಕ ಲೋಕಾಯುಕ್ತ (2012), ಡಾ. ಆರ್. ಬಾಲಸುಬ್ರಮಣ್ಯರವರ ವರದಿ, ಕರ್ನಾಟಕ ಲೋಕಾಯುಕ್ತ, ಬೆಂಗಳೂರು.
35. ಅದೇ, ಕರ್ನಾಟಕ ಲೋಕಾಯುಕ್ತ ವರದಿ.
36. ಭಾರತ ಸರಕಾರ (2013) ಡಿಎಲ್‌ಹೆಚ್‌ಎಸ್-4, ಜಿಲ್ಲಾವಾರು ಮಾಹಿತಿ ಒಳಗೊಂಡಿರುವ ಫ್ಯಾಕ್ಟಸೀಟ್, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ, ದೆಹಲಿ.

37. ಚಚಡಿ ಎನ್.ಜಿ. (1988) “ದಿ ಇನ್‌ಟಿಗ್ರೆಟೆಡ್ ರೂರಲ್ ಡೆವಲಂಪ್‌ಮೆಂಟಲ್ ಪ್ರೋಗ್ರಮ್ ಆಂಡ್ ರೂರಲ್ ಪಾವರ್ಟಿ ಇನ್ ಕರ್ನಾಟಕ–ಎ ಕೇಸ್ ಸ್ಟಡಿ ಆಫ್ ಧಾರವಾಡ ಡಿಸ್ಟ್ರೀಕ್ಟ್” ಕರ್ನಾಟಕ ವಿಶ್ವವಿದ್ಯಾಲಯಕ್ಕೆ ಸಾದರಪಡಿಸಿದ ಅಪ್ರಕಟಿತ ಪ್ರಬಂದ.

38. ಶ್ರೀನವಾಸನ್, ಎಂ.ಎನ್. (1976) ದಿ ರಿಮೆಂಬರ್ಡ ವಿಲೇಜ, ಆಕ್ಸ್‌ಫರ್ಡ್ ಯುನವರ್ಸಿಟಿ ಪ್ರೇಸ್, ನ್ಯೂ ದಿಲ್ಲಿ.

39. ಜಿ. ತಿಮ್ಮಯ್ಯಾ (1983) *ಕಾಸ್ಟ ಆಂಡ್ ಕ್ಲಾಸ್ ಇನ್ ಕರ್ನಾಟಕ. ಸೊಶಿಯಲ್ ಸೈಂಟಿಸ್ಟ,* ಸಂಪುಟ; 11, ಸಂಚಿಕೆ:117, ಪುಟ; 31–37.

40. ಸಂತೋಷ ಮ್ಹೆರೊತ್ರಾ (2010) “ಇನ್ಟ್ರೂಡ್ಯೂಸಿಂಗ್ ಕಂಡಿಷ್ನಲ್ ಕ್ಯಾಷ್ ಟ್ರಾನ್ಸಪರ್ ಇನ್ ಇಂಡಿಯಾ: ಎ ಪ್ರೊಪಸಲ್ ಫಾರ್ ಫಾವ್ಡಿ ಸಿ,ಸಿ,ಟಿಎಸ್.” ಯೋಜನಾ ಆಯೋಗ, ದೆಹಲಿ. http://www.indiaenvironmentportal.org.in.

41. ಅದೇ, ಅಂತರಜಾಲತಾಣ http://www.indiaenvironmentportal.org.in. ದಿಂದ ಪಡೆಯಲಾಗಿದೆ



# ಅಧ್ಯಾಯ ೪

# ಬಡವರ ಸಾಮಾಜಿಕ ಮತ್ತು ಆರ್ಥಿಕ ಹಿನ್ನೆಲೆ

**ಪೀಠಿಕೆ**

ಪ್ರಸ್ತುತ ಅಧ್ಯಯನವು ಬಡತನ ರೇಖೆಯ ಕೆಳಗಿನ ಕುಟುಂಬಗಳ ಬೇಡಿಕೆ ಮತ್ತು ಪೂರೈಕೆಯನ್ನು ತಿಳಿದುಕೊಳ್ಳುವ ಮೊದಲು ಆ ಕುಟುಂಬಗಳ ಸಾಮಾಜಿಕ, ಸದಸ್ಯರ ಶೈಕ್ಷಣಿಕ, ಮತ್ತು ಆರ್ಥಿಕ ಸ್ಥಿತಿಗತಿಗಳನ್ನು ತಿಳಿದುಕೊಳ್ಳುವದು ಕೂಡ ಅಷ್ಟೇ ಪ್ರಮುಖವಾಗಿರುತ್ತದೆ. ಆದ್ದರಿಂದ ಈ ಒಂದು ಅಧ್ಯಾಯದಲ್ಲಿ ಕುಟುಂಬಗಳ ಧರ್ಮ, ಜಾತಿ, ಕುಟುಂಬಗಳು ಇರುವ ಸ್ಥಿತಿ ಅಂದರೆ ಎಲ್ಲಾ ಸದಸ್ಯರು ಕೂಡಿಯೇ ಇದ್ದಾರೆಯೆ ಅಥವಾ ಬೇರೆ ಇದ್ದಾರೆ, ಸದಸ್ಯರ ಶೈಕ್ಷಣಿಕ ಮಾಹಿತಿ, ಕುಟುಂಬಗಳು ಹೊಂದಿರುವ ಭೂ ಹಿಡುವಳಿ, ಗೃಹ ಉಪಯೋಗಿ ವಸ್ತುಗಳು, ಜಾನುವಾರುಗಳು ಮತ್ತು ಕುಟುಂಬಗಳ ವಾರ್ಷಿಕ ಸರಾಸರಿ ಆದಾಯವನ್ನು ನೋಡಬಹುದಾಗಿದೆ.

**ಕುಟುಂಬಗಳ ಧರ್ಮ**

ಕೋಷ್ಟಕ 4.1ರಂತೆ ಅಧ್ಯಯನಕ್ಕೆ ಆಯ್ಕೆಮಾಡಿಕೊಂಡ ಗ್ರಾಮಗಳಲ್ಲಿನ ಕುಟುಂಬಗಳ ಧರ್ಮದ ಬಗ್ಗೆ ಹೇಳುವುದಾದರೆ ಕಲಬುರಗಿಯ ಕೊಂಕನಳ್ಳಿ ಗ್ರಾಮದಲ್ಲಿರುವ ಶೇಕಡಾ 91ರಷ್ಟು ಕುಟುಂಬಗಳು ಹಿಂದೂ ಧರ್ಮವನ್ನು ಅನುಸರಿಸುತ್ತಿದ್ದರೆ ಶೇಕಡಾ 9ರಷ್ಟು ಕುಟುಂಬಗಳು ಮುಸ್ಲಿಂ ಧರ್ಮಕ್ಕೆ ಸೇರಿದವರಾಗಿದ್ದಾರೆ. ಇನ್ನು ಧಾರವಾಡ ಜಿಲ್ಲೆಯ ನಿಗದಿಯಲ್ಲಿಯೂ ಸಹ ಹೆಚ್ಚಿನ ಅಂದರೆ ಶೇಕಡಾ 87ರಷ್ಟು ಕುಟುಂಬಗಳು ಹಿಂದೂ ಧರ್ಮಕ್ಕೆ ಸೇರಿದ್ದರೆ ಶೇಕಡಾ 8ರಷ್ಟು ಕುಟುಂಬಗಳು ಮುಸ್ಲಿಂ ಮತ್ತು ಶೇಕಡಾ 5ರಷ್ಟು ಕುಟುಂಬಗಳು ಜೈನ ಧರ್ಮಕ್ಕೆ ಸೇರಿವೆ. ಧಾರವಾಡದ ನಿಗದಿ ಗ್ರಾಮದಲ್ಲಿ ಮೂರು ಧರ್ಮಗಳಾದ ಹಿಂದೂ, ಮುಸ್ಲಿಂ ಮತ್ತು ಜೈನ ಧರ್ಮದವರು ಇರುವುದು ಕಂಡು ಬರುತ್ತದೆ. ಆದರೆ ಕಲಬುರಗಿಯ ಕೊಂಕನಳ್ಳಿಯಲ್ಲಿ ಕೇವಲ ಹಿಂದೂ ಮತ್ತು ಮುಸ್ಲಿಂ ಧರ್ಮಕ್ಕೆ ಸೇರಿದವರು ಇರುವುದು ಕಂಡು ಬರುತ್ತದೆ. ಅದೇ ರೀತಿಯಾಗಿ ಮಾಹಿತಿಯನ್ನು ಕಲೆಹಾಕುವ ಸಮಯದಲ್ಲಿ ಕೊಂಕನಳ್ಳಿ ಗ್ರಾಮದಲ್ಲಿ ಮುಸ್ಲಿಂ ಸಮುದಾಯಕ್ಕೆ ಸೇರಿದ ಕುಟುಂಬಗಳನ್ನು ಪಟೇಲರು ಎಂದು ಕರೆಯುತ್ತಿರುವುದು ಕಂಡು ಬಂದಿದೆ. ಅಂದರೆ ಗ್ರಾಮದ ಹಿರಿಯರಲ್ಲಿ ಈ ಗ್ರಾಮದಲ್ಲಿ ಮುಸ್ಲಿಂ ಪಂಗಡಕ್ಕೆ ಸೇರಿದವರು ಕೂಡ ಬಹಳ ಪ್ರಮುಖವೆಂದು ತಿಳಿದುಬರುತ್ತದೆ. ಏಕೆಂದರೆ ಹಿಂದೆ ಈ ಭಾಗವು ಹೈದ್ರಾಬಾದ ನಿಜಾಮನ ಆಡಳಿಕ್ಕೆ ಒಳಪಟ್ಟಿದ್ದರಿಂದ ಇದು ಒಂದು ಕಾರಣ ಇರಬಹುದು ಎಂದು ಅಂದಾಜಿಸಬಹುದು ಮತ್ತು ಗ್ರಾಮದ ಪ್ರಮುಖವಾದ ನಿರ್ಧಾರಗಳನ್ನು ತೆಗೆದುಕೊಳ್ಳುವಾಗ

**ಕೋಷ್ಟಕ–4.1**
**ಕುಟುಂಬಗಳ ಧರ್ಮದ ಮಾಹಿತಿ ಶೇಕಡಾವಾರು**

| ಧರ್ಮ | ಕೊಂಕನಳ್ಳಿ | ನಿಗದಿ |
|---|---|---|
| ಹಿಂದೂಗಳು | 91 | 87 |
| ಮುಸ್ಲಿಂರು | 9 | 8 |
| ಇತರೆ (ಜೈನರು) | 0 | 5 |
| ಒಟ್ಟು | 100 | 100 |

ಮಾಹಿತಿಯ ಮೂಲ : ಕ್ಷೇತ್ರ ಕಾರ್ಯ

ಪಟೇಲರನ್ನು ಸೇರಿಸಿ ನಿರ್ಧಾರವನ್ನು ತೆಗೆದುಕೊಳ್ಳಲಾಗುತ್ತದೆ ಎಂದು ಗ್ರಾಮದ ಹಿರಿಯರ ಜೊತೆಯಲ್ಲಿ ಚರ್ಚೆಯಲ್ಲಿ ತೊಡಗಿದಾಗ ವಿಷಯ ತೀಳಿದು ಬಂತು. ಆದರೆ ಧಾರವಾಡದಲ್ಲಿನ ಮುಸ್ಲಿಂ ಸಮುದಾಯದಲ್ಲಿನ ಎಲ್ಲರೂ ಕೂಡ ಕನ್ನಡ ಮಾತನಾಡುತ್ತಿದ್ದರೆ ಕೊಂಕನಳ್ಳಿ ಗ್ರಾಮದಲ್ಲಿನ ಮುಸ್ಲಿಂ ಕುಟುಂಬಗಳಲ್ಲಿ ಕೇವಲ ಉರ್ದು ಮಾತನಾಡುವುದು ಕಂಡು ಬಂದಿರುತ್ತದೆ. ಮಾಹಿತಿಯನ್ನು ಕಲೆಹಾಕುವ ಸಮಯದಲ್ಲಿ ಆ ಕುಟುಂಬಗಳ ಸದಸ್ಯರು ಕೇವಲ ಉರ್ದು ಮಿಶ್ರಿತ ಹಿಂದಿ ಭಾಷೆಯಲ್ಲಿ ಮಾಹಿತಿಯನ್ನು ಹಂಚಿಕೊಳ್ಳುತ್ತಿದ್ದರು. ಆದರೆ ಅಧ್ಯಯನ ಕೈಗೊಂಡ ಎರಡು ಗ್ರಾಮಗಳಲ್ಲಿ ಹಿಂದೂ ಧರ್ಮದವರು ಅಧಿಕ ಸಂಖ್ಯೆಯಲ್ಲಿದ್ದು ತಮ್ಮ ಪ್ರಾಬಲ್ಯವನ್ನು ಹೆಚ್ಚಿನ ಪ್ರಮಾಣದಲ್ಲಿ ಹೊಂದಿರುವುದು ಕಂಡುಬರುತ್ತದೆ. ಇದು ರಾಜಕೀಯ, ಸಾಮಾಜಿಕ, ಮತ್ತು ಆರ್ಥಿಕ ವಲಯದಲ್ಲೂ ಕಾಣಬಹುದಾಗಿದೆ ಎಂದು ಹೇಳಬಹುದು. ಆದರೆ ಈಗಿನ 21ನೇ ಶತಮಾನದಲ್ಲಿಯೂ ಸಹ ಈಗಲೂ ಸಹ ದೇಶದ ಗ್ರಾಮೀಣ ಭಾಗದಲ್ಲಿ ಅವರವರ ಜಾತಿಯು ಆರ್ಥಿಕತೆಯ ಮೇಲೆ ಮತ್ತು ಏಣಿ–ಶ್ರೇಣಿಗಳ ರಚನೆಯಲ್ಲಿ ಬಹುಮಟ್ಟಿನ ಪರಿಣಾಮ ಬೀರಿದೆ. ಜಾತಿ ಮತ್ತು ವರ್ಗಾಧರಿತ ಉದ್ಯೋಗಳು ಹೊಸ ಆರ್ಥಿಕ, ಸಾಮಾಜಿಕ ಮತ್ತು ರಾಜಕೀಯ ಬದಲಾವಣೆಯ ಒತ್ತಡಕ್ಕೆ ಒಳಗಾಗುತ್ತವೆ (ಚಿಬ್ಬರ್, 1986).

**ಕುಟುಂಬಗಳು ಮತ್ತು ಜಾತಿವಾರು ವಿಶ್ಲೇಷಣೆ**

ಬಡತನ ರೇಖೆಯ ಕೆಳಗಿನ ಕುಟುಂಬಗಳನ್ನು ಅಧ್ಯಯನದ ಮೊದಲನೆಯ ಉದ್ದೇಶಗಳಿಗನುಗುಣವಾಗಿ ಹೇಳುವುದಾದರೆ ಕುಟುಂಬಗಳು ಪ್ರತಿನಿಧಿಸುವ ಜಾತಿಯ ಹೆಸರನ್ನು ಕ್ಷೇತ್ರಕಾರ್ಯದ ಸಮಯದಲ್ಲಿ ಕಲೆಹಾಕಲಾಗಿ ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡ, ಇತರೆ ಹಿಂದುಳಿದ ಜಾತಿ ಮತ್ತು ಸಾಮಾನ್ಯರು ಎಂದು ವರ್ಗೀಕರಿಸಿ ಮಾಹಿತಿಯನ್ನು ವಿಶ್ಲೇಷಿಸಲಾಗಿದೆ.

ಮೊದಲನೆಯದಾಗಿ ಪರಿಶಿಷ್ಟ ಜಾತಿಯಲ್ಲಿ ಅಧ್ಯಯನ ಕೈಗೊಂಡ ಎರಡು ಗ್ರಾಮಗಳಲ್ಲಿ ಕುಟುಂಬಗಳ ಸದಸ್ಯರು ಹೇಳಿರುವ ಜಾತಿಗಳ ಅನುಸಾರವಾಗಿ ಹೇಳುವುದಾದರೆ ಈ ಒಂದು ಗುಂಪಿನಲ್ಲಿ, ಮಾದರು, ಹೊಲೆಯರು, ಭಜಂತ್ರಿಗಳು ಮತ್ತು ವಡ್ಡರನ್ನು ಸೇರಿಸಲಾಗಿದೆ. ಇನ್ನು

ಪರಿಶಿಷ್ಟ ಪಂಗಡದಲ್ಲಿ ಬ್ಯಾಡರು, ವಾಲ್ಮೀಕಿ, ತಳವಾರರು ಮತ್ತು ಬೇಡರನ್ನು ಸೇರಿಸಿಕೊಳ್ಳಲಾಗಿದೆ. ಇತರೆ ಹಿಂದುಳಿದ ಜಾತಿಗಳಲ್ಲಿ ಕುರುಬರು, ಕಬ್ಬಲಿಗರು, ಬಾರಿಕೇರ್, ಸುಣಗಾರ, ಮಡಿವಾಳರು, ಅಗಸರು, ಉಪ್ಪಾರ, ಈಳಿಗೇರರು, ಇಡಿಗರು, ಕಲಾಲರು, ಅಂಬಿಗೆರು, ಪೂಜಾರಿ, ಹಂಡೆ ಕುರುಬರು, ಮರಾಠರು ಮತ್ತು ಹಡಪದ ಜಾತಿಗಳನ್ನು ಸೇರಿಸಿ ಈ ಒಂದು ಗುಂಪನ್ನು ರಚಿಸಿಕೊಳ್ಳಲಾಗಿದೆ. ಲಿಂಗಾಯತ, ಸ್ವಾಮಿಗಳು, ಐನರು, ಪಂಚಮಸಾಲಿ, ಬಣಜಿಗ ಹೂಗಾರ ಮತ್ತು ಇತರೆ ಲಿಂಗಾಯತ ಉಪ ಜಾತಿಗಳನ್ನು ಸೇರಿಸಿ ಸಾಮಾನ್ಯ ಪಂಗಡ ಅಥವಾ ಸಾಮಾನ್ಯ ಜಾತಿಗಳನ್ನು ಸೇರಿಸಿ ಸಾಮಾನ್ಯ ವರ್ಗಕ್ಕೆ ಸೇರಿಸಿಕೊಳ್ಳಲಾಗಿದೆ. ಆಯಾಯ ಜಾತಿಗಳ ಸ್ಥಾನ-ಮಾನ ಮತ್ತು ಅವುಗಳು ಹೊಂದಿರುವ ಚರ ಮತ್ತು ಸ್ಥಿರ ಆಸ್ತಿಯ ಮೇಲೆ ಹಲವಾರು ಗುಂಪುಗಳನ್ನಾಗಿ ವಿಂಗಡಿಸುವುದು ಸಾಮಾನ್ಯವಾಗಿದೆ (ಚಿಬ್ಬರ್, 1986). ಆದರೆ ಸರಕಾವು ದೇಶದಲ್ಲಿರುವ ಎಲ್ಲಾ ಜಾತಿಗಳನ್ನು ಕೇವಲ ಮೂರು-ಐದು ಗುಂಪುಗಳನ್ನಾಗಿ ವಿಂಗಡಿಸುತ್ತದೆ. ಇದರಿಂದ ದೇಶದಲ್ಲಿರುವ ಬಹುಸಂಖ್ಯಾತವಿರುವ ಹಿಂದುಳಿದ ಜಾತಿಗಳ ಮಾಹಿತಿಯ ಕೊರತೆಯ ಉಂಟಾಗುತ್ತದೆ.

**ಕೋಷ್ಟಕ-4.2**

**ಶೇಕಡಾವಾರು ಕುಟುಂಬಗಳ ಜಾತಿವಾರು ಮಾಹಿತಿ**

| **ಜಾತಿಗಳು** | **ಕೊಂಕನಳ್ಳಿ** | ನಿಗದಿ |
|---|---|---|
| ಪರಿಶಿಷ್ಟ ಜಾತಿ | 24.1 | 20.91 |
| ಪರಿಶಿಷ್ಟ ಪಂಗಡ | 5.2 | 8.18 |
| ಇತರೆ ಹಿಂದುಳಿದ ಜಾತಿಗಳು | 39.7 | 37.27 |
| ಮುಸ್ಲಿಂರು | 9.5 | 8.18 |
| ಸಾಮಾನ್ಯ | 21.6 | 25.45 |
| ಒಟ್ಟು | 100.0 | 100.00 |

ಮಾಹಿತಿಯ ಮೂಲ: ಕ್ಷೇತ್ರ ಕಾರ್ಯ

ಕೋಷ್ಟಕ 4.2ರಲ್ಲಿ ತಿಳಿಸಿರುವಂತೆ ಕಲಬುರಗಿಯ ಕೊಂಕನಳ್ಳಿ ಗ್ರಾಮದಲ್ಲಿ ಶೇಕಡಾ 24.1ರಷ್ಟು ಮತ್ತು ಧಾರವಾಡದ ನಿಗದಿಯಲ್ಲಿ ಶೇಕಡಾ 20.91ರಷ್ಟು ಕುಟುಂಬಗಳು ಪರಿಶಿಷ್ಟ ಜಾತಿಗೆ ಸೇರಿದ ಬಡತನ ರೇಖೆಯ ಕೆಳಗಿನ ಕುಟುಂಬಗಳು ಅಧ್ಯಯನದ ಮಾದರಿ ಆಯ್ಕೆಯಲ್ಲಿ ಆಯ್ಕೆಯಾಗಿವೆ. ಪರಿಶಿಷ್ಟ ಪಂಗಡ ಅಥವಾ ಬುಡಕಟ್ಟು ಜನಾಂಗದಲ್ಲಿ ಕಲಬುರಗಿಯ ಕೊಂಕನಳ್ಳಿಯಲ್ಲಿ ಶೇಕಡಾ 5.2ರಷ್ಟು ಮತ್ತು ಧಾರವಾಡದ ನಿಗದಿಯಲ್ಲಿ ಶೇಕಡಾ 8.18ರಷ್ಟು

ಕುಟುಂಬಗಳಿಂದ ಮಾಹಿತಿಯನ್ನು ಕಲೆಹಾಕಲಾಗಿದೆ. ಇನ್ನು ಇತರೆ ಹಿಂದುಳಿದ ಜಾತಿಗಳಲ್ಲಿ ಕಲಬುರಗಿಯ ಕೊಂಕನಳ್ಳಿಯಲ್ಲಿ ಶೇಕಡಾ 39.7ರಷ್ಟು ಮತ್ತು ಧಾರವಾಡದ ನಿಗದಿಯಲ್ಲಿ ಶೇಕಡಾ 37.27ರಷ್ಟು ಕುಟುಂಬಗಳಿಂದ ಅಧ್ಯಯನದ ಉದ್ದೇಶಗಳಿಗನುಸಾರವಾಗಿ ಮಾಹಿತಿಯನ್ನು ಸಂಗ್ರಹಿಸಲಾಗಿದೆ. ಅದೇ ರೀತಿಯಾಗಿ ಅಲ್ಪಸಂಖ್ಯಾತ ಸಮುದಾಯವಾದ ಮುಸ್ಲಿಂ ಜಾತಿಗೆ ಸೇರಿದ ಶೇಕಡಾ 9.5ರಷ್ಟು ಮತ್ತು ಶೇಕಡಾ 8.18ರಷ್ಟು ಕುಟುಂಬಗಳು ಅನುಕ್ರಮವಾಗಿ ಕೊಂಕನಳ್ಳಿ ಮತ್ತು ನಿಗದಿಯಲ್ಲಿ ಆಯ್ಕೆಯಾಗಿರುವುದು ತಿಳಿದುಬರುತ್ತದೆ. ಕೊನೆಯದಾಗಿ ಸಾಮಾನ್ಯ ಜಾತಿಗಳಿಗೆ ಸೇರಿದ ಕುಟುಂಬಗಳ ಬಗ್ಗ ಹೇಳುವುದಾದರೆ ಕಲಬುರಗಿಯ ಕೊಂಕನಳ್ಳಿಯಲ್ಲಿ ಮತ್ತು ಧಾರವಾಡದ ನಿಗದಿಯಲ್ಲಿ ಅನುಕ್ರಮವಾಗಿ ಶೇಕಡಾ 21.6ರಷ್ಟು ಮತ್ತು ಶೇಕಡಾ 25.45ರಷ್ಟು ಕುಟುಂಬಗಳು ಆಯ್ಕೆಯಾಗಿರುವದು ಕಂಡುಬರುತ್ತದೆ. ಈಶ್ವರನ್ (1976)ರವರು ಸಹ ತಮ್ಮ ಅಧ್ಯಯನದ ಪ್ರದೇಶದಲ್ಲಿನ ಜಾತಿಗಳನ್ನು ಶ್ರೇಣಿಯ ಆಧಾರದ ಮೇಲೆ ಒಟ್ಟು 13 ಜಾತಿ ಮತ್ತು 40 ಉಪ ಜಾತಿಗಳನ್ನು ವಿಂಗಡಿಸಿದ್ದರು.

**ಕುಟುಂಬಗಳ ಸ್ಥಿತಿ**

ಅಧ್ಯಯನ ಕೈಗೊಂಡ ಮತ್ತು ಆಯ್ಕೆಯಾದ ಎರಡು ಗ್ರಾಮಗಳಲ್ಲಿನ ಕುಟುಂಬಗಳ ಸ್ಥಿತಿ ಅಂದರೆ ಆ ಕುಟುಂಬಗಳು ಅವಿಭಕ್ತವಾಗಿವೆಯೊ ಅಥವಾ ವಿಭಕ್ತವಾಗಿವೆಯೊ ಎಂಬುದನ್ನು ಕೋಷ್ಟಕ 4.3ರಲ್ಲಿ ವಿಶ್ಲೇಷಿಸಲಾಗಿದೆ. ಈ ಕೋಷ್ಟಕದಲ್ಲಿ ಕುಟುಂಬಗಳ ಸ್ಥಿತಿಯನ್ನು ಸಾಮಾಜಿಕ ಪಂಗಡವಾರು ನೋಡುವ ಪ್ರಯತ್ನವನ್ನು ಮಾಡಲಾಗಿದೆ. ಕಲಬುರಗಿ ಜಿಲ್ಲೆಯ ಕೊಂಕನಳ್ಳಿ ಗ್ರಾಮದಲ್ಲಿನ ಪರಿಶಿಷ್ಟ ಜಾತಿಯಲ್ಲಿ ಶೇಕಡಾ 64.3ರಷ್ಟು ಕುಟುಂಬಗಳು ಅವಿಭಕ್ತ ಕುಟುಂಬಗಳಾಗಿದ್ದರೆ ಇನ್ನುಳಿದ ಶೇಕಡಾ 35.7ರಷ್ಟು ಕುಟುಂಬಗಳು ವಿಭಕ್ತ ಕುಟುಂಬಗಳಾಗಿ ತಮ್ಮ ಜೀವನವನ್ನು ನಡೆಸುತ್ತಿದ್ದಾರೆ. ಪರಿಶಿಷ್ಟ ಪಂಗಡ ಅಥವಾ ಬುಡಕಟ್ಟು ಜನಾಂಗಗಳಲ್ಲಿ ಶೇಕಡಾ 66.7ರಷ್ಟು ಕುಟುಂಬಗಳು ಅವಿಭಕ್ತ ಮತ್ತು ಶೇಕಡಾ 33.3ರಷ್ಟು ಕುಟಂಬಗಳು ವಿಭಕ್ತ ಕುಟುಂಬಗಳಾಗಿವೆ. ಇನ್ನು ಇತರೆ ಹಿದುಳಿದ ಜಾತಿಗಳಲ್ಲಿ ಇದರ ಪ್ರಮಾಣ ಸ್ವಲ್ಪ ಜಾಸ್ತಿ ಇರುವುದು ಕಂಡುಬರುತ್ತದೆ. ಇತರೆ ಹಿಂದುಳಿದ ಜಾತಿಗಳಲ್ಲಿ ಶೇಕಡಾ 78.3ರಷ್ಟು ಕುಟುಂಬಗಳು ಅವಿಭಕ್ತ ಕುಟುಂಬಗಳಾಗಿದ್ದರೆ ಶೇಕಡಾ 21.7ರಷ್ಟು ಕುಟುಂಬಗಳು ವಿಭಕ್ತ ಕುಟುಂಬಗಳಾಗಿರುವದು ಕಂಡುಬರುತ್ತದೆ. ಅತಿ ಕಡಿಮೆ ಅವಿಭಕ್ತ ಕುಟುಂಬಗಳು ಇರುವುದು ಸಾಮಾನ್ಯ ಜಾತಿಯವರಲ್ಲಿ ಅಂದರೆ ಶೇಕಡಾ 54.5ರಷ್ಟು ಕುಟುಂಬಗಳು ಅವಿಭಕ್ತ ಮತ್ತು ಶೇಕಡಾ 45.5ರಷ್ಟು ವಿಭಕ್ತ ಕುಟುಂಬಗಳಾಗಿರುವುದು ಕಂಡುಬಂದಿದೆ. ಕುಟುಂಬದ ಸದಸ್ಯರ ಹತ್ತಿರ ಕುಟುಂಬದ ಸ್ಥಿತಿಯ ಬಗ್ಗೆ ಮಾಹಿತಿಯನ್ನು ಕೇಳುವಾಗ ಅನೇಕ ಕುಟುಂಬಗಳ ಸದಸ್ಯರು ಇದನ್ನು ತೆಗೆದುಕೊಂಡು ಏನು ಮಾಡುತ್ತೀರಿ? ಎಂದು ಪ್ರಶ್ನೆಗಳನ್ನು ಹಾಕುತ್ತಿರುವುದು ಸಾಮಾನ್ಯವಾಗಿತ್ತು ನಂತರ ಸಂಶೋಧಕರು ಕೇವಲ ಸಂಶೋಧನೆಗಾಗಿ ಮಾತ್ರ ಅವಿಭಕ್ತ ಕುಟುಂಬಗಳು ಮತ್ತು ವಿಭಕ್ತ

ಕುಟುಂಬಗಳು ಪ್ರತಿ ತಿಂಗಳಿಗೆ/ವರ್ಷಕ್ಕೆ ಎಷ್ಟು ಪ್ರಮಾಣದಲ್ಲಿ ಆಹಾರ, ಶಿಕ್ಷಣ, ವಸತಿ, ಆರೋಗ್ಯ ಮತ್ತು ಇತರೆ ಅಗತ್ಯವಿರುವ ಸೇವೆಗಳನ್ನು ಪಡೆದುಕೊಳ್ಳಲು ಎಷ್ಟು ಬೇಕಾಗುತ್ತದೆ ಮತ್ತು ಸರಕಾರದಿಂದ ಎಷ್ಟರ ಪ್ರಮಾಣದಲ್ಲಿ ಸಹಾಯಧನ ಸಿಗುತ್ತಿದೆ ಮತ್ತು ಎಷ್ಟು ಕೊರತೆಯಾಗುತ್ತಿದೆ ಎಂದು ತಿಳಿದುಕೊಳ್ಳಲು ಈ ಒಂದು ಅಧ್ಯಯನವನ್ನು ಕೈಗೆತ್ತಿಕೊಳ್ಳಲಾಗಿದೆ ಎಂದು ಹೇಳಿದಾಗ ಮಾತ್ರ ಉತ್ತರಗಳನ್ನು ಕೊಡುತ್ತಿದ್ದರು. ಒಂದು ವೇಳೆ ಸರಕಾರದಿಂದ ಈ ಕಾರ್ಯವನ್ನು ಮಾಡುತ್ತಿದ್ದಾರೆಂದು ಗೊತ್ತಾದ್ದರೆ ನೌಕರಿಗಾಗಿ ಅಥವಾ ವಿದ್ಯಾಭ್ಯಾಸಕ್ಕಾಗಿ ಬೇರೆ ಕಡೆ ಇದ್ದರೆ ಅವರನ್ನು ಸೇರಿಸಿ ಹೇಳಲಾಗುತ್ತದೆ. ಇದು ಇತರೆ ಹಿಂದುಳಿದ ಸೇರಿದ ಜಾತಿಯ ಕುಟುಂಬಗಳಿಂದ ಮಾಹಿತಿಯನ್ನು ಕೇಳುವಾಗ ಸಂಶೋಧಕರು  ಹೆಚ್ಚಿನ ಪ್ರಮಾಣದಲ್ಲಿ ಪ್ರಶ್ನೆಗಳ ಸಮಸ್ಯೆಯನ್ನು ಅನುಭವಿಸಬೇಕಾಯಿತು. ಇದಕ್ಕೆ ಅವರಲ್ಲಿನ ಸಾಮಾನ್ಯ ಜ್ಞಾನ ಮತ್ತು ಸಾಕ್ಷರತೆಯ ಕೊರತೆಯಿಂದ ಇರಬಹುದು ಎಂದು ಅಂದಾಜಿಸಬಹುದು. ಇನ್ನು ಪರಿಶಿಷ್ಟ ಜಾತಿ ಮತ್ತು ಪಂಗಡದ ಕುಟುಂಬಗಳಿಂದ ಮಾಹಿತಿಯನ್ನು ಪಡೆಯುವಾಗ ಯಾವುದೇ ರೀತಿಯ ಮರು ಪ್ರಶ್ನೆಗಳನ್ನು ಕೇಳಿದ ಉದಾಹರಣೆಗಳಿಲ್ಲ. ಅನೇಕ ಸಾಮಾನ್ಯ ಜಾತಿಯ ಕುಟುಂಬಗಳ ಸದಸ್ಯರು ನಗರ ಪ್ರದೇಶಗಳಲ್ಲಿ ವಾಸ ಮಾಡುತ್ತಿದ್ದರೂ ಸಹ ಇಲ್ಲೇ ಇರುತ್ತಾರೆ ಎಂದು ಹೇಳುತ್ತಿದ್ದರು.

ಗ್ರಾಮದಲ್ಲಿನ ಒಬ್ಬ ಪರಿಚಯಸ್ಥರು ಹೇಳುವ ಪ್ರಕಾರ ಊರಿನ ಗೌಡರು ಕಲಬುರಗಿಯಲ್ಲಿ ಮತ್ತು ಸೇಡಂದಲ್ಲಿನ ನಗರ ಪ್ರದೇಶದಲ್ಲಿನ ಮಕ್ಕಳ ಶಿಕ್ಷಣಕ್ಕಾಗಿ ಒಂದೊಂದು ಮನೆಗಳಿವೆ. ಅಲ್ಲಿಯೂ ಸಹ ಅವರ ಕುಟುಂಬದ ಸದಸ್ಯರು ವಾಸ ಮಾಡುತ್ತಾರೆ ಆದರೆ ಅವರೂ ಸಹ ಗ್ರಾಮದ ಮನೆಯಲ್ಲಿಯೇ ಇದ್ದಾರೆ ಎಂದು ಹೇಳುವುದು ತೀರ ಸಾಮಾನ್ಯವಾಗಿತ್ತು. ತಮ್ಮ ರಾಜಕೀಯ ಪ್ರಭಾವವನ್ನು ಬೀರಿ ಸರಕಾರದ ಎಲ್ಲಾ ದಾಖಲೆಗಳಲ್ಲಿ ಇರುವಂತೆ ನೋಡಿಕೊಳ್ಳುತ್ತಾರೆ. ಅವರೇ ಹೇಳುವ ಪ್ರಕಾರ ಇದು ಗ್ರಾಮ ಪಂಚಾಯತಿಯ ಚುನಾವಣೆಯಲ್ಲಿ ಬಹಳ ಕೆಲಸಕ್ಕೆ ಬರುತ್ತದೆಯಂತೆ. ಏಕೆಂದರೆ ಅವರ ಮನೆಯಲ್ಲಿ ಅತಿ ಹೆಚ್ಚಿನ ಪ್ರಮಾಣದಲ್ಲಿ ಮತದಾರರು ಇರುವುದ್ದರಿಂದ ಪ್ರತಿ ಗ್ರಾಮ ಪಂಚಾಯತಿ ಚುನಾವಣೆಯಲ್ಲಿ ಅವರ ಕುಟುಂಬದ ಒಬ್ಬರಾದರೂ ಸ್ಪರ್ಧೆಗೆ ನಿಲ್ಲುತ್ತಾರೆ ಮತ್ತು ಅವರೇ ಗೆದ್ದು ಬರುತ್ತಾರೆ. ಅದಕೋಸ್ಕರವಾದರೂ ಸಹ ಅವರು ಎಲ್ಲ ಸದಸ್ಯರು ಇಲ್ಲೇ ಇರುತ್ತಾರೆಂದು ತೋರಿಸುವುದು ಸಂಶೋಧನೆಯಿಂದ ತಿಳಿದುಬರುತ್ತದೆ. ಇನ್ನು ಧಾರವಾಡದ ನಿಗದಿ ಗ್ರಾಮದಲ್ಲಿನ ಕುಟುಂಬಗಳ ಬಗ್ಗೆ ಹೇಳುವುದಾದರೆ ಪರಿಶಿಷ್ಟ ಜಾತಿಯಲ್ಲಿ ಶೇಕಡಾ 73.9ರಷ್ಟು ಅವಿಭಕ್ತ ಕುಟುಂಬಗಳು ಮತ್ತು ಶೇಕಡಾ 26.1ರಷ್ಟು ಕುಟುಂಬಗಳು ವಿಭಕ್ತ ಕುಟುಂಬಗಳಾಗಿವೆ. ಪರಿಶಿಷ್ಟ ಪಂಗಡ ಅಥವಾ ಬುಡಕಟ್ಟು ಜನಾಂಗಗಳಲ್ಲಿ ಶೇಕಡಾ 77.8ರಷ್ಟು ಅವಿಭಕ್ತ ಮತ್ತು ಶೇಕಡಾ 22.2ರಷ್ಟು ವಿಭಕ್ತ ಕುಟುಂಬಗಳಾಗಿವೆ ಎಂದು ಅಂಕಿಅಂಶಗಳಿಂದ ತಿಳಿದುಬರುತ್ತದೆ. ಇನ್ನು ಇತರೆ ಹಿಂದುಳಿದ ಜಾತಿಗಳ ಕುಟುಂಬಗಳ ಬಗ್ಗೆ ಹೇಳುವುದಾದರೆ ಶೇಕಡಾ 68.3ರಷ್ಟು ಕುಟುಂಬಗಳು ಅವಿಭಕ್ತ ಮತ್ತು ಶೇಕಡಾ 31.7ರಷ್ಟು ವಿಭಕ್ತ ಕುಟುಂಬಗಳಾಗಿವೆ ಮತ್ತು ಸಾಮಾನ್ಯ ಜಾತಿಗಳಲ್ಲಿ ಶೇಕಡಾ 55.6ರಷ್ಟು ಕುಟುಂಬಗಳು

ಮತ್ತು ಶೇಕಡಾ 44.4ರಷ್ಟು ಕುಟುಂಬಗಳು ಕ್ರಮವಾಗಿ ಅವಿಭಕ್ತ ಮತ್ತು ವಿಭಕ್ತ ಕುಟುಂಬಗಳಾಗಿವೆ ಎಂದು ಅಂಕಿ ಅಂಶಗಳಿಂದ ಸ್ಪಷ್ಟವಾಗಿ ತಿಳಿದು ಬರುತ್ತದೆ.

**ಕೋಷ್ಟಕ–4.3**

**ಕುಟುಂಬಗಳ ಸಾಮಾಜಿಕ ಪಂಗಡದ ಮಾಹಿತಿ ಶೇಕಡಾವಾರು**

| ಸಾಮಾಜಿಕ ಪಂಗಡಗಳು | ಕೊಂಕನಳ್ಳಿ | | ನಿಗದಿ | |
|---|---|---|---|---|
| | ಅವಿಭಕ್ತ | ವಿಭಕ್ತ | ಅವಿಭಕ್ತ | ವಿಭಕ್ತ |
| ಪರಿಶಿಷ್ಟ ಜಾತಿ | 64.3 | 35.7 | 73.9 | 26.1 |
| ಪರಿಶಿಷ್ಟ ಪಂಗಡ | 66.7 | 33.3 | 77.8 | 22.2 |
| ಇತರೆ ಹಿಂದುಳಿದ ಜಾತಿಗಳು | 78.3 | 21.7 | 68.3 | 31.7 |
| ಮುಸ್ಲಿಂರು | 54.5 | 45.5 | 55.6 | 44.4 |
| ಸಾಮಾನ್ಯ | 54.5 | 45.5 | 55.6 | 44.4 |
| ಒಟ್ಟು | 76.0 | 24.0 | 67.9 | 32.1 |

ಮಾಹಿತಿಯ ಮೂಲ: ಕ್ಷೇತ್ರ ಕಾರ್ಯ

ಈ ಎರಡು ಗ್ರಾಮಗಳಲ್ಲಿನ ಕುಟುಂಬಗಳ ಸ್ಥಿತಿಯ ಬಗ್ಗೆ ತೌಲನಿಕವಾಗಿ ಹೇಳುವುದಾದರೆ ಕಲಬುರಗಿಯ ಕೊಂಕನಳ್ಳಿ ಗ್ರಾಮಕ್ಕಿಂತ ಧಾರವಾಡದ ನಿಗದಿ ಗ್ರಾಮದಲ್ಲಿರುವ ಪರಿಶಿಷ್ಟ ಜಾತಿ ಮತ್ತು ಪಂಗಡಗಳಲ್ಲಿನ ಕುಟುಂಬಗಳು ಹೆಚ್ಚಿನ ಪ್ರಮಾಣದ ಕುಟುಂಬಗಳು ಅವಿಭಕ್ತವಾಗಿವೆ. ಆದರೆ ಇತರೆ ಹಿಂದುಳಿದ ಜಾತಿಯ ಕುಟುಂಬಗಳಲ್ಲಿ ಅತಿ ಹೆಚ್ಚಿನ ಕುಟುಂಬಗಳು ಅವಿಭಕ್ತವಾಗಿರುವದು ಕೊಂಕನಳ್ಳಿ ಗ್ರಾಮದಲ್ಲಿ ಕಂಡುಬರುತ್ತದೆ. ಹೆಚ್ಚಿನ ಬಡತನ ರೇಖೆಯ ಕೆಳಗಿನ ಕುಟುಂಬಗಳು ಪರಿಶಿಷ್ಟ ಜಾತಿ ಮತ್ತು ಪಂಗಡ ಮತ್ತು ಹಿಂದುಳಿದ ಜಾತಿಗಳಲ್ಲಿ ಕಾಣಬಹುದಾಗಿದೆ (ಕರ್ನಾಟಕ ಸರಕಾರ, 2013, ಚನ್ನಕ್ಕಿ ಹೆಚ್.ಆರ್. ಮತ್ತು ರಾಧಾ ಜಿ.ಮಣ್ಣೂರ್, 2016).

**ಒಟ್ಟು ಸದಸ್ಯರು, ಲಿಂಗ ಮತ್ತು ಜಾತಿವಾರು ವಿವರಣೆ**

ಒಂದು ಕುಟುಂಬ ಎಂದರೆ ಅದರಲ್ಲಿ ಗಂಡು ಮಕ್ಕಳು, ಹೆಣ್ಣು ಮಕ್ಕಳು, ಚಿಕ್ಕ ಮಕ್ಕಳಿಂದ ತೆಗೆದುಕೊಂಡು ವಯಸ್ಸಾದ ಹಿರಿಯರವರೆಗೆ ಇರುತ್ತಾರೆ. ಆದ್ದರಿಂದ ಅಧ್ಯಯನ ಕೈಗೊಂಡ ಗ್ರಾಮಗಳಲ್ಲಿನ ಬಡತನ ರೇಖೆಯ ಕೆಳಗಿರುವ ಕುಟುಂಬಗಳಲ್ಲಿರುವ ಒಟ್ಟು ಸದಸ್ಯರ ಮಾಹಿತಿಯನ್ನು ಕೇಳಿದಾಗ ಸದಸ್ಯರು ಹಂಚಿಕೊಂಡ ವಿಷಯದ ಆಧಾರದ ಮೇಲೆ ಕೋಷ್ಟಕ 4ರಲ್ಲಿ ಕೊಟ್ಟಿರುವಂತೆ ವಿಶ್ಲೇಷಣೆಯನ್ನು ಕೈಗೊಳ್ಳಲಾಗಿದೆ. ಇಲ್ಲಿ ಮಹಿಳೆಯರು, ಪುರುಷರು ಮತ್ತು 0–6 ವರ್ಷದ ಒಳಗಿನ ಮಕ್ಕಳಾಗಿ ಒಟ್ಟು ಮೂರು ಗುಂಪುಗಳಾಗಿ ಕುಟುಂಬದ ಸದಸ್ಯರನ್ನು ವಿಂಗಡಿಸಲಾಗಿದೆ. ಒಂದೊಂದು ಕುಟುಂಬಗಳಲ್ಲಿರುವ ಸದಸ್ಯರಿಗೆ ಸಂಪೂರ್ಣವಾದ ಮಾಹಿತಿ ಇರುತ್ತಿರಲಿಲ್ಲ. ಇದು ವಿಶೇಷವಾಗಿ ಸದಸ್ಯರ ವಯಸ್ಸಿನ ಬಗ್ಗೆ ಮಾಹಿತಿಯನ್ನು

ಸಂಗ್ರಹಿಸುವಾಗ ಸಂಶೋಧಕರು ಹೆಚ್ಚಿನ ಪ್ರಮಾಣದ ಕಷ್ಟವನ್ನು ಅನುಭವಿಸಬೇಕಾಯಿತು. ಆ ಸಮಯದಲ್ಲಿ ನೆರೆಮನೆಯವರ ಸಹಾಯದಿಂದ ಮಾಹಿತಿಯನ್ನು ತೆಗೆದುಕೊಳ್ಳಲಾಗಿದೆ. ಕೋಷ್ಟಕ 4.4ರಲ್ಲಿ ಕೊಟ್ಟಿರುವಂತೆ ಕಲಬುರಗಿಯ ಕೊಂಕನಳ್ಳಿ ಗ್ರಾಮದಲ್ಲಿ ಪರಿಶಿಷ್ಟ ಜಾತಿಯಲ್ಲಿ 69 ಪುರುಷರು, 63 ಮಹಿಳೆಯರು ಮತ್ತು 6ವರ್ಷದ ಒಳಗಿನ ಮಕ್ಕಳು 35 ಇರುವುದು ತಿಳಿದು ಬರುತ್ತದೆ. ಪರಿಶಿಷ್ಟ ಪಂಗಡದಲ್ಲಿ 13 ಪುರುಷರು, 9 ಮಹಿಳೆಯರು ಮತ್ತು 17 6ವರ್ಷದ ಒಳಗಿನ ಮಕ್ಕಳಿದ್ದರೆ ಇನ್ನು ಇತರೆ ಹಿಂದುಳಿದ ಜಾತಿಗಳಲ್ಲಿ 103 ಪುರುಷರು, 93 ಮಹಿಳೆಯರು ಮತ್ತು 69 ಮಕ್ಕಳು 6ವರ್ಷದ ಒಳಗಿನವರು ಇರುತ್ತಾರೆ. ಮುಸ್ಲಿಂರಲ್ಲಿ 31 ಪುರುಷರು, 26 ಮಹಿಳೆಯರು ಮತ್ತು 17 ಮಕ್ಕಳು 6ವರ್ಷದ ಒಳಗಿನವರಾಗಿದ್ದಾರೆ.

ಸಾಮಾನ್ಯ ಜಾತಿಯಲ್ಲಿ ಇದು ಅನುಕ್ರಮವಾಗಿ 79, 66 ಮತ್ತು 33 ಸಂಖ್ಯೆಯ ಪುರುಷರು, ಮಹಿಳೆಯರು ಮತ್ತು 0–6 ವರ್ಷದ ಒಳಗಿನ ಮಕ್ಕಳು ಇರುವದು ಕಂಡು ಬರುತ್ತದೆ. ಇನ್ನು ಧಾರವಾಡದ ನಿಗದಿಯಲ್ಲಿನ ಕುಟುಂಬಗಳಲ್ಲಿರುವ ಒಟ್ಟು ಸದಸ್ಯರ ಬಗ್ಗೆ ಹೇಳುವದಾದರೆ ಪರಿಶಿಷ್ಟ ಜಾತಿಯಲ್ಲಿ 67 ಪುರುಷರು, 57 ಮಹಿಳೆಯರು ಮತ್ತು 11 ಮಕ್ಕಳು 0–6 ವರ್ಷದವರಾಗಿದ್ದಾರೆ. ಪರಿಶಿಷ್ಟ ಪಂಗಡದಲ್ಲಿ ಇದು 11 ಪುರುಷರು, 8 ಮಹಿಳೆಯರು ಮತ್ತು 9 ಮಕ್ಕಳು 0–6ವರ್ಷದ ಒಳಗಿನವರಾಗಿದ್ದಾರೆ. ಇತರೆ ಹಿಂದುಳಿದ ಜಾತಿಗೆ ಸೇರಿದ ಕುಟುಂಬಗಳಲ್ಲಿ ಪುರುಷರ ಸಂಖ್ಯೆ 86, ಮಹಿಳೆಯರು 71 ಮತ್ತು 0–6 ವರ್ಷದ ಒಳಗಿನ ಮಕ್ಕಳ ಸಂಖ್ಯೆ 41 ಇರುವುದು ತಿಳಿದುಬರುತ್ತದೆ. ಮುಸ್ಲಿಂರಲ್ಲಿ ಸುಮಾರು ಪುರುಷರ ಸಂಖ್ಯೆ 29, ಮಹಿಳೆಯರು 23 ಮತ್ತು ಸುಮಾರು 0–6 ವರ್ಷದ ಒಳಗಿನ 13 ಮಕ್ಕಳು ಇರುವುದು ಕಂಡುಬಂದಿತ್ತು. ಇನ್ನು ಸಾಮಾನ್ಯ ಜಾತಿಯ ಕುಟುಂಬಗಳಲ್ಲಿ 81 ಪುರುಷರು, 59 ಮಹಿಳೆಯರು ಮತ್ತು 0–6 ವರ್ಷದ ಒಳಗಿನ ಮಕ್ಕಳು ಇರುತ್ತಾರೆ ಎಂಬುದು ಕುಟುಂಬಗಳ ಸದಸ್ಯರ ಹೇಳಿಕೆಯಿಂದ ತಿಳಿದುಬಂದಿದೆ.

ಒಟ್ಟಾರೆಯಾಗಿ ಹೇಳುವುದಾದರೆ ಇತರೆ ಹಿಂದುಳಿದ ಜಾತಿಗೆ ಸೇರಿದ ಕುಟುಂಬಗಳು ಹೆಚ್ಚಿರುವದರಿಂದ ಸಹಜವಾಗಿ ಈ ಜಾತಿಗೆ ಮತ್ತು ಸಾಮಾನ್ಯ ಜಾತಿಗೆ ಸೇರಿದ ಜನಸಂಖ್ಯೆಯಲ್ಲಿ ಹೆಚ್ಚಾಗುತ್ತದೆ. ಆದರೆ ಪರಿಶಿಷ್ಟ ಜಾತಿ, ಪಂಗಡ, ಮುಸ್ಲಿಂರು ಮತ್ತು ಇತರೆ ಹಿಂದುಳಿದ ಜಾತಿಗೆ ಸೇರಿದ ಎಲ್ಲಾ ಕುಟುಂಬಗಳನ್ನು ಮತ್ತು ಜನಸಂಖ್ಯೆಯನ್ನು ಸೇರಿಸಿದಾಗ ಸಾಮಾನ್ಯ ಜಾತಿಗೆ ಸೇರಿದ ಕುಟುಂಬಗಳು ಮತ್ತು ಜನಸಂಖ್ಯೆಗಿಂತ ಹೆಚ್ಚಾಗಿರುವುದು ಅಂಕಿ ಅಂಶಗಳಿಂದ ತಿಳಿದುಬರುತ್ತದೆ. ಒಟ್ಟು ಕುಟುಂಬಗಳಿಂದ ಮತ್ತು ಜನಸಂಖ್ಯೆಯಿಂದ ಹೆಚ್ಚು ಇದ್ದರೂ ಸಹ ಗ್ರಾಮಗಳ ಆಡಳಿತ ಸಾಮಾನ್ಯ ಜಾತಿಗೆ ಸೇರಿದ ಊರಿನ ಗೌಡ ಅಥವಾ ಪ್ರಬಲ ಜಾತಿಯ ಮುಖಂಡರು ಹೇಳಿದ ಹಾಗೆ ಕೆಲಸ ಕಾರ್ಯಗಳು ಜರುಗುವುದು ಸರ್ವೇಸಾಮಾನ್ಯವಾಗಿದೆ. ಈ ಪರಿಸ್ಥಿತಿಯು ಅಧ್ಯಯನ ಕೈಗೊಂಡ ಎರಡೂ ಗ್ರಾಮಗಳಲ್ಲಿ ಇನ್ನೂ ಕೂಡ ಜಾರಿಯಲ್ಲಿರುತ್ತದೆ.

ಅಭಿವೃದ್ಧಿಯಲ್ಲಿ ಕೊಂಕನಳ್ಳಿಗಿಂತ ಮುಂದಿರುವ ನಿಗದಿಯಲ್ಲಿ ಅಲ್ಪ ಪ್ರಮಾಣದಲ್ಲಿದೆ ಎಂದು ಮಾಹಿತಿಯನ್ನು ಕಲೆಹಾಕುವ ಸಮಯದಲ್ಲಿ ಗ್ರಹಿಕೆಯಿಂದ ತಿಳಿದು ಬಂದಿರುತ್ತದೆ.

**ಕೋಷ್ಟಕ–4.4**

**ಕುಟುಂಬಗಳ ಸದಸ್ಯರ ಒಟ್ಟು ಸಂಖ್ಯೆಯ ಮಾಹಿತಿ**

| ಜಾತಿಗಳು | ಕೊಂಕನಳ್ಳಿ | | | ನಿಗದಿ | | |
|---|---|---|---|---|---|---|
| | ಪುರುಷರು | ಮಹಿಳೆಯರು | 0–6 ವರ್ಷದ ಮಕ್ಕಳು | ಪುರುಷರು | ಮಹಿಳೆಯರು | 0–6 ವರ್ಷದ ಮಕ್ಕಳು |
| ಪರಿಶಿಷ್ಟ ಜಾತಿ | 69 | 63 | 35 | 67 | 57 | 11 |
| ಪರಿಶಿಷ್ಟ ಪಂಗಡ | 13 | 9 | 17 | 11 | 8 | 9 |
| ಇತರೆ ಹಿಂದುಳಿದ ಜಾತಿಗಳು | 103 | 93 | 69 | 86 | 71 | 41 |
| ಮುಸ್ಲಿಂರು | 31 | 26 | 17 | 29 | 23 | 13 |
| ಸಾಮಾನ್ಯ | 79 | 66 | 33 | 81 | 59 | 11 |
| ಒಟ್ಟು | 295 | 257 | 171 | 274 | 218 | 85 |

ಮಾಹಿತಿಯ ಮೂಲ: ಕ್ಷೇತ್ರ ಕಾರ್ಯ

ಈ ಎರಡು ಗ್ರಾಮಗಳಲ್ಲಿನ ಜಾತಿವಾರು ಮತ್ತು ಲಿಂಗವಾರು ಜನಸಂಖ್ಯೆಯ ಬಗ್ಗೆ ಹೇಳುವುದಾದರೆ ಎರಡೂ ಗ್ರಾಮಗಳಲ್ಲಿ ಅತಿ ಹೆಚ್ಚಿನ ಕುಟುಂಬಗಳು ಇತರೆ ಹಿಂದುಳಿದ ಜಾತಿಗೆ ಸೇರಿದದವು. ಮಾದರಿ ಆಯ್ಕೆಯ ಮೂಲಕ ತೆಗದುಕೊಂಡಿರುವದ್ದರಿಂದ ಸಹಜವಾಗಿ ಅತಿ ಹೆಚ್ಚಿನ ಜನರು ಈ ಒಂದು ವರ್ಗಕ್ಕೆ ಸೇರಿದವರೆಂಬುವುದು ತಿಳಿದುಬರುತ್ತದೆ. ಆದರೆ ಧಾರವಾಡದ ನಿಗದಿಯಲ್ಲಿ ಇತರೆ ಹಿಂದುಳಿದ ಮತ್ತು ಸಾಮಾನ್ಯ ಜಾತಿಯಲ್ಲಿ ಅಷ್ಟೇನೂ ಹೆಚ್ಚಿನ ಪ್ರಮಾಣದಲ್ಲಿ ಇಲ್ಲದಿರುವುದು ಮಾಹಿತಿ ಸಂಗ್ರಹಣೆಯಿಂದ ಸ್ಪಷ್ಟವಾಗುವಂತದ್ದು.

**ಕುಟುಂಬಗಳ ಭೂ–ಹಿಡವಳಿಗಳ ಪ್ರಕಾರ**

ಪ್ರತಿ ಗಾಮ ಪಂಚಾಯತಿಯವರು ಸರಕಾರಕ್ಕೆ ಒಂದು ವರದಿಯನ್ನು ಸಲ್ಲಿಸುತ್ತಾರೆ ಅದರಲ್ಲಿ ಆಯಾ ಪಂಚಾಯತಿಯ ಅಡಿಯಲ್ಲಿ ಬರುವ ಎಲ್ಲಾ ಗ್ರಾಮಗಳಲ್ಲಿರುವ ಕುಟುಂಬಗಳು ಮತ್ತು ಅವುಗಳು ಹೊಂದಿರುವ ಆಸ್ತಿ–ಪಾಸ್ತಿಗಳನ್ನು ಜಿಲ್ಲಾ ಪಂಚಾಯತಿಗೆ ಸಲ್ಲಿಸಬೇಕಾಗುತ್ತದೆ.

**ಕೋಷ್ಟಕ 4.5**

**ಭೂ–ಹಿಡುವಳಿಗಳ ಪ್ರಕಾರ ಕುಟುಂಬಗಳ ಸಂಖ್ಯೆ**

| ಅಧ್ಯಯನ ಕೈಗೊಂಡ ಗ್ರಾಮಗಳು | ಅತಿ ಸಣ್ಣ (2.54 ಎಕರೆ) | ಸಣ್ಣ (2.54–5.08) | ಮಧ್ಯಮ (5.08–25.4ಎಕರೆ) | ದೊಡ್ಡ (25.4–ಮೇಲ್ಪಟ್ಟು) | ಒಟ್ಟು |
|---|---|---|---|---|---|
| ಕೊಂಕನಳ್ಳಿ | 25 | 12 | 42 | 23 | 102 |
| ನಿಗದಿ | 33 | 15 | 57 | 39 | 144 |

ಮಾಹಿತಿಯ ಮೂಲ: ಗ್ರಾಮ ಪಂಚಾಯತಿಗಳ 2013–14ರ ವರದಿ

ಆ ವರದಿಗಳಲ್ಲಿ ಉಲ್ಲೇಖಿಸಿದಂತೆ ಗ್ರಾಮಗಳಲ್ಲಿರುವ ಕುಟುಂಬಗಳನ್ನು ಭೂ-ಹಿಡವಳಿಗಳ ಪ್ರಕಾರ ಅತಿ ಸಣ್ಣ (2.54 ಎಕರೆ), ಸಣ್ಣ (2.54–5.08), ಮಧ್ಯಮ (5.08–25.4ಎಕರೆ), ದೊಡ್ಡ (25.4–ಮೇಲ್ಪಟ್ಟು) ಭೂ ಹಿಡುವಳಿದಾರರು ಎಂದು ವರ್ಗೀಕರಿಸಲಾಗಿದೆ.

ಇದರಂತೆ ಕಲಬುರಗಿಯ ಕೊಂಕನಳ್ಳಿಯಲ್ಲಿ 25ರಷ್ಟು ಕುಟುಂಬಗಳು ಅತಿ ಸಣ್ಣ, 12 ಕುಟುಂಬಗಳು ಸಣ್ಣ, 42 ಕುಟುಂಬಗಳು ಮಧ್ಯಮ ಮತ್ತು 23ರಷ್ಟು ಕುಟುಂಬಗಳು ದೊಡ್ಡ ಮಟ್ಟದ ಭೂ ಹಿಡುವಳಿದಾರರಾಗಿದ್ದಾರೆ, ಧಾರವಾಡದ ನಿಗದಿಯಲ್ಲಿ ಸುಮಾರು 33 ಕುಟುಂಬಗಳು ಅತಿ ಸಣ್ಣ, 15 ಕುಟುಂಬಗಳು ಸಣ್ಣ, 57 ಕುಟುಂಬಗಳು ಮಧ್ಯಮ ಮತ್ತು ಸುಮಾರು 39 ಕುಟುಂಬಗಳು ದೊಡ್ಡ ಮಟ್ಟದ ಭೂ ಹಿಡುವಳಿದಾರರಾಗಿದ್ದಾರೆ ಎಂದು ಕೋಷ್ಟಕದಿಂದ ತಿಳಿದು ಬರುತ್ತದೆ (ನೀಲಹಳ್ಳಿ ಗ್ರಾಮ ಪಂಚಾಯತಿಯ ವರದಿ 2013–14 ಮತ್ತು ನಗದಿ ಗ್ರಾಮ ಪಂಚಾಯತಿಯ ವರದಿ 2013–14). ಹೆಚ್ಚಿನ ಬಡತನ ರೇಖೆಯ ಕೆಳಗಿನ ಕಟುಂಬಗಳು ಮಧ್ಯಮ ವರ್ಗಕ್ಕೆ ಸೇರಿರುತ್ತವೆ ಮತ್ತು ಅವುಗಳು ಹೊಂದಿರುವ ಭೂಮಿಯ ಪ್ರಮಾಣವು ಕಡಿಮೆ ಇರುತ್ತದೆ (ಈಶ್ವರನ್, 1976 ಮತ್ತು ಶ್ರೀನವಾಸನ್, 1976). ಆದರೂ ಸಹ ಹೆಚ್ಚಿನ ಪ್ರಮಾಣದ ಭೂಮಿಯನ್ನು ಹೊಂದಿರುವವರು ಸಹ ಸರಕಾರದಿಂದ ವಿತರಿಸುವ ಬಡತನ ರೇಖೆಯ ಕೆಳಗಿನ ಚೀಟಿಗಳನ್ನು ಹೊಂದಿರುತ್ತಾರೆ.

**ಕುಟುಂಬಗಳ ಆದಾಯದ ಮೂಲ**

ಕಲಬುರಗಿಯ ಕೊಂಕನಳ್ಳಿಯಲ್ಲಿರುವ ಪರಿಶಿಷ್ಟ ಜಾತಿಗೆ ಸೇರಿರುವ ಬಡ ಕುಟುಂಬಗಳಲ್ಲಿನ ಹೆಚ್ಚಿನ ಪ್ರಮಾಣದಲ್ಲಿ ಅಂದರೆ ಶೇಕಡಾ 17.86ರಷ್ಟು ಒಕ್ಕಲುತನ, ಶೇಕಡಾ 42.86ರಷ್ಟು ಕೃಷಿ ಕೂಲಿ, ಶೇಕಡಾ 14.29ರಷ್ಟು ಕೃಷಿಯೇತರ ಕೂಲಿ, ಶೇಕಡಾ 7.14ರಷ್ಟು ಸಣ್ಣಪುಟ್ಟ ವ್ಯವಹಾರ, ಶೇಕಡಾ 10.71ರಷ್ಟು ಸಂಬಳ ಮತ್ತು ಶೇಕಡಾ 7.14ರಷ್ಟು ಕುಟುಂಬಗಳು ಸ್ವ-ಉದ್ಯೋಗದಲ್ಲಿ ನಿರತಾಗಿದ್ದಾರೆ ಮತ್ತು ಅವರ ಕುಟುಂಬದ ಹೆಚ್ಚಿನ ಆದಾಯ ಈ ಮೂಲಗಳಿಂದ ಬರುತ್ತದೆಂಬುದು ಅಲ್ಲಿಯ ಕುಟುಂಬದ ಸದಸ್ಯರಿಂದ ಮಾಹಿತಿಯನ್ನು ಸಂಗ್ರಹಿಸುವ ಸಮಯದಲ್ಲಿ ತಿಳಿದುಬಂತು.

ಪರಿಶಿಷ್ಟ ಪಂಗಡದಲ್ಲಿರುವ ಬಡ ಕುಟುಂಬಗಳು ಇದು ಶೇಕಡಾ 16.67ರಷ್ಟು ಒಕ್ಕಲುತನ ಇತರೆ ಹಿಂದುಳಿದ ಜಾತಿಗಳಲ್ಲಿ ಶೇಕಡಾ 19.57ರಷ್ಟು, ಮುಸ್ಲಿಂರಲ್ಲಿ ಶೇಕಡಾ 18.2ರಷ್ಟು ಮತ್ತು ಶೇಕಡಾ 20ರಷ್ಟು ಕುಟುಂಬಗಳು ಸಾಮಾನ್ಯ ಪಂಗಡದಲ್ಲಿದ್ದು ಇವರ ಆದಾಯದ ಮೂಲ ಕೃಷಿಯಾಗಿರುವದು ಕಂಡು ಬಂದಿದ್ದು. ಬಡ ಕುಟುಂಬಗಳು ವ್ಯವಸಾಯದಿಂದ ಬುರುವ ಆದಾಯವನ್ನೇ ಹೆಚ್ಚಾಗಿ ನಂಬಿಕೊಂಡವರಾಗಿದ್ದಾರೆ.

ಕಲಬುರಗಿಯ ಕೊಂಕನಳ್ಳಿಯಲ್ಲಿರುವ ಪರಿಶಿಷ್ಟ ಜಾತಿಗೆ ಸೇರಿರುವ ಬಡ ಕುಟುಂಬಗಳಲ್ಲಿ ಹೆಚ್ಚಿನ ಪ್ರಮಾಣದಲ್ಲಿ ಅಂದರೆ ಶೇಕಡಾ 42.86ರಷ್ಟು ಕೃಷಿ ಕೂಲಿ ಮಾಡುವದ್ದರಿಂದ ತಮ್ಮ

## ಕೋಷ್ಟಕ-4.6
## ಕುಟುಂಬಗಳ ಸದಸ್ಯರ ಕೆಲಸದ ಮತ್ತು ಆದಾಯದ ಮೂಲ ವಿವರ ಶೇಕಡಾವಾರು

| ವಿವರ | ಕೊಂಕನಳ್ಳಿ | | | | | | ನಿಗದಿ | | | | | |
|---|---|---|---|---|---|---|---|---|---|---|---|---|
| | ಒಕ್ಕಲುತನ | ಕೃಷಿ ಕೂಲಿ | ಕೃಷಿಯೇತರ ಕೂಲಿ | ವ್ಯವಹಾರ | ಸಂಬಳ | ಸ್ವ ಉದ್ಯೋಗ/ ಇತರೆ | ಒಕ್ಕಲುತನ | ಕೃಷಿ ಕೂಲಿ | ಕೃಷಿಯೇತರ ಕೂಲಿ | ವ್ಯವಹಾರ | ಸಂಬಳ | ಸ್ವ ಉದ್ಯೋಗ/ ಇತರೆ |
| ಪರಿಶಿಷ್ಟ ಜಾತಿ | 17.86 | 42.86 | 14.29 | 7.14 | 10.71 | 7.14 | 17.39 | 39.13 | 13.04 | 8.70 | 17.39 | 4.35 |
| ಪರಿಶಿಷ್ಟ ಪಂಗಡ | 16.67 | 50.00 | 16.67 | 0.00 | 16.67 | 0.00 | 22.22 | 44.44 | 11.11 | 0.00 | 0.00 | 22.22 |
| ಇತರೆ ಹಿಂದುಳಿದ ಜಾತಿಗಳು | 19.57 | 34.78 | 23.91 | 8.7 | 6.52 | 6.52 | 21.95 | 34.15 | 24.39 | 7.32 | 7.32 | 4.88 |
| ಮುಸ್ಲಿಂರು | 18.2 | 0.0 | 9.1 | 36.4 | 9.1 | 27.3 | 22.22 | 0.00 | 11.11 | 22.22 | 11.11 | 33.33 |
| ಸಾಮಾನ್ಯ | 20.0 | 12.0 | 12.0 | 24.0 | 16.0 | 16.0 | 21.43 | 14.29 | 17.86 | 14.29 | 14.29 | 17.86 |

ಮಾಹಿತಿಯ ಮೂಲ:ಕ್ಷೇತ್ರ ಕಾರ್ಯ.

ಕುಟುಂಬಕ್ಕೆ ಹೆಚ್ಚಿನ ಆದಾಯ ಬರುತ್ತದೆ ಎಂದು ಮಾಹಿತಿಯನ್ನು ಹಂಚಿಕೊಂಡಿರುವದು ತಿಳಿದು ಬರುತ್ತದೆ. ಇನ್ನು ಪರಿಶಿಷ್ಟ ಪಂಗಡದಲ್ಲಿರುವ ಬಡ ಕುಟುಂಬಗಳು ಹೆಚ್ಚಿನ ಪ್ರಮಾಣದಲ್ಲಿಯೂ ಸಹ ಶೇಕಡಾ 50ರಷ್ಟು ಕುಟುಂಬಗಳು ಕೃಷಿಯಾಧಾರಿತ ಕೂಲಿಯನ್ನೇ ತಮ್ಮ ಕೆಲಸವನ್ನಾಗಿ ಮಾಡಿಕೊಂಡಿದ್ದಾರೆ. ಇತರೆ ಹಿಂದುಳಿದ ಜಾತಿಗೆ ಸೇರಿದ ಬಡ ಕುಟುಂಬಗಳಲ್ಲಿ ಇದರ ಪ್ರತಿಶತವು ಶೇಕಡಾ 30.78ರಷ್ಟು ಕುಟುಂಬಗಳ ಪ್ರಧಾನ ಆದಾಯ ಕೃಷಿಯಾಧಾರಿತ ಮೂಲಗಳಿಂದ ಬರುತ್ತದೆ ಎಂದು ಹೇಳಿರುತ್ತಾರೆ. ಆದರೆ ಮುಸ್ಲಿಂರಲ್ಲಿ ಮಾತ್ರ ಶೇಕಡಾ



36.4ರಷ್ಟು ಬಡ ಕುಟುಂಬಗಳ ಆದಾಯದ ಮೂಲ ಸಣ್ಣ ಪುಟ್ಟ ವ್ಯವಹಾರಗಳಾಗಿದ್ದು ಇದೇ ಕುಟುಂಬಗಳ ಆದಾಯದ ಮೂಲವಾಗಿದೆ ಎಂದು ಕಂಡುಬರುತ್ತದೆ. ಇನ್ನು ಕೊನೆಯದಾಗಿ ಸಾಮಾನ್ಯ ಪಂಗಡದವರಲ್ಲಿಯೂ ಸಹ ಶೇಕಡಾ 24ರಷ್ಟು ಕುಟುಂಬಗಳ ಆದಾಯ ವ್ಯವಹಾರದಿಂದ ಬರುತ್ತದೆ ಎಂದು ಹೇಳಿರುತ್ತಾರೆ.

ಧಾರವಾಡದ ನಿಗದಿಯಲ್ಲಿನ ಪರಿಶಿಷ್ಟ ಜಾತಿಗೆ ಸೇರಿರುವ ಬಡ ಕುಟುಂಬಗಳು ಹೆಚ್ಚಿನ ಪ್ರಮಾಣದಲ್ಲಿ ಅಂದರೆ ಶೇಕಡಾ 39.13ರಷ್ಟು ಕೃಷಿ ಕೂಲಿ ಮಾಡುವುದರಿಂದ ತಮ್ಮ ಕುಟುಂಬಕ್ಕೆ ಹೆಚ್ಚಿನ ಆದಾಯ ಬರುತ್ತದೆ ಎಂದು ಮಾಹಿತಿಯನ್ನು ಹಂಚಿಕೊಂಡಿರುವದು ತಿಳಿದುಬರುತ್ತದೆ. ಇನ್ನು ಪರಿಶಿಷ್ಟ ಪಂಗಡದಲ್ಲಿರುವ ಬಡ ಕುಟುಂಬಗಳು ಹೆಚ್ಚಿನ ಪ್ರಮಾಣದಲ್ಲಿಯೂ ಸಹ ಶೇಕಡಾ 44.4ರಷ್ಟು ಕುಟುಂಬಗಳು ಕೃಷಿಯಾಧರಿತ ಕೂಲಿಯನ್ನೇ ತಮ್ಮ ಕೆಲಸವನ್ನಾಗಿ ಮಾಡಿಕೊಂಡಿದ್ದಾರೆ. ಇತರೆ ಹಿಂದುಳಿದ ಜಾತಿಗೆ ಸೇರಿದ ಬಡ ಕುಟುಂಬಗಳಲ್ಲಿ ಇದರ ಪ್ರತಿಶತವು ಶೇಕಡಾ 34.15ರಷ್ಟು ಕುಟುಂಬಗಳ ಪ್ರಧಾನ ಆದಾಯ ಕೃಷಿಯಾಧಾರಿತ ಮೂಲಗಳಿಂದ ಬರುತ್ತದೆ ಎಂದು ಹೇಳಿರುತ್ತಾರೆ. ಆದರೆ ಮುಸ್ಲಿಂರಲ್ಲಿ ಮಾತ್ರ ಶೇಕಡಾ 33.33ರಷ್ಟು ಬಡ ಕುಟುಂಬಗಳ ಆದಾಯದ ಪ್ರಮಾಣವು ಸಣ್ಣ ಪುಟ್ಟ ವ್ಯವಹಾರಗಳಿಂದ ಮತ್ತು ಸ್ವ-ಉದ್ಯೋಗದಿಂದ ಕುಟುಂಬಗಳ ಆದಾಯದ ಮೂಲವಾಗಿದೆ ಎಂದು ಕಂಡು ಬರುತ್ತದೆ. ಇನ್ನು ಕೊನೆಯದಾಗಿ ಸಾಮಾನ್ಯ ಪಂಗಡದವರಲ್ಲಿಯೂ ಶೇಕಡಾ 17.86ರಷ್ಟು ಕುಟುಂಬಗಳ ಆದಾಯ ವ್ಯವಹಾರದಿಂದ ಬುರುತ್ತದೆ ಎಂದು ಹೇಳಿರುತ್ತಾರೆ.

**ಕುಟುಂಬಗಳು ಹೊಂದಿರುವ ಜಾನುವಾರುಗಳ ವಿವರ**

ಕುಟುಂಬಗಳು ಮಾಡುವ ಕೆಲಸ ಮತ್ತು ಆದಾಯಕ್ಕೆ ಮೂಲವೆಂದರೆ ಅವರು ಹೊಂದಿರುವ ಜಾನುವಾರುಗಳು. ಇವುಗಳು ಸಹ ಕುಟುಂಬಗಳ ಆದಾಯವನ್ನು ಹೆಚ್ಚಿಸಿಕೊಳ್ಳಲು ತಮ್ಮದೆ ರೀತಿಯಾದ ಕಾಣಿಕೆಯನ್ನು ನೀಡುತ್ತಿವೆ ಎಂದರೆ ಅತಿಶೋಕ್ತಿಯಾಗುವುದಿಲ್ಲ. ಏಕೆಂದರೆ ಒಂದು ರೈತ ಕುಟುಂಬಕ್ಕೆ ಕುಟುಂಬಗಳು ಹೊಂದಿರುವ ಭೂಮಿಯನ್ನು ಉಳುಮೆ ಮಾಡಿಕೊಳ್ಳಲು ಎತ್ತು/ಹೋರಿ ಮತ್ತು ಕೋಣಗಳ ಅವಶ್ಯಕತೆ ಬಹಳ ಇರುತ್ತದೆ.

ಕಲಬುರಗಿಯ ಕೊಂಕನಳ್ಳಿಯಲ್ಲಿನ ಶೇಕಡಾ 39.29ರಷ್ಟು ಪರಿಶಿಷ್ಟ ಜಾತಿಗೆ ಸೇರಿದ ಬಡ ಕುಟುಂಬಗಳು ಹಸು, ಆಕಳು ಅಥವಾ ಎಮ್ಮೆಯನ್ನು ಸಾಕುತ್ತಿವೆ. ಅದೇ ರೀತಿಯಾಗಿ ಶೇಕಡಾ 33.33ರಷ್ಟು ಪರಿಶಿಷ್ಟ ಪಂಗಡ, ಶೇಕಡಾ 63.04ರಷ್ಟು ಇತರೆ ಹಿಂದುಳಿದ ಜಾತಿ, ಶೇಕಡಾ 27.27ರಷ್ಟು, ಶೇಕಡಾ 76ರಷ್ಟು ಸಾಮಾನ್ಯ ಪಂಗಡಕ್ಕೆ ಸೇರಿದ ಕುಟುಂಬಗಳು ಸಹ ಹಸು, ಆಕಳು ಅಥವಾ ಎಮ್ಮೆಗಳನ್ನು ಹೊಂದಿರುವುದಾಗಿ ಮಾಹಿತಿಯನ್ನು ತೆಗೆದುಕೊಳ್ಳುವ ಸಮಯದಲ್ಲಿ ತಿಳಿದುಬಂದಿದೆ. ಇನ್ನು ಧಾರವಾಡದ ನಿಗದಿಯಲ್ಲಿ ಶೇಕಡಾ 75ರಷ್ಟು ಸಾಮಾನ್ಯ ಪಂಗಡಕ್ಕೆ ಸೇರಿದ ಬಡ ಕುಟುಂಬಗಳಿಲ್ಲಿ ಹಸು, ಆಕಳು ಮತ್ತು ಎಮ್ಮಗಳು ಇರುವದು ತಿಳಿದು ಬರುತ್ತದೆ.

## ಕೋಷ್ಟಕ–4.7
## ಕುಟುಂಬಗಳು ಹೊಂದಿರುವ ಜಾನುವಾರುಗಳ ವಿವರ ಶೇಕಡಾವಾರು

| ಜಾನುವಾರುಗಳು | ಕೊಂಕನಳ್ಳಿ | | | | | ನಿಗದಿ | | | | |
|---|---|---|---|---|---|---|---|---|---|---|
| | ಪರಿಶಿಷ್ಟ ಜಾತಿ | ಪರಿಶಿಷ್ಟ ಪಂಗಡ | ಇತರೆ ಹಿಂದುಳಿದ ಜಾತಿಗಳು | ಮುಸ್ಲಿಂ | ಸಾಮಾನ್ಯ | ಪರಿಶಿಷ್ಟ ಜಾತಿ | ಪರಿಶಿಷ್ಟ ಪಂಗಡ | ಇತರೆ ಹಿಂದುಳಿದ ಜಾತಿಗಳು | ಮುಸ್ಲಿಂ | ಸಾಮಾನ್ಯ |
| ಹಸು/ಆಕಳು/ ಎಮ್ಮೆಗಳು | 39.2 9 | 33.33 | 63.04 | 27.27 | 76.00 | 52.17 | 29.39 | 70.73 | 44.44 | 75.00 |
| ಎತ್ತು/ಹೋರಿ/ ಕೋಣಗಳು | 14.29 | 16.67 | 45.65 | 54.55 | 60.00 | 13.04 | 22.22 | 65.85 | 22.22 | 53.57 |
| ಕುರಿ/ಮೆಕೆ/ ಟಗರು | 32.14 | 66.67 | 23.91 | 36.36 | 12.00 | 34.78 | 55.56 | 78.05 | 55.56 | 7.14 |
| ಕೋಳಿಗಳು | 60.71 | 83.33 | 67.39 | 81.82 | 4.00 | 52.17 | 66.67 | 56.10 | 33.33 | 3.57 |
| ಇತರೆ (ನಾಯಿ/ ಮೊಲ..) | 7.14 | 16.67 | 28.26 | 9.09 | 20.00 | 4.35 | 11.11 | 41.46 | 11.11 | 7.14 |

ಮಾಹಿತಿಯ ಮೂಲ:ಕ್ಷೇತ್ರ ಕಾರ್ಯ

ಅದೇ ರೀತಿಯಾಗಿ ಶೇಕಡಾ 60ರಷ್ಟು ಸಾಮಾನ ಪಂಗಡಕ್ಕೆ ಸೇರಿದ ಬಡಕುಟುಂಬಗಳು ಒಕ್ಕಲುತನಕ್ಕೆ ಸಹಾಯಕವಾದ ಪ್ರಾಣಿಗಳಾದ ಎತ್ತು, ಹೋರಿ ಮತ್ತು ಕೋಣಗಳನ್ನು ಹೊಂದಿರುವುದಾಗಿ ಹೇಳಿಕೊಂಡಿದ್ದಾರೆ. ಎಲ್ಲಾ ಸಾಮಾಜಿಕ ಪಂಗಡಗಳಲ್ಲಿ ಸಾಮಾನ್ಯ ಗುಂಪಿಗೆ ಸೇರಿದವರಲ್ಲಿ ಅವಶ್ಯಕವಾದ ಎಲ್ಲಾ ಪ್ರಾಣಿಗಳು ಅಥವಾ ಜಾನುವಾರುಗಳು ಇರುವದು ಹೆಚ್ಚಾಗಿದೆ. ಆದರೆ ಕುರಿ ಕೋಳಿಗಳು ಮಾತ್ರ ಪರಿಶಿಷ್ಟ ಜಾತಿ, ಪಂಗಡ, ಇತರೆ ಹಿಂದುಳಿದ ಜಾತಿ ಮತ್ತು ಮುಸ್ಲಿಂ ಪಂಗಡಕ್ಕೆ ಸೇರಿದ ಬಡ ಕುಟುಂಬಗಳಲ್ಲಿ ಹೆಚ್ಚಾಗಿ ಕಂಡು ಬರುತ್ತದೆ.

**ಕುಟುಂಬಗಳು ಹೊಂದಿರುವ ಗೃಹ ಉಪಯೋಗಿ ಸಾಮಾನುಗಳ ವಿವರ**

ಅಧ್ಯಯನ ಕೈಗೊಂಡ ಎರಡು ಗ್ರಾಮಗಳಲ್ಲಿ ಆಯ್ಕೆಯಾದ ಬಡತನ ರೇಖೆಯ ಕೆಳಗಿರುವ ಕುಟುಂಬಗಳು ಹೊಂದಿರುವ ಗೃಹ ಉಪಯೋಗಿ ಸಾಮಾನುಗಳಿಗೆ ಸಂಬಂಧಿಸಿದ ಮಾಹಿತಿಯನ್ನು ಸಹ ಕಲೆಹಾಕಲಾಗಿದೆ. ಕೋಷ್ಟಕ 4.7ರಲ್ಲಿ ಕೊಟ್ಟಿರುವಂತೆ ಕಲಬುರಗಿಯ ಕೊಂಕನಳ್ಳಿಯಲ್ಲಿರುವ ಬಡ ಕುಟುಂಬಗಳಲ್ಲಿ ಪರಿಶಿಷ್ಟ ಜಾತಿಯವರಲ್ಲಿ ಶೇಕಡಾ 21.43ರಷ್ಟು ಕುಟುಂಬಗಳಲ್ಲಿ ದೂರದರ್ಶನವಿದ್ದರೆ ಶೇಕಡಾ 53.57ರಷ್ಟು ಕುಟುಂಬಗಳಲ್ಲಿ ಫ್ಯಾನ್, ಶೇಕಡಾ 17.86ರಷ್ಟು ಕುಟುಂಬಗಳಲ್ಲಿ ರೇಡಿಯೊ, ಶೇಕಡಾ 67.86ರಷ್ಟು ಕುಟುಂಬಗಳಲ್ಲಿ ಮೊಬೈಲ್ ಫೋನ್, ಶೇಕಡಾ 3.57ರಷ್ಟು ಕುಟುಂಬಗಳಲ್ಲಿ ಕೂಡಲು ಕುರ್ಚಿ ಮತ್ತು ಟೇಬಲ್, ಶೇಕಡಾ 14.29ರಷ್ಟು ಕುಟುಂಬಗಳಲ್ಲಿ ಹೊಲಿಗೆ ಯಂತ್ರ, ಶೇಕಡಾ 17.86ರಷ್ಟು ಕುಟುಂಬಗಳಲ್ಲಿ ಗೋಡೆ ಗಡಿಯಾರ ಮತ್ತು ಸೈಕಲ್ ಅಥವಾ ಮೋಟರ್ ಸೈಕಲ್‌ವಿದೆ, ಶೇಕಡಾ 3.57ರಷ್ಟು ಕುಟುಂಬಗಳಲ್ಲಿ

ಎತ್ತಿನ ಬಂಡಿ ಇದೆ ಎಂದು ಕಲೆಹಾಕಿದ ಮಾಹಿತಿಯಿಂದ ತಿಳಿದುಬರುತ್ತದೆ. ಅದೇ ರೀತಿ ಪರಿಶಿಷ್ಟ ಪಂಗಡದಲ್ಲಿನ ಕುಟುಂಬಗಳಲ್ಲಿನ ಗೃಹ ಉಪಯೋಗಿ ವಸ್ತುಗಳ ಬಗ್ಗೆ ಹೇಳುವುದಾದರೆ ಶೇಕಡಾ 16.67ರಷ್ಟು ಕುಟುಂಬಗಳಲ್ಲಿ ಮಾತ್ರ ಟಿ.ವ್ಹಿ. ರೇಡಿಯೊ, ಕುರ್ಚಿ ಮತ್ತು ಟೇಬಲ್, ಇದ್ದರೆ ಶೇಕಡಾ 33.33ರಷ್ಟು ಕುಟುಂಬಗಳಲ್ಲಿ ಫ್ಯಾನ್ ಮತ್ತು ಗೋಡೆ ಗಡಿಯಾರ ಮಾತ್ರ ಇರುತ್ತದೆ ಮತ್ತು ಶೇಕಡಾ 83.33ರಷ್ಟು ಕುಟುಂಬಗಳ ಸದಸ್ಯರಲ್ಲಿ ಆಧುನಿಕ ಯುಗದ ಸಂಪರ್ಕ ಸಾಧನವಾದ ಮೊಬೈಲ್ ಇರುತ್ತದೆ ಎಂದು ಕುಟುಂಬದ ಸದಸ್ಯರು ಮಾಹಿತಿಯನ್ನು ಹಂಚಿಕೊಂಡಿದ್ದಾರೆ.

**ಕೋಷ್ಟಕ–4.8**

**ಕುಟುಂಬಗಳು ಹೊಂದಿರುವ ಗೃಹಉಪಯೋಗಿ ಸಾಮಾನುಗಳ ವಿವರ ಶೇಕಡಾವಾರು**

| ಮನೆಯಲ್ಲಿರುವ ವಸ್ತುಗಳು | ಕೊಂಕನಳ್ಳಿ | | | | | ನಿಗದಿ | | | | |
|---|---|---|---|---|---|---|---|---|---|---|
| | ಪರಿಶಿಷ್ಟ ಜಾತಿ | ಪರಿಶಿಷ್ಟ ಪಂಗಡ | ಇತರೆ ಹಿಂದುಳಿದ ಜಾತಿಗಳು | ಮುಸ್ಲಿಂರು | ಸಾಮಾನ್ಯ | ಪರಿಶಿಷ್ಟ ಜಾತಿ | ಪರಿಶಿಷ್ಟ ಪಂಗಡ | ಇತರೆ ಹಿಂದುಳಿದ ಜಾತಿಗಳು | ಮುಸ್ಲಿಂರು | ಸಾಮಾನ್ಯ |
| ದೂರದರ್ಶನ (ಬಣ್ಣ/ಕಪ್ಪು–ಬಿಳಪು) | 21.43 | 16.67 | 67.39 | 63.64 | 76.00 | 34.78 | 22.22 | 70.73 | 44.44 | 60.71 |
| ಫ್ಯಾನ್ | 53.57 | 33.33 | 82.61 | 45.45 | 84.00 | 47.83 | 55.56 | 46.34 | 66.67 | 46.43 |
| ರೇಡಿಯೋ | 17.86 | 16.67 | 32.61 | 36.36 | 60.00 | 17.39 | 22.22 | 21.95 | 11.11 | 25.00 |
| ಕುಕ್ಕರ್ | 0.00 | 0.00 | 39.13 | 72.73 | 88.00 | 39.13 | 11.11 | 7.32 | 22.22 | 10.71 |
| ಮೊಬೈಲ್ ಫೋನ್ | 67.86 | 83.33 | 71.74 | 81.82 | 92.00 | 82.61 | 88.89 | 85.37 | 77.78 | 71.43 |
| ಕುರ್ಚಿ/ಟೆಬಲ್ | 3.57 | 16.67 | 23.91 | 63.64 | 76.00 | 8.70 | 22.22 | 12.20 | 22.22 | 17.86 |
| ಕಂಪ್ಯೂಟರ್ | 0.00 | 0.00 | 4.35 | 9.09 | 12.00 | 8.70 | 0.00 | 4.88 | 0.00 | 7.14 |
| ಗಾದಿ | 0.00 | 0.00 | 6.52 | 54.55 | 36.00 | 4.35 | 0.00 | 12.20 | 44.44 | 25.00 |
| ಹೊಲಿಗೆ ಯಂತ್ರ | 14.29 | 0.00 | 10.87 | 27.27 | 48.00 | 13.04 | 0.00 | 21.95 | 55.56 | 28.57 |
| ಸೈಕಲ್/ಮೋಟರ್ ಸೈಕಲ್ | 17.86 | 0.00 | 17.39 | 18.18 | 64.00 | 21.74 | 0.00 | 19.51 | 3.33 | 53.57 |
| ಗಡಿಯಾರ (ಗೋಡೆ/ಕೈ) | 17.86 | 33.33 | 28.26 | 45.45 | 72.00 | 39.13 | 22.22 | 63.41 | 44.44 | 57.14 |
| ಫ್ರೀಜ್ | 0.00 | 0.00 | 2.17 | 0.00 | 16.00 | 0.00 | 0.00 | 0.00 | 0.00 | 3.57 |
| ಟ್ರ್ಯಾಕ್ಟರ್/ರಾಶಿಯಂತ್ರ | 0.00 | 0.00 | 2.17 | 0.00 | 16.00 | 0.00 | 0.00 | 2.44 | 0.00 | 17.86 |
| ಎತ್ತಿನ ಬಂಡಿ | 3.57 | 0.00 | 15.22 | 18.18 | 72.00 | 0.00 | 0.00 | 14.63 | 0.00 | 67.86 |

ಮಾಹಿತಿಯ ಮೂಲ: ಕ್ಷೇತ್ರ ಕಾರ್ಯ

ಇತರೆ ಹಿಂದುಳಿದ ಜಾತಿಗಳ ಬಗ್ಗೆ ಹೇಳುವುದಾದರೆ ಶೇಕಡಾ 67.39ರಷ್ಟು ಕುಟುಂಬಗಳಲ್ಲಿ ದೂರ ದರ್ಶನ ಇದ್ದರೆ ಶೇಕಡಾ 82.61ರಷ್ಟು ಕುಟುಂಬಳಲ್ಲಿ ಫ್ಯಾನ್, ಶೇಕಡಾ 32.61ರಷ್ಟು ಕುಟುಂಬಗಳಲ್ಲಿ ರೇಡಿಯೊ, ಶೇಕಡಾ 39.13ರಲ್ಲಿ ಅಡಿಗೆ ಮಾಡುವ ಪ್ರೇಶರ್ ಕುಕ್ಕರ್, ಶೇಕಡಾ

71.74ರಷ್ಟು ಕುಟುಂಬಗಳಲ್ಲಿ ಸಂಪರ್ಕ ಸಾಧನವಾದ ಮೊಬೈಲ್, ಶೇಕಡಾ 23.91ರಷ್ಟು ಕುಟುಂಬಗಳಲ್ಲಿ ಕುರ್ಚಿ ಟೇಬಲ್‌ಗಳು ಇರುವುದು ಮಾಹಿತಿಯಿಂದ ತಿಳಿದು ಬರುವಂತದ್ದು.

**ಗ್ರಾಮಗಳಲ್ಲಿನ ಮೂಲಭೂತ ಸೌಕರ್ಯ**

ಮುಂದಿನ ಭಾಗದಲ್ಲಿ ಅಧ್ಯಯನ ಕೈಗೊಂಡ ಎರಡು ಗ್ರಾಮಗಳಲ್ಲಿನ ಕುಟುಂಬಗಳು ಹೊಂದಿರುವ ಮೂಲಭೂತ ಸೌಲಭ್ಯವನ್ನು ಕೋಷ್ಟಕ 4.8ರಲ್ಲಿ ಕೊಟ್ಟಿರುವಂತೆ ಕಲಬುರಗಿ ಜಿಲ್ಲೆಯ ಕೊಂಕನಳ್ಳಿಯಲ್ಲಿನ ಶೇಕಡಾ 48.28ರಷ್ಟು ಕುಟುಂಬಗಳು ತಮ್ಮದೆಯಾದ ಕುಡಿಯುವ

**ಕೋಷ್ಟಕ 4.9**

**ಕುಟುಂಬಗಳು ಹೊಂದಿರುವ ಮೂಲ ಸೌಲಭ್ಯಗಳ ಮಾಹಿತಿ ಶೇಕಡಾವಾರು**

| ಸೂಚಕಗಳು | ಕೊಂಕನಳ್ಳಿ | ನಿಗದಿ |
|---|---|---|
| ಕುಡಿಯುವ ನೀರಿನ ಮೂಲ | | |
| ಸ್ವಂತ ನಳ | 48.28 | 57.27 |
| ಸಾರ್ವಜನಿಕ ನಳ | 33.62 | 30.91 |
| ಬೋರಿಂಗ್/ಹ್ಯಾಂಡ್ ಪಂಪ್ | 18.10 | 11.82 |
| ಶೌಚಾಲಯದ ವ್ಯವಸ್ಥೆ | | |
| ಇದೆ | 4.31 | 85.46 |
| ಇಲ್ಲ | 95.69 | 14.34 |
| ವಿದ್ಯುತ್ ಸಂಪರ್ಕ | | |
| ಇದೆ | 84.48 | 88.18 |
| ಇಲ್ಲ | 15.52 | 11.82 |
| ಅಡಿಗೆ ಮಾಡುವ ವಿಧಾನ | | |
| ಕಟ್ಟಿಗೆಯಿಂದ | 89.66 | 75.00 |
| ಅಡಿಗೆ ಅನಿಲ | 6.90 | 14.55 |
| ಬಯೋಗ್ಯಾಸ್‌ಸೀಮೆಎಣ್ಣೆ | 3.45 | 6.36 |
| ಮನೆಯ ಸ್ಥಿತಿ | | |
| ಕಚ್ಚಾ ಮನೆ | 11.21 | 8.18 |
| ಅರೆ ಕಚ್ಚಾ ಮನೆ | 18.97 | 15.45 |
| ಪಕ್ಕಾ ಮನೆ | 69.83 | 76.36 |
| ಭೂಮಿಯ ಒಡೆತನ | | |
| ಯಾವುದೇ ಭೂಮಿ ಇಲ್ಲ | 45.69 | 39.09 |
| 0.5 ದಿಂದ 2 ಎಕರೆ | 20.69 | 20.91 |
| 2ಕ್ಕಿಂತ ಹೆಚ್ಚು ಮತ್ತು 5 ಎಕರೆಯ ಒಳಗೆ | 19.83 | 20.91 |
| 5 ರಿಂದ 25 ಎಕರೆ | 11.21 | 10.00 |
| 25 ಎಕರೆಗಿಂತ ಹೆಚ್ಚು | 6.90 | 5.45 |

ಮಾಹಿತಿಯ ಮೂಲ:ಕ್ಷೇತ್ರ ಕಾರ್ಯ

ನೀರಿನ ಸಂಪರ್ಕವನ್ನು ಹೊಂದಿವೆ ಆದರೆ ಶೇಕಡಾ 33.62ರಷ್ಟು ಕುಟುಂಬಗಳಿಗೆ ಸಾರ್ವಜನಿಕ ನಳದ ಸಂಪರ್ಕದಿಂದ ಕುಡಿಯುವ ನೀರನ್ನು ಪಡೆಯುತ್ತಿದ್ದಾರೆ ಮತ್ತು ಬಾಕಿ ಉಳಿದ ಶೇಕಡಾ 18.10ರಷ್ಟು ಕುಟುಂಬಗಳು ಬೋರಿಂಗ್ ಅಥವಾ ಹ್ಯಾಂಡ್ ಪಂಪ್ ಸಹಾಯದಿಂದ ಕುಡಿಯುವ ನೀರನ್ನು ಪಡೆಯುತ್ತಿರುವುದು ಸಂಗ್ರಹಿಸಿದ ಮಾಹಿತಿಯಿಂದ ತಿಳಿದು ಬರುತ್ತದೆ. ಅದೇ ರೀತಿಯಾಗಿ ಧಾರವಾಡದ ನಿಗದಿಯಲ್ಲಿ ಶೇಕಡಾ 57.27ರಷ್ಟು ಕುಟುಂಬಗಳು ಸ್ವಂತ ನಳದಿಂದ ಕುಡಿಯುವ ನೀರನ್ನು ಪಡೆದಿದ್ದರೆ ಶೇಕಡಾ 30.91ರಷ್ಟು ಕುಟುಂಬಗಳು ಸಾರ್ವಜನಿಕ ನಳದಿಂದ ಕುಟುಂಬಕ್ಕೆ ಬೇಕಾಗುವ ಕುಡಿಯುವ ನೀರನ್ನು ಪಡೆಯುತ್ತಿದ್ದಾರೆ ಮತ್ತು ಶೇಕಡಾ 11.82ರಷ್ಟು ಕುಟುಂಬಗಳು ಬೋರಿಂಗ್ ಅಥವಾ ಹ್ಯಾಂಡ್ ಪಂಪ್ ಸಹಾಯದಿಂದ ಕುಡಿಯುವ ನೀರನ್ನು ಪಡೆಯುತ್ತಿರುವದು ಸಂಗ್ರಹಿಸಿದ ಮಾಹಿತಿಯಿಂದ ಕಂಡುಬರುತ್ತದೆ. ಇನ್ನು ಶೌಚಾಲಯದ ಬಗ್ಗೆ ಹೇಳುವುದಾದರೆ ಕೊಂಕನಳ್ಳಿ ಗ್ರಾಮದಲ್ಲಿನ ಶೇಕಡಾ 95.69ರಷ್ಟು ಕುಟುಂಬಗಳಿಗೆ ಯಾವುದೇ ರೀತಿಯ ಶೌಚಾಲಯದ ವ್ಯವಸ್ಥೆ ಇಲ್ಲದೇ ಅವರೆಲ್ಲರೂ ಬಯಲಿನ ಮೇಲೆ ಹೆಚ್ಚಾಗಿ ಅವಲಂಬಿತವಾಗಿದ್ದಾರೆ.

ಮೇಲಿನ ಕೋಷ್ಟಕದ ಮಾಹಿತಿಯ ವಿಶ್ಲೇಷಣೆಯಿಂದ ತಿಳಿದು ಬರುವುದೇನೆಂದರೆ ಕಲಬುರಗಿಯ ಕೊಂಕನಳ್ಳಿಯಲ್ಲಿನ ಹೆಚ್ಚಿನ ಕುಟುಂಬಗಳು ಮೂಲಭೂತ ಸೌಲಭ್ಯಗಳಿಂದ ವಂಚಿತವಾಗಿರುವುದು ತಿಳಿದು ಬರುತ್ತದೆ. ಅದೇ ರೀತಿಯಾಗಿ ಧಾರವಾಡದಲ್ಲಿನ ಅನೇಕ ಕುಟುಂಬಗಳು 2ಕ್ಕಿಂತ ಕಡಿಮೆ ಪ್ರಮಾಣ ಭೂಮಿಯನ್ನು ಹೊಂದಿವೆ ಮತ್ತು ಶೇಕಡಾ 76.36ರಷ್ಟು ಕುಟುಂಬಗಳಿಗೆ ಸ್ವಂತವಾದ ಮನೆಗಳು ಇರುವುದು ಮೇಲಿನ ಮಾಹಿತಿಯಿಂದ ತಿಳಿದು ಬರುತ್ತದೆ.

**ಉಪಸಂಹಾರ**

ಅರವಿಂದ ಪನಗರಿಯಾ ಮತ್ತು ವಿಶಾಲ ಮೋರೆ (2013) ಮತ್ತು ಸುಖದೇವ್ ಥೋರಟ್‌ರವರು ಭಾರತದ ಆರ್ಥಿಕ ಸಂಘದ ವಾರ್ಷಿಕ ಸಭೆಯಲ್ಲಿ ತಮ್ಮ ಅಧ್ಯಕ್ಷೀಯ ಭಾಷಣದಲ್ಲಿ ಮಂಡಿಸಿದ ಅಧ್ಯಯನದ ಪ್ರಕಾರ ಬಡತನದ ರೇಖೆಯಲ್ಲಿರುವ ಅನೇಕ ಕುಟುಂಬಗಳು ಶೇಕಡಾ 32ರಷ್ಟು ಪರಿಶಿಷ್ಟ ಪಂಗಡ, ಶೇಕಡಾ 34ರಷ್ಟು ಪರಿಶಿಷ್ಟ ಜಾತಿ ಮತ್ತು ಶೇಕಡಾ 21ರಷ್ಟು ಸಮುದಾಯದಲ್ಲಿರುವ ಎಲ್ಲಾ ಪಂಗಡಗಳಿಗೆ ಸೇರಿದವರು ಎಂದು ಕಂಡು ಕೊಂಡಿರುತ್ತಾರೆ. ಅದೇ ರೀತಿ ಕರ್ನಾಟಕ ರಾಜ್ಯ ಯೋಜನಾ ಮಂಡಳಿ (2008)ಯು ಸಹ ತನ್ನ ವರದಿಯಲ್ಲಿ ಅತಿ ಹೆಚ್ಚಿನ ಬಡವರು ಅಂದರೆ ಶೇಕಡಾ 32.7ರಷ್ಟು ನಗರ ಪ್ರದೇಶದಲ್ಲಿನ ಪರಿಶಿಷ್ಟ ಜಾತಿ/ ಪಂಗಡ ಮತ್ತು ಮುಸ್ಲಿಂರಲ್ಲಿ ಕಂಡು ಬರುತ್ತದೆ ಎಂದು ಉಲ್ಲೇಖಿಸಿದೆ. ಈ ಎಲ್ಲ ಅಧ್ಯಯನಗಳಂತೆ ಈ ಒಂದು ಅಧ್ಯಯನ ಕೈಗೊಂಡ ಪ್ರದೇಶದಲ್ಲಿ ಕೂಡ ಅತಿ ಹೆಚ್ಚಿನ ಅಂದರೆ ಎರಡು ಗ್ರಾಮಗಳಲ್ಲಿ ಶೇಕಡಾ 35ಕ್ಕಿಂತ ಹೆಚ್ಚಿನ ಇತರೆ ಹಿಂದುಳಿದ ವರ್ಗದವರು ಮತ್ತು ಶೇಕಡಾ 29ಕ್ಕಿಂತ ಹೆಚ್ಚಿನ ಪರಿಶಿಷ್ಟ ಜಾತಿ ಮತ್ತು ಪಂಗಡದ ಗುಂಪಿಗೆ ಸೇರಿದವರಾಗಿದ್ದಾರೆ. ಅಂದರೆ

ಅತಿ ಹೆಚ್ಚಿನ ಬಡತನದ ಪ್ರಮಾಣ ಹಿಂದುಳಿದ ವರ್ಗ ಮತ್ತು ಪರಿಶಿಷ್ಟ ಜಾತಿ ಮತ್ತು ಪಂಗಡದವರಲ್ಲಿ ಹೆಚ್ಚಿಗೆ ಇರುವುದು ಈ ಮೂಲಕ ತಿಳಿದು ಬರುತ್ತದೆ. ಇದಕ್ಕೆ ಮೂಲ ಕಾರಣ ಈ ವರ್ಗದವರಲ್ಲಿ ಯಾವುದೇ ರೀತಿಯ ಉತ್ಪಾದನಾ ಪರಿಕರಗಳು ಇಲ್ಲದೇ ಇರುವುದು.

ಈಗಿನ ಆಧುನಿಕ ಯುಗದಲ್ಲಿ ಸಂಪರ್ಕ ಸಾಧನಗಳಾದ ಮೊಬೈಲ್‌ಗಳು ಎರಡು ಗ್ರಾಮಗಳಲ್ಲಿನ ಅನೇಕ ಕುಟುಂಬಗಳು ಹೊಂದಿರುವುದು ಕಂಡು ಬರುತ್ತದೆ. ಮಾಹಿತಿಯನ್ನು ಕಲೆಹಾಕುವ ಸಮಯದಲ್ಲಿ ಅನೇಕ ಕುಟುಂಬಗಳ ಸದಸ್ಯರು ಮನೆಗಳಲ್ಲಿರುವ ಸಂಪರ್ಕ ಸಾಧನಗಳ ಬಗ್ಗೆ ಕೇಳುವಾಗ ಅನೇಕ ಕುಟುಂಬಗಳಲ್ಲಿ ತಿನ್ನಲಿಕ್ಕೆ ರೊಟ್ಟಿ ಇಲ್ಲದಿದ್ದರೂ ಸಹ ಮೊಬೈಲಗಳು ಇರುವುದು ಸರ್ವೇ ಸಾಮಾನ್ಯವಾಗಿದೆ ಎಂದು ಹೇಳುತ್ತಿದ್ದರು. ಅನೇಕ ಕುಟುಂಬಗಳಿಗೆ ಗ್ರಾಮಗಳಲ್ಲಿ ಗ್ರಾಮ ಪಂಚಾಯತಿಗಳಿಂದ ನೀರಿನ ಸೌಲಭ್ಯವನ್ನು ಮಾಡಿರುವುದು ಕಂಡು ಬರುತ್ತದೆ. ಇದಕ್ಕೆ ಪ್ರತಿಯಾಗಿ ವರ್ಷಕ್ಕೆ ಪಂಚಾಯತಿ ನಿಗದಿಪಡಿಸಿದ ಕರವನ್ನು ಕಟ್ಟಬೇಕು ಎಂದು ನಿಯಮವಿರುತ್ತದೆ.

**ಕೊನೆಟಿಪ್ಪಣಿ**

1. ವೈ.ಪಿ.ಚಿಬ್ಬರ್, (1968) *'ಪ್ರಾಂ ಕಾಸ್ಟ್ ಟು ಕ್ಲಾಸ್, ಎ ಸ್ಟಡಿ ಆಫ್ ದ ಇಂಡಿಯನ್ ಮಿಡಲ್ ಕ್ಲಾಸಸ್',* ನವದೆಹಲಿ.
2. ಅದೇ, ಪುಟ–1–59.
3. ಈಶ್ವರನ್, ಕೆ. (1976) *'ಗ್ರಾಮೀಣ ಭಾರತದಲ್ಲಿ ಸಂಪ್ರದಾಯ ಮತ್ತು ಆರ್ಥಿಕ ವ್ಯವಸ್ಥೆ',* ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.
4. ಶ್ರೀನವಾಸನ್, ಎಂ.ಎನ್. (1976) *ದಿ ರಿಮ್ಮೆಂಬರ್ಡ ವಿಲೇಜ,* ಆಕ್ಷಫರ್ಡ ಯುನಿವರ್ಸಿಟಿ ಪ್ರೆಸ್, ನ್ಯೂ ದಿಲ್ಲಿ.
5. ಕರ್ನಾಟಕ ಸರಕಾರ (2013) *ಕರ್ನಾಟಕದ ಆರ್ಥಿಕ ಸಮೀಕ್ಷೆ–2013–14,* ಆರ್ಥಿಕ ಇಲಾಖೆ, ಬೆಂಗಳೂರು.
6. ಚನ್ನಕ್ಕಿ ಹೆಚ್. ಆರ್ ಮತ್ತು ರಾಧಾ ಜಿ. ಮಣ್ಣೂರ್ (2016) *ದಕ್ಷಿಣ ಭಾರತ ಮತ್ತು ಕರ್ನಾಟಕ ರಾಜ್ಯದಲ್ಲಿನ ತಳ ಸಮುದಾಯದಲ್ಲಿರುವ ಬಡತನದ ಕುರಿತು ಒಂದು ವಿಶ್ಲೇಷಣೆ, ಹೊಸತು* –ಸಂಪುಟ 18–ಸಂಚಿಕೆ–3, ಪುಟ–25–29.
7. ನೀಲಹಳ್ಳಿ ಗ್ರಾಮ ಪಂಚಾಯತಿಯ ವರದಿ (2013–14) ನೀಲಹಳ್ಳಿ ಗ್ರಾಮಪಂಚಾಯತಿಯ ಜನಯೋಜನೆಯ ಜಿಲ್ಲಾ ಪಂಚಾಯತಿ ಗುಲಬರ್ಗಾ ಸಮಗ್ರ ಪಂಚವಾರ್ಷಿಕ ಅಭಿವೃದ್ಧಿಯ ಮುನ್ನೋಟ (ಸಿ.ಡಿ.ಡಿ.ಪಿ.)ವರದಿ.
8. ನಿಗದಿ ಗ್ರಾಮ ಪಂಚಾಯತಿಯ ವರದಿ (2013–14) ನಿಗದಿ ಗ್ರಾಮಪಂಚಾಯತಿಯ ಜನಯೋಜನೆಯ ಜಿಲ್ಲಾ ಪಂಚಾಯತಿ ಧಾರವಾಡ ಸಮಗ್ರ ಪಂಚವಾರ್ಷಿಕ ಅಭಿವೃದ್ಧಿಯ ಮುನ್ನೋಟ (ಸಿ.ಡಿ.ಡಿ.ಪಿ.)ವರದಿ.
9. ಭಾಸ್ಕರ್ ಮುಖರ್ಜಿ (2004) *'ಪಾವರ್ಟಿ, ಫುಡ್ ಸೆಕ್ಯುರಿಟಿ ಆ್ಯಂಡ್ ಸ್ಟೆಟೆನೆಬಿಲಿಟಿ',* ರಾವತ್ ಪಬ್ಲಿಕೇಶನ್, ಜೈಪುರ.
10. ಭಾರತ ಸರಕಾರ (2013) *ಭಾರತದ ಗ್ರಾಮೀಣಾಭಿವೃದ್ಧಿ ವರದಿ,* ಓರಿಯಂಟ್ ಬ್ಲಾಕ್‌ಸ್ವಾನ್ ಪ್ರೈ.ಲಿ. ಹೈದರಾಬಾದ.
11. ಅನದಲೀಬ್ ರೆಹಮಾನ್ (2014) *"ರಿವೈವಲ್ ಆಫ್ ರೂರಲ್ ಪಬ್ಲಿಕ್ ಡಿಸ್ಟ್ರಿಬೂಶನ್ ಸಿಸ್ಟಮ್–ಎಕ್ಸಪ್ಯಾನಸನ್ ಆ್ಯಂಡ್ ಔಟ್ರೀಚ್", ಎಕಾನೊಮಿಕಲ್ ಪೊಲಿಟಿಕಲ್ ವೀಕ್ಲಿ,* ಸಂಚಿಕೆ –XLIX ನಂ.20
12. ದೀಪಾ ನಾರಾಯಣ, ಬಿನಾಯಕ್ ಸೇನ್ ಮತ್ತು ಕಾಟೆ ಹುಲ್ (2009) *'ಮೂವ್ಹಿಂಗ್ ಔಟ್ ಆಫ್ ಪಾವರ್ಟಿ ಇನ್ ಇಂಡಿಯಾ: ಯಾನ್ ಓವ್ಹರ್‌ವ್ಹಿವ್',* ಜಾಗತಿಕ ಬ್ಯಾಂಕ್, ಜಿನೆವಾ.

13. ಅರವಿಂದ ಪನಗರಿಯಾ ಮತ್ತು ವಿಶಾಲ ಮೋರೆ (2013) *'ಪಾವರ್ಟಿ ಬೈ ಸೋಶಿಯಲ್, ರೀಲಿಜಿಯಸ್ ಆ್ಯಂಡ್ ಎಕಾನಾಮಿಕ್ ಗ್ರೂಪ್ಸ್ ಇನ್ ಇಂಡಿಯಾ ಅಮಾಂಗ್ ಆ್ಯಂಡ್ ಇಟ್ಸ್ ಲಾರ್ಜ ಸ್ಟೇಟ್ಸ್ 1993–94 ರಿಂದ 2011–12, ಎಸ್‌ಆಯ್‌ಪಿಎ–ಆಯ್‌ಎಸ್‌ಈಆರ್‌ಪಿ,* ಕೋಲಂಬಿಯಾ ಯುನಿವರಸಿಟಿ, ವರ್ಕಕಿಂಗ್ ಪೇಪರ್ ನಂ.2013–02, ಪುಟ–1–46.

14. ಸುಖದೇವ್ ಥೋರಟ್ (ವರ್ಷ ಇಲ್ಲ) ಭಾರತದ ಆರ್ಥಿಕ ಸಂಘದ ವಾರ್ಷಿಕ ಸಭೆಯಲ್ಲಿ ತಮ್ಮ ಅಧ್ಯಕ್ಷೀಯ ಭಾಷಣದಲ್ಲಿ ಮಂಡಿಸಿದ ಲೇಖನ.

15. ಕರ್ನಾಟಕ ರಾಜ್ಯ ಯೋಜನಾ ಮಂಡಳಿ (2008) ಕರ್ನಾಟಕ ಒಂದು ದೃಷ್ಟಿಕೋನ, ಬೆಂಗಳೂರು, ಪುಟ–11–16.

16. ಪಿ.ಸಾಯಿನಾಥ್ (2012) *"ಬರ ಅಂದ್ರೆ ಎಲ್ಲರಿಗೂ ಇಷ್ಟ"*, **ಕನ್ನಡಕ್ಕೆ ಅನು**: ಜಿ.ಎನ್ ಮೋಹನ್, ಅಭಿನವ ಪ್ರಕಾಶನ, ಬೆಂಗಳೂರು.

17. ಚನ್ನಕ್ಕಿ ಹೆಚ್. ಆರ್. (2015) *"ಶೌಚಾಲಯದ ವ್ಯವಸ್ಥೆಯಲ್ಲಿನ ಅಸಮಾನತೆ ಕುರಿತು ಒಂದು ಅವಲೋಕನ", ಹೊಸತು,* ಸಂಪುಟ–17 ಸಂಚಿಕೆ–1, ಪುಟ–41–42.



# ಅಧ್ಯಾಯ ೫

# ಬಡತನ ಮತ್ತು ಮೂಲ ಸೌಕರ್ಯಗಳು

**ಪೀಠಿಕೆ**

ಭಾರತ ದೇಶದಲ್ಲಿ ಜಾರಿಯಲ್ಲಿರುವ ಸಾರ್ವಜನಿಕ ವಿತರಣಾ ವ್ಯವಸ್ಥೆಯು ದೇಶದ ನಾಗರಿಕರಿಗೆ ಕಡಿಮೆ ದರದಲ್ಲಿ ಆಹಾರ ಭದ್ರತೆಯನ್ನು ಒದಗಿಸುವುದು ಪ್ರಮುಖವಾದ ಉದ್ದೇಶವಾಗಿರುತ್ತದೆ. ಆದ್ದರಿಂದ ರಾಜ್ಯದಲ್ಲಿರುವ ಎಲ್ಲಾ ರೀತಿಯ ಬಡತನ ರೇಖೆಯ ಕೆಳಗಿರುವ ಕುಟುಂಬಗಳಿಗೆ ಸರಕಾರವು ಪ್ರತಿ ತಿಂಗಳು ಆಹಾರ ಪದಾರ್ಥಗಳನ್ನು ಜಿಲ್ಲೆಯ ವಿವಿಧ ಪ್ರದೇಶಗಳಲ್ಲಿ ಸರಕಾರದ ಅನುಮತಿಯೊಂದಿಗೆ ಸ್ಥಾಪನೆಯಾಗಿರುವ ನ್ಯಾಯ ಬೆಲೆ ಅಂಗಡಿಗಳ ಅಥವಾ ಪಡಿತರ ಅಂಗಡಿಗಳ ಮೂಲಕ ವಿತರಿಸುತ್ತದೆ. ಆದ್ದರಿಂದ ಈ ಒಂದು ಅಧ್ಯಾಯದಲ್ಲಿ ಸಂಶೋಧನೆಗೆ ಆಯ್ಕೆಮಾಡಿಕೊಂಡ ಗ್ರಾಮಗಳಲ್ಲಿನ ಬಡತನ ರೇಖೆಯ ಕೆಳಗಿರುವ ಕುಟುಂಬಗಳಿಗೆ ಒಂದು ತಿಂಗಳಿಗೆ ಬೇಕಾಗುವ ಸರಾಸರಿ ಅಕ್ಕಿ, ಸಕ್ಕರೆ, ಗೋಧಿ, ಸೀಮೆ ಎಣ್ಣೆ, ಜೋಳ, ಸರಕಾರದಿಂದ ಎಷ್ಟು ಪ್ರಮಾಣದಲ್ಲಿ ಆಹಾರ ಪದಾರ್ಥಗಳನ್ನು ಪಡೆಯುತ್ತಿವೆ, ಎಷ್ಟು ಪ್ರಮಾಣದ ಕೊರತೆಯನ್ನು ಎದರಿಸುತ್ತಿವೆ ಮತ್ತು ಕೊರತೆಯಾಗುವ ಆಹಾರ ಪದಾರ್ಥಗನ್ನು ಯಾವ ಮೂಲದಿಂದ ಸರಿದೂಗಿಸಿಕೊಳ್ಳುತ್ತಿವೆ ಎಂಬುದನ್ನು ತಿಳಿದುಕೊಳ್ಳಲು ಪ್ರಸ್ತುತ ಅಧ್ಯಾಯದಲ್ಲಿ ಚರ್ಚಿಸಲಾಗಿದೆ.

ಸರಕಾರದಿಂದ ಸಾರ್ವಜನಿಕ ವಿತರಣಾ ವ್ಯವಸ್ಥೆಯ ಅಡಿಯಲ್ಲಿ ಆಹಾರ ಪದಾರ್ಥಗಳನ್ನು ವಿತರಿಸುವದು ಒಂದು ಉತ್ತಮವಾದ ಸಾಮಾಜಿಕ ಸುರಕ್ಷತೆಯ ಕಾರ್ಯಕ್ರಮವಾಗಿದೆ. ಆಹಾರ ಪದಾರ್ಥಗಳನ್ನು ಸಂಗ್ರಹಿಸಿಟ್ಟುಕೊಂಡರೆ ದೇಶದ ಸಾರ್ವಜನಿಕರಿಗೆ ಅಥವಾ ಜನರಿಗೆ ತಲುಪಿದಂತಾಗುವುದಿಲ್ಲ ಮತು ಉತ್ಪಾದನೆಯು ಜನರ ಆಹಾರ ಸೇವನೆಯನ್ನು ಖಾತ್ರಿಪಡಿಸುವುದಿಲ್ಲ. ದೇಶದ ಆರ್ಥಿಕತೆಯಲ್ಲಿ ಮತ್ತು ಮುಕ್ತ ಮಾರುಕಟ್ಟೆಯಲ್ಲಿ ಸಾಕಷ್ಟು ಪ್ರಮಾಣದಲ್ಲಿ ಆಹಾರವು ಇದ್ದರೆ ಸಮುದಾಯದಲ್ಲಿನ ಜನರಿಗೆ ಅಥವಾ ವ್ಯಕ್ತಿಗಳಿಗೆ ಆ ಆಹಾರ ಪದಾರ್ಥಗಳು ಅನುಭೋಗಿಸುವ ಹಕ್ಕನ್ನು ಕೊಡುವುದಿಲ್ಲ (ಭಾಸ್ಕರ್ ಮುಖರ್ಜಿ, 2004). ಆದ್ದರಿಂದ ಸರಕಾರವು ನ್ಯಾಯಬೆಲೆ ಅಂಗಡಿಗಳ ಮೂಲಕ ದೇಶದಲ್ಲಿರುವ ಮತ್ತು ಆಹಾರ ಪದಾರ್ಥಗಳ ಕೊರತೆಯನ್ನು ಎದುರಿಸುತ್ತಿರುವ ಕುಟುಂಬಗಳಿಗೆ ವಿತರಿಸುತ್ತದೆ. ಈ ರೀತಿಯಾಗಿ ವಿತರಿಸಿ ಆಹಾರ ಪದಾರ್ಥಗಳು ಕುಟುಂಬಗಳ ಸದಸ್ಯರಿಗೆ ಸರಿ ಹೋಗದೆ ಇದ್ದಾಗ ಕುಟುಂಬಗಳು ಅಂಗಡಿ ಮುಗ್ಗಟ್ಟುಗಳಿಂದ ದಿನನಿತ್ಯ ಒಂದಿಲ್ಲ ಒಂದು ಆಹಾರ ಪದಾರ್ಥಗಳನ್ನು ಖರೀದಿಸುತ್ತವೆ. ದೇಶದಲ್ಲಿರುವ ಎಲ್ಲಾ ಕುಟುಂಬಗಳು ಮುಕ್ತ ಮಾರುಕಟ್ಟೆಯಲ್ಲಿ ದೊರೆಯುವ ಆಹಾರ ಪದಾರ್ಥಗಳನ್ನು ತಮ್ಮಲ್ಲಿರುವ

ಹಣವನ್ನು ಕೊಟ್ಟು ಸಮೀಪದ ಮಾರುಕಟ್ಟೆಯಿಂದ ಖರೀದಿಸಬೇಕು. ಮಾರುಕಟ್ಟೆಯಲ್ಲಿ ದಿನದಿಂದ ದಿನಕ್ಕೆ ಪದಾರ್ಥಗಳ ಬೆಲೆಯಲ್ಲಿ ಏರುಪೇರಾಗುತ್ತವೆ ಆದರೂ ಕೂಡ ಎಲ್ಲಾ ಕುಟುಂಬಗಳು ಸದ್ಯ ಚಾಲ್ತಿಯಲ್ಲಿರುವ ದರವನ್ನು ಕೊಟ್ಟು ಖರೀದಿಸಬೇಕು. ದೇಶದಲ್ಲಿರುವ ಎಲ್ಲಾ ಕುಟುಂಬಗಳಿಗೆ ಮುಕ್ತ ಮಾರುಕಟ್ಟೆಯಿಂದ ಆಹಾರ ಪದಾರ್ಥಗಳನ್ನು ಮಾರುಕಟ್ಟೆಯ ದರದಂತೆ ಖರೀದಿ ಮಾಡಲು ಸಾಧ್ಯವಾಗುವುದಿಲ್ಲ. ಅದಕ್ಕಾಗಿ ದೇಶದಲ್ಲಿ ಒಂದು ಸಮರ್ಪಕವಾದ ಆಹಾರ ಭದ್ರತಾ ಕಾಯಿದೆಯ ಅವಶ್ಯಕತೆ ಇರುವುದನ್ನು ಮನಗಂಡ ಸರಕಾರಗಳು ಹಲವಾರು ಯೋಜನೆಗಳನ್ನು ಜಾರಿಗೆ ತರುತ್ತಿವೆ. ಆದ್ದರಿಂದ ದೇಶದಲ್ಲಿರುವ ಕುಟುಂಬಗಳಿಗೆ ಕನಿಷ್ಠ ಪ್ರಮಾಣದಲ್ಲಿ ಆಹಾರ ಭದ್ರತೆಯನ್ನು ಒದಗಿಸುವ ಒಂದು ಯೋಜನೆಯಾದ ಸಾರ್ವಜನಿಕ ವಿತರಣಾ ವ್ಯವಸ್ಥೆಯನ್ನು ಪ್ರಾರಂಭಿಸಲಾಯಿತು. ಇದರಿಂದ ಕಡಿಮೆ ಆದಾಯವಿರುವ ಕುಟುಂಬಗಳನ್ನು ಆಹಾರದ ಕೊರತೆಯಿಂದ ರಕ್ಷಣೆಯನ್ನು ಮಾಡುವ ಒಂದು ದೃಢ ಉದ್ದೇಶದೊಂದಿಗೆ ಆರಂಭವಾಯಿತು. ಇದರಡಿಯಲ್ಲಿ ದೇಶದಲ್ಲಿ ಮತ್ತು ಕರ್ನಾಟಕ ರಾಜ್ಯದಲ್ಲಿರುವ ಬಡತನ ರೇಖೆಯ ಕೆಳಗಿರುವ (ಬಿ.ಪಿ.ಎಲ್) ಮತ್ತು ರೇಖೆಯ ಮೇಲಿರುವ ಕುಟುಂಬಗಳಿಗೆ ಪ್ರತಿತಿಂಗಳು ಇಂತಿಷ್ಟು ಅಕ್ಕಿ, ರಾಗಿ, ಗೋಧಿ, ಸಕ್ಕರೆ ಮತ್ತು ಎಣ್ಣೆಯನ್ನು ಪಡಿತರ ಚೀಟಿಗಳ ಮೂಲಕ ವಿತರಿಸಲಾಗುತ್ತಿದೆ.

**ಪಡಿತರ ಅಥವಾ ನ್ಯಾಯಬೆಲೆ ಅಂಗಡಿಗಳು**

ಈ ಕೆಳಗಿನ ಕೊಷ್ಟಕದಿಂದ ತಿಳಿದು ಬರುವುದೇನೆಂದರೆ ಸಂಶೋಧನೆಗೆ ಆಯ್ಕೆ ಮಾಡಿಕೊಂಡ ಜಿಲ್ಲೆಗಳಾದ ಕಲಬುರಗಿ ಮತ್ತು ಧಾರವಾಡದಲ್ಲಿನ ನಗರ ಮತ್ತು ಗ್ರಾಮೀಣ ಪ್ರದೇಶದಲ್ಲಿನ ಒಟ್ಟು ಪಡಿತರ ಅಂಗಡಿಗಳು, ಅಂತ್ಯೋದಯ, ಅಕ್ಷಯ ಸಿಲಿಂಡರ ಸಹಿತ ಮತ್ತು ಅಕ್ಷಯ ಸಿಲಿಂಡರ ರಹಿತ ಪಡಿತರ ಚೀಟಿಗಳನ್ನು ಹೊಂದಿರುವ ಒಟ್ಟು ಕುಟುಂಬಗಳ ಬಗ್ಗೆ ಜಿಲ್ಲೆ ಮತ್ತು ತಾಲೂಕವಾರು ಚರ್ಚಿಸಲಾಗಿದೆ. ಕಲಬುರಗಿ ಜಿಲ್ಲೆಗಳಲ್ಲಿ ಒಟ್ಟು 778 ಪಡಿತರ ಅಥವಾ ನ್ಯಾಯಬೆಲೆಯ ಅಂಗಡಿಗಳು ಗ್ರಾಮೀಣದಲ್ಲಿದ್ದರೆ ಕೇವಲ 210 ಅಂಗಡಿಗಳು ಜಿಲ್ಲೆಯ ನಗರ ಪ್ರದೇಶದಲ್ಲಿನ ನಾಗರಿಕರಿಗೆ ಸರಕಾರದಿಂದ ನೇರವಾಗಿ ಬಡತನ ರೇಖೆಯ ಕೆಳಗಿರುವ ಕುಟುಂಬಗಳಿಗೆ ಆಹಾರ ಪದಾರ್ಥಗಳನ್ನು ವಿತರಿಸುವಲ್ಲಿ ಕಾರ್ಯನಿರತವಾಗಿವೆ. ಹಾಗಾಗಿ ಕಲಬುರಗಿ ಜಿಲ್ಲೆಯಲ್ಲಿ ಒಟ್ಟು 988 ಅಂಗಡಿಗಳು ಕಾರ್ಯವನ್ನು ನಿರ್ವಹಿಸುತ್ತಿವೆ. ಅತಿ ಹೆಚ್ಚಿನ ನ್ಯಾಯ ಬೆಲೆ ಅಂಗಡಿಗಳು ಕಲಬುರಗಿ ತಾಲೂಕಿನಲ್ಲಿದ್ದರೆ ಅತಿ ಕಡಿಮೆ ನ್ಯಾಯಬೆಲೆ ಅಂಗಡಿಗಳು ಅಧ್ಯಯನಕ್ಕೆ ಆಯ್ಕೆಮಾಡಿಕೊಂಡ ಸೇಡಂ ತಾಲೂಕಿನಲ್ಲಿ ಇವೆ ಎಂದು ಕೋಷ್ಟಕದಿಂದ ತಿಳಿದುಬರುತ್ತದೆ. ಆದರೆ ಧಾರವಾಡ ಜಿಲ್ಲೆಯಲ್ಲಿ 274 ಪಡಿತರ ಅಂಗಡಿಗಳು ಗ್ರಾಮೀಣ ಪ್ರದೇಶ ಮತ್ತು 241 ಪಡಿತರ ಅಂಗಡಿಗಳು ನಗರ ಪ್ರದೇಶದಲ್ಲಿನ ಕುಟುಂಬಗಳಿಗೆ ಸರಕಾರವು ಒದಗಿಸುವ ಪದಾರ್ಥಗಳನ್ನು ಅವಶ್ಯಕತೆಯಿರುವ ಕುಟುಂಬಗಳಿಗೆ ಪೂರೈಸುತ್ತಿವೆ.

ಆದರೆ ಸಂಶೋಧನೆಗೆ ಆಯ್ಕೆಮಾಡಿಕೊಂಡ ಎರಡು ಜಿಲ್ಲೆಗಳಲ್ಲಿರುವ ತಾಲೂಕಗಳಲ್ಲಿನ ಅಂಗಡಿಗಳ ಬಗ್ಗೆ ಹೇಳುವುದಾದರೆ ಕಲಬುರಗಿ ಜಿಲ್ಲೆಯ ಸೇಡಂ ತಾಲೂಕಿನಲ್ಲಿ ಒಟ್ಟು 84 ನ್ಯಾಯಬೆಲೆ ಅಂಗಡಿಗಳಿವೆ ಇವುಗಳಲ್ಲಿ 74 ಅಂಗಡಿಗಳು ತಾಲೂಕಿನ ಗ್ರಾಮೀಣ ಪ್ರದೇಶದಲ್ಲಿ ಮತ್ತು ಕೇವಲ 14 ನ್ಯಾಯ ಬೆಲೆ ಅಂಗಡಿಗಳು ತಾಲೂಕಿನ ಕೇಂದ್ರ ಸ್ಥಾನವಾದ ಸೇಡಂ ನಗರದಲ್ಲಿ ತಮ್ಮ ಕಾರ್ಯ ವ್ಯಾಪ್ತಿಯಲ್ಲಿ ಕಾರ್ಯ ನಿರ್ವಹಿಸುತ್ತಿವೆ. ಅಧ್ಯಯನಕ್ಕೆ ಆಯ್ಕೆ ಮಾಡಿಕೊಂಡ ಇನ್ನೊಂದು ತಾಲೂಕಾದ ಧಾರವಾಡದಲ್ಲಿ ಒಟ್ಟು 117 ನ್ಯಾಯಬೆಲೆ ಅಂಗಡಿಗಳು ಅವುಗಳಲ್ಲಿ 95 ಅಂಗಡಿಗಳು ನಗರ ಪ್ರದೇಶದಲ್ಲಿ ಮತ್ತು 82 ನ್ಯಾಯಬೆಲೆ ಅಂಗಡಿಗಳು ಗ್ರಾಮೀಣ ಪ್ರದೇಶದಲ್ಲಿ ಪದಾರ್ಥಗಳನ್ನು ವಿತರಿಸುವುದರಲ್ಲಿ ನಿರತವಾಗಿವೆ. ಧಾರವಾಡ ಜಿಲ್ಲೆಯಲ್ಲಿ ಅತಿ ಹೆಚ್ಚಿನ ನ್ಯಾಯಬೆಲೆ ಅಂಗಡಿಗಳು ಜಿಲ್ಲೆಯ ಪ್ರಮುಖ ವಾಣಿಜ್ಯ ಕೇಂದ್ರವಾದ ಹುಬ್ಬಳ್ಳಿಯಲ್ಲಿ ಕಂಡುಬಂದರೆ ಅತಿ ಕಡಿಮೆ ಅಂಗಡಿಗಳು ಕುಂದಗೋಳ ತಾಲೂಕಿನಲ್ಲಿವೆ ಆದರೆ ಕುಂದಗೋಳ ಮತ್ತು ಕಲಘಟಗಿ ತಾಲೂಕಿನಲ್ಲಿನ ನಗರ ಪ್ರದೇಶದಲ್ಲಿ ಯಾವುದೇ ನ್ಯಾಯಬೆಲೆ ಅಂಗಡಿಗಳು ಇಲ್ಲ ಇದಕ್ಕೆ ಕಾರಣ ಈ ತಾಲೂಕುಗಳಲ್ಲಿ ಯಾವುದೇ ನಗರ ಪ್ರದೇಶಗಳು ಇಲ್ಲದೇ ಇರುವುದು. ಈ ರೀತಿಯ ನ್ಯಾಯ ಬೆಲೆಯ ಅಂಗಡಿಗಳನ್ನು ಸರಕಾರವು ಮಂಜೂರು ಮಾಡುವಾಗ ಆಯಾ ಕ್ಷೇತ್ರದ ಶಾಸಕರು ಮತ್ತು ಆಯಾಯ ಗ್ರಾಮಗಳಲ್ಲಿ ಬಹಳ ಪ್ರಭಾವಶಾಲಿಯಾಗಿರುವ ವ್ಯಕ್ತಿಗಳಿಗೆ ಹಂಚಿಕೆಯಾಗಿರುವುದನ್ನು ತಿಳಿದುಕೊಳ್ಳಬಹುದು. ಏಕೆಂದರೆ ಸಂಶೋಧನೆಗೆ ಆಯ್ಕೆ ಮಾಡಿಕೊಂಡ ಎರಡು ಗ್ರಾಮಗಳಲ್ಲಿನ ನ್ಯಾಯಬೆಲೆ ಅಂಗಡಿಗಳ ಬಗ್ಗೆ ಹೇಳುವುದಾದರೆ ಧಾರವಾಡ ತಾಲೂಕಿನ ನಿಗದಿ ಗ್ರಾಮದಲ್ಲಿ ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘಕ್ಕೆ ನೀಡಿದ್ದರೆ ಸೇಡಂ ತಾಲೂಕಿನ ಕೊಂಕನಳ್ಳಿ ಗ್ರಾಮದಲ್ಲಿನ ನ್ಯಾಯ ಬೆಲೆ ಅಂಗಡಿಯು ಊರಿನ ಗೌಡರು ತಮ್ಮ ರಾಜಕೀಯ ಪ್ರಭಾವ ಬೀರಿ ಅವರ ಮಡದಿಯು ಕಾರ್ಯದರ್ಶಿಯಾಗಿರುವ ಶ್ರೀದೇವಿ ಮಹಿಳಾ ಮಂಡಳಕ್ಕೆ ತೆಗೆದುಕೊಂಡಿದ್ದಾರೆ. ಇವರು ಪ್ರಬಲ ಜಾತಿಯಾದ ಲಿಂಗಾಯತಕ್ಕೆ ಸೇರಿದವರಾಗಿದ್ದಾರೆ. ಇವರ ಸಹೋದರ ಸ್ಥಳೀಯ ಶಾಸಕರ ಆಪ್ತರಲ್ಲಿ ಒಬ್ಬರು. ಮೀಸಲಾತಿಯ ಪ್ರಕಾರ ಹಂಚಿಕೆಯಾದರೂ ಸಹ ಅವುಗಳು ಸಹ ರಾಜಕೀಯ ಮತ್ತು ಪ್ರಬಲ ಜಾತಿಯವರ ಆದೇಶದಂತೆ ಕಾರ್ಯನಿರ್ವಹಿಸುವ ವ್ಯಕ್ತಿ ಅಥವಾ ಸಂಘ ಸಂಸ್ಥೆಗಳಿಗೆ ಹಂಚಿಕೆಯಾಗುತ್ತವೆ.

**ಪಡಿತರ ಚೀಟಿಗಳನ್ನು ಹೊಂದಿರುವ ಕುಟುಂಬಗಳು**

ಮೊದಲನೆಯದಾಗಿ ಸರಕಾರವು ಆಹಾರ ಪದಾರ್ಥಗಳನ್ನು ವಿತರಿಸುವ ಮೊದಲು ರಾಜ್ಯದಲ್ಲಿರುವ ಒಟ್ಟು ಕುಟುಂಬಗಳನ್ನು ಬಡತನ ರೇಖೆಯ ಕೆಳಗಿನ ಮತ್ತು ಮೇಲಿನ ಕುಟುಂಬಗಳೆಂದು ವಿಂಗಡಿಸಲಾಗುತ್ತದೆ. ಬಡತನ ರೇಖೆಯ ಮೇಲಿನ ಮತ್ತು ಕೆಳಗಿನ ಕುಟುಂಬಗಳನ್ನು ಮತ್ತೆ ಮೂರು ವರ್ಗಗಳಾಗಿ ಮೂರು ವಿಂಗಡಿಸಲಾಗುತ್ತದೆ. ಅವುಗಳಲ್ಲಿ ಅಂತ್ಯೋದಯ, ಅಕ್ಷಯ ಅನಿಲ ಅಥವಾ ಸಿಲಿಂಡರ ರಹಿತ ಮತ್ತು ಅನಿಲ ಸಹಿತ ಚೀಟಿಗಳನ್ನು ಹೊಂದಿರುವ ಕುಟುಂಬಗಳು. ಈಗ ಇಲ್ಲಿ ಬಡತನ ರೇಖೆಯ ಕೆಳಗಿನ ಕುಟುಂಬಗಳ ಬಗ್ಗೆ ವಿಸ್ತಾರವಾಗಿ ವಿಶ್ಲೇಷಿಸಲಾಗಿದೆ. ಕೋಷ್ಟಕ 1 ಮತ್ತು 2ರಲ್ಲಿ ಹೇಳಿದಂತೆ ಕಲಬುರಗಿ ಜಿಲ್ಲೆಯಲ್ಲಿ

ಒಟ್ಟು 71756 ಅಂತ್ಯೋದಯ ಚೀಟಿಗಳನ್ನು ಹೊಂದಿದ್ದ ಕುಟುಂಬಗಳಿದ್ದರೆ, 236120 ಕುಟುಂಬಗಳು ಅಕ್ಷಯ ಸಿಲಿಂಡರ ಸಹಿತ ಚೀಟಿಗಳನ್ನು ಹೊಂದಿವೆ ಮತ್ತು ಜಿಲ್ಲೆಯಲ್ಲಿ 329548 ಕುಟುಂಬಗಳು ಅಕ್ಷಯ ಸಿಲಿಂಡರ ರಹಿತ ಚೀಟಿಗಳನ್ನು ಹೊಂದಿರುತ್ತವೆ. ಆದರೆ ಧಾರವಾಡ ಜಿಲ್ಲೆಯಲ್ಲಿ 32809 ಕುಟುಂಬಗಳು ಅಂತ್ಯೋದಯ ಚೀಟಿಗಳನ್ನು ಪಡೆದಿದ್ದರೆ 42969 ಕುಟುಂಬಗಳು ಅಕ್ಷಯ ಸಿಲಿಂಡರ ಸಹಿತ ಚೀಟಿಗಳನ್ನು ಹೊಂದಿವೆ 228071 ಕುಟುಂಬಗಳು ಅಕ್ಷಯ ಸಿಲಿಂಡರ ರಹಿತ ಚೀಟಿಗಳನ್ನು ಹೊಂದಿರುತ್ತವೆ (ಜಿಲ್ಲಾ ಅಂಕಿಸಂಖ್ಯಾ ಸಂಗ್ರಹಣಾಧಿಕಾರಿ, 2011). ಇಲ್ಲಿ ಒಂದು ಪ್ರಮುಖವಾದ ಗ್ರಹಿಕೆ ಏನೆಂದರೆ ಕಲಬುರಗಿ ಜಿಲ್ಲೆಯು ಭೌಗೋಳಿಕವಾಗಿ ದೊಡ್ಡದಿದ್ದರೂ ಸಹ ನಗರೀಕರಣದ ಪ್ರಭಾವ ಕಡಿಮೆ ಇದೆ ಮತ್ತು ಗ್ರಾಮೀಣ ಭಾಗದಲ್ಲಿರುವ ಹೆಚ್ಚು ಕುಟುಂಬಗಳು ಬಡತನ ರೇಖೆಯ ಕೆಳಗಿನ ಹಂತದಲ್ಲಿ ಜೀವಿಸುತ್ತಿವೆ. ಆದರೆ ಧಾರವಾಡ ಜಿಲ್ಲೆಯಲ್ಲಿ ನಗರೀಕರಣವು ಹುಬ್ಬಳ್ಳಿ ಧಾರವಾಡ ಮಹಾನಗರ ಪಾಲಿಕೆಯ ವ್ಯಾಪ್ತಿಯಲ್ಲಿ ಹೆಚ್ಚಿದೆ ಮತ್ತು ಉಳಿದ ಪ್ರದೇಶ ಅಥವಾ ತಾಲೂಕಗಳಲ್ಲಿ ಬಹಳ ಕಡಿಮೆ ಪ್ರಮಾಣ ಇರುವುದರಿಂದ ಅಕ್ಷಯ ಅನಿಲ ಸಿಲಿಂಡರಗಳನ್ನು ಹೊಂದಿರುವ ಕುಟುಂಬಗಳ ಸಂಖ್ಯೆ ಹೆಚ್ಚಿರುವುದನ್ನು ಕಂಡುಕೊಳ್ಳ ಬಹುದಾಗಿದೆ.

**ಕೋಷ್ಟಕ 5.1**

**ಕಲಬುರಗಿಯಲ್ಲಿರುವ ಪಡಿತರ ಅಂಗಡಿಗಳು ಮತ್ತು ಚೀಟಿಗಳನ್ನು ಹೊಂದಿರುವ ಕುಟುಂಬಗಳ ಸಂಖ್ಯೆ**

| ತಾಲುಕಗಳು | ಪಡಿತರ ಅಂಗಡಿಗಳು | | | ಅಂತ್ಯೋದಯ | | | ಅಕ್ಷಯ ಸಿಲಿಂಡರ ಸಹಿತ | | | ಅಕ್ಷಯ ಸಿಲಿಂಡರ ರಹಿತ | | |
|---|---|---|---|---|---|---|---|---|---|---|---|---|
| | ಗ್ರಾಮೀಣ | ನಗರ | ಒಟ್ಟು | ಗ್ರಾಮೀಣ | ನಗರ | ಒಟ್ಟು | ಗ್ರಾಮೀಣ | ನಗರ | ಒಟ್ಟು | ಗ್ರಾಮೀಣ | ನಗರ | ಒಟ್ಟು |
| ಅಫಜಲಪೂರ | 93 | 6 | 99 | 6918 | 759 | 7677 | 125 | 863 | 988 | 23072 | 2994 | 26066 |
| ಆಳಂದ | 134 | 16 | 150 | 10474 | 1126 | 11600 | 1159 | 129 | 1288 | 42672 | 6597 | 49269 |
| ಚಿಂಚೋಳಿ | 95 | 4 | 99 | 8139 | 761 | 8900 | 688 | 102 | 790 | 34264 | 2371 | 36635 |
| ಚಿತ್ತಾಪುರ | 134 | 10 | 144 | 8516 | 1284 | 9800 | 339 | 51 | 390 | 34931 | 3681 | 38612 |
| ಕಲಬುರಗಿ | 121 | 157 | 278 | 10132 | 5647 | 15779 | 170 | 13665 | 13835 | 36011 | 71570 | 107581 |
| ಜೇವರ್ಗಿ | 127 | 7 | 134 | 10201 | 768 | 10969 | 235 | 115 | 350 | 39327 | 1938 | 41265 |
| ಸೇಡಂ | 74 | 10 | 84 | 5997 | 1034 | 7031 | 475 | 858 | 1333 | 25843 | 4277 | 30120 |
| ಒಟ್ಟು | 778 | 210 | 988 | 60377 | 11379 | 71756 | 15783 | 18974 | 236120 | 236120 | 93428 | 329548 |

ಮಾಹಿತಿಯ ಮೂಲ: 2011-12ರ ಗುಲಬರ್ಗಾ ಜಿಲ್ಲೆಯ ಪಕ್ಷಿನೋಟ

ಇನ್ನು ತಾಲೂಕವಾರು ಹೇಳುವುದಾದರೆ ಕಲಬುರಗಿ ಜಿಲ್ಲೆಯಲ್ಲಿ ಅತಿ ಹೆಚ್ಚಿನ ಅಂತ್ಯೋದಯ ಕಾರ್ಡಗಳನ್ನು ಹೊಂದಿರುವ ಕುಟುಂಬಗಳು 11600 ಆಳಂದ ತಾಲೂಕಿನಲ್ಲಿದ್ದರೆ ಅತಿ ಕಡಿಮೆ 7031 ಕುಟುಂಬಗಳು ಸೇಡಂ ತಾಲೂಕಿನಲ್ಲಿವೆ. ಆದರೆ ಅನಿಲ ಸಹಿತ ಕುಟುಂಬಗಳು ಅತಿ ಹೆಚ್ಚು ಕುಟುಂಬಗಳು ಅಂದರೆ 13835 ಕಲಬುರಗಿ ತಾಲೂಕಿನಲ್ಲಿದ್ದರೆ ಅತಿ ಕಡಿಮೆ 350 ಕುಟುಂಬಗಳು ಜೇವರ್ಗಿ ತಾಲೂಕಿನಲ್ಲಿ ಇರುವುದನ್ನು ಗಮನಿಸಬಹುದು. 107581 ಅಕ್ಷಯ ಅನಿಲ ಸಿಲಿಂಡರ ಸಹಿತ ಪಡಿತರ ಚೀಟಿಗಳನ್ನು ಹೊಂದಿರುವ ಕುಟುಂಬಗಳು ಅತಿ ಹೆಚ್ಚು ಇರುವುದು ಕಲಬುರಗಿ ತಾಲೂಕಿನಲ್ಲಿವೆ. ಆದರೆ 26066 ಪಡಿತರ ಚೀಟಿಗಳನ್ನು ಹೊಂದಿರುವ

ಕುಟುಂಬಗಳೊಂದಿಗೆ ಅಫಜಲ್ಪೂರ ತಾಲೂಕವು ಇನ್ನು ಸಾಂಪ್ರದಾಯಿಕವಾದ ಅಡಿಗೆ ಮಾಡುವ ವಿಧಾನವನ್ನು ನೆಚ್ಚಿಕೊಂಡಿರುವ ಹೆಚ್ಚಿನ ಕುಟುಂಬಗಳು ಇರುವುದು ಕಂಡುಬರುತ್ತದೆ. ಇದೇ ಪರಿಸ್ಥಿತಿಯನ್ನು ಅಧ್ಯಯನಕ್ಕೆ ಆಯ್ಕೆಮಾಡಿಕೊಂಡ ಧಾರವಾಡ ಜಿಲ್ಲೆಯಲ್ಲಿ ನೋಡುವುದಾದರೆ ಎಲ್ಲಾ ಮೂರು ವಿಧದ ಕಾರ್ಡುಗಳನ್ನು ಹೊಂದಿರುವ ಕುಟುಂಬಗಳು ಅತಿ ಹೆಚ್ಚಾಗಿ ಕಂಡು ಬರುವುದು ಹುಬ್ಬಳ್ಳಿ ತಾಲೂಕಿನಲ್ಲಿ. 10667 ಅಂತ್ಯೋದಯ ಪಡಿತರ ಚೀಟಿಗಳನ್ನು ಹೊಂದಿರುವ ಕುಟುಂಬಗಳಾಗಿದ್ದರೆ, 30013 ಅಕ್ಷಯ ಸಿಲಿಂಡರ ಸಹಿತ ಪಡಿತರ ಚೀಟಿಗಳನ್ನು ಹೊಂದಿರುವ ಕುಟುಂಬಗಳು ಮತ್ತು 75368 ಅಕ್ಷಯ ಸಿಲಿಂಡರ ರಹಿತ ಕುಟುಂಬಗಳನ್ನು ಹುಬ್ಬಳ್ಳಿ ತಾಲೂಕಿನಲ್ಲಿ ಕಾಣಬಹುದು. ಈ ರೀತಿಯಾಗಿರಲು ಒಂದು ಪ್ರಮುಖವಾದ ಅಂಶವೆಂದರೆ ಹುಬ್ಬಳ್ಳಿಯು ರಾಜ್ಯದಲ್ಲಿ ಮತ್ತು ಉತ್ತರ ಕರ್ನಾಟಕದಲ್ಲಿ ದೊಡ್ಡ ನಗರ ಮತ್ತು ಹೆಚ್ಚಿನ ಜನಸಂಖ್ಯೆಯನ್ನು ಹೊಂದಿರುವ ನಗರವಾಗಿದೆ. ಇನ್ನು 3517 ಅಂತ್ಯೋದಯದ ಪಡಿತರ ಚೀಟಿಗಳನ್ನು ಹೊಂದಿರುವ ಕುಟುಂಬಗಳು ಕುಂದಗೋಳ ತಾಲೂಕಿನಲ್ಲಿ ಇದ್ದರೆ ಕಲಘಟಗಿ ತಾಲೂಕಿನಲ್ಲಿ 383 ಕುಟುಂಬಗಳು ಮಾತ್ರ ಅಕ್ಷಯ ಅನಿಲ ಸಿಲಿಂಡರ ಸಹಿತ ಪಡಿತರ ಚೀಟಿಗಳನ್ನು ಹೊಂದಿವೆ ಮತ್ತು 24147 ಕಟುಂಬಗಳು ಅಕ್ಷಯ ಸಿಲಿಂಡರ ರಹಿತ ಪಡಿತರ ಚೀಟಿಗಳನ್ನು ಹೊಂದಿರುವುದರೊಂದಿಗೆ ಜಿಲ್ಲೆಯಲ್ಲಿ ಅತಿ ಕಡಿಮೆ ಇರುವುದನ್ನು ಕಾಣಬಹುದು (ಜಿಲ್ಲಾ ಅಂಕಿಸಂಖ್ಯಾ ಸಂಗ್ರಹಣಾಧಿಕಾರಿ, 2011).

**ಕೋಷ್ಟಕ 5.2**

**ಧಾರವಾಡದಲ್ಲಿರುವ ಪಡಿತರ ಅಂಗಡಿಗಳು ಮತ್ತು ಚೀಟಿಗಳನ್ನು ಹೊಂದಿರುವ ಕುಟುಂಬಗಳ ಸಂಖ್ಯೆ**

| ತಾಲೂಕಗಳು | ಪಡಿತರ ಅಂಗಡಿಗಳು | | | ಅಂತ್ಯೋದಯ | | | ಅಕ್ಷಯ ಸಿಲಿಂಡರ ಸಹಿತ | | | ಅಕ್ಷಯ ಸಿಲಿಂಡರ ರಹಿತ | | |
|---|---|---|---|---|---|---|---|---|---|---|---|---|
| | ಗ್ರಾಮೀಣ | ನಗರ | ಒಟ್ಟು | ಗ್ರಾಮೀಣ | ನಗರ | ಒಟ್ಟು | ಗ್ರಾಮೀಣ | ನಗರ | ಒಟ್ಟು | ಗ್ರಾಮೀಣ | ನಗರ | ಒಟ್ಟು |
| ಧಾರವಾಡ | 82 | 95 | 117 | 7403 | 2905 | 10308 | 225 | 10043 | 10268 | 37429 | 27321 | 64750 |
| ಹುಬ್ಬಳ್ಳಿ | 45 | 142 | 187 | 5075 | 5592 | 10667 | 169 | 29844 | 30013 | 23708 | 51660 | 75368 |
| ಕಲಘಟಗಿ | 54 | 0 | 54 | 4029 | 0 | 4029 | 383 | 0 | 383 | 26147 | 0 | 24147 |
| ಕುಂದಗೋಳ | 47 | 0 | 48 | 3212 | 305 | 3517 | 300 | 583 | 883 | 29243 | 3651 | 32894 |
| ನವಲಗುಂದ | 46 | 3 | 49 | 3947 | 341 | 4288 | 274 | 1148 | 1422 | 2024 | 8671 | 28912 |
| ಒಟ್ಟು | 274 | 241 | 515 | 23666 | 9143 | 32809 | 1351 | 41618 | 42969 | 136768 | 91303 | 228071 |

**ಮಾಹಿತಿಯ ಮೂಲ: ಧಾರವಾಡ ಜಿಲ್ಲಾ ಅಂಕಿ ಸಂಖ್ಯೆಗಳ ನೋಟ–2011–12**

## ಜಿಲ್ಲೆಗಳಲ್ಲಿರುವ ಒಟ್ಟು ಕುಟುಂಬಗಳನ್ನು ಮತ್ತು ಪಡಿತರ ಚೀಟಿಗಳು

ಕೋಷ್ಟಕ 5.2ರಲ್ಲಿ ಕೊಟ್ಟಿರುವಂತೆ ಕಲಬುರಗಿ ಮತ್ತು ಧಾರವಾಡ ಜಿಲ್ಲೆಗಳಲ್ಲಿರುವ ಎಲ್ಲಾ ತಾಲೂಕುಗಳಲ್ಲಿನ ಒಟ್ಟು ಕುಟುಂಬಗಳನ್ನು ಪಡಿತರ ಚೀಟಿಗಳನುಸಾರವಾಗಿ ವಿಶ್ಲೇಷಿಸಲಾಗಿದೆ. ಕಲಬುರಗಿ ಜಿಲ್ಲೆಯಲ್ಲಿನ ತಾಲೂಕವಾರು ಪಡಿತ ಚೀಟಿಗಳ ಬಗ್ಗೆ ಹೇಳುವುದಾದರೆ ಜೇವರ್ಗಿಯಲ್ಲಿ ಅತಿ ಹೆಚ್ಚಿನ ಪ್ರಮಾಣದ ಅಂದರೆ ಶೇಕಡಾ 16.04ರಷ್ಟು ಕುಟುಂಬಗಳು ಅತ್ಯಂತ ಕಡು ಬಡವರಿಗೆ ವಿತರಿಸುವ ಅಂತ್ಯೋದಯ ಪಡಿತರ ಚೀಟಿಗಳನ್ನು ಹೊಂದಿವೆ. ಆದರೆ ಶೇಕಡಾ

6.66ರಷ್ಟು ಅತಿ ಕಡಿಮೆಯ ಪ್ರಮಾಣ ಕಂಡುಬರುವದು ಕಲಬುರಗಿಯ ತಾಲೂಕಿನಲ್ಲಿ. ಅದೇ ರೀತಿಯಾಗಿ ಬಡತನ ರೇಖೆಯ ಕೆಳಗಿನ ಕುಟುಂಬಗಳಿಗೆ ವಿತರಿಸುವ ಪಡಿತರ ಚೀಟಿಗಳು ಜಿಲ್ಲೆಯ ಚಿಂಚೋಳಿ ತಾಲೂಕಿನಲ್ಲಿಯೇ ಹೆಚ್ಚಿನ ಪ್ರಮಾಣದಲ್ಲಿವೆ. ಮತ್ತೆ ಶೇಕಡಾ 62.54ರಷ್ಟು ಕುಟುಂಬಗಳಿಗೆ ಕಲಬುರಗಿ ತಾಲೂಕಿನಲ್ಲಿಯೆ ಕಡಿಮೆ ಪ್ರಮಾಣದ ಬಡತನ ರೇಖೆಯ ಕೆಳಗಿನ ಕುಟುಂಬಗಳಿಗೆ ವಿತರಿಸುವ ಪಡಿತರ ಚೀಟಿಗಳನ್ನು ಹೊಂದಿರುವುದು ಕಂಡುಬರುತ್ತದೆ. ಇನ್ನು ಬಡತನ ರೇಖೆಯ ಮೇಲಿನ ಕುಟುಂಬಗಳಿಗೆ ವಿತರಿಸುವ ಪಡಿತರ ಚೀಟಿಗಳನ್ನು ಅತಿ ಹೆಚ್ಚಿನ ಪ್ರಮಾಣದಲ್ಲಿ ಶೇಕಡಾ 30ರಷ್ಟು ಕುಟುಂಬಗಳು ಕಲಬುರಗಿಯಲ್ಲಿ ಮತ್ತು ಶೇಕಡಾ ಚಿಂಚೋಳಿಯಲ್ಲಿ ಶೇಕಡಾ 13.20ರಷ್ಟು ಕುಟುಂಬಗಳಿಗೆ ಬಡತನದ ರೇಖೆಯ ಮೇಲಿನ ಕುಟುಂಬಗಳಿಗೆ ಕೊಡಮಾಡುವ ಪಡಿತರ ಚೀಟಿಗಳನ್ನು ನಾಗರಿಕ ಸರಬರಾಜು ಇಲಾಖೆಯಿಂದ ವಿತರಿಸಲಾಗಿದೆ. ಈ ಮೇಲಿನ ಅಂಶದಿಂದ ಒಂದು ಮಹತ್ವವಾದ ವಿಷಯ ತಿಳಿದು ಬರುವುದೇನೆಂದರೆ ಹೆಚ್ಚಿನ ನಗರ ಪ್ರದೇಶವನ್ನು ಹೊಂದಿದ ಮತ್ತು ವಿಭಾಗೀಯ ಮತ್ತು ಜಿಲ್ಲೆಯ ಕೇಂದ್ರ ಸ್ಥಾನವನ್ನು ಹಂಚಿಕೊಂಡಿರುವ ಕಲಬುರಗಿಯಲ್ಲಿನ ಕುಟುಂಬಗಳಲ್ಲಿ ಕಡಿಮೆ ಪ್ರಮಾಣದ ಕಡು ಬಡತನದ ಪಡಿತರ ಚೀಟಿಗಳು ಮತ್ತು ಹೆಚ್ಚಿನ ಪ್ರಮಾಣದ ಬಡತನ ರೇಖೆಯ ಮೇಲಿನ ಕುಟುಂಬಗಳಿಗೆ ವಿತರಿಸುವ ಪಡಿತರ ಚೀಟಿಗಳು ಹೊಂದಿರುವುದು ಕೋಷ್ಟಕದಿಂದ ತಿಳಿದುಬರುತ್ತದೆ. ಆದರೆ ಜಿಲ್ಲೆಯಲ್ಲಿನ ಸರಾಸರಿಯನ್ನು ನೋಡಿದರೆ ಕಲಬುರಗಿ ತಾಲೂಕಿನಲ್ಲಿ ಮಾತ್ರ ಜಿಲ್ಲೆಯ ಸರಾಸರಿಯಾದ ಶೇಕಡಾ 10.88ಕ್ಕಿಂತ ಕಡಿಮೆ ಪ್ರಮಾಣದ ಕಡು ಬಡವರಿಗೆ ಮತ್ತು ಬಡತನ ರೇಖೆಯ ಕೆಳಗಿರುವ ಕುಟುಂಬಗಳಿಗೆ ವಿತರಿಸುವ ಪಡಿತರ ಚೀಟಿಗಳನ್ನು ಪಡೆದಿರುವದು ಮೇಲಿನ ಅಂಶಗಳಿಂದ ತಿಳಿದುಬರುತ್ತದೆ. ಜಿಲ್ಲೆಯ ಚಿಂಚೋಳಿಯಲ್ಲಿ ಮಾತ್ರ ಜಿಲ್ಲೆಯ ಸರಾಸರಿಯಾದ ಶೇಕಡಾ 21.53ಕ್ಕಿಂತ ಕಡಿಮೆ ಪ್ರಮಾಣದ ಕುಟುಂಬಗಳಿಗೆ ಬಡತನ ರೇಖೆಯ ಮೇಲಿನ ಕುಟುಂಬಗಳಿಗೆ ವಿತರಿಸುವ ಪಡಿತರ ಚೀಟಿಗಳನ್ನು ವಿತರಿಸಲಾಗಿದೆ (ಜಿಲ್ಲಾ ಅಂಕಿಸಂಖ್ಯಾ ಸಂಗ್ರಹಣಾಧಿಕಾರಿ, 2011).

ಅದೇ ರೀತಿಯಾಗಿ ಧಾರವಾಡ ಜಿಲ್ಲೆಯಲ್ಲಿನ ಅಂಕಿ ಅಂಶಗಳಿಂದ ತಿಳಿದು ಬರುವುದೇನೆಂದರೆ ಕಲಘಟಗಿಯಲ್ಲಿ ಅತಿ ಹೆಚ್ಚಿನ ಪ್ರಮಾಣದ ಅಂದರೆ ಶೇಕಡಾ 9.69ರಷ್ಟು ಕುಟುಂಬಗಳು ಅತ್ಯಂತ ಕಡು ಬಡವರಿಗೆ ವಿತರಿಸುವ ಅಂತ್ಯೋದಯ ಪಡಿತರ ಚೀಟಿಗಳನ್ನು ಹೊಂದಿವೆ ಆದರೆ ಶೇಕಡಾ 5.56ರಷ್ಟು ಅತಿ ಕಡಿಮೆಯ ಪ್ರಮಾಣ ಕಂಡು ಬರುವುದು ಹೆಚ್ಚಿನ ಪ್ರಮಾಣದ ನಗರ ಪ್ರದೇಶವನ್ನು ಹೊಂದಿದ ಹುಬ್ಬಳ್ಳಿ ತಾಲೂಕಿನಲ್ಲಿ. ಅದೇ ರೀತಿಯಾಗಿ ಬಡತನ ರೇಖೆಯ ಕೆಳಗಿನ ಕುಟುಂಬಗಳಿಗೆ ವಿತರಿಸುವ ಪಡಿತರ ಚೀಟಿಗಳು ಜಿಲ್ಲೆಯ ಕುಂದಗೋಳದಲ್ಲಿ ಶೇಕಡಾ 78.66ರಷ್ಟು ಕುಟುಂಬಗಳು ಬಡತನ ರೇಖೆಯ ಕೆಳಗಿನ ಕುಟುಂಬಗಳಿಗೆ ವಿತರಿಸುವ ಪಡಿತರ ಚೀಟಿಗಳನ್ನು ಹೊಂದಿರುವುದು ಕಂಡು ಬರುತ್ತದೆ. ಮತ್ತು ಧಾರವಾಡ ತಾಲೂಕಿನಲ್ಲಿ ಶೇಕಡಾ 62.54ರಷ್ಟು ಕುಟುಂಬಗಳಿಗೆ ಬಡತನ ರೇಖೆಯ ಕೆಳಗಿನ ಕುಟುಂಬಗಳಿಗೆ

ವಿತರಿಸುವ ಪಡಿತರ ಚೀಟಿಗಳನ್ನು ಹೊಂದಿರುವುದು ಕಂಡುಬರುತ್ತದೆ. ಇನ್ನು ಬಡತನ ರೇಖೆಯ ಮೇಲಿನ ಕುಟುಂಬಗಳಿಗೆ ವಿತರಿಸುವ ಪಡಿತರ ಚೀಟಿಗಳನ್ನು ಅತಿ ಹೆಚ್ಚಿನ ಪ್ರಮಾಣದಲ್ಲಿ ಶೇಕಡಾ 28.35ರಷ್ಟು ಕುಟುಂಬಗಳು ಧಾರವಾಡದಲ್ಲಿ ಮತ್ತು ಶೇಕಡಾ 13.5ರಷ್ಟು ಕಲಘಟಗಿಯಲ್ಲಿರುವ ಕುಟುಂಬಗಳಿಗೆ ಬಡತನದ ರೇಖೆಯ ಮೇಲಿನ ಕುಟುಂಬಗಳಿಗೆ ಕೊಡಮಾಡುವ ಪಡಿತರ ಚೀಟಿಗಳನ್ನು ಆಹಾರ ಮತ್ತು ನಾಗರೀಕ ಸರಬರಾಜು ಇಲಾಖೆಯ ವತಿಯಿಂದ ವಿತರಿಸಲಾಗಿದೆ. ಆದರೆ ಜಿಲ್ಲೆಯಲ್ಲಿನ ಸರಾಸರಿಯನ್ನು ನೋಡಿದರೆ ಹುಬ್ಬಳ್ಳಿ ತಾಲೂಕಿನಲ್ಲಿ ಮಾತ್ರ ಜಿಲ್ಲೆಯ ಸರಾಸರಿಯಾದ ಶೇಕಡಾ 5.06ಕ್ಕಿಂತ ಕಡಿಮೆ ಪ್ರಮಾಣದ ಕುಟುಂಬಗಳು ಕಡು ಬಡವರಿಗೆ ವಿತರಿಸುವ ಪಡಿತರ ಚೀಟಿಗಳನ್ನು ಪಡೆದಿರುವದು ಮೇಲಿನ ಅಂಶಗಳಿಂದ ತಿಳಿದು ಬರುತ್ತದೆ. ಜಿಲ್ಲೆಯ ಧಾರವಾಡದಲ್ಲಿ ಮಾತ್ರ ಜಿಲ್ಲೆಯ ಸರಾಸರಿಯಾದ ಶೇಕಡಾ 68.53ಕ್ಕಿಂತ ಕಡಿಮೆ ಪ್ರಮಾಣದ ಕುಟುಂಬಗಳಿಗೆ ಬಡತನ ರೇಖೆಯ ಕೆಳಗಿನ ಕುಟುಂಬಗಳಿಗೆ ವಿತರಿಸುವ ಪಡಿತರ ಚೀಟಿಗಳನ್ನು ವಿತರಿಸಲಾಗಿದೆ. ಕಲಘಟಗಿಯಲ್ಲಿ ಜಿಲ್ಲೆಯ ಸರಾಸರಿಯಾದ ಶೇಕಡಾ 24.23ಕ್ಕಿಂತ ಕಡಿಮೆ ಪ್ರಮಾಣದ ಕುಟುಂಬಗಳಿಗೆ ಬಡತನ ರೇಖೆಯ ಮೇಲಿನ ಕುಟುಂಬಗಳಿಗೆ ವಿತರಿಸುವ ಪಡಿತರ ಚೀಟಿಗಳನ್ನು ವಿತರಿಸಲಾಗಿದೆ (ಜಿಲ್ಲಾ ಅಂಕಿಸಂಖ್ಯಾ ಸಂಗ್ರಹಣಾಧಿಕಾರಿ, 2011).

**ಕೋಷ್ಟಕ 5.3**
**ಜಿಲ್ಲೆಗಳ ತಾಲೂಕಗಳಲ್ಲಿ ಒಟ್ಟು ಪಡಿತರ ಚೀಟಿಗಳನ್ನು ಹೊಂದಿರುವ ಕುಟುಂಬಗಳು ಶೇಕಡಾವಾರು**

| ಜಿಲ್ಲೆ | ತಾಲೂಕಗಳು | ಎಎವೈ | ಬಿಪಿಎಲ್ | ಎಪಿಎಲ್ | ಒಟ್ಟು |
|---|---|---|---|---|---|
| ಧಾರವಾಡ | ಧಾರವಾಡ | 8.40 | 63.25 | 28.35 | 100.00 |
| | ಹುಬ್ಬಳ್ಳಿ | 5.56 | 67.72 | 26.72 | 100.00 |
| | ಕಲಘಟಗಿ | 9.69 | 77.26 | 13.05 | 100.00 |
| | ಕುಂದಗೊಳ | 7.53 | 78.66 | 13.80 | 100.00 |
| | ನವಲಗುಂದ | 8.41 | 68.03 | 23.56 | 100.00 |
| | ಜಿಲ್ಲೆಯ ಸರಾಸರಿ | 7.23 | 68.53 | 24.23 | 100.00 |
| ಕಲಬುರಗಿ | ಅಫ್ಜಲ್ಪುರ್ | 12.75 | 68.13 | 19.12 | 100.00 |
| | ಆಳಂದ | 13.18 | 68.28 | 18.53 | 100.00 |
| | ಚಿಂಚೋಳಿ | 14.16 | 72.59 | 13.25 | 100.00 |
| | ಚಿತ್ತಾಪುರ | 9.99 | 71.33 | 18.67 | 100.00 |
| | ಕಲಬುರಗಿ | 6.66 | 62.54 | 30.80 | 100.00 |
| | ಜೇವರ್ಗಿ | 16.04 | 70.07 | 13.90 | 100.00 |
| | ಸೇಡಂ | 12.54 | 69.29 | 18.17 | 100.00 |
| | ಜಿಲ್ಲೆಯ ಸರಾಸರಿ | 10.88 | 67.59 | 21.53 | 100.00 |

ಮಾಹಿತಿಯ ಮೂಲ: ಆಹಾರ ಮತ್ತು ನಾಗರಿಕ ಸರಬರಾಜು ಇಲಾಖೆ, 2014
**ಟಿಪ್ಪಣಿ:** ಆಹಾರ ಮತ್ತು ನಾಗರೀಕ ಸರಬರಾಜು ಇಲಾಖೆಯ ಅಂತರ ಜಾಲತಾಣದಿಂದ

ರಾಜ್ಯ, ಜಿಲ್ಲೆ ಮತ್ತು ತಾಲೂಕಿನಲ್ಲಿರುವ ಒಟ್ಟು ಕುಟುಂಬಗಳನ್ನು ಪಡಿತರ ಚೀಟಿಗಳನುಗುಣವಾಗಿ ಪಡೆದು ಅವುಗಳನ್ನು ಪ್ರತಿಶತಕ್ಕೆ ಬದಲಾಯಿಸಿಕೊಂಡು ವಿಶ್ಲೇಷಣೆಯನ್ನು ಮಾಡಲಾಗಿದೆ.

ಈ ಮೇಲೆ ಹೇಳಿದಂತೆ, ಕೋಷ್ಟಕ 3 ರಲ್ಲಿ ಅಧ್ಯಯನಕ್ಕೆ ಆಯ್ಕೆ ಮಾಡಿಕೊಂಡ ಗ್ರಾಮಗಳು ಮತ್ತು ಪ್ರತಿ ಗ್ರಾಮದಿಂದ ಆಯ್ಕೆಯಾದ ಕುಟುಂಬಗಳ ಬಗ್ಗೆ ವಿವರಿಸಲಾಗಿದೆ. ಸಂಖ್ಯಾಶಾಸ್ತ್ರಿಯ ವಿಧಾನದ ಪ್ರಕಾರ ಅಧ್ಯಯನಕ್ಕೆ ಒಟ್ಟಾರೆಯಾಗಿ ಎರಡು ಗ್ರಾಮಗಳಿಂದ 294 ಕುಟುಂಬಗಳನ್ನು ಆಯ್ಕೆಮಾಡಿಕೊಳ್ಳಲಾಗಿದ್ದು ಅದರಲ್ಲಿ ಕೊಂಕನಳ್ಳಿ ಗ್ರಾಮದಿಂದ 148 (50.3%) ಹಾಗೂ ನಿಗದಿ ಗ್ರಾಮದಿಂದ 146 (49.7%) ಕುಟುಂಬಗಳನ್ನು ಆಯ್ಕೆ ಮಾಡಲಾಗಿದೆ. ಈ 294 ಕುಟುಂಬಗಳು ಕೇವಲ ಬಡತನ ರೇಖೆಯ ಕೆಳಗಿನ ಪಡಿತರ ಚೀಟಿಗಳನ್ನು ಹೊಂದಿವೆ. ಅದರಲ್ಲಿ ಯಾದೃಚ್ಛಿಕ ವಿಧಾನದ ಪ್ರಕಾರ ಆಯ್ಕೆ ಮಾಡಿಕೊಂಡಾಗ ಈ ಒಟ್ಟು ಆಯ್ಕೆಯಾದ ಕುಟುಂಬಗಳ ಸಂಖ್ಯೆಯು ಬದಲಾವಣೆಯಾಗುತ್ತದೆ. (ಕರ್ನಾಟಕ ಸರಕಾರ, 2014) ಈ ಎಲ್ಲ ಆಯ್ಕೆಯಾದ ಕುಟುಂಬಗಳಿಂದ ಅಧ್ಯಯನಕ್ಕೆ ಅವಶ್ಯವಿರುವ ಅಂಶಗಳ ಮೇಲೆ ಮಾಹಿತಿಯನ್ನು ಕಲೆಹಾಕಲಾಗಿದೆ. ಈ ಕಲೆಹಾಕಿದ ಮಾಹಿತಿಯನ್ನು ಮುಂದಿನ ಭಾಗದಲ್ಲಿ ಸಮಗ್ರವಾಗಿ ವಿಶ್ಲೇಷಣೆ ಮಾಡಲಾಗಿದೆ. ಇದರಲ್ಲಿ ಈಗಾಗಲೆ ತಿಳಿಸಿದ ಹಾಗೆ ಕೊಂಕನಳ್ಳಿ ಮತ್ತು ನಿಗದಿಯಲ್ಲಿನ ಒಟ್ಟು 294 ಕುಟುಂಬಗಳಲ್ಲಿ ಕೆಲವೊಂದು ಕುಟುಂಬಗಳು ಬಡತನ ರೇಖೆಯ ಕೆಳಗೆ ಬರುವುದಿಲ್ಲ ಆದರೂ ಸಹ ಅವರು ಬಡತನ ರೇಖೆಯ ಕೆಳಗಿನ ಕುಟುಂಬಗಳಿಗೆ ದೊರಕುವ ಸೌಲಭ್ಯಗಳನ್ನು ಪಡೆಯುತ್ತಿದ್ದಾರೆ (ಕರ್ನಾಟಕ ಸರಕಾರ, 2014).

**ಕೋಷ್ಟಕ 5.4**
**ಮಾದರಿ ಆಯ್ಕೆಯ ಪ್ರಕಾರ ಆಯ್ಕೆಯಾದ ಕುಟುಂಬಗಳು**

| ಗ್ರಾಮದ ಹೆಸರು | ಅಧ್ಯಯನಕ್ಕೆ ಆಯ್ಕೆಯಾದ ಕುಟುಂಬಗಳು | ಒಟ್ಟು ಪ್ರತಿಶತ |
|---|---|---|
| ಕೊಂಕನಳ್ಳಿ | 148 | 50.3 |
| ನಿಗದಿ | 146 | 49.7 |
| ಒಟ್ಟು | 294 | 100.0 |

ಮಾಹಿತಿಯ ಮೂಲ: ಕ್ಷೇತ್ರ ಕಾರ್ಯ

**ಕುಟುಂಬಗಳು ಪಡಿತರ ಚೀಟಿಗಳನ್ನು ಹೊಂದಿರುವ ವಿವರ**

ಅಧ್ಯಯನ ಪ್ರದೇಶಗಳಲ್ಲಿ ಆಯ್ಕೆಯಾದ ಗ್ರಾಮಗಳಲ್ಲಿನ ಕುಟುಂಬಗಳ ಆರ್ಥಿಕ ಸ್ಥಿತಿಗತಿಯ ಬಗ್ಗೆ ಸಂಬಂಧಪಟ್ಟಂತೆ ತಿಳಿದುಕೊಳ್ಳಲು ಪಡಿತರ ಚೀಟಿಯು ಒಂದು ಮಾನದಂಡವಾಗಿದೆ ಅದಕ್ಕಾಗಿ ಕುಟುಂಬವು ಹೊಂದಿರುವ ಪಡಿತರ ಚೀಟಿಗಳನ್ನು ಗಣನೆಗೆ ತೆಗೆದುಕೊಂಡಿದ್ದು, ಇದಕ್ಕೆ ಪೂರಕವಾದ ಮಾಹಿತಿಯನ್ನು ಕಲೆಹಾಕಲಾಗಿದೆ. ಇದಕ್ಕೆ ಸಂಬಂಧಪಟ್ಟಂತೆ ಕೋಷ್ಟಕ 2 ಸಂಪೂರ್ಣವಾದ ಮಾಹಿತಿಯನ್ನು ನೀಡುತ್ತದೆ ಹಾಗೂ ಅಭ್ಯಸಿಸಿದ ನಮೂನೆಗಳನ್ನು

(ಕುಟುಂಬಗಳನ್ನು) 3 ವಿಧಗಳಲ್ಲಿ ವಿಂಗಡಿಸಲಾಗಿದೆ. ಅಧ್ಯಯನದ ಪ್ರದೇಶಗಳಲ್ಲಿ ಕೊಂಕನಹಳ್ಳಿಯು ಹೆಚ್ಚಿನ ಪ್ರಮಾಣದ ಕಡುಬಡತನದ ಕುಟುಂಬಗಳನ್ನು ಹೊಂದಿದೆ. ಆದರೆ ಇದರ ಪ್ರಮಾಣವು ಪ್ರತಿಶತದಷ್ಟು ಕಡುಬಡತನದ ಕುಟುಂಬಗಳನ್ನು ನಿಗದಿ ಹಳ್ಳಿಯು ಹೊಂದಿದೆ. ಅದೇ ರೀತಿಯಾಗಿ ಬಡತನದ ರೇಖೆಗಿಂತ ಕೆಳಗಿರುವ ಕುಟುಂಬಗಳನ್ನು ಅದರಲ್ಲಿ ಅನಿಲ ಸಹಿತ ಮತ್ತು ಅನಿಲ ರಹಿತ ಕುಟುಂಬಗಳನ್ನು ಒಟ್ಟಾರೆಯಾಗಿ ಗಣನೆಗೆ ತೆಗೆದುಕೊಂಡಾಗ ಸುಮಾರು ಎರಡು ಪ್ರದೇಶಗಳಿಗೆ ಹೋಲಿಸಿದಾಗ ಗಣನೀಯ ಪ್ರಮಾಣದ ವ್ಯತ್ಯಾಸವನ್ನು ಹೊಂದಿಲ್ಲಾ (ಕೊಂಕನಹಳ್ಳಿ 53%, ನಿಗದಿ 55%). ಅದೇ ರೀತಿಯಾಗಿ ಬಡತನ ರೇಖೆಗಿಂತ ಮೇಲಿರುವ ಅನಿಲ ಸಹಿತ ಮತ್ತು ಅನಿಲ ರಹಿತ ಕುಟುಂಬಗಳನ್ನು ಒಟ್ಟಾರೆಯಾಗಿ ಗಮನಿಸಿದಾಗ ನಿಗದಿಯು 26% ಬಡತನ ರೇಖೆಗಿಂತ ಮೇಲಿರುವ ಕುಟುಂಬಗಳನ್ನು ಹೊಂದಿದ್ದರೆ ಕೊಂಕನಳ್ಳಿಯು 22% ಕುಟುಂಬಗಳನ್ನು ಹೊಂದಿದೆ (ಕರ್ನಾಟಕ ಸರಕಾರ, 2014). ಇದಲ್ಲದೆ ಕರ್ನಾಟಕ ಜನಪರ ವೇದಿಕೆ (2008)ರವರ ಪ್ರಕಾರ ಅರ್ಹರಾದವರಿಗೆ ರೇಷನ್ ಕಾರ್ಡ ಕೊಟ್ಟಿಲ್ಲ ಮತ್ತು ಅಂತ್ಯೋದಯ ಕಾರ್ಡ ಕೋಡಬೇಕಿತ್ತು ಆದರೆ ಬಡತನ ರೇಖೆಯ ಮೇಲಿನ ಪಡಿತರ ಚೀಟಿಯನ್ನು ವಿತರಿಸಲಾಗಿದೆ ಇದರಿಂದ ಅರ್ಹ ಕುಟುಂಬಗಳನ್ನು ಹೊರಗಿಟ್ಟು ಅನರ್ಹ ಕುಟುಂಬಗಳು ಪಡಿತರ ವಿತರಣೆಯ ಲಾಭವನ್ನು ಪಡೆಯುತ್ತಿವೆ.

**ಕೋಷ್ಟಕ 5.5**

**ಅಧ್ಯಯನ ಪ್ರದೇಶದಲ್ಲಿನ ಕುಟುಂಬಗಳು ವಿವಿಧ ರೀತಿಯ ಪಡಿತರ ಚೀಟಿಗಳನ್ನು ಹೊಂದಿರುವ ವಿವರ**

| ಪಡಿತರ ಚೀಟಿಯ ಪಂಗಡಗಳು | ಕೊಂಕನಳ್ಳಿ | | ನಿಗದಿ | |
|---|---|---|---|---|
| | ಒಟ್ಟು ಕುಟುಂಬಗಳ ಸಂಖ್ಯೆ | ಪ್ರತಿಶತ | ಒಟ್ಟು ಕುಟುಂಬಗಳ ಸಂಖ್ಯೆ | ಪ್ರತಿಶತ |
| ಎಎವೈ | 38 | 25.7 | 28 | 19.2 |
| ಬಿಪಿಎಲ್ ಅನಿಲ ಸಹಿತ | 10 | 6.8 | 21 | 14.4 |
| ಬಿಪಿಎಲ್ ಅನಿಲ ರಹಿತ | 68 | 45.9 | 59 | 40.4 |
| ಒಟ್ಟು ಕುಟುಂಬಗಳು | 116 | 100.00 | 110 | 100.00 |

ಮಾಹಿತಿಯ ಮೂಲ: ಕ್ಷೇತ್ರ ಕಾರ್ಯ

**ಕುಟುಂಬಗಳಿಗೆ ಅಕ್ಕಿಯ ಅವಶ್ಯಕತೆ**

ಅಧ್ಯಯನ ಮಾಡಿದ ಗ್ರಾಮಗಳಲ್ಲಿನ ಬಡತನ ರೇಖೆಯ ಕೆಳಗಿರುವ ಕುಟುಂಬಗಳಿಗೆ ಪ್ರತಿತಿಂಗಳು ಬೇಕಾಗುವ, ಸರಕಾರದಿಂದ ಸಿಗುವ ಮತ್ತು ಕುಟುಂಬಗಳಿಗೆ ಕೊರತೆಯಾಗುವ ಅಕ್ಕಿಯ ಪ್ರಮಾಣವನ್ನು ಕೋಷ್ಟಕ 5 ರಲ್ಲಿ ವಿಶ್ಲೇಷಿಸಲಾಗಿದೆ. ಅಕ್ಕಿಯ ಪ್ರಮಾಣವನ್ನು ಒಟ್ಟು ಐದು ಗುಂಪುಗಳಾಗಿ ವಿಂಗಡಿಸಲಾಗಿದೆ ಅಂದರೆ 10 ಕೆ.ಜಿ.ಗಿಂತ ಕಡಿಮೆ, 11 ರಿಂದ 20 ಕೆ.ಜಿ, 21 ರಿಂದ 30 ಕೆ.ಜಿ., 31 ರಿಂದ 40 ಕೆ.ಜಿ ಮತ್ತು 41 ಕೆ.ಜಿಗಿಂತ ಹೆಚ್ಚಿಗೆ ಅವಶ್ಯಕತೆ, ಸರಕಾರದಿಂದ ಪಡೆಯುವವರು ಮತ್ತು ಕೊರತೆಯಾಗುವವರನ್ನು ವಿಂಗಡಿಸಿ ವಿಶ್ಲೇಷಣೆಯನ್ನು

ಕೈಗೊಳ್ಳಲಾಗಿದೆ. ಕೊಂಕನಳ್ಳಿಯಲ್ಲಿನ ಸರಿಸುಮಾರು ಶೇಕಡಾ 6.90ರಷ್ಟು ಕುಟುಂಬಗಳಿಗೆ ಮತ್ತು ನಿಗದಿಯಲ್ಲಿನ ಶೇಕಡಾ 18.18ರಷ್ಟು ಕುಟುಂಬಗಳಿಗೆ 10 ಕೆ.ಜಿಗಿಂತ ಕಡಿಮೆ ಪ್ರಮಾಣದ ಅಕ್ಕಿಯ ಅವಶ್ಯಕತೆ ಇರುತ್ತದೆ ಎಂದು ತಿಳಿಸಿದ್ದಾರೆ. ಇಲ್ಲಿ ಕಲಬುರಗಿಯಲ್ಲಿನ ಕೊಂಕನಳ್ಳಿಗಿಂತ ಧಾರವಾಡದ ನಿಗದಿಯಲ್ಲಿನ ಹೆಚ್ಚಿನ ಕುಟುಂಬಗಳಿಗೆ 10 ಕೆ.ಜಿಗಿಂತ ಕಡಿಮೆ ಪ್ರಮಾಣದ ಅಕ್ಕಿಯ ಅವಶ್ಯಕತೆ ಇರುವದು ಕಂಡುಬರುತ್ತದೆ. ಇನ್ನು 11 ರಿಂದ 20 ಕೆ.ಜಿಯಷ್ಟು ಪ್ರಮಾಣದ ಅಕ್ಕಿಯು ಕೊಂಕನಳ್ಳಿಯಲ್ಲಿ ಶೇಕಡಾ 20.7ರಷ್ಟು ಮತ್ತು ನಿಗದಿಯಲ್ಲಿನ ಶೇಕಡಾ 26.36ರಷ್ಟು ಬಡ ಕುಟುಂಬಗಳ ಸದಸ್ಯರ ಒಂದು ತಿಂಗಳ ಊಟಕ್ಕೆ ಬೇಕಾಗುತ್ತದೆ. ಅದೇ ರೀತಿ 21 ರಿಂದ 30 ಕೆ.ಜಿಯಷ್ಟು ಅಕ್ಕಿಯ ಪ್ರಮಾಣವು ಕೊಂಕನಳ್ಳಿಯಲ್ಲಿನ ಶೇಕಡಾ 28.45ರಷ್ಟು ಕುಟುಂಬಗಳಿಗೆ ಮತ್ತು ನಿಗದಿಯಲ್ಲಿನ ಶೇಕಡಾ 34.55ರಷ್ಟು ಕುಟುಂಬಗಳಿಗೆ ಒಂದು ತಿಂಗಳಿಗೆ ಬೇಕಾಗಬಹುದು ಎಂದು ಮಾಹಿತಿಯನ್ನು ಹಂಚಿಕೊಂಡಿದ್ದಾರೆ. ಕೊಂಕನಳ್ಳಿಯಲ್ಲಿನ ಶೇಕಡಾ 35.3ರಷ್ಟು ಮತ್ತು ನಿಗದಿಯಲ್ಲಿನ ಶೇಕಡಾ 10.91ರಷ್ಟು ಬಡ ಕುಟುಂಬಗಳಿಗೆ 31 ರಿಂದ 40 ಕೆ.ಜಿಯಷ್ಟು ಅಕ್ಕಿಯ ಪ್ರಮಾಣದ ಅವಶ್ಯಕತೆ ಇರುತ್ತದೆ ಮತ್ತು ಕೊನೆಯದಾಗಿ 41 ಕೆ.ಜಿಗಿಂತ ಹೆಚ್ಚು ಅಕ್ಕಿಯು ಕೊಂಕನಳ್ಳಿಯಲ್ಲಿ ಶೇಕಡಾ 8.62ರಷ್ಟು ಮತ್ತು ನಿಗದಿಯಲ್ಲಿನ ಶೇಕಡಾ 10ರಷ್ಟು ಬಡ ಕುಟುಂಬಗಳಿಗೆ ಒಂದು ತಿಂಗಳಿಗೆ ಬೇಕಾಗುತ್ತದೆ ಎಂದು ಸಂಗ್ರಹಿಸಿದ ಮಾಹಿತಿಯಿಂದ ತಿಳಿದು ಬರುತ್ತದೆ. ಆದರೆ ಶಿವಕುಮಾರ ಸ್ವಾಮಿ (2012)ರವರ ಪ್ರಕಾರ ರಾಜ್ಯಮಟ್ಟ, ತಾಲೂಕ ಮಟ್ಟ ಮತ್ತು ಗ್ರಾಮದಲ್ಲಿ ಕಾರ್ಯ ನಿರ್ವಹಿಸುವ ನ್ಯಾಯಬೆಲೆ ಅಂಗಡಿಗಳ ಮೂಲಕ ವಿತರಿಸುವ ಆಹಾರ ಧಾನ್ಯಗಳ ವಿತರಣೆಯಲ್ಲಿ ಪಾರದರ್ಶಕತೆಯನ್ನು ಕಾಯ್ದುಕೊಳ್ಳುವಲ್ಲಿ ವಿಫಲತೆಯಾಗಿವೆ. ಇದನ್ನು ಈ ಕ್ಷೇತ್ರಕಾರ್ಯದ ಮೂಲಕ ಮಾಹಿತಿಯಿಂದ ತಿಳಿದು ಬರುತ್ತದೆ ಕೂಡ ಅದು ಹೇಗೆಂದರೆ ಕುಟುಂಬಗಳಿಗೆ ವಿತರಿಸುವ ಪ್ರಮಾಣದಲ್ಲಿ ಕಡಿತ ಮಾಡಿ ಕೊಡುವುದು ಮತ್ತು ತೂಕದಲ್ಲಿ ಕಡಿಮೆ ಮಾಡುವುದು ಕಂಡು ಬಂದಿರುತ್ತದೆ.

ಈ ಕೋಷ್ಟಕದಿಂದ ತಿಳಿದು ಬರುವುದೇನೆಂದರೆ ಕಲಬುರಗಿಯ ಕೊಂಕನಳ್ಳಿಯಲ್ಲಿನ ಗ್ರಾಮದಲ್ಲಿನ ಕುಟುಂಬಗಳಿಗೆ ಒಂದು ತಿಂಗಳಿಗೆ ಬೇಕಾಗುವ ಅಕ್ಕಿಯ ಪ್ರಮಾಣವು ಕೆ.ಜಿಗಳು ಹೆಚ್ಚಾದಂತೆ ಅವಶ್ಯಕತೆಯ ಪ್ರಮಾಣವು ಹೆಚ್ಚು ಹೆಚ್ಚಾಗಿರುವದು ಕಂಡುಬರುತ್ತದೆ. ಆದರೆ ಧಾರವಾಡದಲ್ಲಿನ ನಿಗದಿ ಗ್ರಾಮದಲ್ಲಿ ಶೇಕಡಾ 34.55ರಷ್ಟು ಕುಟುಂಬಗಳಿಗೆ 21 ರಿಂದ 30 ಕೆ.ಜಿಯಷ್ಟು ಒಂದು ತಿಂಗಳಿಗೆ ಬೇಕಾದರೆ ಕೊಂಕನಳ್ಳಿಯಲ್ಲಿ ಶೇಕಡಾ 35.3ರಷ್ಟು ಕುಟುಂಬಗಳಿಗೆ 31 ರಿಂದ 40 ಕೆ.ಜಿಯಷ್ಟು ಅಕ್ಕಿಯು ಒಂದು ತಿಂಗಳಿಗೆ ಬೇಕಾಗುತ್ತದೆ ಎಂದು ಗೊತ್ತಾಗುತ್ತದೆ.

**ಸರಕಾರದಿಂದ ವಿತರಣೆಯಾಗುವ ಅಕ್ಕಿಯ ಪ್ರಮಾಣ**

ಮಾಹಿತಿಯನ್ನು ಸಂಗ್ರಹಿಸುವಾಗ ಬಡತನ ರೇಖೆಯ ಕೆಳಗಿನ ಕುಟುಂಬಗಳಿಗೆ ಸರಕಾರದಿಂದ ಪ್ರತಿತಿಂಗಳು 30 ಕೆ.ಜಿಯಷ್ಟು ಅಕ್ಕಿಯ ವಿತರಣೆಯಾಗುತ್ತಿತ್ತು. ಆದರೆ

## ಕೋಷ್ಟಕ – 5.6

### ಕುಟುಂಬಗಳ ಅಕ್ಕಿಯ ಬೇಡಿಕೆ, ಪೂರೈಕೆ ಮತ್ತು ಕೊರತೆಯ ಪ್ರಮಾಣ ಪ್ರತಿಶತದಲ್ಲಿ

| ಕೆ.ಜಿ.ಯಲ್ಲಿ ಅಕ್ಕಿಯ ವಿಂಗಡಣೆ | ಕೊಂಕನಳ್ಳಿ (ಅಧ್ಯಯನಕ್ಕೆ ಆಯ್ಕೆಯಾದ ಒಟ್ಟು ಕುಟುಂಬಗಳ ಸಂಖ್ಯೆ–116) | | | ನಿಗದಿ (ಅಧ್ಯಯನಕ್ಕೆ ಆಯ್ಕೆಯಾದ ಒಟ್ಟು ಕುಟುಂಬಗಳ ಸಂಖ್ಯೆ–110) | | |
|---|---|---|---|---|---|---|
| | ಅವಶ್ಯಕತೆಯ ಪ್ರಮಾಣ ಪ್ರತಿಶತ | ಸರಕಾರದಿಂದ ದೊರಕುವ ಪ್ರಮಾಣ | ಕೊರತೆಯಾಗುವ ಪ್ರಮಾಣ | ಅವಶ್ಯಕತೆಯ ಪ್ರಮಾಣ | ಸರಕಾರದಿಂದ ದೊರಕುವ ಪ್ರಮಾಣ | ಕೊರತೆಯಾಗುವ ಪ್ರಮಾಣ |
| 10 ಕೆ.ಜಿ.ಗಿಂತ ಕಡಿಮೆ | 6.9 | 4.31 | 7.76 | 18.18 | 10 | 9.09 |
| 11 –20 ಕೆ.ಜಿ. | 20.7 | 23.28 | 50.00 | 26.36 | 25.45 | 33.64 |
| 21–30 ಕೆ.ಜಿ. | 28.4 | 60.34 | 23.28 | 34.55 | 50.91 | 30.00 |
| 31–40 ಕೆ.ಜಿ. | 35.3 | 12.07 | 13.79 | 10.91 | 13.64 | 19.09 |
| 41 ಕೆ.ಜಿ.ಗಿಂತ ಹೆಚ್ಚು | 8.6 | 0 | 5.17 | 10 | 0 | 8.18 |
| ಒಟ್ಟು | 100 | 100 | 100 | 100 | 100 | 100 |

ಮಾಹಿತಿ: ಕ್ಷೇತ್ರಕಾರ್ಯ

ಕಾಲಾನುಕ್ರಮದಲ್ಲಿ ಇದು ಬದಲಾವಣೆಗೆ ಒಳಪಟ್ಟು ಅನೇಕ ಬಾರಿ ಸರಕಾದಿಂದ ತಿದ್ದುಪಡಿ ಮಾಡಿ ಈಗ ಪ್ರಸ್ತುತವಾಗಿ ಕುಟುಂಬದ ಪ್ರತಿ ಸದಸ್ಯರ ಆಧಾರದ ಮೇಲೆ ಅಕ್ಕಿಯ ವಿತರಣೆಯನ್ನು ಮಾಡಲಾಗುತ್ತದೆ. ಆದ್ದರಿಂದ ಇಲ್ಲಿ ಕ್ಷೇತ್ರಕಾರ್ಯ ಮಾಡಿದ ಅವಧಿಯಲ್ಲಿ ಸರಕಾರದಿಂದ ಪಡೆದ ಅಕ್ಕಿಯ ಪ್ರಮಾಣವನ್ನು ಮಾತ್ರ ವಿಶ್ಲೇಷಣೆಯನ್ನು ಮಾಡಲಾಗಿದೆ.

ಸರಕಾರದ ಆದೇಶದಂತೆ ಎರಡು ಗ್ರಾಮಗಳಲ್ಲಿನ ಬಡತನ ರೇಖೆಯ ಕೆಳಗಿನ ಕುಟುಂಬಗಳಿಗೆ ಒಂದು ತಿಂಗಳಿಗೆ ಕೊಂಕನಳ್ಳಿಯಲ್ಲಿ ಶೇಕಡಾ 4.31ರಷ್ಟು ಮತ್ತು ನಿಗದಿಯಲ್ಲಿನ ಶೇಕಡಾ 10.00ರಷ್ಟು ಕುಟುಂಬಗಳಿಗೆ ಪ್ರತಿ ತಿಂಗಳು ಸರಕಾರದಿಂದ ಮಾನ್ಯತೆ ಹೊಂದಿದ ನ್ಯಾಯಬೆಲೆ ಅಂಗಡಿಯ ಮೂಲಕ 10 ಕೆ.ಜಿಗಿಂತ ಕಡಿಮೆ ಪ್ರಮಾಣದ ಅಕ್ಕಿಯನ್ನು ಪಡೆಯುತ್ತಿವೆ. ಕೊಂಕನಳ್ಳಿಯ ಶೇಕಡಾ 23.28ರಷ್ಟು ಕುಟುಂಬಗಳು ಮತ್ತು ನಿಗದಿಯಲ್ಲಿನ ಶೇಕಡಾ 25.45ರಷ್ಟು ಕುಟುಂಬಗಳಿಗೆ 11 ರಿಂದ 20 ಕೆ.ಜಿಯಷ್ಟು ಅಕ್ಕಿಯು ಪ್ರತಿತಿಂಗಳು ಸಿಗುತ್ತಿದೆ ಎಂದು ಮಾಹಿತಿಯಿಂದ ತಿಳಿದು ಬರುತ್ತದೆ. ಕೊಂಕನಳ್ಳಿಯಲ್ಲಿನ ಶೇಕಡಾ 60.34ರಷ್ಟು ಮತ್ತು ನಿಗದಿಯಲ್ಲಿನ ಶೇಕಡಾ 50.91ರಷ್ಟು ಕುಟುಂಬಗಳಿಗೆ ಪ್ರತಿ ತಿಂಗಳು ಸರಕಾರದಿಂದ 21 ರಿಂದ 30 ಕೆ.ಜಿಯಷ್ಟು ಅಕ್ಕಿಯು ದೊರಕುತ್ತಿದೆ. ಮತ್ತು ಶೇಕಡಾ 12.07ರಷ್ಟು ಕುಟುಂಬಗಳಿಗೆ ಕೊಂಕನಳ್ಳಿ ಮತ್ತು ಶೇಕಡಾ 13.64ರಷ್ಟು ಕುಟುಂಬಗಳಿಗೆ ನಿಗದಿಯಲ್ಲಿ ಪ್ರತಿತಿಂಗಳು 31 ರಿಂದ 40 ಕೆ.ಜಿಯಷ್ಟು ಅಕ್ಕಿಯು ಸರಕಾರದಿಂದ ಸಹಾಯಧನದ ರೂಪದಲ್ಲಿ ವಿತರಿಸಲಾಗುತ್ತಿದೆ. ಎರಡು ಗ್ರಾಮಗಳಲ್ಲಿನ ಹೆಚ್ಚಿನ ಬಡತನ ರೇಖೆಯ ಕೆಳಗಿನ ಕುಟುಂಬಗಳಿಗೆ ಅಂದರೆ ಶೇಕಡಾ 50ಕ್ಕಿಂತ ಹೆಚ್ಚಿನ ಕುಟುಂಬಗಳಿಗೆ ಪ್ರತಿ ತಿಂಗಳು 21 ರಿಂದ 30 ಕೆ.ಜಿಯಷ್ಟು ಅಕ್ಕಿಯು ಸರಬರಾಜು ಅಗುತ್ತಿದೆ ಎಂದು ಸಂಗ್ರಹಿಸಿದ ಮಾಹಿತಿಯಿಂದ ತಿಳಿದು ಬರುತ್ತದೆ. ಇನ್ನು ಕೊನೆಯ ವಿಂಗಡನೆಯಲ್ಲಿ ಯಾವುದೇ ಕುಟುಂಬಗಳು ಇರುವುದಿಲ್ಲ ಕಾರಣ ಪ್ರತಿತಿಂಗಳು ಸರಕಾರವು ಒಂದು ರೂಪಾಯಿಗೆ

ಒಂದು ಕೆ.ಜಿಯಂತೆ ಅಕ್ಕಿಯನ್ನು ವಿತರಿಸುತ್ತಿತ್ತು ಆದ್ದರಿಂದ ಆ ಗುಂಪಿನಲ್ಲಿ ಶೇಕಡಾ ಪ್ರತಿಶತ ಸೊನ್ನೆಯಾಗಿರುತ್ತದೆ. ಆದರೆ ಸರಕಾರವು ಕೊಡುತ್ತಿರುವ ಆಹಾರ ಧಾನ್ಯಗಳ ಹೊರತಾಗಿ ಕಡಿಮೆಯಾಗುವ ಪ್ರಮಾಣವನ್ನು ಮಾರುಕಟ್ಟೆಯಿಂದ ಹೆಚ್ಚಿನ ದರದಲ್ಲಿ ಖರೀದಿ ಮಾಡಿ ತಮ್ಮ ಜೀವನವನ್ನು ಸಾಗಿಸಬೇಕಾಗುತ್ತದೆ (ಚಂದ್ರ ಪೂಜಾರಿ, ಎಂ. (2017). ಅಧ್ಯಯನ ಪ್ರದೇಶದಲ್ಲಿಯೂ ಸಹ ಸರಕಾರವು ಕೊಟ್ಟರು ಕಡಿಮೆಯಾಗುವ ಮತ್ತು ಕೊಡದೆ ಇರುವ ಜೋಳವನ್ನು ಕುಟುಂಬಗಳು ಅನವಾರ್ಯವಾಗಿ ಮುಕ್ತ ಮಾರುಕಟ್ಟೆಯಿಂದ ಖರೀದಿ ಮಾಡುತ್ತವೆ ಎಂದು ಮಾಹಿತಿಯಿಂದ ತಿಳಿದು ಬರುತ್ತದೆ.

**ಕುಟುಂಬಗಳಿಗೆ ಕೊರತೆಯಾಗುವ ಅಕ್ಕಿಯ ಪ್ರಮಾಣ**

ಪ್ರತಿತಿಂಗಳು ಸರಕಾರವು ಸಲಭದ ದರದಲ್ಲಿ ವಿತರಿಸುವ ಅಕ್ಕಿಯು ಕೆಲವೊಂದು ಕುಟುಂಬಗಳಿಗೆ ಸಾಕಾಗುವುದಿಲ್ಲ, ಆದ್ದರಿಂದ ಅನಿವಾರ್ಯವಾಗಿ ಆ ಕುಟುಂಬಗಳು ಗ್ರಾಮದ ಅಂಗಡಿಗಳಲ್ಲಿ ಅಥವಾ ಪಟ್ಟಣದ ಅಂಗಡಿಗಳ ಮಾರುಕಟ್ಟೆಯ ದರದಲ್ಲಿ ಖರೀದಿಸಿ ಕೊಂಡುಕೊಳ್ಳುತ್ತಾರೆ. ಇದರಿಂದ ಅವರ ಆದಾಯದ ಅರ್ಧಕ್ಕಿಂತ ಹೆಚ್ಚಿನ ಪಾಲು ಅಹಾರದ ಪದಾರ್ಥಗಳನ್ನು ಮಾರುಕಟ್ಟೆಯಿಂದ ಖರೀದಿ ಮಾಡಲು ಬಳಸುತ್ತಾರೆ ಎಂದು ಅನೇಕ ಅಧ್ಯಯನಗಳಿಂದ ತಿಳಿದುಬರುತ್ತದೆ. ಆದ್ದರಿಂದ ಅಧ್ಯಯನ ಕೈಗೊಂಡ ಎರಡು ಗ್ರಾಮಗಳಲ್ಲಿನ ಬಡ ಕುಟುಂಬಗಳು ಒಂದು ತಿಂಗಳಿಗೆ ಆಯ್ಕೆಯಾದ ಕುಟುಂಬಗಳಿಗೆ ಪ್ರತಿತಿಂಗಳು ಎಷ್ಟು ಪ್ರಮಾಣದಷ್ಟು ಅಕ್ಕಿಯ ಕೊರತೆಯಾಗುತ್ತಿದೆ ಎಂದು ಈ ಮುಂದೆ ತಿಳಿದುಕೊಳ್ಳುವ ಒಂದು ಪ್ರಯತ್ನವನ್ನು ಮಾಡಲಾಗಿದೆ.

ಕಲಬುರಗಿ ಜಿಲ್ಲೆಯ ಕೊಂಕನಳ್ಳಿಯ ಗ್ರಾಮದಲ್ಲಿನ ಶೇಕಡಾ 7.76ರಷ್ಟು ಬಡ ಕುಟುಂಬಗಳಿಗೆ ಮತ್ತು ಧಾರವಾಡ ಜಿಲ್ಲೆಯ ನಿಗದಿಯಲ್ಲಿನ ಶೇಕಡಾ 9.09ರಷ್ಟು ಬಡ ಕುಟುಂಬಗಳಿಗೆ 10 ಕೆ.ಜಿ.ಯಷ್ಟು ಅಕ್ಕಿಯ ಕೊರತೆಯಾದರೆ ಶೇಕಡಾ 50ರಷ್ಟು ಕುಟುಂಬಗಳು ಕೊಂಕನಳ್ಳಿಯಲ್ಲಿ ಮತ್ತು ಶೇಕಡಾ 33.64ರಷ್ಟು ಕುಟುಂಬಗಳಿಗೆ ನಿಗದಿಯಲ್ಲಿ ಸುಮಾರು 11 ರಿಂದ 20 ಕೆ.ಜಿ.ಯಷ್ಟು ಅಕ್ಕಿಯ ಕೊರತೆ ಉಂಟಾಗುತ್ತದೆ ಎಂದು ಕೋಷ್ಟಕದಿಂದ ತಿಳಿದು ಬರುತ್ತದೆ. ಶೇಕಡಾ 23.28ರಷ್ಟು ಮತ್ತು 30ರಷ್ಟು ಬಡ ಕುಟುಂಬಗಳಿಗೆ 21 ರಿಂದ 30 ಕೆ.ಜಿಯಷ್ಟು ಅಕ್ಕಿಯು ಅನುಕ್ರಮವಾಗಿ ಕೊಂಕನಳ್ಳಿ ಮತ್ತು ನಿಗದಿಯಲಿನ್ಲ ಬಡತನ ರೇಖೆಯ ಕೆಳಗಿನ ಕುಟುಂಬಗಳಿಗೆ ಕೊರತೆಯಾಗುತ್ತಿದೆ ಎಂದು ಕಂಡುಕೊಳ್ಳಲಾಗಿದೆ. ಮುಂದುವರೆದು ಹೇಳುವುದಾದರೆ ಇನ್ನು 31 ರಿಂದ 40 ಕೆ.ಜಿಯಷ್ಟು ಅಕ್ಕಿಯು ಪ್ರತಿ ತಿಂಗಳು ಬೇಕಾಗುತ್ತದೆ ಎಂದು ಕೊಂಕನಳ್ಳಿನಲ್ಲಿನ ಶೇಕಡಾ 13.79ರಷ್ಟು ಮತ್ತು ನಿಗದಿಯಲ್ಲಿನ ಶೇಕಡಾ 19.09ರಷ್ಟು ಕುಟುಂಬಗಳಿಗೆ ಕೊರತೆಯಾಗುತ್ತಿರುವದು ತಿಳಿದು ಬಂದಿರುತ್ತದೆ. ತಲಾ ಶೇಕಡಾ 5.17ರಷ್ಟು ಕೊಂಕನಳ್ಳಿ ಮತ್ತು ಶೇಕಡಾ 8.18ರಷ್ಟು ನಿಗದಿಯಲ್ಲಿನ ಕುಟುಂಬಗಳಿಗೆ 41 ಕೆ.ಜಿ.ಗಿಂತ ಹೆಚ್ಚಿನ

ಪ್ರಮಾಣದಲ್ಲಿ ಅಕ್ಕಿಯು ಬೇಕಾಗುತ್ತದೆ ಎಂದು ಸಂಗ್ರಹಿಸಿದ ಮಾಹಿತಿಯಿಂದ ತಿಳಿದುಬರುತ್ತದೆ. ಬಡತನ ರೇಖೆಯ ಕೆಳಗಿರುವ ಕುಟುಂಬಗಳಿಗೆ ಪ್ರತಿತಿಂಗಳು ಸಾರ್ವಜನಿಕ ವಿತರಣಾ ವ್ಯವಸ್ಥೆಯಿಂದ ದೊರಕುವ ಅಕ್ಕಿಯ ಪ್ರಮಾಣದ ಬಗ್ಗೆ ಕೋಷ್ಟಕ 5 ರಲ್ಲಿ ವಿವರಿಸಲಾಗಿದೆ. ಪ್ರತಿತಿಂಗಳು ಸಾರ್ವಜನಿಕ ವಿತರಣಾ ವ್ಯವಸ್ಥೆಯಿಂದ ದೊರಕುವ ಅವಶ್ಯಕತೆಇರುವ ಮತ್ತು ಕೊರತೆಯಾಗುವ ಅಕ್ಕಿಯ ಪ್ರಮಾಣವನ್ನು ಕುಟುಂಬದ ಸದಸ್ಯರು ಕೊಟ್ಟಿರುವ ಮಾಹಿತಿಯ ನಿಖರತೆಯ ಮೇಲೆ ಲೆಕ್ಕ ಹಾಕಲಾಗಿದೆ. ಕುಟುಂಬಗಳಿಗೆ ಬೇಕಾಗುವ ಅಕ್ಕಿಯ ಪ್ರಮಾಣವು ಆಯಾ ಕುಟುಂಬಗಳು ಹೊಂದಿರುವ ಸದಸ್ಯರ ಮೇಲೆ ಅವಲಂಬಿತವಾಗಿರುತ್ತದೆ ಎಂದು ಗೊತ್ತಾಗುತ್ತದೆ.

**ಕುಟುಂಬಗಳಿಗೆ ಗೋಧಿಯ ಅವಶ್ಯಕತೆ**

ಅಧ್ಯಯನ ಮಾಡಿದ ಗ್ರಾಮಗಳಲ್ಲಿನ ಬಡತನ ರೇಖೆಯ ಕೆಳಗಿರುವ ಕುಟುಂಬಗಳಿಗೆ ಪ್ರತಿತಿಂಗಳು ಬೇಕಾಗುವ, ಸರಕಾರದಿಂದ ಸಿಗುವ ಮತ್ತು ಕುಟುಂಬಗಳಿಗೆ ಕೊರತೆಯಾಗುವ ಗೋಧಿಯ ಪ್ರಮಾಣವನ್ನು ಕೋಷ್ಟಕ 5.7 ರಲ್ಲಿ ವಿಶ್ಲೇಷಿಸಲಾಗಿದೆ. ಗೋಧಿಯ ಪ್ರಮಾಣವನ್ನು ಒಟ್ಟು ನಾಲ್ಕು ಗುಂಪುಗಳಾಗಿ ವಿಂಗಡಿಸಲಾಗಿದೆ ಅಂದರೆ 1 ರಿಂದ 4 ಕೆ.ಜಿ.ಗಿಂತ ಕಡಿಮೆ, 5 ರಿಂದ 10 ಕೆ.ಜಿ, 11 ರಿಂದ 15 ಕೆ.ಜಿ. ಮತ್ತು 15 ರಿಂದ 20 ಕೆ.ಜಿಗಿಂತ ಹೆಚ್ಚು. ಆದರೆ ಸರಕಾರದಿಂದ ಮಾತ್ರ ಪ್ರತಿ ಬಡತನ ರೇಖೆಯ ಕೆಳಗಿನ ಕುಟುಂಬಗಳಿಗೆ ಎಲ್ಲ ಕುಟುಂಬಗಳಿಗೆ ಸರಿ ಸಮವಾಗಿ ಪ್ರತಿತಿಂಗಳಿಗೆ 10 ಕೆ.ಜಿ. ಗೋಧಿಯನ್ನು ನ್ಯಾಯಬೆಲೆಯ ಅಂಗಡಿಗಳ ಮೂಲಕ ವಿತರಿಸಲಾಗುತ್ತದೆ.

ಕೋಷ್ಟಕ 5.7ರಲ್ಲಿ ಕೊಟ್ಟಿರುವಂತೆ ಕಲಬುರಗಿಯ ಕೊಂಕನಳ್ಳಿ ಗ್ರಾಮದಲ್ಲಿ ಶೇಕಡಾ 25.86ರಷ್ಟು ಕುಟುಂಬಗಳಿಗೆ ಪ್ರತಿತಿಂಗಳು 1 ರಿಂದ 4 ಕೆ.ಜಿಯಷ್ಟು ಗೋಧಿಯ ಅವಶ್ಯಕತೆ ಇದ್ದರೆ ಧಾರವಾಡದ ನಿಗದಿ ಗ್ರಾಮದಲ್ಲಿನ ಶೇಕಡಾ 28ರಷ್ಟು ಕುಟುಂಬಗಳಿಗೆ ನಾಲ್ಕಕ್ಕಿಂತ ಕಡಿಮೆ ಕೆ.ಜಿಯ ಗೋಧಿಯ ಅವಶ್ಯಕತೆ ಇದೆ ಎಂದು ಮಾಹಿತಿಯನ್ನು ಹಂಚಿಕೊಂಡಿದ್ದಾರೆ. ಅದೇ ರೀತಿಯಾಗಿ ಶೇಕಡಾ 55.2ರಷ್ಟು ಕೊಂಕನಳ್ಳಿ ಮತ್ತು ಶೇಕಡಾ 26.4ರಷ್ಟು ನಿಗದಿಯಲ್ಲಿನ ಕುಟಂಬಗಳಿಗೆ 5 ರಿಂದ 10 ಕೆ.ಜಿಯಷ್ಟು ಗೋಧಿಯು ಪ್ರತಿತಿಂಗಳು ಬೇಕಾಗುತ್ತದೆ ಎಂದು ಕೋಷ್ಟಕದಿಂದ ಗೊತ್ತಾಗುತ್ತದೆ. ಮುಂದುವರೆದು ಶೇಕಡಾ 11.2ರಷ್ಟು ಮತ್ತು 33.6ರಷ್ಟು ಕುಟುಂಬಗಳಿಗೆ ಪ್ರತಿತಿಂಗಳು 11 ರಿಂದ 15 ಕೆ.ಜಿಯಷ್ಟು ಗೋಧಿಯು ಅನುಕ್ರಮವಾಗಿ ಸಂಶೋಧನೆ ಕೈಗೊಂಡ ಕೊಂಕನಳ್ಳಿ ಮತ್ತು ನಿಗದಿಯಲ್ಲಿನ ಕುಟುಂಬಗಳಿಗೆ ಅವಶ್ಯಕತೆ ಇರುವದು ಮಾಹಿತಿಯಿಂದ ಸ್ಪಷ್ಟವಾಗುತ್ತದೆ. ಶೇಕಡಾ 7.8ರಷ್ಟು ಕೊಂಕನಳ್ಳಿ ಮತ್ತು 11.8ರಷ್ಟು ನಿಗದಿಯಲ್ಲಿನ ಕುಟುಂಬಗಳಿಗೆ ಪ್ರತಿತಿಂಗಳು 15 ರಿಂದ 20 ಕೆ.ಜಿಯಷ್ಟು ಗೋಧಿಯು ಪ್ರತಿತಿಂಗಳು ಬೇಕಾಗುತ್ತದೆ. ಅತಿ ಹೆಚ್ಚಿನ ಗೋಧಿಯ ಅವಶ್ಯಕತೆಯು ಧಾರವಾಡದ ನಿಗದಿ ಗ್ರಾಮದಲ್ಲಿನ ಕುಟುಂಬಗಳಿಗೆ ಬೇಕಾಗುತ್ತದೆ ಅಂದರೆ ಶೇಕಡಾ 33.6ರಷ್ಟು ಕುಟುಂಬಗಳಿಗೆ ಪ್ರತಿತಿಂಗಳು 11 ರಿಂದ 15

## ಕೋಷ್ಟಕ – 5.7

### ಕುಟುಂಬಗಳ ಗೋಧಿಯ ಬೇಡಿಕೆ, ಪೂರೈಕೆ ಮತ್ತು ಕೊರತೆಯ ಪ್ರಮಾಣದ ಶೇಕಡಾವಾರು

| ಕೆ.ಜಿ.ಯಲ್ಲಿ ಗೋಧಿಯ ವಿಂಗಡಣೆ | ಕೊಂಕನಳ್ಳಿ (ಅಧ್ಯಯನಕ್ಕೆ ಆಯ್ಕೆಯಾದ ಒಟ್ಟು ಕುಟುಂಬಗಳ ಸಂಖ್ಯೆ–116) | | | ನಿಗದಿ (ಅಧ್ಯಯನಕ್ಕೆ ಆಯ್ಕೆಯಾದ ಒಟ್ಟು ಕುಟುಂಬಗಳ ಸಂಖ್ಯೆ–110) | | |
|---|---|---|---|---|---|---|
| | ಅವಶ್ಯಕತೆಯ ಪ್ರಮಾಣ | ಸರಕಾರದಿಂದ ದೊರಕುವ ಪ್ರಮಾಣ | ಕೊರತೆಯಾಗುವ ಪ್ರಮಾಣ | ಅವಶ್ಯಕತೆಯ ಪ್ರಮಾಣ | ಸರಕಾರದಿಂದ ದೊರಕುವ ಪ್ರಮಾಣ | ಕೊರತೆಯಾಗುವ ಪ್ರಮಾಣ |
| 1–5 ಕೆ.ಜಿ. | 25.86 | 9.48 | 25.86 | 28.00 | 7.00 | 14.00 |
| 6–10 ಕೆ.ಜಿ. | 55.2 | 90.5 | 47.4 | 26.4 | 90.0 | 65.5 |
| 11 –15 ಕೆ.ಜಿ. | 11.2 | 0.0 | 13.8 | 33.6 | 2.7 | 11.8 |
| 15–20 ಕೆ.ಜಿ. ಹೆಚ್ಚು | 7.8 | 0.0 | 12.9 | 11.8 | 0.0 | 9.1 |
| ಒಟ್ಟು | 100.0 | 100.0 | 100.0 | 100.0 | 100.0 | 100.0 |

ಮಾಹಿತಿ: ಕ್ಷೇತ್ರಕಾರ್ಯ

ಕೆ.ಜಿಯಷ್ಟು ಗೋಧಿಯ ಅವಶ್ಯಕತೆ ಇರುತ್ತದೆ ಎಂದು ಕುಟುಂಬದ ಸದಸ್ಯರು ಮಾಹಿತಿಯನ್ನು ಹಂಚಿಕೊಂಡಿದ್ದಾರೆ.

ಮಾಹಿತಿಯನ್ನು ಕಲೆಹಾಕುವಾಗ ಗೋಧಿಯ ಅವಶ್ಯಕತೆಯ ಬಗ್ಗೆ ಕೇಳುತ್ತಿದ್ದಾಗ ಕೊಂಕನಳ್ಳಿಯಲ್ಲಿನ ಸುಮಾರು 60 ರಿಂದ 65 ವಯಸ್ಸಿನ ಹೆಣ್ಣುಮಗಳು ಗೋಧಿಯ ಅವಶ್ಯಕತೆ ಕುರಿತು ಈ ಕೆಳಗಿನಂತೆ ಹೇಳಿದ್ದರು. ನಮ್ಮಕಡೆ ಬೀಸಿಲು ಹೆಚ್ಚಾಗಿರುವದರಿಂದ ಗೋಧಿಯು ಅಷ್ಟಾಗಿ ಬೇಕಾಗುವಿದ್ದಿಲ್ಲ ಅದಕ್ಕೆ ಬದಲಾಗಿ ನಮ್ಮ ದಿನಾಲೂ ಊಟ ಮಾಡಲು ಬೇಕಾಗಿರುವ ಜೋಳ ಕೊಟ್ಟರೆ ಬಹಳ ಉತ್ತಮ. ಗೋಧಿಯಿಂದ ಮಾಡಿದ ಆಹಾರ ತಿಂದರೆ ಸೆಕೆ ಜಾಸ್ತಿ ಮತ್ತು ಗೋಧಿಯ ಅವಶ್ಯಕತೆಯು ತಿಂಗಳಿಗೆ ಒಮ್ಮೆ ಅಥವಾ ಮೂರು ಸಲ ಬರಬಹುದು ಅದು ಅಮವಾಸ್ಯೆ, ಹುಣ್ಣಿಮೆ ಮತ್ತು ಮನೆಯಲ್ಲಿ ಯಾವುದೇ ಕಾರಣ ಇದ್ದರೆ ಸ್ವಲ್ಪ ಹೆಚ್ಚಿಗೆ ಬೇಕಾಗುತ್ತದೆ ಎಂದು ತಮ್ಮ ಅಭಿಪಾಯವನ್ನು ಹಂಚಿಕೊಂಡರು. ಇನ್ನು ಧಾರವಾಡದಲ್ಲಿನ ಹವಾಗುಣ ಕಲಬುರಗಿಯ ವಾತಾವರಣಕ್ಕೂ ವ್ಯತ್ಯಾಸವಿರುವುದರಿಂದ ಧಾರವಾಡದಲ್ಲಿಯ ನಿಗದಿ ಗ್ರಾಮದಲ್ಲಿನ ಬಡತನ ರೇಖೆಯ ಕೆಳಗಿರುವ ಕುಟುಂಬಗಳಿಗೆ ಹೆಚ್ಚಿನ ಪ್ರಮಾಣದಲ್ಲಿ ಗೋಧಿಯು ಬೇಕಾಗಬಹುದು ಎಂದು ಹೇಳಬಹುದು.

### ಸರಕಾರದಿಂದ ವಿತರಿಸುವ ಗೋಧಿಯ ಪ್ರಮಾಣ

ಪ್ರತಿ ತಿಂಗಳು ಸರಕಾರವು ಬಡತನ ರೇಖೆಯ ಕೆಳಗಿರುವ ಕುಟುಂಬಗಳಿಗೆ ಅನೇಕ ನ್ಯಾಯ ಬೆಲೆಯ ಅಂಗಡಿಗಳ ಮೂಲಕ ಕಡಿಮೆ ಬೆಲೆಯಲ್ಲಿ ಮತ್ತು ಕೆಲವೊಂದು ಪದಾರ್ಥಗಳನ್ನು ಉಚಿತವಾಗಿ ವಿತರಿಸುತ್ತಿದೆ. ಕೋಷ್ಟಕ 1ರಲ್ಲಿ ವಿಶ್ಲೇಷಿಸಿದಂತೆ ಸರಕಾರದಿಂದ ಪ್ರತಿತಿಂಗಳು ರಾಜ್ಯದಲ್ಲಿರುವ ಎಲ್ಲಾ ಬಡ ಕುಟುಂಬಗಳಿಗೆ ಪ್ರತಿ ತಿಂಗಳು 10 ಕೆ.ಜಿಯಂತೆ ವಿತರಿಸಲಾಗುತ್ತದೆ. ಆದರೆ ವಾಸ್ತವವಾಗಿ ವಿತರಿಸುವ ಪ್ರಮಾಣದಲ್ಲಿ ಹೆಚ್ಚು ಕಡಿಮೆಯಾಗುತ್ತಿದೆ. ಕಲಬುರಗಿಯ ಕೊಂಕನಳ್ಳಿ ಗ್ರಾಮದಲ್ಲಿನ ಬಡ ಕುಟುಂಬಗಳಿಗೆ ಪ್ರತಿತಿಂಗಳು ಶೇಕಡಾ 9.48ರಷ್ಟು ಕುಟುಂಬಗಳಿಗೆ 1 ರಿಂದ 5ಕೆ.ಜಿಯಷ್ಟು ಗೊಧಿಯ ಪ್ರಮಾಣ ದೊರಕುತ್ತಿದೆ ಆದರೆ ಧಾರವಾಡದ ನಿಗದಿಯಲ್ಲಿನ

ಶೇಕಡಾ 7ರಷ್ಟು ಕುಟುಂಬಗಳಿಗೆ ಅಷ್ಟೇ ಪ್ರಮಾಣದ ಗೋಧಿಯು ಸರಕಾರದಿಂದ ಸಹಾಯಧನದ ರೂಪದಲ್ಲಿ ವಿತರಿಸಲಾಗುತ್ತಿದೆ. ಅಂದರೆ ಸರಕಾರವು ನಿಗದಿ ಮಾಡಿದ್ದ 10 ಕೆ.ಜಿಯಲ್ಲಿ ಕೇವಲ 1 ರಿಂದ 5 ಕೆ.ಜಿಯಷ್ಟು ಮಾತ್ರ ಕೊಡಲಾಗುತ್ತಿದೆ. ಕೇಳಿದರೆ ನ್ಯಾಯಬೆಲೆಯ ಅಂಗಡಿಯವರು ಈ ತಿಂಗಳು ಜಿಲ್ಲಾ ಮತ್ತು ತಾಲೂಕಿನ ಗೋದಾಮಿನಿಂದ ಕಡಿಮೆ ಪ್ರಮಾಣದ ಗೋಧಿ ಬಿಡುಗಡೆಯಾಗಿದೆ ಎಂದು ಹೇಳುತ್ತಾರೆ ಎಂದು ಮಾಹಿತಿಯನ್ನು ಕಲೆಹಾಕುವ ಸಮಯದಲ್ಲಿ ಹೇಳುತ್ತಿರುವದು ಕಂಡು ಬಂದಿದೆ. ಅದೇ ಊರಿನ ಅಥವಾ ಗ್ರಾಮದ ಪ್ರಭಾವಶಾಲಿ ವ್ಯಕ್ತಿ ಅಥವಾ ಗ್ರಾಮಪಂಚಾಯತಿಯ ಯಾವುದೇ ಸದಸ್ಯರು ಹೋಗಿ ಹೆಚ್ಚಿನ ಪ್ರಮಾಣದ ಗೋಧಿಯ ಅವಶ್ಯಕತೆ ಇದೆ ಎಂದು ತಿಳಿಸಿದಾಗ ಅವರು ಮಾತು ಮುಗಿಸುವ ಮೊದಲೇ ಅವರಿಗೆ ಸರಕಾರದಿಂದ ನಿಗದಿಯಾದ ಪ್ರಮಾಣಕ್ಕಿಂತ ಹೆಚ್ಚಿಗೆ ಗೋಧಿಯನ್ನು ಹಂಚಿಕೆ ಮಾಡುತ್ತಾರೆ.

ಮುಂದುವರೆದು ಕೊಂಕನಳ್ಳಿಯಲ್ಲಿನ ಶೇಕಡಾ 90.5ರಷ್ಟು ಮತ್ತು ನಿಗದಿಯಲ್ಲಿನ ಶೇಕಡಾ 90ರಷ್ಟು ಕುಟುಂಬಗಳಿಗೆ ಸರಕಾರದಿಂದ 6 ರಿಂದ 10 ಕೆ.ಜಿಯಷ್ಟು ಗೋಧಿಯು ಸರಕಾರದಿಂದ ದೊರಕಿದೆ ಎಂದು ಕುಟುಂಬದ ಸದಸ್ಯರು ಮಾಹಿತಿಯನ್ನು ಹಂಚಿಕೊಂಡಿದ್ದಾರೆ. ಆದರೆ ಧಾರವಾಡದ ನಿಗದಿಯಲ್ಲಿನ ಶೇಕಡಾ 2.7ರಷ್ಟು ಕುಟುಂಬಗಳಿಗೆ ಸರಕಾರದಿಂದ ನಿಗದಿಯಾದ 10 ಕೆ.ಜಿ.ಗಿಂತ ಹೆಚ್ಚಿನ ಪ್ರಮಾಣದಲ್ಲಿ ಗೋಧಿಯ ಹಂಚಿಕೆಯಾಗಿರುವುದು ಕೋಷ್ಟಕದಿಂದ ತಿಳಿದುಬರುತ್ತದೆ. ಆದರೆ ಕಲಬುರಗಿಯ ಕೊಂಕನಳ್ಳಿಯಲ್ಲಿ ಈ ರೀತಿಯಾದ ಮಾಹಿತಿಯ ಯಾವುದೇ ಕುಟುಂಬದಿಂದ ಬಂದಿಲ್ಲವೆಂದು ಕೋಷ್ಟಕದಿಂದ ಬಹಳ ಸ್ಪಷ್ಟವಾಗುತ್ತದೆ.

**ಕುಟುಂಬಗಳಿಗೆ ಗೋಧಿಯ ಅವಶ್ಯಕತೆ**

ಸರಕಾರವು ಪ್ರತಿತಿಂಗಳು ರಾಜ್ಯದ ಎಲ್ಲ ಜಿಲ್ಲೆಗಳಲ್ಲಿರುವ ಬಡತನ ರೇಖೆಯ ಕೆಳಗಿರುವ ಕುಟುಂಬಗಳಿಗೆ 10 ಕೆ.ಜಿಯಂತೆ ಗೋಧಿಯನ್ನು ವಿತರಿಸುತ್ತಿದೆ. ಸರಕಾರವು ವಿತರಿಸುವ 10 ಕೆ.ಜಿ. ಗೋಧಿಯು ಕೆಲವೊಂದು ಕುಟುಂಬಗಳಿಗೆ ಸಾಕಾಗುವುದಿಲ್ಲ. ಆದ್ದರಿಂದ ಕೆಳಗಿನ ಕೋಷ್ಟಕದಲ್ಲಿ ಅಧ್ಯಯನ ಕೈಗೊಂಡ ಎರಡು ಗ್ರಾಮಗಳಲ್ಲಿನ ಬಡತನ ರೇಖೆಯ ಕೆಳಗಿರುವ ಎಷ್ಟು ಕುಟುಂಬಗಳಿಗೆ ಯಾವ ಪ್ರಮಾಣದಲ್ಲಿ ಗೋಧಿಯ ಕೊರತೆಯಾಗುತ್ತಿದೆ ಎಂದು ವಿಶ್ಲೇಷಿಸಲಾಗಿದೆ.

ಕಲಬುರಗಿಯ ಕೊಂಕನಳ್ಳಿಯಲ್ಲಿನ ಶೇಕಡಾ 25.86ರಷ್ಟು ಮತ್ತು ಧಾರವಾಡದ ನಿಗದಿಯಲ್ಲಿನ ಶೇಕಡಾ 14ರಷ್ಟು ಬಡ ಕುಟುಂಬಗಳಿಗೆ 1 ರಿಂದ 5 ಕೆ.ಜಿಯಷ್ಟು ಗೋಧಿಯ ಕೊರತೆಯಾಗುತ್ತಿದೆ ಎಂದು ತಿಳಿದು ಬರುತ್ತದೆ. ಅದೇ ರೀತಿಯಾಗಿ ಕೊಂಕನಳ್ಳಿಯಲ್ಲಿನ ಶೇಕಡಾ 47.4ರಷ್ಟು ಮತ್ತು ನಿಗದಿಯಲ್ಲಿನ ಶೇಕಡಾ 65.5ರಷ್ಟು ಕುಟುಂಬಗಳಿಗೆ 6 ರಿಂದ 10 ಕೆ.ಜಿಯಷ್ಟು ಗೋಧಿಯು ಕೊರತೆಯಾಗುತ್ತಿದೆ ಎಂದು ಕೋಷ್ಟಕದಿಂದ ತಿಳಿದುಬರುತ್ತದೆ. ಮುಂದುವರೆದು ಕೊಂಕನಳ್ಳಿಯಲ್ಲಿನ ಶೇಕಡಾ 13.8ರಷ್ಟು ಮತ್ತು ಧಾರವಾಡದ ನಿಗದಿಯಲ್ಲಿ

ಶೇಕಡಾ 11.8ರಷ್ಟು ಕುಟುಂಬಗಳಿಗೆ 11 ರಿಂದ 15 ಕೆ.ಜಿಯಷ್ಟು ಗೋಧಿಯು ಪ್ರತಿತಿಂಗಳು ಕೊರತೆಯಾಗುತ್ತಿದೆ ಎಂದು ಕುಟುಂಬದ ಸದಸ್ಯರು ಮಾಹಿತಿಯನ್ನು ಕಲೆಹಾಕುವ ಸಮಯದಲ್ಲಿ ಹೇಳಿರುವದು ಕೋಷ್ಟಕದಿಂದ ತಿಳಿದುಬರುತ್ತದೆ. ಅನುಕ್ರಮವಾಗಿ ಕೊಂಕನಳ್ಳಿ ಮತ್ತು ನಿಗದಿಯಲ್ಲಿ ಶೇಕಡಾ 12.9 ಮತ್ತು 9.1ರಷ್ಟು ಬಡ ಕುಟುಂಬಗಳಿಗೆ 15 ರಿಂದ 20 ಕೆ.ಜಿಯಷ್ಟು ಗೋಧಿಯ ಕೊರತೆ ಇರುವುದು ಕೋಷ್ಟಕದಿಂದ ಬಹಳ ಸ್ಪಷ್ಟವಾಗಿ ತಿಳಿದು ಬರುತ್ತದೆ.

ಪ್ರತಿ ತಿಂಗಳು ಅಮವಾಸ್ಯೆ ಮತ್ತು ಹುಣ್ಣಿಮೆಯ ದಿನ ಮತ್ತು ಹಬ್ಬ ಹರಿದಿನಗಳಲ್ಲಿ ಏನಾದರೂ ಸಹಿ ತಿನಿಸುಗಳನ್ನು ಮಾಡ ಬೇಕಾದರೆ ಸಕ್ಕರೆಯ ಅವಶ್ಯಕತೆಯಷ್ಟೇ ಗೋಧಿಯ ಅವಶ್ಯಕತೆಯು ಬಹಳಷ್ಟು ಇರುತ್ತದೆ ಎಂದು ಹೇಳಿರುತ್ತಾರೆ. ಸಾಲ ಮಾಡಿಯಾದರೂ ಹಬ್ಬ ಹರಿದಿನಗಳನ್ನು ಆಚರಿಸುವದು ಕೂಡ ಬಡತನದ ಮುಂದುವರಿಕೆಗೆ ಕಾರಣವಾಗಿದೆ (ಚಂದ್ರ ಪೂಜಾರಿ, 2014). ಗೋಧಿ ಮತ್ತು ಸಕ್ಕರೆ ಇಲ್ಲದೇ ಯಾವ ಸಹಿ ತಿನಿಸುಗಳನ್ನು ಮಾಡಲು ಬರುವುದಿಲ್ಲ. ಆದ್ದರಿಂದ ಪ್ರತಿ ತಿಂಗಳು ವಿತರಿಸುವ 10 ಕೆ.ಜಿಯಷ್ಟು ಇರುವ ಗೋಧಿಯ ಪ್ರಮಾಣವನ್ನು ಹೆಚ್ಚಿಸಬೇಕೆಂದು ತಮ್ಮ ಅಭಿಪ್ರಾಯಗಳನ್ನು ಹಂಚಿಕೊಂಡಿದ್ದಾರೆ. ತೌಲನಿಕವಾಗಿ ಹೇಳುವುದಾದರೆ ಧಾರವಾಡದಲ್ಲಿನ ನಿಗದಿ ಗ್ರಾಮದಲ್ಲಿ ಹೆಚ್ಚಿನ ಕುಟುಂಬಗಳಿಗೆ ಗೋಧಿಯ ಕೊರತೆಯನ್ನು ಕಾಣಬಹುದು ಆದರೆ ಕಲಬುರಗಿಯಲ್ಲಿನ ಕೊಂಕನಳ್ಳಿ ಗ್ರಾಮದಲ್ಲಿ ಇದು ಸ್ವಲ್ಪ ಕಡಿಮೆ ಇರುವುದು ಕಂಡುಬರುತ್ತದೆ. ಈಗಾಗಲೇ ಹೇಳಿದ ಹಾಗೆ ಇದಕ್ಕೆ ಮೂಲ ಕಾರಣ ಆಯಾ ಪ್ರದೇಶದಲ್ಲಿನ ಹವಾಮಾನದ ಏರಿಳಿತವಾಗಿರಬಹುದು.

ತೌಲನಿಕವಾಗಿ ನೋಡುವುದಾದರೆ ಧಾರವಾಡದಲ್ಲಿನ ಗ್ರಾಮದಲ್ಲಿನ ಶೇಕಡಾ 37ರಷ್ಟು ಕುಟುಂಬಗಳಿಗೆ ಮಾತ್ರ ಸರಕಾರವು ವಿತರಿಸುವ 10 ಕೆ.ಜಿ ಗೋಧಿಯು ಸಾಕಾಗುತ್ತದೆ ಮತ್ತು ಇನ್ನುಳಿದ ಶೇಕಡಾ 63ರಷ್ಟು ಕುಟುಂಬಗಳು ಕೊರತೆಯನ್ನು ಅನುಭವಿಸುತ್ತಿವೆ ಎಂದು ತಿಳಿಸಿರುತ್ತಾರೆ. ಇದು ಕಲಬುರಗಿಯಲ್ಲಿನ ಗ್ರಾಮಕ್ಕಿಂತ ತೀರ ಭಿನ್ನವಾಗಿದೆ. ಇದಕ್ಕೆ ಆಯಾ ಪ್ರದೇಶದಲ್ಲಿನ ವಾತಾವರಣವೂ ಕಾರಣವಾಗಿರಲೂಬಹುದು. ಅಂದರೆ ಧಾರವಾಡದ ನಿಗದಿ ಗ್ರಾಮವು ಈಗಾಗಲೇ ಹೇಳಿದ ಹಾಗೆ ವಾತಾವರಣದಲ್ಲಿನ ಅತೀ ತಂಪು ಮತ್ತು ಮಲೆನಾಡಿನ ಪ್ರದೇಶವಾಗಿದೆ ಮತ್ತು ಇದಕ್ಕೆ ತೀರ ಭಿನ್ನವಾದ ವಾತಾವರಣವನ್ನು ನಾವು ಕಲಬುರಗಿಯ ಕೊಂಕನಳ್ಳಿಯಲ್ಲಿ ಕಾಣಬಹುದಾಗಿದೆ. ಅಂದರೆ ತೀರ ಅತಿಯಾದ ಬಿಸಿಲು ಮತ್ತು ಮಳೆಯ ಕೊರತೆಯು ಅತಿಯಾಗಿರುತ್ತದೆ. ಆದ್ದರಿಂದ ಕಲಬುರಗಿಯಲ್ಲಿನ ಕುಟುಂಬಗಳಿಗೆ ಅತಿ ಹೆಚ್ಚಿನ ಪ್ರಮಾಣದಲ್ಲಿ ಗೋಧಿಯ ಬದಲಾಗಿ ಜೋಳದ ಅವಶ್ಯಕತೆ ಹೆಚ್ಚಾಗಿರುತ್ತದೆ ಮತ್ತು ಗೋಧಿಯ ಪ್ರಮಾಣವು ಅತಿ ಕಡಿಮೆಯ ಪ್ರಮಾಣದಲ್ಲಿ ಬೇಕಾಗುತ್ತದೆ ಎಂದು ಊಹಿಸಬಹುದು. ಇದಕ್ಕೆ ಮತ್ತೊಂದು ಕಾರಣವೇನೆಂದರೆ ಗೋಧಿಯನ್ನು ಹೆಚ್ಚಾಗಿ ಸೇವಿಸಿದರೆ ಉಷ್ಣ ಎಂಬ ನಂಬಿಕೆ ಈ ಭಾಗದ ಜನರಲ್ಲಿದೆ ಆದ್ದರಿಂದ ದೇಹಕ್ಕೆ ತಂಪನ್ನು ಒದಗಿಸುವ ಜೋಳವು ಹೆಚ್ಚಿನ ಜನರ

ಆಯ್ಕೆಯಾಗಿದೆ. ಆದರೆ ಪ್ರತಿ ತಿಂಗಳು ಬೇಕಾಗುವ ಗೋಧಿಯ ಪ್ರಮಾಣವು ಋತುಮಾನಕ್ಕೆ ತಕ್ಕಂತೆ ಬದಲಾವಣೆಯಾಗುತ್ತದೆ ಎಂದು ಉಲ್ಲೇಖಿಸುತ್ತಾರೆ. ಕೊಂಕನಳ್ಳಿಯಲ್ಲಿ ಒಂದು ಬಡತನ ರೇಖೆಯ ಕೆಳಗಿರುವ ಕುಟುಂಬದಿಂದ ಮಾಹಿತಿಯನ್ನು ಕಲೆ ಹಾಕುತ್ತಿರುವಾಗ. ಆ ಮನೆಯ ಕಟ್ಟೆಯ ಮೇಲೆ ವಯಸ್ಸಾದ ಪುರುಷನೊಬ್ಬನು ಕುಳಿತು ಮಾಹಿತಿಯನ್ನು ಸಂಗ್ರಹಿಸುವ ಎಲ್ಲಾ ವಿಷಯಗಳನ್ನು ಕೇಳಿಸಿಕೊಳ್ಳುತ್ತಿದ್ದರು. ಗೋಧಿಯ ವಿಷಯವನ್ನು ಕೇಳುತ್ತಿರುವಾಗ ಹೀಗೆನ್ನುತ್ತಾರೆ *"ಬ್ಯಾಸಿಗಿದ್ದಾಗ ಗರ್ಥಮಿ ಬಹಳ ಇರುತ್ತಾದಲ್ಲರಿ ಅದಕ್ಕ ಸ್ವಲ್ಪ ಕಡಿಮಿ ಗೋಧಿ ಇಡಿತಾವ್ಹ".* ಈ ಮೇಲಿನ ಅಂಶದಿಂದ ತಿಳಿದು ಬರುವುದೇನೆಂದರೆ ಬೇಸಿಗೆಯಲ್ಲಿ ಬಿಸಿಲು ಹೆಚ್ಚಿನ ಪ್ರಮಾಣದಲ್ಲಿ ಇರುತ್ತದೆ ಆದ್ದರಿಂದ ಕಡಿಮೆ ಪ್ರಮಾಣದ ಗೋಧಿಯು ಬೇಕಾಗುತ್ತದೆ.

**ಕುಟುಂಬಗಳಿಗೆ ಸಕ್ಕರೆಯ ಅವಶ್ಯಕತೆ**

ಕೋಷ್ಟಕ 8ರಲ್ಲಿ ಅಧ್ಯಯನ ಕೈಗೊಂಡ ಎರಡು ಜಿಲ್ಲೆಗಳ ಗ್ರಾಮಗಳಲ್ಲಿನ ಬಡತನ ರೇಖೆಯ ಕೆಳಗಿರುವ ಕುಟುಂಬಗಳು ಪ್ರತಿತಿಂಗಳು ಕುಟುಂಬಗಳಿಗೆ ಬೇಕಾಗುವ ಸಕ್ಕರೆಯ ಪ್ರಮಾಣವನ್ನು ವಿಶ್ಲೇಷಿಸಲಾಗಿದೆ. ಅಧ್ಯಯನ ಕೈಗೊಂಡ ಗ್ರಾಮಗಳಲ್ಲಿನ ಬಡತನ ರೇಖೆಯ ಕೆಳಗಿರುವ ಕುಟುಂಬಗಳು ಪ್ರತಿನಿತ್ಯ ಜೀವನಕ್ಕೆ ಬೇಕಾದ ಸಕ್ಕರೆಯ ಪ್ರಮಾಣದ ಬಗ್ಗೆ ವಿಚಾರಿಸಿ ಕೇಳಿದಾಗ ಈ ಮುಂದೆ ಹೇಳಿದಂತೆ ಅವಶ್ಯಕತೆಗಳನುಸಾರವಾಗಿ ಮಾಹಿತಿಯನ್ನು ಹಂಚಿಕೊಂಡಿದ್ದಾರೆ. ಇಲ್ಲಿಯೂ ಕೂಡ ಅಕ್ಕಿ ಮತ್ತು ಗೋಧಿಯನ್ನು ಗುಂಪುಗಳಾಗಿ ವಿಂಗಡಿಸಿದಂತೆ ಸಕ್ಕರೆಯ ಪ್ರಮಾಣವಾಗಿ ಒಟ್ಟು ಐದು ಗುಂಪುಗಳಾಗಿ ವಿಂಗಡಿಸಿ ವಿಶ್ಲೇಷಣೆಯನ್ನು ಮಾಡಲಾಗಿದೆ. ಎರಡು ಗ್ರಾಮಗಳಲ್ಲಿ ಆಯ್ಕೆಯಾದ ಕುಟುಂಬಗಳನ್ನು ಕುಟುಂಬಗಳಿಗೆ ಅವಶ್ಯವಿರುವ, ಸರಕಾರದಿಂದ ಪಡೆದ ಮತ್ತು ಆ ಕುಟುಂಬಗಳಿಗೆ ಕೊರತೆಯಾಗುವ ಪ್ರಮಾಣದ ಮೇಲೆ ಗುಂಪಿನ ಪ್ರಕಾರ ಕುಟುಂಬಗಳನ್ನು ವಿಂಗಡಿಸಲಾಗಿದೆ.

ಕಲಬುರಗಿಯ ಕೊಂಕನಳ್ಳಿ ಗ್ರಾಮದಲ್ಲಿನ ಶೇಕಡಾ 16.4ರಷ್ಟು ಕುಟುಂಬಗಳಿಗೆ ಪ್ರತಿತಿಂಗಳು 1 ಕೆ.ಜಿ.ಯಷ್ಟು ಸಕ್ಕರೆಯ ಅವಶ್ಯಕತೆ ಇದ್ದರೆ ಧಾರವಾಡ ಜಿಲ್ಲೆಯ ನಿಗದಿ ಗ್ರಾಮದಲ್ಲಿನ 19.1ರಷ್ಟು ಕುಟುಂಬಗಳಿಗೂ ಸಹ 1 ಕೆ.ಜಿಯಷ್ಟು ಸಕ್ಕರೆಯ ಅವಶ್ಯಕತೆ ಇರುವದು ಕೋಷ್ಟಕದಿಂದ ಕಂಡು ಬರುತ್ತದೆ. ಶೇಕಡಾ 29.3ರಷ್ಟು ಮತ್ತು 35.5ರಷ್ಟು ಕುಟುಂಬಗಳಿಗೆ 2 ಕೆ.ಜಿಯಷ್ಟು ಸಕ್ಕರೆಯು ಬೇಕಾಗುತ್ತದೆ ಎಂದು ಅನುಕ್ರಮವಾಗಿ ಕೊಂಕನಳ್ಳಿ ಮತ್ತು ನಿಗದಿಯಲ್ಲಿನ ಬಡತನ ರೇಖೆಯ ಕೆಳಗಿನ ಕುಟುಂಬಗಳ ಸದಸ್ಯರು ಮಾಹಿತಿಯನ್ನು ಹಂಚಿಕೊಂಡಿದ್ದಾರೆ. ಅದೇ ರೀತಿಯಾಗಿ ಕೊಂಕನಳ್ಳಿಯಲ್ಲಿ ಶೇಕಡಾ 25.9ರಷ್ಟು ಕುಟುಂಬಗಳು ಮತ್ತು ನಿಗದಿಯಲ್ಲಿ ಶೇಕಡಾ 34.5ರಷ್ಟು ಕುಟುಂಬಗಳಿಗೆ ಸುಮಾರು 3 ಕೆ.ಜಿಯಷ್ಟು ಸಕ್ಕರೆಯು ಪ್ರತಿತಿಂಗಳು ಬೇಕಾಗುತ್ತದೆ ಎಂದು ಹೇಳಿರುತ್ತಾರೆ. ಮುಂದುವರೆದು ಕೊಂಕನಳ್ಳಿಯಲ್ಲಿ ಶೇಕಡಾ 23.3ರಷ್ಟು

ಮತ್ತು ನಿಗದಿಯಲ್ಲಿ ಶೇಕಡಾ 10.9ರಷ್ಟು ಕುಟುಂಬಗಳಿಗೆ ಸುಮಾರು 4 ಕೆ.ಜಿ.ಯಷ್ಟು ಸಕ್ಕರೆಯು ತಿಂಗಳಿಗೆ ಬೇಕಾಗುತ್ತದೆ. ಶೇಕಡಾ 5.2ರಷ್ಟು ಕುಟುಂಬಗಳು ಕೊಂಕನಳ್ಳಿ ಮತ್ತು ಶೇಕಡಾ 10ರಷ್ಟು ನಿಗದಿಯಲ್ಲಿನ ಕುಟುಂಬಗಳಿಗೆ ಪ್ರತಿತಿಂಗಳು 5 ಕೆ.ಜಿ.ಯಷ್ಟು ಬೇಕಾಗುತ್ತದೆ ಎಂದು ಕೋಷ್ಟಕದಿಂದ ತಿಳಿದು ಬರುತ್ತದೆ.

ಕೋಷ್ಟಕ 8ರಲ್ಲಿ ಉಲ್ಲೇಖಿಸಿದಂತೆ ಬಡತನ ರೇಖೆಯ ಕೆಳಗಿರುವ ಕುಟುಂಬಗಳಿಗೆ ಬೇಕಾಗುವ ಸಕ್ಕರೆಯ ಪ್ರಮಾಣವನ್ನು ವಿಶ್ಲೇಷಿಸಿದ ನಂತರ ಬಡತನ ರೇಖೆಯ ಕೆಳಗಿರುವ ಕುಟುಂಬಗಳಿಗೆ ಸರಕಾರದಿಂದ ದೊರಕುವ ಸಕ್ಕರೆಯ ಪ್ರಮಾಣವನ್ನು ವಿವರಿಸಲಾಗಿದೆ. ಅಧ್ಯಯನಕ್ಕೆ ಆಯ್ಕೆಮಾಡಿಕೊಂಡ ಬಡತನ ರೇಖೆಯ ಕೆಳಗಿರುವ ಎಲ್ಲಾ ಕುಟುಂಬಗಳಿಗೆ ಸರಕಾರದ ನಿಯಮದ ಪ್ರಕಾರ ಕೇವಲ 1 ಕೆ.ಜಿ ಸಕ್ಕರೆಯನ್ನು ಮಾತ್ರ ವಿತರಿಸಲಾಗುತ್ತಿದೆ. ಒಂದು ಪ್ರಮುಖವಾದ ಅಂಶವೆಂದರೆ ಮಾಹಿತಿಯನ್ನು ಕಲೆಹಾಕುವಾಗ ಕುಟುಂಬದ ಸದಸ್ಯರು ತಮ್ಮ ಅನಿಸಿಕೆಗಳನ್ನು ಹೇಳಿಕೊಳ್ಳುತ್ತಿದ್ದರು. ಅವುಗಳನ್ನು ಈ ಮುಂದಿನ ಭಾಗದಲ್ಲಿ ವಿವರಿಸಲಾಗಿದೆ.

ಕ್ಷೇತ್ರಕಾರ್ಯದ ಸಮಯದಲ್ಲಿ ಬಡತನ ರೇಖೆಯ ಕೆಳಗಿನ ಕುಟುಂಬಗಳಿಂದ ಮಾಹಿತಿಯನ್ನು ಕಲೆಹಾಕುವಾಗ ಅನೇಕ ಜನರು ತೀವ್ರವಾದ ಅಸಮಾಧಾನವನ್ನು ವ್ಯಕ್ತಪಡಿಸಿದ್ದಾರೆ. ಏಕೆಂದರೆ ಪ್ರತಿತಿಂಗಳು 1 ಅಮವಾಸ್ಯೆ, 1 ಹುಣ್ಣಿಮೆ ಮತ್ತು ಒಂದು ಹಬ್ಬಗಳು ಬರುವುದರಿಂದ ಆ ದಿನದಲ್ಲಿ ಒಂದು ತರಹದ ಸಿಹಿ ತಿನಿಸುಗಳನ್ನು ಮಾಡುತ್ತಾರೆ ಅದರಲ್ಲಿ ವಿಶೇಷವಾಗಿ ಉತ್ತರ ಕರ್ನಾಟಕದಲ್ಲಿ ಗ್ರಾಮೀಣ ಭಾಗದಲ್ಲಿ ಅನೇಕ ಕುಟುಂಬಗಳು ಹೋಳಿಗೆಯನ್ನು ಮಾಡುತ್ತಾರೆ. ಒಂದು ವೇಳೆ ಹೋಳಿಗೆ ಇಲ್ಲದಿದ್ದರೆ ಕನಿಷ್ಟ ಪಕ್ಷ ಒಂದು ಸಿಹಿ ಪದಾರ್ಥವನ್ನಾದರೂ ಮಾಡಲೇಬೇಕು ಎಂದು ಹೇಳಿರುತ್ತಾರೆ. ಒಂದು ವೇಳೆ ಮನೆಗೆ ಯಾರಾದರೂ ಅತಿಥಿಗಳು ಬಂದರೆ ಮೊದಲು ನೀರು ಕೊಟ್ಟು ನಂತರದಲ್ಲಿ ಚಹಾವನ್ನು ಕೊಟ್ಟು ಉಪಚರಿಸುವ ಪದ್ಧತಿ ಜಾರಿಯಲ್ಲಿರುತ್ತದೆ. ಇದಲ್ಲದೆ ಕುಟುಂಬಗಳಲ್ಲಿ ಆಗಾಗ ಜರುಗುವ ಕಾರ್ಯಕ್ರಮಗಳಲ್ಲಿಯೂ ಸಹ ಏನಾದರೂ ಸಿಹಿ ಪದಾರ್ಥಗಳನ್ನು ಮಾಡಬೇಕಾಗುತ್ತದೆ ಅದಕ್ಕೂ ಸಹ ಸಕ್ಕರೆಯ ಅವಶ್ಯಕತೆ ಇರುತ್ತದೆ. ಇದನ್ನು ಮಾಡಬೇಕಾದರೆ ಕನಿಷ್ಟ 5 ರಿಂದ 8 ಕೆ.ಜಿ.ಯವರೆಗೆ ಸಕ್ಕರೆಯ ಅವಶ್ಯಕತೆ ಇರುತ್ತದೆ. ಅಲ್ಲದೆ ಪ್ರತಿನಿತ್ಯ ಮನೆಗಳಿಗೆ ಅತಿಥಿಗಳು ಬಂದರೆ ಅವರಿಗೆ ಉಪಚರಿಸಲು ಕನಿಷ್ಟ ಪಕ್ಷ ಒಂದು ಕಪ್ ಚಹಾವನ್ನು ಕುಡಿಯಲು ಕೊಡಬೇಕಾದರೆ ಸಕ್ಕರೆಯ ಅವಶ್ಯಕತೆ ತುಂಬಾ ಇರುವುದರಿಂದ ಸರಕಾರವು ವಿತರಿಸುವ ಒಂದು ಕೆ.ಜಿ. ಸಕ್ಕರೆಯು ***'ಹಸಿದ ಹೊಟ್ಟೆಗೆ ಅರೆಕಾಸಿನ ಮಜ್ಜಿಗೆ'*** ಕೊಟ್ಟಂತಾಗುತ್ತದೆ ಎಂದು ಅನೇಕ ಕುಟುಬಗಳ ಸದಸ್ಯರು ತಮ್ಮ ಅಭಿಪ್ರಾಯಗಳನ್ನು ವ್ಯಕ್ತಪಡಿಸುತ್ತಿದ್ದರು. ಅಂದರೆ ಆ ಕಡೆ ಪೂರ್ತಿಯಾಗಿ ಹೊಟ್ಟೆಯು ತುಂಬುವುದಿಲ್ಲ ಅಥವ ಪೂರ್ತಿಯಾಗಿ ಉಪವಾಸ ಇರಲೂ ಆಗುವುದಿಲ್ಲ ಎಂಬರ್ಥದಲ್ಲಿ ಹೇಳಿರುತ್ತಾರೆ.

## ಕೋಷ್ಟಕ – 5.8
## ಕುಟುಂಬಗಳಿಗೆ ಬೇಕಾಗುವ, ಪೂರೈಕೆ ಮತ್ತು ಕೊರತೆಯಾಗುವ ಸಕ್ಕರೆಯ ಪ್ರಮಾಣ ಶೇಕಡವಾರು

| ಕೆ.ಜಿ.ಯಲ್ಲಿ ಸಕ್ಕರೆಯ ವಿಂಗಡಣೆ | ಕೊಂಕನಳ್ಳಿ (ಅಧ್ಯಯನಕ್ಕೆ ಆಯ್ಕೆಯಾದ ಒಟ್ಟು ಕುಟುಂಬಗಳ ಸಂಖ್ಯೆ–116) | | | ನಿಗದಿ (ಅಧ್ಯಯನಕ್ಕೆ ಆಯ್ಕೆಯಾದ ಒಟ್ಟು ಕುಟುಂಬಗಳ ಸಂಖ್ಯೆ–110) | | |
|---|---|---|---|---|---|---|
| | ಅವಶ್ಯಕತೆಯ ಪ್ರಮಾಣ | ಸರಕಾರದಿಂದ ದೊರಕುವ ಪ್ರಮಾಣ | ಕೊರತೆಯಾಗುವ ಪ್ರಮಾಣ | ಅವಶ್ಯಕತೆಯ ಪ್ರಮಾಣ | ಸರಕಾರದಿಂದ ದೊರಕುವ ಪ್ರಮಾಣ | ಕೊರತೆಯಾಗುವ ಪ್ರಮಾಣ |
| 1 ಕೆ.ಜಿ. | 16.4 | 95.7 | 31.9 | 19.1 | 92.7 | 11.8 |
| 2 ಕೆ.ಜಿ. | 29.3 | 3.4 | 25.0 | 35.5 | 2.7 | 30.0 |
| 3 ಕೆ.ಜಿ. | 25.9 | 0.9 | 26.7 | 34.5 | 3.6 | 27.3 |
| 4 ಕೆ.ಜಿ. | 23.3 | 0.0 | 9.5 | 10.9 | 0.9 | 20.9 |
| 5 ಕೆ.ಜಿ.ಗಿಂತ ಹೆಚ್ಚು | 5.2 | 0.0 | 6.9 | 10.0 | 0.0 | 10.0 |
| ಒಟ್ಟು | 100.0 | 100.0 | 100.0 | 110.0 | 100.0 | 100.0 |

ಮಾಹಿತಿ: ಕ್ಷೇತ್ರಕಾರ್ಯ

### ಸರಕಾರದಿಂದ ವಿತರಿಸುವ ಸಕ್ಕರೆಯ ಪ್ರಮಾಣ

ಸರಕಾರದ ನಿಯಮದಂತೆ ಅಧ್ಯಯನ ಕೈಗೊಂಡ ಎರಡು ಗ್ರಾಮಗಳಲ್ಲಿರುವ ಬಡತನ ರೇಖೆಯ ಕೆಳಗಿರುವ ಕುಟುಂಬಗಳಿಗೆ ಶೇಕಡಾ 90ಕ್ಕಿಂತ ಹೆಚ್ಚಿನ ಪ್ರಮಾಣದಲ್ಲಿ ಪ್ರತಿತಿಂಗಳಿಗೆ 1 ಕೆ.ಜಿಯಂತೆ ಸಕ್ಕರೆಯನ್ನು ಪಡೆದಿರುವದು ಕೋಷ್ಟಕದಿಂದ ತಿಳಿದುಬರುತ್ತದೆ. ಕೇವಲ ಶೇಕಡಾ 3.4ರಷ್ಟು ಕೊಂಕನಳ್ಳಿಯಲ್ಲಿನ ಕುಟುಂಬಗಳಿಗೆ ಮತ್ತು ಶೇಕಡಾ 2.7ರಷ್ಟು ನಿಗದಿಯಲ್ಲಿನ ಕುಟುಂಬಗಳಿಗೆ 2 ಕೆ.ಜಿಯಷ್ಟು ಸಕ್ಕರೆಯು ದೊರಕುತ್ತಿದೆ. ಆದರೆ ಈ ಪ್ರಮಾಣವು ಸರಕಾರದಿಂದ ನಿಗದಿಯಾಗಿಲ್ಲ ಆದರೂ ಸಹ ಕುಟುಂಬಗಳು ಪಡೆಯುತ್ತಿರುವದು ಕಂಡುಬರುತ್ತದೆ. ಮುಂದುವರೆದು ಕೊಂಕನಳ್ಳಿಯಲ್ಲಿ ಶೇಕಡಾ 0.9ರಷ್ಟು ಕುಟುಂಬಗಳಿಗೆ ಮತ್ತು ನಿಗದಿಯಲ್ಲಿನ ಶೇಕಡಾ 3.6ರಷ್ಟು ಕುಟುಂಬಗಳಿಗೆ ಪ್ರತಿತಿಂಗಳಿಗೆ 3 ಕೆ.ಜಿಯಷ್ಟು ಸಕ್ಕರೆಯು ದೊರಕುತ್ತಿದೆ. ಸರಕಾರದಿಂದ ಒಂದು ಕೆ.ಜಿಯಷ್ಟು ಸಕ್ಕರೆಯ ದೊರಕುತ್ತಿದ್ದರೂ ಸಹ ಕುಟುಂಬಗಳಿಗೆ ಸಾಕಷ್ಟು ಪ್ರಮಾಣದಲ್ಲಿ ಸಕ್ಕರೆಯ ಕೊರತೆಯಾಗುತ್ತಿರುವದರ ಮಾಹಿತಿಯನ್ನು ಮುಂದಿನ ಭಾಗದಲ್ಲಿ ನೋಡಬಹುದಾಗಿದೆ. ಈ ರೀತಿಯಾಗಿ ಸರಕಾರದಿಮದ ವಿತರಿಸುವ 1 ಕೆ.ಜಿ ಸಕ್ಕರೆಯಲ್ಲಿ ಸಹ ತೂಕದಲ್ಲಿ ಕಡಿಮೆಯಾಗಿ 800 ರಿಂದ 900 ಕಿಲೋಗ್ರಾಂವರೆಗೆ ಮಾತ್ರ ಬಡ ಕುಟುಂಬಗಳಿಗೆ ಸಿಗುತ್ತದೆ ಎಂದು ಅನೇಕ ಕುಟುಂಬಗಳ ಸದಸ್ಯರು ಮಾಹಿತಿಯನ್ನು ಪಡೆಯುತ್ತಿದ್ದಾಗ ತಮ್ಮ ಅಭಿಪ್ರಾಯವನ್ನು ವ್ಯಕ್ತಪಡಿಸುತ್ತಿದ್ದರು.

### ಕೊರತೆಯಾಗುವ ಸಕ್ಕರೆಯ ಪ್ರಮಾಣ

ಪ್ರತಿತಿಂಗಳು ಬಡತನ ರೇಖೆಯ ಕೆಳಗಿರುವ ಕುಟುಂಬಗಳಿಗೆ ಸರಕಾರವು ವಿತರಿಸುವ ಸಕ್ಕರೆಯ ಹೊರತಾಗಿಯೂ ಸಹ ಹೆಚ್ಚಿನ ಪ್ರಮಾಣದಲ್ಲಿನ ಕುಟುಂಬಗಳಿಗೆ ಇದು ಸಾಕಾಗುವುದಿಲ್ಲ

ಎಂದು ಕೋಷ್ಟಕದಿಂದ ತಿಳಿದು ಬರುತ್ತದೆ. ಕೊಂಕನಳ್ಳಿಯಲ್ಲಿನ ಶೇಕಡಾ 31.9 ಮತ್ತು ನಿಗದಿಯಲ್ಲಿನ ಶೇಕಡಾ 11.8ರಷ್ಟು ಕುಟುಂಬಗಳಿಗೆ ಪ್ರತಿತಿಂಗಳು 1 ಕೆ.ಜಿ.ಯಷ್ಟು ಸಕ್ಕರೆಯ ಪ್ರಮಾಣ ಕಡಿಮೆಯಾಗುತ್ತಿದೆ ಎಂದು ಮಾಹಿತಿಯನ್ನು ಹಂಚಿಕೊಂಡಿದ್ದಾರೆ. ಶೇಕಡಾ 25ರಷ್ಟು ಮತ್ತು ಶೇಕಡಾ 30ರಷ್ಟು ಕುಟುಂಬಗಳಿಗೆ ಅನುಕ್ರಮವಾಗಿ ಕೊಂಕನಳ್ಳಿ ಮತ್ತು ನಿಗದಿಯಲ್ಲಿನ ಕುಟುಂಬಗಳಿಗೆ ಪ್ರತಿತಿಂಗಳು 2 ಕೆ.ಜಿಯಷ್ಟು ಸಕ್ಕರೆಯ ಕೊರತೆಯಾಗುತ್ತಿದೆ. ಶೇಕಡಾ 26.7 ಮತ್ತು 27.3ರಷ್ಟು ಕುಟುಂಬಗಳಿಗೆ ಕೊಂಕನಳ್ಳಿ ಮತ್ತು ನಿಗದಿಯಲ್ಲಿರುವ ಬಡ ಕುಟುಂಬಗಳಿಗೆ ತಿಂಗಳಿಗೆ 3 ಕೆ.ಜಿಯಷ್ಟು ಸಕ್ಕರೆಯ ಅವಶ್ಯಕತೆ ಇರುವುದು ತಿಳಿದುಬರುತ್ತದೆ. ಕೊಂಕನಳ್ಳಿಯಲ್ಲಿ ಶೇಕಡಾ 9.5 ಮತ್ತು ನಿಗದಿಯಲ್ಲಿ 20.5ರಷ್ಟು ಕುಟುಂಬಗಳಿಗೆ ಪ್ರತಿತಿಂಗಳು 4ಕೆ.ಜಿಯಷ್ಟು ಸಕ್ಕರೆಯು ಬೇಕಾಗುತ್ತದೆ ಎಂದು ಕೋಷ್ಟಕದಿಂದ ತಿಳಿದುಬರುತ್ತದೆ. ಶೇಕಡಾ 6.9 ಮತ್ತು ಶೇಕಡಾ 10ರಷ್ಟು ಕುಟುಂಬಗಳಿಗೆ ಪ್ರತಿತಿಂಗಳಿಗೆ 5ಕ್ಕಿಂತ ಹೆಚ್ಚಿನ ಪ್ರಮಾಣದ ಸಕ್ಕರೆಯು ಕೊರತೆಯಾಗುತ್ತಿದೆ ಎಂದು ಕೋಷ್ಟಕದಿಂದ ಸ್ಪಷ್ಟವಾಗುತ್ತದೆ. ಮಾಹಿತಿಯನ್ನು ಕಲೆಹಾಕುವ ಸಮಯದಲ್ಲಿ ಒಂದು ವೇಳೆ ಸಕ್ಕರೆಯು ಕಡಿಮೆಯಾದಾಗ ಏನು ಮಾಡುತ್ತೀರಿ ಎಂದು ಸಂಶೋಧಕರು ಮರು ಪ್ರಶ್ನೆ ಹಾಕಿ ವಿಚಾರಿಸಿದಾಗ ಗ್ರಾಮಗಳಲ್ಲಿರುವ ಅಂಗಡಿಗಳಿಂದ ಖರೀದಿ ಮಾಡಿ ತರುತ್ತೇವೆ ಎಂದು ಹೇಳಿರುತ್ತಾರೆ. ಮತ್ತೆ ಕೆಲವರು ಒಂದು ವೇಳೆ ಸಕ್ಕರೆ ಕಡಿಮೆಯಾದಾಗ ಅದಕ್ಕೆ ಪೂರಕವಾಗಿ ಸಕ್ಕರೆಗಿಂತ ಕಡಿಮೆ ಬೆಲೆಯಿರುವ ಬೆಲ್ಲವನ್ನು ತಂದು ಬೇಕಾದಾಗ ಬಳಸುತ್ತೇವೆ ಮತ್ತು ಸಕ್ಕರೆಯನ್ನು ಕೇವಲ ಮನೆಗೆ ಯಾರಾದರೂ ಬಂದಾಗ ಉಪಚರಿಸಲು ಚಹಾಕ್ಕಾಗಿ ಮಾತ್ರ ಬಳಸುತ್ತೇವೆ ಎಂದು ಮಾಹಿತಿಯನ್ನು ಹಂಚಿಕೊಂಡಿರುತ್ತಾರೆ.

**ಸೀಮೆ ಎಣ್ಣೆಯ ಬೇಡಿಕೆ, ಪೂರೈಕೆ ಮತ್ತು ಕೊರತೆಯ ಪ್ರಮಾಣ ಲೀಟರ್‌ಗಳಲ್ಲಿ**

ಇಲ್ಲಿಯವರೆಗೆ ಕುಟುಂಬಗಳ ದಿನನಿತ್ಯದ ಆಹಾರಕ್ಕೆ ಬೇಕಾಗುವ ಅಕ್ಕಿ, ಸಕ್ಕರೆ, ಗೋಧಿ ಮತ್ತು ಜೋಳದ ಬಗ್ಗೆ ತಿಳಿದುಕೊಳಲಾಯಿತು. ಇನ್ನು ಮುಂದೆ ಇವುಗಳಷ್ಟೆ ಬಹಳ ಪ್ರಮುಖವಾದ ಇನ್ನೊಂದು ಪದಾರ್ಥ ಅಥವಾ ವಸ್ತುವಾದ ಸೀಮೆ ಎಣ್ಣೆಯನ್ನು ರಾಜ್ಯ ಸರಕಾರವು ಸಾರ್ವಜನಿಕ ವಿತರಣಾ ವ್ಯವಸ್ಥೆಯಡಿಯಲ್ಲಿ ಎಲ್ಲಾ ಜಿಲ್ಲೆಗಳಲ್ಲಿರುವ ನ್ಯಾಯಬೆಲೆ ಅಂಗಡಿಗಳ ಮೂಲಕ ಸರಬರಾಜು ಮಾಡುತ್ತಿದೆ. ಕೋಷ್ಟಕ 9ರಲ್ಲಿ ಅಧ್ಯಯನ ಮಾಡಿದ ಗ್ರಾಮಗಳಲ್ಲಿನ ಬಡತನ ರೇಖೆಯ ಕೆಳಗಿರುವ ಕುಟುಂಬಗಳಿಗೆ ಪ್ರತಿತಿಂಗಳು ಸರಕಾರದಿಂದ ದೊರಕುವ ಸೀಮೆ ಎಣ್ಣೆಯ ಪ್ರಮಾಣವನ್ನು ಲೀಟರ್‌ಗಳಲ್ಲಿ ವಿಶ್ಲೇಷಿಸಲಾಗಿದೆ. ರಾಜ್ಯದಲ್ಲಿ ಸೀಮೆ ಎಣ್ಣೆಯನ್ನು ರಾತ್ರಿಯಲ್ಲಿ ಮನೆಯಲ್ಲಿ ದೀಪವನ್ನಾಗಿ ಅಥವಾ ಅಡುಗೆ ಮಾಡುವ ಸಲುವಾಗಿ ಮತ್ತು ಇನ್ನಿತರೆ ಕಾರಣಕ್ಕಾಗಿ ಬಳಸಲಾಗುತ್ತದೆ.

ಅಕ್ಕಿ, ಸಕ್ಕರೆ ಮತ್ತು ಗೋಧಿಯನ್ನು ವಿತರಿಸುವ ಹಾಗೆ ಸರಕಾರವು ಬಡತನ ರೇಖೆಯ ಕೆಳಗಿನ ಕುಟುಂಬಗಳಿಗೆ ಮನೆಯಲ್ಲಿ ದೀಪವನ್ನು ಹಚ್ಚಲು ಪ್ರತಿ ಕುಟುಂಬಗಳಿಗೆ ಸೀಮೆ

ಎಣ್ಣೆಯನ್ನು ಪಡಿತರ ಚೀಟಿಯ ಮೂಲಕ ಆಯಾಯ ಗ್ರಾಮಗಳಲ್ಲಿ ಮತ್ತು ನಗರ ಪ್ರದೇಶಗಳಲ್ಲಿರುವ ನ್ಯಾಯ ಬೆಲೆ ಅಂಗಡಿಗಳ ಮೂಲಕ ವಿತರಿಸಲಾಗುತ್ತದೆ. ಆದರೆ ಅಕ್ಕಿ, ಸಕ್ಕರೆ ಮತ್ತು ಗೋಧಿಯ ವಿತರಣೆಯಲ್ಲಿ ಪ್ರತಿ ತಿಂಗಳಿಗೆ ಇಷ್ಟೇ ಪ್ರಮಾಣ ಎಂದು ಸರಕಾರವು ನಿಗದಿ ಮಾಡಿದೆ ಆದರೆ ಸೀಮೆ ಎಣ್ಣೆಯಯಲ್ಲಿ ಎಷ್ಟು ಪ್ರಮಾಣವನ್ನು ವಿತರಿಸಬೇಕೆಂದು ಸರಕಾರ ನಿಗದಿ ಮಾಡಿಲ್ಲ ಎಂದು ಹೇಳಬಹುದು. ಏಕೆಂದರೆ ಸಂಶೋಧಕರು ಅಧ್ಯಯನ ಕ್ಷೇತ್ರಕಾರ್ಯ ಕೈಗೊಂಡ ಎರಡು ಗ್ರಾಮಗಳಲ್ಲಿನ ನ್ಯಾಯ ಬೆಲೆ ಅಂಗಡಿಯ ವ್ಯವಸ್ಥಾಪಕರನ್ನು ಭೇಟಿಯಾಗಿ ವಿಚಾರಿಸಿದಾಗ ಸೀಮೆ ಎಣ್ಣೆಯ ಪ್ರಮಾಣವು ಅಂತರರಾಷ್ಟ್ರೀಯ ಮತ್ತು ರಾಷ್ಟ್ರೀಯ ಮಟ್ಟದಲ್ಲಿನ ಕಚ್ಚಾತೈಲದ ಲಭ್ಯತೆಯ ಮೇಲೆ ಹಾಗೂ ರಾಜ್ಯಕ್ಕೆ, ಜಿಲ್ಲೆಗಳಿಗೆ ಮತ್ತು ತಾಲೂಕು ಕೇಂದ್ರಗಳಿಗೆ ಹಂಚಿಕೆಯಾದ ಪ್ರಮಾಣದ ಮೇಲೆ ಅವಲಂಬಿತವಾಗುತ್ತದೆ ಎಂದು ತಮ್ಮ ಅಭಿಪ್ರಾಯವನ್ನು ವ್ಯಕ್ತಪಡಿಸಿದರು. ಆದರೆ ಸಂಶೋಧಕರು ಕ್ಷೇತ್ರಕಾರ್ಯವನ್ನು ಮಾಡುತ್ತಿದ್ದಾಗಿನ ಸಮಯದಲ್ಲಿ ಪ್ರತಿ ಕುಟುಂಬಕ್ಕೆ ಐದು ಲೀಟರಗಳ ಪ್ರಮಾಣ ವಿತರಣೆ ಮಾಡಲಾಗುತ್ತಿದೆ ಆದರೆ ಇದು ಆಯಾಯ ನ್ಯಾಯಬೆಲೆ ಅಂಗಡಿಗಳಿಗೆ ಹಂಚಿಕೆಯಾಗಿರುವ ಪ್ರಮಾಣದ ಮೇಲೆ ಅವಲಂಬಿತವಾಗಿದೆ ಎಂದು ಹೇಳಿದರು.

**ಸೀಮೆ ಎಣ್ಣೆಯ ಬೇಡಿಕೆಯ ಪ್ರಮಾಣ**

ಪ್ರತಿಯೊಂದು ಮನೆಗಳಿಗೆ ಬೇಕಾಗುವ ಸಾಮನುಗಳಲ್ಲಿ ಸೀಮೆ ಎಣ್ಣೆಯೂ ಬಹಳ ಅವಶ್ಯಕ ಮತ್ತು ಪ್ರಮುಖವಾದ ವಸ್ತುವಾಗಿದೆ ಅದರಲ್ಲಿಯೂ ಬಡತನ ರೇಖೆಯ ಕೆಳಗಿನ ಕುಟುಂಬಗಳಿಗಂತೂ ಅತಿ ಪ್ರಮುಖವಾಗಿದೆ. ಈಗಾಗಲೇ ಉಲ್ಲೇಖಿಸಿದ ಹಾಗೆ ಮಳೆಗಾಲ ಮತ್ತು ಚಳಿಗಾಲದಲ್ಲಿ ಇದರ ಪ್ರಮಾಣವು ಹೆಚ್ಚಿನದಾಗಿರುತ್ತದೆ. ಬಡವರ ಮನೆಯಲ್ಲಿ ಸರಿಯಾದ ಒಲೆಯ ವ್ಯವಸ್ಥೆ ಇರದೆ ಇದ್ದಾಗ ಮತ್ತು ಮನೆಯಲ್ಲಿ ವಿದ್ಯುತ್ ದೀಪದ ವ್ಯವಸ್ಥೆಯ ಬದಲಾಗಿ ಸೀಮೆ ಎಣ್ಣೆಯನ್ನು ಉಪಯೋಗಿಸುವ ಅಭ್ಯಾಸ ಗ್ರಾಮೀಣ ಭಾಗದಲ್ಲಿ ಹೆಚ್ಚಿನ ಪ್ರಮಾಣದಲ್ಲಿ ಕಾಣಬಹುದಾಗಿದೆ. ಅದರಂತೆ ಕಲಬುರಗಿ ಜಿಲ್ಲೆಯ ಕೊಂಕನಳ್ಳಿಯಲ್ಲಿಯ ಶೇಕಡಾ 23.3ರಷ್ಟು ಕುಟುಂಬಗಳಿಗೆ ಪ್ರತಿ ತಿಂಗಳು 1 ಲೀಟರನಷ್ಟು ಸೀಮೆ ಎಣ್ಣೆ ದೊರಕುತ್ತಿದೆ. ಶೇಕಡಾ 19.8ರಷ್ಟು ಕುಟುಂಬಗಳಿಗೆ 2 ಲೀಟರನಷ್ಟು, ಶೇಕಡಾ 18.1ರಷ್ಟು ಕುಟುಂಬಗಳಿಗೆ 3 ಮತ್ತು 5 ಲೀಟರ್ ಮತ್ತು ಬಾಕಿ ಉಳಿದ ಶೇಕಡಾ 20.7ರಷ್ಟು ಕುಟುಂಬಗಳಿಗೆ 4 ಲೀಟರ್ನಷ್ಟು ಸೀಮೆ ಎಣ್ಣೆಯ ಕೊರತೆಯಾಗುತ್ತದೆ ಎಂದು ಕೋಷ್ಟಕದಿಂದ ತಿಳಿದುಬರುತ್ತದೆ. ಅದೇ ರಿತಿ ಧಾರವಾಡದ ನಿಗದಿ ಗ್ರಾಮದಲ್ಲಿನ ಕುಟುಂಬಗಳ ಬಗ್ಗೆ ಹೇಳುವುದಾದರೆ ಶೇಕಡಾ 35.5ರಷ್ಟು ಕುಟುಂಬಗಳಿಗೆ 2 ಲೀಟರ್ನಷ್ಟು, ಶೇಕಡಾ 34.5ರಷ್ಟು ಕುಟುಂಬಗಳಿಗೆ 3 ಲೀಟರ್ನಷ್ಟು, ಶೇಕಡಾ 19.1ರಷ್ಟು ಕುಟುಂಬಗಳಿಗೆ 1 ಲೀಟರ್ನಷ್ಟು, ಶೇಕಡಾ 11ರಷ್ಟು ಕುಟುಂಬಗಳಿಗೆ 4 ಲೀಟರ್ನಷ್ಟು ಮತ್ತು ಶೇಕಡಾ 10ರಷ್ಟು ಕುಟುಂಬಗಳಿಗೆ 5 ಲೀಟರ್ನಷ್ಟು ಸೀಮೆ ಎಣ್ಣೆಯ ಅವಶ್ಯಕತೆ ಇರುತ್ತದೆ ಎಂದು ಅಂಕಿಅಂಶಗಳಿಂದ ತಿಳಿದುಬರುತ್ತದೆ.

**ಸರಕಾರದಿಂದ ಪಡೆಯುವ ಸೀಮೆ ಎಣ್ಣೆಯ ಪ್ರಮಾಣ**

ಆಯಾ ಕುಟುಂಬದಲ್ಲಿರುವ ಸದಸ್ಯರ ಸಂಖ್ಯೆಯ ಅನುಗುಣವಾಗಿ ಸರಕಾರದಿಂದ ಕ್ರಮವಾಗಿ 2, 3 ಮತ್ತು 4 ಲೀಟರ್‌ನಷ್ಟು ಸೀಮೆ ಎಣ್ಣೆಯನ್ನು ನ್ಯಾಯ ಬೆಲೆ ಅಂಗಡಿಗಳ ಮೂಲಕ ವಿತರಿಸಲಾಗುತ್ತದೆ. ಅದರಂತೆ ಅಧ್ಯಯನ ಕೈಗೊಂಡ ಕೊಂಕನಳ್ಳಿ ಮತ್ತು ನಿಗದಿ ಗ್ರಾಮಗಳಲ್ಲಿನ ಬಡತನ ರೇಖೆಯ ಕೆಳಗಿರುವ ಕುಟುಂಬಗಳು ಸರಕಾರದಿಂದ ಪಡೆಯುವ ಸೀಮೆ ಎಣ್ಣೆಯ ಪ್ರಮಾಣವನ್ನು ಕುರಿತು ಹೇಳುವುದಾದರೆ ಮೊದಲಿಗೆ ಕಲಬುರಗಿ ಜಿಲ್ಲೆಯ ಕೊಂಕನಳ್ಳಿ ಗ್ರಾಮದಲ್ಲಿ ಶೇಕಡಾ 68.1ರಷ್ಟು ಕುಟುಂಬಗಳಿಗೆ ಪ್ರತಿತಿಂಗಳು 4 ಲೀಟರ್‌ನಷ್ಟು, ಶೇಕಡಾ 13.8ರಷ್ಟು ಕುಟುಂಬಗಳಿಗೆ 3 ಲೀಟರ್‌ನಷ್ಟು, ಶೇಕಡಾ 11.2ರಷ್ಟು ಕುಟುಂಬಗಳಿಗೆ 2 ಲೀಟರ್‌ನಷ್ಟು ಮತ್ತು ಶೇಕಡಾ 6.9ರಷ್ಟು ಕುಟುಂಬಗಳಿಗೆ ಪ್ರತಿ ತಿಂಗಳು ಕೇವಲ 1 ಲೀಟರ್‌ನಷ್ಟು ಸೀಮೆ ಏಣ್ಣೆ ನ್ಯಾಯ ಬೆಲೆ ಅಂಗಡಿಗಳ ಮೂಲಕ ದೊರೆಯುತ್ತಿದೆ. ಅದೇ ರೀತಿ ಧಾರವಾಡದ ನಿಗದಿ ಗ್ರಾಮದಲ್ಲಿನ ಬಡ ಕುಟುಂಬಗಳಿಗೆ ಶೇಕಡಾ 68.1ರಷ್ಟು ಕುಟುಂಬಗಳಿಗೆ ಪ್ರತಿತಿಂಗಳು 4 ಲೀಟರ್‌ನಷ್ಟು, ಶೇಕಡಾ 13.8ರಷ್ಟು ಕುಟುಂಬಗಳಿಗೆ 3 ಲೀಟರ್‌ನಷ್ಟು, ಶೇಕಡಾ 11.2ರಷ್ಟು ಕುಟುಂಬಗಳಿಗೆ 2 ಲೀಟರ್‌ನಷ್ಟು ಮತ್ತು ಶೇಕಡಾ 6.9ರಷ್ಟು ಕುಟುಂಬಗಳಿಗೆ ಪ್ರತಿ ತಿಂಗಳು ಕೇವಲ 1 ಲೀಟರ್‌ನಷ್ಟು ಸೀಮೆ ಎಣ್ಣೆ ನ್ಯಾಯ ಬೆಲೆ ಅಂಗಡಿಗಳ ಮೂಲಕ ದೊರೆಯುತ್ತಿದೆ.

**ಕೋಷ್ಟಕ – 5.9**

**ಕುಟುಂಬಗಳ ಬೇಡಿಕೆ, ಪೂರೈಕೆ ಮತ್ತು ಕೊರತೆಯಾಗುವ ಸೀಮೆ ಎಣ್ಣೆಯ ಪ್ರಮಾಣದ ಪ್ರತಿಶತ**

| ಸೀಮೆ ಏಣ್ಣೆಯ ಪ್ರಮಾಣ ಲೀಟರ್‌ಗಳಲ್ಲಿ. | ಕೊಂಕನಳ್ಳಿ (ಅಧ್ಯಯನಕ್ಕೆ ಆಯ್ಕೆಯಾದ ಒಟ್ಟು ಕುಟುಂಬಗಳ ಸಂಖ್ಯೆ–116) | | | ನಿಗದಿ (ಅಧ್ಯಯನಕ್ಕೆ ಆಯ್ಕೆಯಾದ ಒಟ್ಟು ಕುಟುಂಬಗಳ ಸಂಖ್ಯೆ–110) | | |
|---|---|---|---|---|---|---|
| | ಅವಶ್ಯಕತೆಯ ಪ್ರಮಾಣ | ಸರಕಾರದಿಂದ ದೊರಕುವ ಪ್ರಮಾಣ | ಕೊರತೆಯಾಗುವ ಪ್ರಮಾಣ | ಅವಶ್ಯಕತೆಯ ಪ್ರಮಾಣ | ಸರಕಾರದಿಂದ ದೊರಕುವ ಪ್ರಮಾಣ | ಕೊರತೆಯಾಗುವ ಪ್ರಮಾಣ |
| 1 ಲೀಟರ್‌ಗಳಲ್ಲಿ | 23.3 | 6.9 | 16.4 | 19.1 | 8.00 | 11.8 |
| 2 ಲೀಟರ್‌ಗಳಲ್ಲಿ | 19.8 | 11.2 | 35.3 | 35.5 | 2.7 | 30.0 |
| 3 ಲೀಟರ್‌ಗಳಲ್ಲಿ | 18.1 | 13.8 | 25.0 | 34.5 | 45.3 | 27.3 |
| 4 ಲೀಟರ್‌ಗಳಲ್ಲಿ | 20.7 | 68.1 | 13.8 | 10.9 | 0.9 | 20.9 |
| 5 ಲೀಟರ್‌ಗಿಂತ ಹೆಚ್ಚು | 18.1 | 0.0 | 9.5 | 10.0 | 0.0 | 10.0 |
| ಒಟ್ಟು | 100.0 | 100.0 | 100.0 | 110.0 | 100.0 | 100.0 |

ಮಾಹಿತಿ: ಕ್ಷೇತ್ರಕಾರ್ಯ

ಈ ಎರಡು ಗ್ರಾಮದಲ್ಲಿನ ಪರಿಸ್ಥಿಯನ್ನು ತೌಲನಿಕವಾಗಿ ನೋಡಿದಾಗ ಕಲಬುರಗಿಯಲ್ಲಿನ ಕೊಂಕನಳ್ಳಿ ಗ್ರಾಮದಲ್ಲಿಯೇ ಹೆಚ್ಚಿನ ಕುಟುಂಬಗಳಿಗೆ ಸೀಮೆ ಎಣ್ಣೆಯ ಅವಶ್ಯಕತೆ ಇರುವುದು ಕಂಡು ಬರುತ್ತದೆ. ಆದರೆ ಧಾರವಾಡ ಜಿಲ್ಲೆಯ ನಿಗದಿಯಲ್ಲಿ ಇದರ ಅವಶ್ಯಕತೆ ಕಡಿಮೆ ಇದ್ದುದು ತಿಳಿದು ಬರುತ್ತದೆ. ಇದು ಸಹ ಬೇಸಿಗೆಯ ಮತ್ತು ಮಳೆಗಾಲದ ದಿನಮಾನಗಳಲ್ಲಿ

ಹೆಚ್ಚಿಗೆ ಬೇಕಾಗುತ್ತದೆ ಎಂದು ಕುಟುಂಬದ ಮಾಹಿತಿದಾರರು ಹೇಳಿರುವುದು ಕಂಡುಬರುತ್ತದೆ. ಏಕೆಂದರೆ ಬೇಸಿಗೆಯಲ್ಲಿ ರಾಜ್ಯದ ಎಲ್ಲಾ ಜಿಲ್ಲೆಗಳಲ್ಲಿ ವಿದ್ಯುತ್‌ನ ಕೊರತೆ ತೀರ ಹೆಚ್ಚಾಗಿರುತ್ತದೆ. ಇದು ರಾಜ್ಯದ ಗ್ರಾಮೀಣ ಭಾಗದಲ್ಲಿ ಇನ್ನೂ ಬಹಳ ಹೆಚ್ಚಾಗಿರುತದೆ. ದಿನದಲ್ಲಿ ಕೇವಲ 4 ರಿಂದ 6 ತಾಸುಗಳವರೆಗೆ ಮಾತ್ರ ಸಂಪರ್ಕವಿರುತ್ತದೆ. ಉಳಿದ ಸಮಯದಲ್ಲಿ ಅದರಲ್ಲೂ ಗ್ರಾಮೀಣ ಕುಟುಂಬಗಳು ಸೀಮೆ ಎಣ್ಣೆಯ ದೀಪಕ್ಕೆ ಅಥವಾ ಬೆಳಕಿಗೆ ಮೊರೆ ಹೋಗುತ್ತವೆ. ಇನ್ನು ಮಳೆಗಾಲದಲ್ಲಿ ದೀಪ ಹಚ್ಚಲು ಮತ್ತು ಅಡಿಗೆ ಮಾಡಲು ಒಲೆಯನ್ನು ಹಚ್ಚಬೇಕಾದರೆ ಸೀಮೆ ಎಣ್ಣೆಯ ಅವಶ್ಯಕತೆ ಬಹಳವಿರುತ್ತದೆ. ಏಕೆಂದರೆ ಗ್ರಾಮೀಣ ಪ್ರದೇಶದಲ್ಲಿರುವ ಅನೇಕ ಬಡ ಕುಟುಂಬಗಳಿಗೆ ಗ್ಯಾಸ್ ಸಂಪರ್ಕ ಇರುವದಿಲ್ಲ. ಆದ್ದರಿಂದ ಈ ಎಲ್ಲಾ ಕುಟುಂಬಗಳು ಸರಕಾರದಿಂದ ಪಡೆಯುವ ಸೀಮೆ ಎಣ್ಣೆಯ ಮೇಲೆ ಹೆಚ್ಚಾಗಿ ಅವಲಂಬಿತವಾಗಿವೆ.

ಇದು ಬೆಳಕಿಗೆ ಸಂಬಂಧಪಟ್ಟಂತೆಯಾದರೆ ಇನ್ನು ಅಡುಗೆ ಕೆಲಸಕ್ಕೆ ಸಂಬಂಧಸಿದಂತೆ ಗ್ರಾಮೀಣ ಭಾಗದಲ್ಲಿ ಹಲವಾರು ಕುಟುಂಬಗಳು ವ್ಯವಸ್ಥಿತವಾದ ಮತ್ತು ಆಧುನಿಕ ಅಡುಗೆ ಅನಿಲದ ಸೌಲಭ್ಯದಿಂದ ವಂಚಿತವಾಗಿವೆ. ಈ ಸೌಲಭ್ಯದ ಕೊರತೆಯನ್ನು ಸರಿದೂಗಿಸಿಕೊಳ್ಳಲು ಅನೇಕ ಗಾಮೀಣ ಕುಟುಂಬಗಳು ಅಡುಗೆಯನ್ನು ಮಾಡಲು ಸಹ ಸೀಮೆ ಎಣ್ಣೆಯ ಮೊರೆ ಹೋಗುತ್ತವೆ. ಅತಿ ಹೆಚ್ಚಿನ ಕುಟುಂಬಗಳು ಕಟ್ಟಿಗೆಯ ಸಹಾಯದಿಂದ ಅಡುಗೆಯನ್ನು ಮಾಡುತ್ತವೆಯಾದರೂ ಮಳೆಗಾಲದ ಸಮಯದಲ್ಲಿ ಎಲ್ಲಾ ಕಟ್ಟಿಗೆಗಳು ತಂಪಾಗಿರುವುದರಿಂದ ಸೀಮೆ ಎಣ್ಣೆಯನ್ನು ಹಾಕಿ ಬೆಂಕಿಯನ್ನು ಹಚ್ಚುವ ಸಲುವಾಗಿ ಹೆಚ್ಚಿನ ಪ್ರಮಾಣದ ಎಣ್ಣೆ ಬೇಕಾಗುತ್ತದೆ ಎಂದು ಮಾಹಿತಿಯನ್ನು ಕಲೆ ಹಾಕುವಾಗ ಒಬ್ಬ ಬಡ ಕುಟುಂಬದ ಮಹಿಳೆಯು ಈ ಮೇಲಿನ ಮಾಹಿತಿಯನ್ನು ಹಂಚಿಕೊಂಡರು.

ಧಾರವಾಡದ ನಿಗದಿ ಗ್ರಾಮದಲ್ಲಿರುವ ಹೆಚ್ಚಿನ ಕುಟುಂಬಗಳಿಗೆ ಹೆಚ್ಚಿನ ಪ್ರಮಾಣದಲ್ಲಿ ಸೀಮೆ ಎಣ್ಣೆಯ ಅವಶ್ಯಕತೆ ಇರುವುದು ಕೋಷ್ಟಕದಿಂದ ತಿಳಿದುಬರುತ್ತದೆ. ಈಗಾಗಲೇ ಹೇಳಿದ ಹಾಗೆ ಧಾರವಾಡ ಜಿಲ್ಲೆಯ ಧಾರವಾಡ ತಾಲೂಕನ್ನು ಮಲೆನಾಡಿನ ಸೆರಗು ಎನ್ನಲಾಗುತ್ತದೆ. ಆದ್ದರಿಂದ ನಿಗದಿ ಗ್ರಾಮವು ಸಹ ಮಲೆನಾಡಿನ ಗುಣಲಕ್ಷಣಗಳನ್ನು ಹೊಂದಿರುವದ್ದರಿಂದ ಮಳೆಗಾಲದಲ್ಲಿ ಅತಿ ಹೆಚ್ಚಿನ ಪ್ರಮಾಣದಲ್ಲಿ ಮಳೆಯಾಗುವದ್ದರಿಂದ ಮನೆಯಲ್ಲಿ ಅಡುಗೆ ಮಾಡಲು, ಸ್ನಾನಕ್ಕಾಗಿ ಬಿಸಿ ನೀರನ್ನು ಕಾಯಿಸಿಕೊಳ್ಳಲು ಅನೇಕ ಕುಟುಂಬಗಳು ಸೀಮೆ ಎಣ್ಣೆಯ ಮೇಲೆ ಅವಲಂಬಿತವಾಗಿವೆ. ಮನೆಯಲ್ಲಿ ವಿದ್ಯುತ್ ದೀಪದ ವ್ಯವಸ್ಥೆ ಇದ್ದರೂ ಹೆಚ್ಚಿನ ಪ್ರಮಾಣದಲ್ಲಿ ಸೀಮೆ ಎಣ್ಣೆ ಏಕೆ ಬೇಕಾಗುತ್ತದೆ ಎಂದು ಕೇಳಿದಾಗ ಮಾಹಿತಿಯನ್ನು ಕಲೆಹಾಕುವ ಸಮಯದಲ್ಲಿ ಅನೇಕ ಕುಟುಂಬಗಳು ಈ ವಿಷಯವನ್ನು ಪ್ರಸ್ತಾಪಿಸಿ ಹೆಚ್ಚಿನ ಒತ್ತು ಕೊಟ್ಟು ಹೇಳುತ್ತಿದದು ಕಂಡು ಬರುತ್ತದೆ.

ಇಲ್ಲಿ ಒಂದು ಪ್ರಮುಖವಾದ ವಿಚಾರವೇನೆಂದರೆ ಕೊಂಕನಳ್ಳಿಗಿಂತ ನಿಗದಿಯಲ್ಲಿನ ಹೆಚ್ಚಿನ ಕುಟುಂಬಗಳಿಗೆ ಹೆಚ್ಚಿನ ಪ್ರಮಾಣದ ಸೀಮೆ ಎಣ್ಣೆಯು ಬೇಕಾಗುತ್ತದೆ ಎಂದು ಹೇಳಬಹುದು. ಕುಟುಂಬಗಳಿಂದ ಮಾಹಿತಿಯನ್ನು ಕಲೆಹಾಕುವಾಗ ಕೆಲವೊಂದು ಗುಣಾತ್ಮಕವಾದ ಮಾಹಿತಿಯಿಂದ ಪ್ರಮುಖವಾದ ಅಂಶಗಳನ್ನು ಗಮನಿಸಹಬುದು. ಸಾರ್ವಜನಿಕ ನ್ಯಾಯ ಬೆಲೆ ಅಂಗಡಿಗಳ ಮೂಲಕ ವಿತರಿಸುವ ಸೀಮೆ ಎಣ್ಣೆಯು ಯಾವಾಗ ಸ್ಟಾಕ್ ಬುರುತ್ತದೆಯೊ ಆ ಸಮಯದಲ್ಲಿ ಮಾತ್ರ ಗ್ರಾಮಗಳಲ್ಲಿನ ನ್ಯಾಯ ಬೆಲೆ ಅಂಗಡಿಗಳು ಗ್ರಾಮದಲ್ಲಿರುವ ಅಥವಾ ಆಯಾ ಅಂಗಡಿಗಳಿಗೆ ಹಂಚಿಕೆಯಾದ ಎಲ್ಲಾ ಕುಟುಂಬಗಳಿಗೆ ಅಥವಾ ಪಡಿತರ ಚೀಟಿಗಳಿಗೆ ಸಮನಾಗಿ ಹಂಚಿಕೆ ಮಾಡಿ ವಿತರಿಸಲಾಗುತ್ತದೆ ಎಂದು ನ್ಯಾಯ ಬೆಲೆ ಅಂಗಡಿಯ ವ್ಯವಸ್ಥಾಪಕರು ತಮ್ಮ ಅಭಿಪ್ರಾಯವನ್ನು ಹೇಳಿದ್ದರು. ಹೀಗೆ ಮಾಡುವಾಗ ಪ್ರತಿ ತಿಂಗಳಿನ ಅವಶ್ಯಕತೆ ಮತ್ತು ಕೊರತೆಯ ಪ್ರಮಾಣದಲ್ಲಿ ಏರಿಳಿತವಾಗಬಹುದು. ಈ ರೀತಿಯ ಹಂಚಿಕೆ ಮಾಡುವಲ್ಲಿ ಕೆಲವೊಂದು ಕುಟುಂಬಗಳಿಗೆ ಒಂದು ಲೀಟರಗಿಂತ ಕಡಿಮೆ ಬಂದ ಹಲವಾರು ಕುಟುಂಬಗಳು ಮಾಹಿತಿಯನ್ನು ಕಲೆ ಹಾಕುವ ಸಮಯದಲ್ಲಿ ಹೇಳಿಕೊಂಡಿದ್ದಾರೆ. ಪ್ರತಿ ತಿಂಗಳು ಆಯಾ ನ್ಯಾಯಬೆಲೆ ಅಂಗಡಿಗಳ ಮೂಲಕ ವಿತರಿಸುವ ಸಾಮಾನುಗಳನ್ನು ತಿಂಗಳ ಮೊದಲನೆ ಅಥವಾ ಕಳೆದ ತಿಂಗಳ ಕೊನೆಯ ವಾರದಲ್ಲಿ ಹಣವನ್ನು ಕೊಟ್ಟು ತಾಲೂಕಿನ ಸಗಟು ಗೋದಾಮಿನಿಂದ ಬಿಡಿಸಿಕೊಂಡು ತರಲಾಗುತ್ತದೆ. ಈ ರೀತಿ ಮಾಡುವಾಗ ಮಾರ್ಗ ಮಧ್ಯದಲ್ಲಿ ಶೇಕಡಾ 5 ರಿಂದ 10ರಷ್ಟು ಸೋರಿಕೆಯಾಗುವ ಸಂಭವವಿರುತ್ತದೆ ಎಂದು ಕೂಡ ಹೇಳಿದ್ದರು. ಅದಕ್ಕೋಸ್ಕರ ಪ್ರತಿತಿಂಗಳು ಕುಟುಂಬಗಳಿಗೆ ವಿತರಿಸುವ ಪ್ರಮಾಣದಲ್ಲಿ ಕಡಿತಗೊಳಿಸಲಾಗುತ್ತದೆ ಎಂದು ಉಲ್ಲೇಖಿಸುತ್ತಾರೆ. ತಾಲೂಕಿನ ಗೋದಾಮಿನಿಂದ ತಂದ ಪದಾರ್ಥಗಳು ಬಂದ ಎರಡು ಅಥವಾ ಮೂರು ದಿನಗಳ ನಂತರದಲ್ಲಿ ಎಲ್ಲಾ ಪಡಿತರ ಚೀಟಿಗಳನ್ನು ಹೊಂದಿರುವ ಕುಟುಂಬಗಳಿಗೆ ವಿತರಿಸುವ ಪ್ರಕೀಯೆ ಪ್ರಾರಂಭಿಸಲಾಗುತ್ತದೆ. ಪ್ರಕ್ರಿಯ ಕೊನೆಯಲ್ಲಿ ಬರುವ ಕುಟುಂಬಗಳಿಗೆ ಕೆಲವೊಮ್ಮೆ ಕಡಿಮೆ ಪ್ರಮಾಣದ ಮತ್ತು ಏನೂ ಸಿಗದೇ ಇರುವ ಸಂದರ್ಭಗಳು ಇವೆ ಎಂದು ಹೇಳಿರುತ್ತಾರೆ. ಪರಿಸ್ಥಿತಿ ಹೀಗಿರುವಾಗ ಕೆಲವೊಂದು ಕುಟುಂಬಗಳಿಗೆ ವಿದ್ಯುತ್ ಸಂಪರ್ಕ ಇರದೇ ಇದ್ದಾಗ ಸೀಮೆ ಎಣ್ಣೆಯಿಂದ ರಾತ್ರಿಯ ಸಮಯದಲ್ಲಿ ದೀಪ ಹಚ್ಚಲು ಬೇರೆಯವರ ಮನೆಯಿಂದ ಕೈಗಡ ಅಥವಾ ಯಾವ ಕುಟುಂಬಗಳಿಗೆ ಸೀಮೆ ಎಣ್ಣೆಯ ಅವಶ್ಯಕತೆ ಕಡಿಮೆ ಇರುತ್ತದೆಯೊ ಅವರ ಹತ್ತಿರ ಹೆಚ್ಚಿನ ಹಣವನ್ನು ಕೊಟ್ಟು ಕೊಂಡು ತಂದು ತಮ್ಮ ಮನೆಗಳಲ್ಲಿ ಬೆಳಕನ್ನು ಕಾಣುತ್ತಾರೆ. ಕೈಗಡದ ರೂಪದಲ್ಲಿ ತಂದ ಸೀಮೆ ಎಣ್ಣೆಯನ್ನು ಮುಂದಿನ ತಿಂಗಳು ಅವರಿಗೆ ಅದೇ ಪ್ರಮಾಣದಲ್ಲಿ ಹಿಂದಿರುಗಿ ಕೊಡಬೇಕು. ಇಲ್ಲದೇ ಇದ್ದಾಗ ಅವರಿಗೆ ಹೆಚ್ಚಿನ ಹಣವನ್ನು ಕೊಡಬೇಕಾಗುತ್ತದೆ ಎಂದು ಹೇಳಿದ್ದರು. ಈ ರೀತಿಯ ಬದಲಾವಣೆ ಅಥವಾ ಹೊಂದಾಣಿಕೆ ಸಾಮಾಜಿಕವಾಗಿ ಕಂಡುಬರುವುದು ಊರಿನಲ್ಲಿರುವ ಒಂದೇ ಜಾತಿ, ಉಪಜಾತಿ ಅಥವಾ ಒಂದೇ ರೀತಿಯ ಆಚರಣೆಗಳನ್ನು ಹೊಂದಿರುವ ಗುಂಪುಗಳ ನಡುವೆ ನಡೆಯುತ್ತದೆ ಎನ್ನಬಹುದು.

ಈ ರೀತಿಯಾದ ಕೊರತೆಯನ್ನು ಕುಟುಂಬಗಳು ಗ್ರಾಮದಲ್ಲಿರುವ ಅಂಗಡಿಗಳಿಂದ ಅಥವಾ ಹತ್ತಿರವಿರುವ ಪಟ್ಟಣದ ಮಾರುಕಟ್ಟೆಯಿಂದ ಚಾಲ್ತಿಯಿರುವ ಬೆಲೆಯನ್ನು ಕೊಟ್ಟು ಕೊಂಡುಕೊಳ್ಳುತ್ತಾರೆ. ಇಲ್ಲಿ ಸರಕಾರವು ಕೊಡಮಾಡುವ ಯಾವುದೇ ರೀತಿಯ ರಿಯಾಯತಿಯನ್ನು ಅಂಗಡಿಗಳು ಕೊಡುವುದಿಲ್ಲ. ಬದಲಾಗಿ ಪಟ್ಟಣ ಅಥವಾ ನಗರ ಪ್ರದೇಶಕ್ಕಿಂತ ಒಂದು ಕೆ.ಜಿ.ಗೆ 2 ರಿಂದ 3 ರೂಪಾಯಿಯಂತೆ ಹೆಚ್ಚಿಗೆ ಕೊಟ್ಟು ಕೊಂಡುಕೊಳ್ಳುತ್ತಾರೆ. ಕೆಲವೊಂದು ಕುಟುಂಬಗಳು ಗ್ರಾಮದ ಅಂಗಡಿಗಳಲ್ಲಿ ಉದ್ರಿಯ ರೂಪದಲ್ಲಿ ತೆಗೆದುಕೊಂಡು ಅದರ ಹಣವನ್ನು ಒಂದು ತಿಂಗಳೋ ಅಥವಾ ವರ್ಷದ ಕೊನೆಯಲ್ಲಿಯೋ ಪಾವತಿಸುತ್ತಾರೆ. ಈ ರೀತಿಯಾಗಿ ವರ್ಷದ ಕೊನೆಯಲ್ಲಿ ಹಣವನ್ನು ಪಾವತಿಸುವುದರಿಂದ ಅವರು ಸಾಮಾನುಗಳನ್ನು ಕೊಟ್ಟ ಹಣಕ್ಕಿಂತ ಹೆಚ್ಚಿಗೆ ತೆಗೆದುಕೊಳ್ಳುತ್ತಾರೆ ಹೊರತು ಕಡಿಮೆಯಂತೂ ತೆಗೆದುಕೊಳ್ಳುವುದಿಲ್ಲ ಎಂದು ಹೇಳುತ್ತಾರೆ. ಕೆಲವೊಂದು ಕುಟುಂಬಗಳಿಂದ ಮಾಹಿತಿಯನ್ನು ಪಡೆಯುವಾಗ ನ್ಯಾಯಬೆಲೆ ಅಂಗಡಿಗಳಲ್ಲಿಯ ಅವ್ಯವಹಾರವನ್ನು ಹೇಳುತ್ತಿದ್ದರು. ಅದರಲ್ಲಿ ಪ್ರಮುಖವಾದ ಅಂಶವೇನೆಂದರೆ ಊರಿನಲ್ಲಿರುವ ದೊಡ್ಡ ಕುಟುಂಬಗಳು, ರಾಜಕೀಯವಾಗಿ ಅಧಿಕಾರದಲ್ಲಿರುವರು, ಪ್ರಬಲ ಜಾತಿಗೆ ಸೇರಿದವರು ತಮ್ಮ ಕುಟುಂಬಕ್ಕೆ ಒಂದು ತಿಂಗಳಿಗೆ ಎಷ್ಟು ಸಕ್ಕರೆ ಬೇಕಾಗುತ್ತದೆಯೊ ಅಷ್ಟನ್ನು ಅಂಗಡಿಯ ವ್ಯವಸ್ಥಾಪಕನೊಂದಿಗೆ ವ್ಯವಹಾರವನ್ನು ಕುದುರಿಸಿ ಮಾರುಕಟ್ಟೆಗಿಂತ ಕಡಿಮೆ ದರವನ್ನು ಕೊಟ್ಟು ತೆಗೆದುಕೊಂಡು ಹೋಗುತ್ತಾರೆ ಎಂದು ಮಾಹಿತಿಯನ್ನು ಕಲೆಹಾಕುವ ಸಂದರ್ಭದಲ್ಲಿ ಪ್ರಸ್ತಾಪಿಸಿರುತ್ತಾರೆ. ಕೆಲವೊಂದು ಕುಟುಂಬಗಳು ತಮ್ಮಲ್ಲಿ ಹಣ ಇರದೆ ಇದ್ದರೆ ಆ ತಿಂಗಳಲ್ಲಿ ಯಾವುದೇ ಪದಾರ್ಥಗಳನ್ನು ಸಹ ತೆಗೆದುಕೊಳ್ಳುವುದಿಲ್ಲ. ಈ ರೀತಿಯಾಗಿ ಅವರ ಪಾಲಿನ ಪದಾರ್ಥಗಳು ನ್ಯಾಯ ಬೆಲೆ ಅಂಗಡಿಗಳಲ್ಲೇ ಉಳಿಯುತ್ತವೆ. ಹೀಗೆ ಉಳಿದ ಸಕ್ಕರೆ, ಅಕ್ಕಿ, ಸೀಮೆ ಎಣ್ಣೆ ಮತ್ತು ಇತರೆ ಪದಾರ್ಥಗಳನ್ನು ಊರಿನ ಅಂಗಡಿಗಳಿಗೆ ಮಾರಾಟ ಮಾಡುತ್ತಾರೆ. ಬಡವರು ಒಂದು ಕೆ.ಜಿ ಸಕ್ಕರೆ ಹೆಚ್ಚಿಗೆ ಕೇಳಿದರೆ ಇಲ್ಲ ಎಂದು ಉತ್ತರ ಸಿಗುತ್ತದೆ. ಆದರೆ ಅದೇ ಗ್ರಾಮದ ಪಂಚಾಯತಿಯ ಸದಸ್ಯ ಅಥವಾ ಊರಿನ ಪ್ರಬಲ ವ್ಯಕ್ತಿ ಕೇಳಿದರೆ ಅವರ ಮನೆಯವರೆಗೆ ತೆಗೆದುಕೊಂಡು ಹೋಗಿ ಕೊಟ್ಟು ಹಣವನ್ನು ಸಹ ತೆಗೆದುಕೊಳ್ಳದೆ ಬರುತ್ತಾರೆ ಎಂದು ಬಹಳ ಕೋಪದಿಂದ ಈ ಮಾಹಿತಿಯನ್ನು ಸಂಶೋಧಕರೊಂದಿಗೆ ಹಂಚಿಕೊಳ್ಳುತ್ತಾರೆ. ಇದಕ್ಕೆ ನ್ಯಾಯ ಬೆಲೆ ಅಥವಾ ಸಹಕಾರ ಸಂಘಕ್ಕೆ ತಪ್ಪಾಗುತ್ತಿರುವುದರ ಬಗ್ಗೆ ಮರು ಪ್ರಶ್ನೀಸಿದ್ದೀರಾ ಎಂದು ಕೇಳಿದರೆ. ಮಾಹಿತಿಯನ್ನು ನೀಡುತ್ತಿರುವವರು **"ಬಡವನ ಸಿಟ್ಟು ದವಡೆಗೆ ಮೂಲ"** ಎಂದು ಉತ್ತರಿಸಿದ್ದರು. ಅಂದರೆ ಈ ವಿಷಯದ ಬಗ್ಗೆ ದೂರು ಕೊಟ್ಟರೆ ಬೇರೆ ಯಾವುದಾದರೂ ವಿಷಯದಲ್ಲಿ ನಮ್ಮನ್ನು ತಪ್ಪಿತಸ್ಥರೆಂದು ತೀರ್ಮಾನಿಸಿ ಶಿಕ್ಷೆ ಕೊಡುತ್ತಾರೆ ಮತ್ತು ಸರಕಾರದಿಂದ ಬರುವ ಇನ್ನಿತರೆ ಸೌಲಭ್ಯಗಳನ್ನು ಸಹ ನಮಗೆ ಸಿಗದಂತೆ ಮಾಡುತ್ತಾರೆಂದು ಉತ್ತರಿಸಿದ್ದರು. ಊರಿನ ಜನರಲ್ಲಿ ನಮ್ಮ ವಿರುದ್ಧ ಎತ್ತಿ ಕಟ್ಟುತ್ತಾರೆ. ಇದು ಗ್ರಾಮಗಳಲ್ಲಿರುವ ವಾಸ್ತವ ಸ್ಥಿತಿ ಎಂದು ಹೇಳಿದ್ದರು. ಈ ರೀತಿಯಾದಾಗ ನಮ್ಮ ಹತ್ತಿರದ ಸಂಬಂಧಿಕರು ನಮ್ಮ ಜೊತೆಯಲ್ಲಿ

ಬರುವುದಿಲ್ಲ ಏಕೆಂದರೆ ಎಲ್ಲಿ ಅವರಿಗೂ ಸಹ ಸರಕಾರದ ಸೌಲಭ್ಯಗಳು ತಪ್ಪಿ ಹೋಗುತ್ತವೆ ಎಂಬ ಹೆದರಿಕೆ ಇದೆ ಎಂದು ಮಾಹಿತಿಯನ್ನು ಹಂಚಿಕೊಂಡಿದ್ದಾರೆ.

ಈ ಸಂದರ್ಭದಲ್ಲಿ **ಒಂದು ಕೇಸ್ ಸ್ಟಡಿಯ**ನ್ನು ವಿವರಿಸಿ ಹೇಳುವುದು ಬಹಳ ಸಮಯೋಚಿತವೆನಿಸುತ್ತದೆ. ಕ್ಷೇತ್ರಕಾರ್ಯ ಕೈಗೊಂಡ ನಿಗದಿ ಗ್ರಾಮದಲ್ಲಿ ಕಡು ಬಡವರಿಗೆ ನೀಡುವ ಅಂತ್ಯೋದಯ (ಬಡತನ ರೇಖೆಯ ಕೆಳಗಿನ) ಪಡಿತರ ಚೀಟಿಯನ್ನು ಹೊಂದಿರುವ ಪರಿಶಿಷ್ಟ ಜಾತಿಗೆ ಸೇರಿದ ಒಂದು ಕುಟುಂಬ ಇದೆ. ಈ ಕುಟುಂಬಕ್ಕೆ ವಯಸ್ಸಾದ ಅಜ್ಜ ಕುಟುಂಬದ ಯಜಮಾನನಾಗಿದ್ದು ಅವನ ಜೊತೆ ಹೆಂಡತಿ ಮತ್ತು ವಯಸ್ಸಿಗೆ ಬಂದ ಮಗನು ವಾಸಿಸುತ್ತಿದ್ದಾರೆ. ಮಗನು ದೂರದ ಧಾರವಾಡ ನಗರದಲ್ಲಿ ಬಾಡಿಗೆಯ ಆಟೋವನ್ನು ಓಡಿಸಿ ವಯಸ್ಸಾದ ತಂದೆ ಮತ್ತು ತಾಯಿಯನ್ನು ಚೆನ್ನಾಗಿ ನೋಡಿಕೊಳ್ಳುತ್ತಿದ್ದನು. ಮಗನು ಧಾರವಾಡ ನಗರದಲ್ಲಿ ಕೆಲಸ ಮಾಡಿದರೆ, ಅವನ ತಂದೆ ಮತ್ತು ತಾಯಿ ಗ್ರಾಮದಲ್ಲಿಯೇ ಬೇರೆಯವರ ಹೊಲದಲ್ಲಿ ಕೂಲಿ ಕೆಲಸ ಮಾಡುತ್ತಿದ್ದರು. ಈ ಕುಟುಂಬಕ್ಕೆ ಯಾವುದೇ ರೀತಿಯ ಭೂಮಿ ಇರುವುದಿಲ್ಲ. ಆಶ್ರಯ ಯೋಜನೆಯಲ್ಲಿ ಹಂಚಿಕೆಯಾದ ಒಂದು ಮನೆಯನ್ನು ಬಿಟ್ಟರೆ ಬೇರೆ ಯಾವುದೇ ಚಿರಾಸ್ತಿಯೂ ಈ ಕುಟುಂಬಕ್ಕೆ ಇರುವುದಿಲ್ಲ. ಮನೆಯಲ್ಲಿ ವಯಸ್ಸಿಗೆ ಬಂದ ಮಗನು ಇರುವುದರಿಂದ ಅವನಿಗೆ ಒಂದು ಕನ್ಯೆಯನ್ನು ನೋಡಿದ ಅಜ್ಜ ಮತ್ತು ಅಜ್ಜಿ ಸಾಲ ಮಾಡಿ ಸಾಮೂಹಿಕ ವಿವಾಹ ಕಾರ್ಯಕ್ರಮದಲ್ಲಿ ಮದುವೆಯನ್ನು ಮಾಡಿದ್ದರು. ಇದರೊಂದಿಗೆ ಕುಟುಂಬದಲ್ಲಿ ಒಟ್ಟು ನಾಲ್ಕು ಜನರಾದರು. ಆದ್ದರಿಂದ ಇವರಿಗೆ 30 ಕೆ.ಜಿ ಅಕ್ಕಿ, 10 ಕೆ.ಜಿ ಗೋಧಿ, 1ಕೆ.ಜಿ ಸಕ್ಕರೆ ಮತ್ತು 1 ಲೀಟರ್ ಸೀಮೆ ಎಣ್ಣೆ ದೊರೆಯುತ್ತಿತ್ತು. ಇದರಿಂದ ಕುಟುಂಬದ ಜೀವನವು ಅತಿ ಸಂತೋಷದಿಂದ ಸಾಗುತ್ತಿತ್ತು. ಹೀಗಿರುವಾಗ ಮಗನ ಮದುವೆಯಾದ ಒಂದು ವರ್ಷದ ನಂತರದಲ್ಲಿ ಮಗನ ಆರೋಗ್ಯದಲ್ಲಿ ಏರುಪೇರಾಯಿತು. ಅಜ್ಜನ ಮಗನು ಬೇರೆ ರೀತಿಯ ಅನಾರೋಗ್ಯದಿಂದ ಬಳಲುತ್ತಿದ್ದಾಗ ರಕ್ತ ಪರೀಕ್ಷೆಯ ಸಮಯದಲ್ಲಿ ಕ್ಯಾನ್ಸರ್ ಇದೆ ಎಂದು ಗೊತ್ತಾಯಿತ್ತು. ಇದು ಗೊತ್ತಾದ ಒಂದು ವರ್ಷ ತುಂಬುವುದರ ಒಳಗೆ ಮದುವೆಯಾದ ಮಗನನ್ನು ಕಳೆದು ಕೊಂಡ ಕುಟುಂಬವು ತೀವ್ರವಾಗಿ ನೊಂದಿದೆ.

ಕುಟುಂಬಕ್ಕೆ ಎಲ್ಲಾ ರೀತಿಯ ಆಸರೆಯಾಗಿದ್ದ ಮಗನನ್ನು ಕಳೆದುಕೊಂಡ ತಂದೆ ಮತ್ತು ತಾಯಿ ಕುಟುಂಬದ ಜವಾಬ್ದಾರಿಯನ್ನು ಹೊರಬೇಕಾಯಿತ್ತು. ಆಗ ಅವರಿಗೆ ನೆರವಿಗೆ ಬಂದಿದು ಈ ಅಂತ್ಯೋದಯ ಪಡಿತರ ಚೀಟಿ. ಹೇಗೆಂದರೆ ಮಗನನ್ನು ಕಳೆದುಕೊಂಡ ಕುಟುಂಬವು ತೀವ್ರವಾದ ಸಂಕಷ್ಟಗಳನ್ನು ಎದರಿಸುತ್ತಿತ್ತು. ಈಗ ಕುಟುಂಬದಲ್ಲಿರುವ ಒಟ್ಟು ಸದಸ್ಯರು ಮೂರು ಜನ. ಇದಕ್ಕೂ ಮೊದಲು ಕುಟುಂಬದ ಎಲ್ಲಾ ವ್ಯವಹಾರವನ್ನು ವಯಸ್ಸಿಗೆ ಬಂದಿದ್ದ ಅಜ್ಜನ ಮಗನು ನೋಡಿಕೊಳ್ಳುತ್ತಿದ್ದನು. ಈಗ ಅಜ್ಜ ಮತ್ತು ಅಜ್ಜಿಯು ಅವರ ಸೊಸೆಯೊಂದಿಗೆ ತಮ್ಮ ಜೀವನವನ್ನು ನಡೆಸುತ್ತಿದ್ದಾರೆ. ಈ ಒಂದು ಸಮಯದಲ್ಲಿ ಅಂತ್ಯೋದಯ

ಪಡಿತರ ಚೀಟಿಯಿಂದ ಕುಟುಂಬಕ್ಕೆ ಸಿಗುತ್ತಿದ್ದ ಪದಾರ್ಥಗಳು ತುಂಬಾ ಉಪಯೋಗವಾಗಿವೆ ಮತ್ತು ಈ ರೀತಿ ವಿತರಿಸಲು ಸರಕಾರದ ಮಟ್ಟದಲ್ಲಿ ನಿರ್ಧಾರವನ್ನು ತೆಗೆದುಕೊಂಡ ವ್ಯಕ್ತಿಗೆ ತುಂಬು ಹೃದಯದಿಂದ ಹರಸಿದ್ದರು. ಇದನ್ನು ಅವರದ್ದೆ ಮಾತಿನಲ್ಲಿ ಹೇಳುವುದಾದರೆ "*ತಿಂಗಳಿಗಿ 30 ಕಿಲೋ ಅಕ್ಕಿ, 10 ಕಿಲೋ ಗೋಧಿ, 1 ಕಿಲೋ ಸಕ್ರಿ ಕೊಡೋದ್ರಿಂದ ಬಹಳ ಚೊಲೋ ಆಗ್ಯಾದ್ರಿ............. ಮತ್ತು ಅವರ ಹೊಟ್ಟಿ ತಣ್ಣಗ ಇರಲ್ರಿ*" ಎಂದು ಹೇಳಿದರು.

**ಕುಟುಂಬಗಳು ಮತ್ತು ಜೋಳ ವಿತರಣೆ**

ಕ್ಷೇತ್ರಕಾರ್ಯ ಕೈಗೊಂಡ ಎರಡು ಜಿಲ್ಲೆಗಳು ಉತ್ತರ ಕರ್ನಾಟಕ ಪ್ರದೇಶವಾಗಿರುವುದರಿಂದ ಈ ಪ್ರದೇಶದ ಸಾಂಪ್ರದಾಯಿಕ ಆಹಾರ ಮತ್ತು ಬಹಳ ಸಾಮಾನ್ಯವಾದ ಹಾಗೂ ಪ್ರಮುಖವಾದ ಜೋಳವು ರಾಜ್ಯದ ಯಾವುದೇ ಜಿಲ್ಲೆಯ ನ್ಯಾಯಬೆಲೆಯ ಅಂಗಡಿಗಳಲ್ಲಿ ವಿತರಿಸುವುದಿಲ್ಲ. ಅಧ್ಯಯನ ಕ್ಷೇತ್ರ ಕಾರ್ಯದ ಸಮಯದ ನಂತರದಲ್ಲಿ ಸರಕಾರದ ನಿರ್ಧಾರವನ್ನು ಮಾಧ್ಯಮಗಳ ಮೂಲಕ ತಿಳಿದುಕೊಳ್ಳಲಾಯಿತ್ತು. ಆದರೆ ಇದು ಇನ್ನು ಕಾರ್ಯರೂಪಕ್ಕೆ ಬಂದಿರುವುದಿಲ್ಲ ಎಂದು ತಿಳಿದುಬರುತ್ತದೆ. ಇಂತಹ ಎಲ್ಲಾ ಪದಾರ್ಥಗಳಿಗೆ ಕುಟುಂಬಗಳು ಮಾರುಕಟ್ಟೆಯ ಮೇಲೆ ಅವಲಂಬಿತವಾಗಿವೆ (ಚಂದ್ರ ಪೂಜಾರಿ, ಎಂ. 2017). ಆದರೂ ಸಹ ಬಡತನ ರೇಖೆಯ ಕೆಳಗಿರುವ ಕುಟುಂಬಗಳು ಜೋಳಕ್ಕಾಗಿ ಎಷ್ಟು ಹಣವನ್ನು ವ್ಯಯಿಸುತ್ತಿವೆ ಎಂದು ತಿಳಿದುಕೊಳ್ಳುವ ಒಂದು ಪ್ರಯತ್ನವನ್ನು ಈ ಒಂದು ಭಾಗದಲ್ಲಿ ಮಾಡಲಾಗಿದೆ.

ಇಲ್ಲಿ ಸರಕಾರವು ಯಾವುದೇ ರೀತಿಯ ಪ್ರಮಾಣದ ಜೋಳವನ್ನು ವಿತರಿಸದೆ ಇರುವುದರಿಂದ ಅದಕ್ಕೆ ಸಂಬಂಧಪಟ್ಟ ಮಾಹಿತಿಯನ್ನು ವಿವರಿಸುವ ಪ್ರಮೇಯ ಬರುವುದಿಲ್ಲ. ಆದ್ದರಿಂದ ನೇರವಾಗಿ ಅಧ್ಯಯನ ಮಾಡಿದ ಗ್ರಾಮಗಳಲ್ಲಿನ ಬಡತನ ರೇಖೆಯ ಕೆಳಗಿರುವ ಕುಟುಂಬಗಳಿಗೆ ಪ್ರತಿತಿಂಗಳು ಬೇಕಾಗುವ ಮತ್ತು ಕೊರತೆಯಾಗುವ ಜೋಳದ ಪ್ರಮಾಣವನ್ನು ಕಿಲೋಗ್ರಾಮಗಳಲ್ಲಿ (ಕೆ.ಜಿ) ವಿವರಿಸಲಾಗಿದೆ. ಕಲಬುರಗಿ ಜಿಲ್ಲೆಯ ಕೊಂಕನಳ್ಳಿಯಲ್ಲಿನ ಕುಟುಂಬಗಳಿಗೆ ಪ್ರತಿ ತಿಂಗಳಿಗೆ ಶೇಕಡಾ 26.72ರಷ್ಟು ಕುಟುಂಬಗಳಿಗೆ 20 ಕೆ.ಜಿಗಳಷ್ಟು ಜೋಳವನ್ನು ಅಗತ್ಯವಿದ್ದರೆ ಧಾರವಾಡದಲ್ಲಿಯು ಸಹ ಅಷ್ಟೇ ಪ್ರಮಾಣದ ಕೆ.ಜಿಗಳಷ್ಟು ಜೋಳವನ್ನು ಶೇಕಡಾ 26.36ರಷ್ಟು ಕುಟುಂಬಗಳಿಗೆ ಅವಶ್ಯಕತೆ ಇರುತ್ತದೆ ಎಂದು ಹೇಳಿರುತ್ತಾರೆ. ಮುಂದುವರೆದು ಅತಿ ಕಡಿಮೆಯ ಪ್ರಮಾಣ ಜೋಳವನ್ನು ಅಂದರೆ ಪ್ರತಿತಿಂಗಳಿಗೆ 50ಕೆ.ಜಿಯಂತೆ ಕಲಬುರಗಿಯ ಕೊಂಕನಳ್ಳಿಯ ಗ್ರಾಮದಲ್ಲಿನ ಕುಟುಂಬಗಳಿಗೆ ಶೇಕಡಾ 4.31ರಷ್ಟು ಕುಟುಂಬಗಳಿಗೆ ಬೇಕಾಗಿದ್ದರೆ ಇನ್ನು ಧಾರವಾಡದಲ್ಲಿನ ನಿಗದಿ ಗ್ರಾಮಲ್ಲಿರುವ ಕುಟುಂಬಗಳಿಗೆ ಶೇಕಡಾ 2.73ರಷ್ಟು ಕುಟುಂಬಗಳಿಗೆ ಬೇಕಾಗುತ್ತದೆ ಎಂದು ಮಾಹಿತಿಯ ಮೂಲಕ ತಿಳಿದುಬರುತ್ತದೆ. ಇನ್ನು ತೌಲನಿಕವಾಗಿ ಹೇಳುವುದಾದರೆ ಧಾರವಾಡದಲ್ಲಿರುವ ಕುಟುಂಬಗಳಿಗೆ ಬೇಕಾಗುವ ಶೇಕಡಾ ಅರ್ಧಕ್ಕಿಂತ ಹೆಚ್ಚಿನ ಕುಟುಂಬಗಳಿಗೆ 50 ಕ್ಕಿಂತ ಹೆಚ್ಚಿನ ಕೆ.ಜಿಯಷ್ಟು ಜೋಳದ ಅವಶ್ಯಕತೆಯು ಕಲಬುರಗಿಯ

ಕೊಂಕನಳ್ಳಿ ಗ್ರಾಮದಲ್ಲಿ ಕಂಡುಬರುತ್ತದೆ. ಇದರಿಂದ ಸ್ಪಷ್ಟವಾಗಿ ತಿಳಿದುಬರುವುದೇನೆಂದರೆ ಕಲಬುರಗಿಯಲ್ಲಿನ ಹೆಚ್ಚಿನ ಕುಟುಂಬಗಳು ಜೋಳದ ಮೇಲೆ ಬಹಳಷ್ಟು ಅವಲಂಬಿತವಾಗಿವೆ ಎಂದು ಹೇಳಬಹುದು. ಆದ್ದರಿಂದ ಎರಡು ಗ್ರಾಮಗಳ ಕುಟುಂಬಗಳಿಂದ ಮಾಹಿತಿಯನ್ನು ಕಲೆಹಾಕುವಾಗ ಸರಕಾರವು ನ್ಯಾಯಬೆಲೆ ಅಂಗಡಿಗಳ ಮೂಲಕ ಜೋಳವನ್ನು ಸಹ ವಿತರಿಸಬೇಕು ಎಂದು ಹೇಳುತ್ತಿರುವುದನ್ನು ಗಮನಿಸಬಹುದು.

**ಕುಟುಂಬಗಳ ಆರೋಗ್ಯ ಸೇವೆಗಳ ಬೇಡಿಕೆ, ಪೂರೈಕೆ ಮತ್ತು ಕೊರತೆಯ ಪ್ರಮಾಣ**

ಚೆನ್ನಾಗಿ ಆರೋಗ್ಯವಂತರಾಗಿದ್ದರೆ ಬಡತನದ ವಿರುದ್ಧ ಹೋರಾಡಿ ಮೇಲೆ ಬರಬಹುದು ಎಂದು ಅನೇಕ ಅಧ್ಯಯನಗಳಿಂದ ತಿಳಿದು ಬರುತ್ತದೆ. ಆದ್ದರಿಂದ ಬಡತನ ರೇಖೆಯ ಕೆಳಗಿರುವ ಕುಟುಂಬಗಳು ತಮ್ಮ ಕುಟುಂಬದ ಸದಸ್ಯರ ಆರೋಗ್ಯಕ್ಕಾಗಿ ಎಷ್ಟು ಹಣವನ್ನು ಖರ್ಚು ಮಾಡಿದ್ದಾರೆ ಮತ್ತು ಸರಕಾರದಿಂದ ಆರೋಗ್ಯಕ್ಕಾಗಿ ಎಷ್ಟು ಪ್ರಮಾಣದಲ್ಲಿ ಸಹಾಯಧನ ದೊರೆಯುತ್ತಿದೆ ಮತ್ತು ಯಾವ ಪ್ರಮಾಣದಲ್ಲಿ ಕೊರತೆಯನ್ನು ಅನುಭವಿಸುತ್ತಿವೆ ಎಂದು ಕೋಷ್ಟಕ 9ರಿಂದ ತಿಳಿದುಬರುತ್ತದೆ. ಇಲ್ಲಿ ಬಡತನ ರೇಖೆಯ ಕುಟುಂಬಗಳು ಮಾಡುವ ಆರೋಗ್ಯದ ಮೇಲಿನ ವೆಚ್ಚವನ್ನು ತಿಳಿದುಕೊಳ್ಳಲು ಕಳೆದ ಆರು ತಿಂಗಳಲ್ಲಿ ಕುಟುಂಬದ ಯಾವುದೇ ಸದಸ್ಯರಿಗೆ ತೀವ್ರ ಅಥವಾ ಯಾವುದೇ ಸಾಮಾನ್ಯ ಕಾಯಿಲೆಗಳಿಂದ ನರಳುತ್ತಿದ್ದರೆ ಗುಣಮುಖರಾಗಲು ಕುಟುಂಬದವರು ಮಾಡಿರುವ ವೆಚ್ಚವನ್ನು ಒಟ್ಟುಗೂಡಿಸಿ ಮಾಹಿತಿಯನ್ನು ತೆಗೆದುಕೊಳ್ಳಲಾಗಿದೆ. ಕಳೆದ ಆರು ತಿಂಗಳಲ್ಲಿ ಸಾಮಾನ್ಯವಾಗಿ ಕುಟುಂಬದ ಒಬ್ಬರು ಅಥವಾ ಒಬ್ಬರಿಗಿಂತ ಹೆಚ್ಚಿನ ಸದಸ್ಯರು ತೀವ್ರ ಅಥವಾ ಸಾಮಾನ್ಯ ಕಾಯಿಲೆಗಳಾದ ನೆಗಡಿ, ಸೀತ. ಕೆಮ್ಮು ಮತ್ತು ಜ್ವರಕ್ಕಾಗಿ ಹತ್ತಿರದ ಖಾಸಗಿ, ಸಾರ್ವಜನಿಕ ಅಥವಾ ಗ್ರಾಮಗಳಲ್ಲಿರುವ ವೈದ್ಯರಲ್ಲಿ ಆರೈಕೆಯನ್ನು ಪಡೆಯುತ್ತಾರೆ. ಅದಕ್ಕಾಗಿ ಅವರು ಒಂದು ವೇಳೆ ಸರಕಾರದ ಆರೋಗ್ಯ ಕೇಂದ್ರಗಳಿಂದ ಸೇವೆಗಳನ್ನು ಪಡೆದಿದ್ದರೆ ಅದಕ್ಕಾಗಿ ಮಾಡಿದ ವೆಚ್ಚ ಮತ್ತು ಸರಕಾರದಿಂದ ಪಡೆದ ಸಹಾಯ ಧನವನ್ನು ಮತ್ತು ಕೊರತೆಯಾದ ಹಣವನ್ನು ಲೆಕ್ಕಹಾಕಲಾಗಿದೆ. ಒಟ್ಟಾರೆಯಾಗಿ ಸರಕಾರಿ ಆರೋಗ್ಯ ಕೇಂದ್ರ ಮತ್ತು ಖಾಸಗಿ ಆಸ್ಪತ್ರೆಗಳಿಂದ ಪಡೆದ ಎಲ್ಲ ರೀತಿಯ ಸೇವೆಗಳನ್ನು ಪರಿಗಣಿಸಲಾಗಿದೆ. ಆದ್ದರಿಂದ ಈ ಒಂದು ವಿಶ್ಲೇಷಣೆಯಲ್ಲಿ ಸರಕಾರಿ ಮತ್ತು ಖಾಸಗಿ ಆಸ್ಪತ್ರೆಗಳನ್ನು ಬೇರೆ ಬೇರೆಯಾಗಿ ಮಾಡಿರುವುದಿಲ್ಲ. ಇಲ್ಲಿ ಅವರು ಪಡೆದಿರುವ ಸೇವೆಗಳು ಮತ್ತು ಮಾಡಿರುವ ವೆಚ್ಚವು ಬಹಳ ಪ್ರಮುಖವಾಗಿದೆ ಹೊರತು ಎಲ್ಲಿ ಸೇವೆಗಳನ್ನು ಪಡೆದರು ಎಂಬುದು ಪ್ರಾಮುಖ್ಯತೆ ಪಡೆಯುವುದಿಲ್ಲ. ಇದಕ್ಕಾಗಿ ಸರಕಾರಿ ಆರೋಗ್ಯ ಕೇಂದ್ರಗಳಲ್ಲಿ ಮತ್ತು ಖಾಸಗಿ ಆಸ್ಪತ್ರೆಗಳಲ್ಲಿ ಸೇವೆ ಪಡೆದವರ ಆರೋಗ್ಯ ವೆಚ್ಚವನ್ನು ತಿಳಿದುಕೊಳ್ಳಲು ಬೇರೆ ಒಂದು ಸಂಶೋಧನೆಯನ್ನು ಕೈಗೆತ್ತಿಕೊಳ್ಳಬಹುದಾಗಿದೆ. ಕುಟುಂಬಗಳು ಮಾಡಿದ ವೆಚ್ಚವನ್ನು ಒಟ್ಟು ವೆಚ್ಚವನ್ನು ಸಾರಿಗೆ ಅಂದರೆ ಸರಕಾರಿ ಅಥವಾ ಖಾಸಗಿ ಆಸ್ಪತ್ರೆಗೆ ಹೋಗಿ ಬರಲು ಮಾಡಿರುವ ವೆಚ್ಚ, ವೈದ್ಯರ

## ಕೋಷ್ಟಕ – 5.10
## ಕುಟುಂಬಗಳ ಆರೋಗ್ಯದ ಬೇಡಿಕೆ, ಪೂರೈಕೆ ಮತ್ತು ಕೊರತೆಯ ಪ್ರಮಾಣ ಪ್ರತಿಶತದಲ್ಲಿ

| ಆರೋಗ್ಯ ಸೇವಗಳ ವೆಚ್ಚಗಳು | ಕೊಂಕನಳ್ಳಿ (ಅಧ್ಯಯನಕ್ಕೆ ಆಯ್ಕೆಯಾದ ಒಟ್ಟು ಕುಟುಂಬಗಳ ಸಂಖ್ಯೆ–116) | | | ನಿಗದಿ (ಅಧ್ಯಯನಕ್ಕೆ ಆಯ್ಕೆಯಾದ ಒಟ್ಟು ಕುಟುಂಬಗಳ ಸಂಖ್ಯೆ–110) | | |
|---|---|---|---|---|---|---|
| | ಕುಟುಂಬಗಳು ಮಾಡಿದ ಖರ್ಚು | ಕುಟುಂಬಗಳಿಗೆ ಸರಕಾರದಿಂದ ದೊರಕಿದ ನೆರವು | ಕುಟುಂಬಗಳಿಗೆ ಕೊರತೆಯಾಗುವ ಹಣದ ಪ್ರಮಾಣ | ಕುಟುಂಬಗಳು ಮಾಡಿದ ಖರ್ಚು | ಕುಟುಂಬಗಳಿಗೆ ಸರಕಾರದಿಂದ ದೊರಕಿದ ನೆರವು | ಕುಟುಂಬಗಳಿಗೆ ಕೊರತೆಯಾಗುವ ಹಣದ ಪ್ರಮಾಣ |
| ಸಾರಿಗೆ ವೆಚ್ಚ | | | | | | |
| ರೂಪಾಯಿ 0–500ಕ್ಕಿಂತ ಕಡಿಮೆ | 23.3 | 30.2 | 13.8 | 11.2 | 32.8 | 12.9 |
| ರೂಪಾಯಿ 501–1000 | 16.4 | 26.7 | 12.1 | 20.7 | 27.6 | 10.3 |
| ರೂಪಾಯಿ 1001–1500 | 20.7 | 23.3 | 22.4 | 30.2 | 18.1 | 16.4 |
| ರೂಪಾಯಿ 1501–2000 | 28.4 | 13.8 | 26.7 | 17.2 | 11.2 | 24.1 |
| ರೂಪಾಯಿ 2000ಕ್ಕಿಂತ ಹೆಚ್ಚು | 11.2 | 6.0 | 25.0 | 15.5 | 5.2 | 23.3 |
| ವೈದ್ಯರ ಶುಲ್ಕ | | | | | | |
| ರೂಪಾಯಿ 2 ರಿಂದ 20 | 18.1 | 42.2 | 12.9 | 15.5 | 35.3 | 11.2 |
| ರೂಪಾಯಿ 21 ರಿಂದ 100 | 20.7 | 31.0 | 20.7 | 20.7 | 27.6 | 22.4 |
| ರೂಪಾಯಿ 101 ರಿಂದ 200 | 26.7 | 14.7 | 29.3 | 26.7 | 16.4 | 28.4 |
| ರೂಪಾಯಿ 201ಕ್ಕಿಂತ ಹೆಚ್ಚು | 34.5 | 12.1 | 37.1 | 31.9 | 15.5 | 32.8 |
| ಔಷಧ ವೆಚ್ಚ | | | | | | |
| ರೂಪಾಯಿ 0–500 | 18.1 | 34.5 | 33.6 | 16.4 | 27.6 | 23.3 |
| ರೂಪಾಯಿ 501–1000 | 10.3 | 27.6 | 18.1 | 13.8 | 25.9 | 16.4 |
| ರೂಪಾಯಿ 1001–1500 | 25.9 | 12.1 | 19.8 | 23.3 | 11.2 | 14.7 |
| ರೂಪಾಯಿ 1501–2000 | 13.8 | 11.2 | 11.2 | 12.9 | 16.4 | 22.4 |
| ರೂಪಾಯಿ 2000ಕ್ಕಿಂತ ಹೆಚ್ಚು | 31.9 | 14.7 | 13.8 | 28.4 | 13.8 | 18.1 |
| ವೈದ್ಯಕೀಯ ಪರೀಕ್ಷೆಗಾಗಿ | | | | | | |
| ರೂಪಾಯಿ 0–1000 | 45.7 | 48.3 | 28.4 | 33.6 | 38.8 | 29.3 |
| ರೂಪಾಯಿ 1001–1500 | 31.0 | 30.2 | 50.9 | 37.9 | 32.8 | 25.0 |
| ರೂಪಾಯಿ 1501–2000 | 15.5 | 14.7 | 16.4 | 12.9 | 14.7 | 22.4 |
| ರೂಪಾಯಿ 2000ಕ್ಕಿಂತ ಹೆಚ್ಚು | 7.8 | 6.9 | 4.3 | 10.3 | 8.6 | 18.1 |
| ವಸತಿ ವೆಚ್ಚಕ್ಕಾಗಿ | | | | | | |
| ರೂಪಾಯಿ 0–1000 | 45.7 | 34.5 | 34.5 | 33.6 | 38.8 | 35.3 |
| ರೂಪಾಯಿ 1001–1500 | 31.0 | 35.3 | 30.2 | 25.0 | 29.3 | 14.7 |
| ರೂಪಾಯಿ 1501–2000 | 16.4 | 18.1 | 25.0 | 23.3 | 18.1 | 26.7 |
| ರೂಪಾಯಿ 2000ಕ್ಕಿಂತ ಹೆಚ್ಚು | 6.9 | 12.1 | 10.3 | 12.9 | 8.6 | 18.1 |
| ಊಟದ ವೆಚ್ಚಕ್ಕಾಗಿ | | | | | | |
| ರೂಪಾಯಿ 0–1000 | 54.3 | 56.9 | 52.6 | 50.9 | 47.4 | 38.8 |
| ರೂಪಾಯಿ 1001–1500 | 25.9 | 18.1 | 25.0 | 23.3 | 19.8 | 28.4 |
| ರೂಪಾಯಿ 1501–2000 | 13.8 | 11.2 | 8.6 | 12.9 | 16.4 | 20.7 |
| ರೂಪಾಯಿ 2000ಕ್ಕಿಂತ ಹೆಚ್ಚು | 6.0 | 13.8 | 13.8 | 7.8 | 11.2 | 6.9 |

ಮಾಹಿತಿ: ಕ್ಷೇತ್ರಕಾರ್ಯ

ಶುಲ್ಕ, ಔಷಧಿ ಖರೀದಿಗಾಗಿ ಮಾಡಿರುವ ವೆಚ್ಚ, ವೈದ್ಯಕೀಯ ಪರೀಕ್ಷೆಗಳಿಗಾಗಿ ಮಾಡಿರುವ ವೆಚ್ಚ, ವಸತಿ ಮತ್ತು ಊಟಕ್ಕಾಗಿ ಮಾಡಿರುವ ಖರ್ಚನ್ನು ಮುಂದಿನ ಭಾಗದಲ್ಲಿ ವಿವರಿಸಲಾಗಿದೆ.

### ಕುಟುಂಬಗಳಿಗೆ ಬೇಕಾಗುವ ಆರೋಗ್ಯ ಸೇವೆಗಳ ಪ್ರಮಾಣ

ಮೊದಲಿಗೆ ಅಧ್ಯಯನ ಕೈಗೊಂಡ ಕೊಂಕನಳ್ಳಿ ಮತ್ತು ನಿಗದಿ ಗ್ರಾಮಗಳಲ್ಲಿನ ಬಡತನ ರೇಖೆಯ ಕೆಳಗಿರುವ ಕುಟುಂಬಗಳ ಸದಸ್ಯರ ಉತ್ತಮವಾದ ಆರೋಗ್ಯವನ್ನು ಕಾಪಾಡಿಕೊಳ್ಳಲು ಕಳೆದ ಆರು ತಿಂಗಳಲ್ಲಿ ಸಾರಿಗೆಗಾಗಿ ಹಣದ ಬೇಡಿಕೆ ಎಷ್ಟಿತ್ತು ಎಂಬುದನ್ನು ಕೋಷ್ಟಕ 5.10ರಿಂದ

ತಿಳಿದುಬರುತ್ತದೆ. ಕೋಷ್ಟಕದಲ್ಲಿ ತಿಳಿಸಿರುವಂತೆ ಕಲಬುರಗಿ ಜಿಲ್ಲೆಯ ಕೊಂಕನಳ್ಳಿಯಲ್ಲಿರುವ ಶೇಕಡಾ 28.4ರಷ್ಟು ಕುಟುಂಬಗಳು ಕಳೆದ ಆರು ತಿಂಗಳ ಅವಧಿಯಲ್ಲಿ 1501 ರಿಂದ 2000 ರೂಪಾಯಿಗಳನ್ನು ಖರ್ಚು ಮಾಡಿದ್ದಾರೆ ಎಂದು ತಿಳಿದು ಬರುತ್ತದೆ. ಅದೇ ರೀತಿ ನಿಗದಿಯಲ್ಲಿ ಶೇಕಡಾ 30.2ರಷ್ಟು ಕುಟುಂಬಗಳು ರೂಪಾಯಿ 1001 ರಿಂದ 1500ರ ವರೆಗೆ ಎಂದು ಮಾಹಿತಿಯನ್ನು ಹಂಚಿಕೊಂಡಿದ್ದಾರೆ. ಅದೇ ರೀತಿ ಅತಿ ಕಡಿಮೆ ಅಂದರೆ ಶೇಕಡಾ 11.2ರಷ್ಟು ಕುಟುಂಬಗಳು 2000ಕ್ಕಿಂತ ಹೆಚ್ಚಿನ ರೂಪಾಯಿಗಳು ಕೊಂಕನಳ್ಳಿಯಲ್ಲಾದರೆ ಶೇಕಡಾ 11.2ರಷ್ಟು ಕುಟುಂಬಗಳು ಕೇವಲ 500 ರೂಪಾಯಿಕ್ಕಿಂತ ಕಡಿಮೆ ಖರ್ಚು ಮಾಡಿರುವುದು ಕಂಡು ಬರುತ್ತದೆ.

ಅದೇ ರೀತಿಯಾಗಿ ಮುಂದುವರೆದು ವೈದ್ಯರ ಶುಲ್ಕದ ಬಗ್ಗೆ ಹೇಳುವುದಾದರೆ ಕೊಂಕನಳ್ಳಿಯಲ್ಲಿನ ಶೇಕಡಾ 34.5ರಷ್ಟು ಕುಟುಂಬಗಳು ಮತ್ತು ನಿಗದಿಯಲ್ಲಿ ಶೇಕಡಾ 31.9ರಷ್ಟು ಕುಟುಂಬಗಳು ಪ್ರತಿಸಾರಿ ದವಾಖಾನೆಗೆ ಹೋದಾಗ ವೈದ್ಯರ ಶುಲ್ಕ ಎಂದು ಹೇಳಿ 200 ರೂಪಾಯಿಕ್ಕಿಂತ ಹೆಚ್ಚಿಗೆ ಸಂದಾಯ ಮಾಡಿರುವುದು ತಿಳಿದುಬರುತ್ತದೆ. ಆದರೆ ಸರಕಾರದ ಎಲ್ಲಾ ಆರೋಗ್ಯ ಯೋಜನೆಗಳ ಪ್ರಕಾರ ಮತ್ತು ಸಂಶೋಧಕರ ಕ್ಷೇತ್ರಕಾರ್ಯದ ಮಾಹಿತಿಯಂತೆ ಎಲ್ಲಾ ಬಡತನ ರೇಖೆಯ ಕೆಳಗಿರುವ ಮತ್ತು ತಾಯಿ ಮತ್ತು ಮಕ್ಕಳ ಆರೋಗ್ಯಕ್ಕೆ ಉಚಿತವಾದ ನೋಂದಣಿ ಎಂದು ನಮೂದಾಗಿರುತ್ತದೆ. ಆದರೆ ಇದು ಖಾಸಗಿ ಆಸ್ಪತ್ರೆಗಳಲ್ಲಿ ಇರುವುದಿಲ್ಲ. ಖಾಸಗಿ ದವಾಖಾನೆಗಳು ತಮ್ಮದೇ ಆದ ನೋಂದಣಿ ಶುಲ್ಕವೆಂದು ಹೇಳಿ ಪ್ರತಿ ಬಾರಿ ಭೇಟಿ ನೀಡಿದಾಗ 100 ರಿಂದ 500 ರೂಪಾಯಿರವರೆಗೆ ವಸೂಲಿ ಮಾಡುತ್ತವೆ.

**ಸರಕಾರದಿಂದ ವಿತರಿಸುವ ಆರೋಗ್ಯ ಸೇವೆಗಳ ಪ್ರಮಾಣ**

ಆರೋಗ್ಯದ ಮೇಲಿನ ಸಾರಿಗೆಯ ವೆಚ್ಚದಲ್ಲಿ ಸರಕಾರವು ಎಷ್ಟರ ಪ್ರಮಾಣದಲ್ಲಿ ಬಡತನ ರೇಖೆಯ ಕೆಳಗಿರುವ ಕುಟುಂಬಗಳಿಗೆ ಅನುಕೂಲವಾಗಿದೆ ಎಂಬುದು ಹೇಳುವುದಾದರೆ ಕೊಂಕನಳ್ಳಿಯಲ್ಲಿರುವ ಶೇಕಡಾ 30.2ರಷ್ಟು ಮತ್ತು ನಿಗದಿಯಲ್ಲಿ ಶೇಕಡಾ 32.8ರಷ್ಟು ಕುಟುಂಬಗಳಿಗೆ ಕೇವಲ 500 ರೂಪಾಯಿಗಿಂತ ಕಡಿಮೆಯ ಪ್ರಮಾಣದಲ್ಲಿ ಸರಕಾರದಿಂದ ಸಾರಿಗೆಯಲ್ಲಿ ಸಹಾಯವಾಗಿದೆ. ಆದರೆ ಕೊಂಕನಳ್ಳಿಯಲ್ಲಿ ಶೇಕಡಾ 6ರಷ್ಟು ಮತ್ತು ನಿಗದಿಯಲ್ಲಿ ಶೇಕಡಾ 5.2ರಷ್ಟು ಕುಟುಂಬಗಳಿಗೆ ರೂಪಾಯಿ 2000ಕ್ಕಿಂತ ಹೆಚ್ಚಿನ ಪ್ರಮಾಣದಲ್ಲಿ ಸರಕಾರದಿಂದ ಸಾರಿಗೆಗಾಗಿ ಸಹಾಯಧನದ ರೂಪದಲ್ಲಿ ದೊರಕಿದೆ ಎಂದು ಕೋಷ್ಟಕದಿಂದ ತಿಳಿದುಬರುತ್ತದೆ.

**ಕೊರತೆಯಾಗುವ ಆರೋಗ್ಯ ಸೇವೆಗಳ ಪ್ರಮಾಣ**

ಈಗಾಗಲೇ ಹೇಳಿದಂತೆ ಆರೋಗ್ಯಕ್ಕಾಗಿ ಮಾಡುವ ವೆಚ್ಚವನ್ನು ಸಾರಿಗೆ, ವಸತಿ ವೈದ್ಯಕೀಯ ಮತ್ತು ಊಟಕ್ಕಾಗಿ ಎಂದು ವಿಂಗಡಿಸಲಾಗಿದೆ. ಸಾರಿಗೆಯ ವೆಚ್ಚದಲ್ಲಿ ಕೊಂಕನಳ್ಳಿಯಲ್ಲಿನ

ಶೇಕಡಾ 26.7ರಷ್ಟು ಮತ್ತು ಧಾರವಾಡದ ನಿಗದಿ ಗ್ರಾಮದಲ್ಲಿನ ಶೇಕಡಾ 24.1ರಷ್ಟು ಕುಟುಂಬಗಳಿಗೆ ರೂಪಾಯಿ 1500 ರಿಂದ 2000ರದ ವರೆಗೆ ಕೊರತೆಯಾಗುತ್ತದೆ. ಇನ್ನು ವೈದ್ಯರ ಶುಲ್ಕಕ್ಕಾಗಿ ಸಾರ್ವಜನಿಕರು ಮಾಡುವ ಖರ್ಚಿನ ಬಗ್ಗೆ ಹೇಳುವುದಾದರೆ ಕೊಂಕನಳ್ಳಿ ಗ್ರಾಮದಲ್ಲಿ ಶೇಕಡಾ 37.1ರಷ್ಟು ಕುಟುಂಬಗಳಿಗೆ ರೂಪಾಯಿ 200ಕ್ಕಿಂತ ಹೆಚ್ಚಿನ ಹಣಕಾಸಿನ ಅವಶ್ಯಕತೆ ಇರುತ್ತದೆ ಎಂದು ಹೇಳುತ್ತಾರೆ. ಅದೇ ರಿತಿ ಧಾರವಾಡದ ನಿಗದಿಯಲ್ಲಿ ಶೇಕಡಾ   ರಷ್ಟು 32.8 ರಷ್ಟು ಕುಟುಂಬಗಳಿಗೆ ಕೊಂಕನಳ್ಳಿಯಂತೆ ರೂಪಾಯಿ 200ಕ್ಕಿಂತ ಹೆಚ್ಚಿನ ಖರ್ಚು ಡಾಕ್ಟರ್ ಕೊಡಬೇಕಾಗುತ್ತದೆ ಎಂದು ಉತ್ತರಿಸಿರುವುದು ಕಂಡುಬರುತ್ತದೆ. ಔಷಧಕ್ಕಾಗಿ ಕೊಂಕನಳ್ಳಿಯಲ್ಲಿ ಶೇಕಡಾ 33.6ರಷ್ಟು ಕುಟುಂಬಗಳು ಮತ್ತು ಧಾರವಾಡದ ನಿಗದಿಯಲ್ಲಿನ ಶೇಕಡಾ 23.3ರಷ್ಟು ಕುಟುಂಬಗಳಿಗೆ ರೂಪಾಯಿ 500ಕ್ಕಿಂತ ಹೆಚ್ಚಿನ ಪ್ರಮಾಣದಲ್ಲಿ ಬೇಕಾಗುತ್ತದೆ ಎಂದು ತಿಳಿದುಬರುತ್ತದೆ. ಆದರೆ ಕೊಂಕನಳ್ಳಿಯಲ್ಲಿ ಸ್ವಲ್ಪ ಹೆಚ್ಚಿನ ಪ್ರಮಾಣದ ಕುಟುಂಬಗಳಿಗೆ ಹಣಕಾಸಿನ ಅವಶ್ಯಕತೆ ಹೆಚ್ಚಾಗಿರುವುದು ತಿಳಿದು ಬರುತ್ತದೆ. ಇನ್ನು ಸಾರಿಗೆ, ವೈದ್ಯರ ಶುಲ್ಕವಾದ ಮೇಲೆ ಅವರು ನೋಡಿದಾಗ ಕೆಲವೊಂದು ವೈದ್ಯಕೀಯ ಪರೀಕ್ಷೆಗಳನ್ನು ಮಾಡಿಸಲು ಸಿಪಾರಸ್ಸು ಮಾಡುತ್ತಾರೆ. ಅದಕ್ಕಾಗಿ ಕುಟುಂಬದ ಸದಸ್ಯರ ಆರೋಗ್ಯದ ದೃಷ್ಟಿಯಿಂದ ಮಾಡಬೇಕಾಗುತ್ತದೆ. ಆದ್ದರಿಂದ ಕೊಂಕನಳ್ಳಿಯಲ್ಲಿನ ಶೇಕಡಾ 50.9ರಷ್ಟು ಕುಟುಂಬಗಳು ರೂಪಾಯಿ 1000 ದಿಂದ 1500ರವರೆಗೆ ಖರ್ಚು ಮಾಡಿರುವುದು ಕಂಡು ಬರುತ್ತದೆ.

ಅದೇ ರೀತಿಯಾಗಿ ಧಾರವಾಡದಲ್ಲಿನ ಶೇಕಡಾ 29.3ರಷ್ಟು ಕುಟುಂಬಗಳು ಒಂದು ಸಾವಿರದ ವರೆಗೆ ವ್ಯಯಿಸಿರುವುದು ತಿಳಿದು ಬರುತ್ತದೆ. ಆದರೆ ಧಾರವಾಡದ ನಿಗದಿ ಗ್ರಾಮದಲ್ಲಿನ ಎಲ್ಲಾ ಕುಟುಂಬಗಳು ಸರಿ ಸುಮಾರು ಸಾವಿರದಿಂದ 2000ಕ್ಕಿಂತ ಹೆಚ್ಚಿನ ಹಣವನ್ನು ಖರ್ಚು ಮಾಡಲು ಹೆಚ್ಚು ಕಡಿಮೆ ಸಮ ಪ್ರಮಾಣದಲ್ಲಿ ಹಂಚಿಕೆಯಾಗಿವೆ. ಆದರೆ ಕೊಂಕನಳ್ಳಿಯಲ್ಲಿ ಅರ್ಧಕ್ಕಿಂತ ಹೆಚ್ಚಿನ ಕುಟುಂಬಗಳು 1000 ದಿಂದ 1500 ರೂಪಾಯಿಗಳವರೆಗೆ ವೈದ್ಯರು ಹೇಳಿದ ವಿವಿಧ ವೈದ್ಯಕೀಯ ಪರೀಕ್ಷೆಗಳಿಗಾಗಿ ಖರ್ಚು ಮಾಡುತ್ತಾರೆ. ಸಾಮಾನ್ಯವಾಗಿ ಆಸ್ಪತ್ರೆಯಲ್ಲಿ ರೋಗಿಯ ಆರೈಕೆಗಾಗಿ ಜೊತೆಯಲ್ಲಿ ಒಬ್ಬರು ಅಥವಾ ಇಬ್ಬರು ಮನೆಯವರು ಹೋಗುವುದು ವಾಡಿಕೆ. ರೋಗಿಗಳು ಆಸ್ಪತ್ರೆಗೆ ದಾಖಲಾದಾಗ ಅವರ ಜೊತೆಯಲ್ಲಿ ಕುಟುಂಬದ ಒಬ್ಬರು ಅಥವಾ ಇಬ್ಬರು ಸದಸ್ಯರು ಹೋಗುತ್ತಾರೆ. ಅವರಿಗಾಗಿ ಕುಟುಂಬವು ಮಾಡಿರುವ ಊಟ ಮತ್ತು ವಸತಿಗಾಗಿ ಮಾಡಿರುವ ಖರ್ಚಿನ ಕುರಿತು ಲೆಕ್ಕಹಾಕಿ ಕ್ಷೇತ್ರಕಾರ್ಯದ ಸಮಯದಲ್ಲಿ ಮಾಹಿತಿಯನ್ನು ತೆಗೆದುಕೊಳ್ಳಲಾಗಿದೆ. ಇದರಂತೆ ಕಲಬುರಗಿಯ ಕೊಂಕನಳ್ಳಿಯಲ್ಲಿ ಶೇಕಡಾ 34.5ರಷ್ಟು ಕುಟುಂಬಗಳು ಮತ್ತು ಧಾರವಾಡದ ನಿಗದಿಯಲ್ಲಿನ ಶೇಕಡಾ 35.3ರಷ್ಟು ಕುಟುಂಬಗಳು 1000 ರೂಪಾಯಿವರೆಗೆ ಕೇವಲ ವಸತಿಗಾಗಿ ವೆಚ್ಚವನ್ನು ಮಾಡಿರುತ್ತಾರೆ. ಇನ್ನು ಊಟದ ವೆಚ್ಚಕ್ಕಾಗಿ ಕೊಂಕನಳಿಲ್ಲಿಯಲ್ಲಿನ ಶೇಕಡಾ 52.6ರಷ್ಟು ಮತ್ತು ನಿಗದಿಯಲ್ಲಿನ ಶೇಕಡಾ 38.8ರಷ್ಟು

ಬಡತನ ರೇಖೆಯ ಕೆಳಗಿನ ಕುಟುಂಬಗಳು ರೂಪಾಯಿ ಒಂದು ಸಾವಿರದವರೆಗೆ ಖರ್ಚು ಆಗಿರುತ್ತದೆ ಎಂದು ಹೇಳಿರುವುದು ತಿಳಿದು ಬರುತ್ತದೆ. ಈ ರೀತಿಯ ಊಟದ ಖರ್ಚು ಅವರು ಮನೆಯಿಂದ ತಂದಿರುತ್ತಾರೆ ಮತ್ತು ಹೊರಗಿನ ಖಾನಾವಳಿ ಮತ್ತು ಹೋಟೆಲಗಳಿಂದ ತಂದಿರುತ್ತಾರೆ. ಆದ್ದರಿಂದ ಇಲ್ಲಿ ಮುಕ್ತ ಮಾರುಕಟ್ಟೆಯು ಬಹಳ ಮುಖ್ಯವಾದ ಮಾತ್ರ ವಹಿಸುತ್ತದೆ ಎಂದು ತಿಳಿದುಬರುತ್ತದೆ. ಆದ್ದರಿಂದ ಇಲ್ಲಿ ಮುಕ್ತ ಮಾರುಕಟ್ಟೆಯು ಬಹಳ ಮುಖ್ಯವಾದ ಮಾತ್ರ ವಹಿಸುತ್ತದೆ ಎಂದು ತಿಳಿದುಬರುತ್ತದೆ. ಸರಕಾರದ ಅನೇಕ ಆರೋಗ್ಯ ಕಾರ್ಯಕ್ರಮಗಳು ತಾಯಿ ಮತ್ತು ಮಕ್ಕಳ ಮೇಲೆ ಕೆಂದ್ರಿಕೃತವಾಗಿವೆ. ಅನೇಕ ಸಾಮಾನ್ಯ ಕಾಯಿಲೆಯ ಸೇವೆಗಳು ಸರಕಾರದ ಆರೋಗ್ಯ ಕೇಂದ್ರಗಳಲ್ಲಿ ಉಚಿತವಾಗಿ ಸಿಗುತ್ತಿದ್ದರೂ ಸಹ ಭಾರತ ಸರಕಾರವು ಪ್ರತಿ ಐದು ವರ್ಷಕೊಮ್ಮೆ ನಡೆಸುವ ಆರೋಗ್ಯ ಸಮಿಕ್ಷೇಯ ಪ್ರಕಾರ ಕರ್ನಾಟಕದಲ್ಲಿನ ಎಲ್ಲ ಕುಟುಬಗಳು ಆರೋಗ್ಯಕ್ಕಾಗಿ ಸುಮಾರು 3000 ರೂಪಾಯಿಗಳವರೆಗೆ ಖರ್ಚು ಮಾಡುತ್ತವೆ (ಭಾರತ ಸರಕಾರ, 2013).

**ಕುಟುಂಬಗಳ ಶಿಕ್ಷಣ ಸೇವೆಗಳ ಬೇಡಿಕೆ, ಪೂರೈಕೆ ಮತ್ತು ಕೊರತೆಯ ಪ್ರಮಾಣ**

ಕೇಂದ್ರ ಮತ್ತು ರಾಜ್ಯ ಸರಕಾರಗಳು ಬಡತನ ರೇಖೆಯ ಕೆಳಗಿನ ಕುಟುಂಬದಲ್ಲಿರುವ ಮಕ್ಕಳ ಶಿಕ್ಷಣಕ್ಕಾಗಿ ಅನೇಕ ರೀತಿಯ ಯೋಜನೆಗಳನ್ನು ಜಾರಿಯಲ್ಲಿ ತಂದಿರುತ್ತವೆ. ಇವುಗಳಲ್ಲಿ ಪ್ರಮುಖವಾದವು ಹೆಣ್ಣು ಮಕ್ಕಳಿಗೆ ಸ್ನಾತಕೋತ್ತರದವರೆಗೆ ಉಚಿತ ಶಿಕ್ಷಣ, ಉಚಿತ ಶೂ, ಪಠ್ಯ ಪುಸ್ತಕ, ಸಮವಸ್ತ್ರ, ಉಚಿತ ಬಸ್ ಪಾಸ್ ವ್ಯವಸ್ಥೆ, ಉಚಿತ ಲ್ಯಾಪ್‌ಟಾಪ್, ವಸತಿ, ಮಧ್ಯಾಹ್ನದ ಬಿಸಿ ಊಟ ಮತ್ತು ಅನೇಕ ಶಿಷ್ಯವೇತನಗಳೊಂದಿಗೆ ಅಭಿವೃದ್ಧಿಗೆ ಪೂರಕವಾದ ಕಾರ್ಯಕ್ರಮಗಳನ್ನು ಜಾರಿಯಲ್ಲಿ ಇದ್ದರೂ ಸಹ ಬಡತನ ರೇಖೆಯ ಕೆಳಗಿರುವ ಅನೇಕ ಕುಟುಂಬಗಳು ಗುಣಮಟ್ಟದ ಶಿಕ್ಷಣವನ್ನು ಪಡೆಯುವಲ್ಲಿ ಹಲವಾರು ರೀತಿಯ ಖರ್ಚನ್ನು ಮಾಡುತ್ತೆವೆ. ಆ ಖರ್ಚನ್ನು ಪ್ರವೇಶದ ಶುಲ್ಕ, ಪಠ್ಯಪುಸ್ತಕಗಳ ವೆಚ್ಚ, ಸಾರಿಗೆ ವೆಚ್ಚ ಮತ್ತು ಸಮವಸ್ತ್ರದ ವೆಚ್ಚವೆಂದು ವಿಂಗಡಿಸಿ ಕ್ಷೇತ್ರಕಾರ್ಯದ ಸಮಯದಲ್ಲಿ ಕುಟುಂಬಗಳಿಂದ ಮಾಹಿತಿಯನ್ನು ಪಡೆಯಲಾಗಿದೆ.

**ಕುಟುಂಬಗಳಿಗೆ ಬೇಕಾಗುವ ಶಿಕ್ಷಣ ಸೇವೆಗಳ ಪ್ರಮಾಣ**

ಕಲಬುರಗಿಯ ಕೊಂಕನಳ್ಳಿ ಗ್ರಾಮದಲ್ಲಿ ಶೇಕಡಾ 52.6ರಷ್ಟು ಮತ್ತು ಧಾರವಾಡದ ನಿಗದಿಯಲ್ಲಿ ಶೇಕಡಾ 44.5ರಷ್ಟು ಕುಟುಂಬಗಳು ಸೊನ್ನೆಯಿಂದ 200 ರೂಪಾಯಿಗಳವರೆಗೆ ಶಾಲಾ ಶುಲ್ಕವನ್ನಾಗಿ ತುಂಬಿರುತ್ತಾರೆ. ಆದರೆ ಇದರಲ್ಲಿ ಪರಿಶಿಷ್ಟ ಜಾತಿ ಮತ್ತು ಪಂಗಡದ ಕುಟುಂಬದ ವಿದ್ಯಾರ್ಥಿಗಳಿಗೆ ಯಾವುದೇ ಶುಲ್ಕವಿರುವುದಿಲ್ಲ. ಇತರೆ ಹಿಂದುಳಿದ ಎಲ್ಲ ವಿದ್ಯಾರ್ಥಿಗಳಿಗೆ ಸರಕಾರದಿಂದ ನಿಗದಿಯಾದ ಕನಿಷ್ಟ ಶುಲ್ಕವನ್ನು ತೆಗೆದುಕೊಳ್ಳಲಾಗುತ್ತದೆ. ಇದು ಸರಕಾರಿ ಶಾಲೆ ದಾಖಲು ಮಾಡಿದಾಗ ಮಾತ್ರ, ಆದರೆ ಗ್ರಾಮಗಳಲ್ಲಿರುವ ಅನೇಕ ಮಕ್ಕಳನ್ನು ಹತ್ತಿರದ ಪಟ್ಟಣದ ಕನ್ನಡ ಮತ್ತು ಆಂಗ್ಲ ಮಾಧ್ಯಮಗಳ ಶಾಲೆಗೆ ಕಳುಹಿಸುತ್ತಿರುವುದು

## ಕೋಷ್ಟಕ – 5.11
## ಕುಟುಂಬಗಳ ಶಿಕ್ಷಣದ ಬೇಡಿಕೆ, ಪೂರೈಕೆ ಮತ್ತು ಕೊರತೆಯ ಪ್ರಮಾಣ ಪ್ರತಿಶತದಲ್ಲಿ

| ವಿವಿಧ ಶಿಕ್ಷಣಕ್ಕಾಗಿ ಕುಟುಂಬಗಳು ಮಾಡುವ ವೆಚ್ಚ | ಕೊಂಕನಳ್ಳಿ (ಅಧ್ಯಯನಕ್ಕೆ ಆಯ್ಕೆಯಾದ ಒಟ್ಟು ಕುಟುಂಬಗಳ ಸಂಖ್ಯೆ–116) | | | ನಿಗದಿ (ಅಧ್ಯಯನಕ್ಕೆ ಆಯ್ಕೆಯಾದ ಒಟ್ಟು ಕುಟುಂಬಗಳ ಸಂಖ್ಯೆ–110) | | |
|---|---|---|---|---|---|---|
| | ಕುಟುಂಬಗಳಿಗೆ ಅವಶ್ಯಕತೆ | ಕುಟುಂಬಗಳಿಗೆ ಸರಕಾರದಿಂದ ದೊರಕುವ ನೆರವು | ಕುಟುಂಬಗಳಿಗೆ ಕೊರತೆಯಾಗುವ ಪ್ರಮಾಣ | ಕುಟುಂಬಗಳಿಗೆ ಅವಶ್ಯಕತೆ | ಕುಟುಂಬಗಳಿಗೆ ಸರಕಾರದಿಂದ ದೊರಕುವ ನೆರವು | ಕುಟುಂಬಗಳಿಗೆ ಕೊರತೆಯಾಗುವ ಪ್ರಮಾಣ |
| ಶಾಲಾ/ಕಾಲೇಜು ಶುಲ್ಕ | | | | | | |
| ರೂಪಾಯಿ 0–200 | 52.6 | 74.1 | 23.3 | 44.5 | 59.5 | 18.1 |
| ರೂಪಾಯಿ 201–500 | 26.7 | 18.1 | 19.8 | 24.5 | 27.6 | 16.4 |
| ರೂಪಾಯಿ 501–1000 | 9.5 | 3.4 | 25.0 | 10.0 | 6.0 | 25.0 |
| ರೂಪಾಯಿ 1001–2000 | 4.3 | 1.7 | 12.1 | 9.1 | 2.6 | 8.6 |
| ರೂಪಾಯಿ 2000ಕ್ಕಿಂತ ಹೆಚ್ಚು | 6.9 | 2.6 | 19.8 | 11.8 | 4.3 | 26.7 |
| ಪಠ್ಯ ಪುಸ್ತಕಕ್ಕೆ ಮತ್ತು ನೋಟ್ ಬುಕ್ಸಗಳಿಗಾಗಿ | | | | | | |
| ಯಾವುದೇ ನೆರವು ಇಲ್ಲ | 0.0 | 66.4 | 0.0 | 0.0 | 74.5 | 0.0 |
| ರೂಪಾಯಿ 500 ರಿಂದ 1000 | 13.8 | 33.6 | 16.4 | 11.2 | 24.1 | 12.1 |
| ರೂಪಾಯಿ 1001 ರಿಂದ 1500 | 18.1 | 0.0 | 17.2 | 14.7 | 0.0 | 14.7 |
| ರೂಪಾಯಿ 1501 ರಿಂದ 2000 | 39.7 | 0.0 | 26.7 | 43.1 | 0.0 | 25.0 |
| ರೂಪಾಯಿ 2001ಕ್ಕಿಂತ ಹೆಚ್ಚು | 28.4 | 0.0 | 39.7 | 25.9 | 0.0 | 43.1 |
| ಸಾರಿಗೆ ವೆಚ್ಚ | | | | | | |
| ಉಚಿತವಾಗಿ (ಬಸ್‌ಪಾಸ್/ಸೈಕಲ್) | 0 | 80.2 | 6.9 | 0 | 8.1 | 17.2 |
| ರೂಪಾಯಿ 501–1000 | 12.9 | 12.1 | 5.2 | 13.8 | 16.4 | 18.1 |
| ರೂಪಾಯಿ 1001–1500 | 6.9 | 0.0 | 6.9 | 7.8 | 6.9 | 6.9 |
| ರೂಪಾಯಿ 1501ಕ್ಕಿಂತ ಹೆಚ್ಚು | 1.7 | 0.0 | 6.0 | 3.4 | 3.4 | 3.4 |
| ಸಮವಸ್ತ್ರ ವೆಚ್ಚ | | | | | | |
| ಉಚಿತವಾಗಿ | 0 | 45.7 | 0.0 | 0 | 38.8 | 0.0 |
| ರೂಪಾಯಿ 501–1000 | 25.0 | 0.0 | 38.8 | 23.3 | 0.0 | 37.9 |
| ರೂಪಾಯಿ 1001–1500 | 18.1 | 0.0 | 18.1 | 17.2 | 0.0 | 23.3 |
| ರೂಪಾಯಿ 1501–2000 | 8.6 | 0.0 | 30.2 | 9.5 | 0.0 | 20.7 |
| ರೂಪಾಯಿ 2000ಕ್ಕಿಂತ ಹೆಚ್ಚು | 2.6 | 0.0 | 12.9 | 6.0 | 0.0 | 12.9 |

ಮಾಹಿತಿಯ ಮೂಲ: ಕ್ಷೇತ್ರ ಕಾರ್ಯ

ಮಾಹಿತಿಯನ್ನು ಕಲೆಹಾಕುವ ಸಮಯದಲ್ಲಿ ತಿಳಿದು ಬಂದಿರುತ್ತದೆ. ಇನ್ನು ಪಠ್ಯ ಪುಸ್ತಕಗಳಿಗಾಗಿ ಕೊಂಕನಳ್ಳಿಯಲ್ಲಿ ಶೇಕಡಾ 39.7ರಷ್ಟು ಮತ್ತು ನಿಗದಿಯಲ್ಲಿ ಶೇಕಡಾ 43.1ರಷ್ಟು ಕುಟುಂಬಗಳು ರೂಪಾಯಿ 1501 ರಿಂದ ರೂಪಾಯಿ 2000ರದವರೆಗೆ ಒಂದು ವರ್ಷದಲ್ಲಿ ಖರ್ಚು ಮಾಡುತ್ತವೆ ಎಂದು ಹೇಳಿರುವುದು ಕಂಡು ಬರುತ್ತದೆ. ಸಾರಿಗೆಯ ವೆಚ್ಚದಲ್ಲಿ ಅಧ್ಯಯನ ಕೈಗೊಂಡ ಎರಡು ಗ್ರಾಮಗಳಲ್ಲಿ ಶೇಕಡಾ 70ಕ್ಕಿಂತ ಹೆಚ್ಚಿನ ಕುಟುಂಬಗಳು ಸರಕಾರದಿಂದ ಉಚಿತ ಸಾರಿಗೆ ಬಸ್ ಪಾಸ್ ವ್ಯವಸ್ಥೆಯನ್ನು ಹೊಂದಿವೆ. ಇನ್ನು ಉಚಿತ ಸಮವಸ್ತ್ರದಲ್ಲಿಯೂ ಕೂಡ ಎರಡು ಗ್ರಾಮಗಳಲ್ಲಿ ಶೇಕಡಾ 50ರಷ್ಟು ಕುಟುಂಬಗಳ ಮಕ್ಕಳು ಸರಕಾರದ ವತಿಯಿಂದ ವಿತರಿಸುವ ಸಮವಸ್ತ್ರವನ್ನು ಪಡೆದಿದ್ದಾರೆ ಎಂದು ಮಾಹಿತಿಯನ್ನು ಕಲೆಹಾಕುವ ಸಮಯದಲ್ಲಿ ಹೇಳಿರುತ್ತಾರೆ.

**ಸರಕಾರದಿಂದ ವಿತರಿಸುವ ಶಿಕ್ಷಣ ಸೇವೆಗಳ ಪ್ರಮಾಣ**

ಸರಕಾರದಿಂದ ಬಡತನ ರೇಖೆಯ ಕೆಳಗಿನ ಕುಟುಂಬಗಳು ಕಾರ್ಯಕ್ರಮಗಳಿಂದ ಅನೂಕೂಲತೆಯನ್ನು ಪಡೆದಿರುವುದರ ಬಗ್ಗೆ ಹೇಳುವುದಾದರೆ. ಕಲಬುರಗಿಯ ಕೊಂಕನಳ್ಳಿಯಲ್ಲಿ ಶೇಕಡಾ 74.1ರಷ್ಟು ಮತ್ತು ಧಾರವಾಡದ ನಿಗದಿಯಲ್ಲಿ ಶೇಕಡಾ 59.5ರಷ್ಟು ಕುಟುಂಬಗಳಿಗೆ ಶಿಕ್ಷಣದ ವಿವಿಧ ಕಾರ್ಯಕ್ರಮಗಳ ಲಾಭವನ್ನು ಪಡೆದಿದ್ದಾರೆ. ಶಾಲಾ ಶುಲ್ಕವಾಗಿರಬಹುದು, ಉಚಿತ ಪಠ್ಯ ಪುಸ್ತಕವಾಗಿರಬಹುದು, ಉಚಿತ ಸಾರಿಗೆ ಬಸ್ ಪಾಸ್ ವ್ಯವಸ್ಥೆಯಾಗಿರಬಹುದು ಮತ್ತು ಸರಕಾರ ನೀಡುವ ಸಮವಸ್ತ್ರವಾಗಿರಬಹುದು. ಕೊಂಕನಳ್ಳಿ ಗ್ರಾಮದಲ್ಲಿ ಶೇಕಡಾ 66.4ರಷ್ಟು ಮತ್ತು ನಿಗದಿಯಲ್ಲಿ ಶೇಕಡಾ 74.5ರಷ್ಟು ಕುಟುಂಬಗಳಿಗೆ ಸರಕಾರಿ ಮತ್ತು ಖಾಸಗಿ ಅನುದಾನಿತ ಶಾಲೆಗಳಿಗೆ ಹೋಗುವ ಮಕ್ಕಳಿಗೆ ಉಚಿತವಾದ ಪುಸ್ತಕಗಳನ್ನು ವಿತರಿಸಲಾಗಿದೆ. ಇನ್ನು ಶೇಕಡಾ 80.2ರಷ್ಟು ಮತ್ತು ಶೇಕಡಾ 68.1ರಷ್ಟು ಕುಟುಂಬಗಳು ಅನುಕ್ರಮವಾಗಿ ಕೊಂಕನಳ್ಳಿ ಮತ್ತು ನಿಗದಿ ಗ್ರಾಮಗಳಲ್ಲಿನ ಕುಟುಂಬಗಳ ಮಕ್ಕಳು ಶಾಲೆಗೆ ಹೋಗುವುದಕ್ಕಾಗಿ ಸರಕಾರಿ ಬಸ್ಸಿನಲ್ಲಿ ಪ್ರಯಾಣಿಸಲು ಸರಕಾರದಿಂದ ಉಚಿತವಾದ ಸೌಲಭ್ಯವನ್ನು ಹೊಂದಿದ್ದಾರೆ ಎಂದು ಮಾಹಿತಿಯನ್ನು ಕಲೆಹಾಕುವ ಸಮಯದಲ್ಲಿ ಕಂಡು ಬಂದಿದೆ. ಇನ್ನು ಕೊಂಕನಳ್ಳಿಯಲ್ಲಿ ಶೇಕಡಾ 45.7ರಷ್ಟು ಮತ್ತು ನಿಗದಿಯಲ್ಲಿನ ಶೇಕಡಾ 38.8ರಷ್ಟು ಮಕ್ಕಳು ಸರಕಾರದಿಂದ ವಿತರಿಸುವ ಉಚಿತವಾದ ಸಮವಸ್ತ್ರವನ್ನು ಪಡೆದಿದ್ದಾರೆ ಎಂದು ಕೋಷ್ಟಕದಿಂದ ಗೊತ್ತಾಗುತ್ತದೆ.

**ಕೊರತೆಯಾಗುವ ಶಿಕ್ಷಣ ಸೇವೆಗಳ ಪ್ರಮಾಣ**

ಕೊರತೆಯ ಪ್ರಮಾಣವನ್ನು ಹೇಳುವುದಾದರೆ ಕೊಂಕನಳ್ಳಿಯಲ್ಲಿನ ಶೇಕಡಾ 25ರಷ್ಟು ಕುಟುಂಬಗಳಿಗೆ 501 ರಿಂದ 1000 ರೂಪಾಯಿಗಳ ಶಾಲಾ ಶುಲ್ಕದಲ್ಲಿ ಕೊರತೆಯಾಗುತ್ತದೆ ಮತ್ತು ನಿಗದಿಯಲ್ಲಿನ ಕುಟುಂಬಗಳಿಗೆ ಇದು ಸ್ವಲ್ಪ ಹೆಚ್ಚಿನ ಪ್ರಮಾಣದಲ್ಲಿ ಅಂದರೆ ಶೇಕಡಾ 26.7ರಷ್ಟು ಕುಟುಂಬಗಳಿಗೆ 2000ಕ್ಕಿಂತ ಹೆಚ್ಚಿನ ರೂಪಾಯಿಗಳ ಕೊರತೆಯಾಗುತ್ತದೆ ಎಂದು ತಿಳಿದುಬರುತ್ತದೆ. ಇನ್ನು ಪಠ್ಯ ಪುಸ್ತಕದಲ್ಲಿ ಶೇಕಡಾ 39.7ರಷ್ಟು ಕೊಂಕನಳ್ಳಿ ಮತ್ತು 43.1ರಷ್ಟು ನಿಗದಿಯಲ್ಲಿನ ಕುಟುಂಬಗಳಿಗೆ ರೂಪಾಯಿ 2000ಕ್ಕಿಂತ ಹೆಚ್ಚಿನ ಪ್ರಮಾಣದ ಕೊರತೆಯನ್ನು ಕಾಣಬಹುದಾಗಿದೆ. ಹೀಗೆ ಕೊರತೆಯಾದವರು ಹೊರಗಡೆಯ ಅಂಗಡಿಗಳಿಂದ ಖರೀದಿ ಮಾಡಿಕೊಂಡು ತಮ್ಮ ಅಭ್ಯಾಸವನ್ನು ಮಾಡುತ್ತಾರೆ.

**ಕುಟುಂಬಗಳ ಮೂಲ ಸೌಲಭ್ಯಗಳನ್ನು ಪಡೆಯಲು ಬೇಡಿಕೆ, ಪೂರೈಕೆ ಮತ್ತು ಕೊರತೆಯ ಪ್ರಮಾಣ**

ಕೇಂದ್ರ ಸರಕಾರ ಮತ್ತು ರಾಜ್ಯ ಸರಕಾರಗಳು ಜಂಟಿಯಾಗಿ ಅನೇಕ ವಸತಿ, ಕುಡಿಯುವ ನೀರು ಮತ್ತು ಶೌಚಾಲಯಕ್ಕೆ ಸಂಬಂಧಪಟ್ಟಂತೆ ಅನೇಕ ಕಾರ್ಯಕ್ರಮಗಳನ್ನು ಬಡತನ ರೇಖೆಯ ಕೆಳಗಿನ ಕುಟುಂಬಗಳ ಏಳ್ಗೆಗಾಗಿ ಹಾಕಿಕೊಂಡಿವೆ. ಕೋಷ್ಟಕ 12ರಲ್ಲಿ ಅಧ್ಯಯನ

## ಕೋಷ್ಟಕ –5.12

## ಕುಟುಂಬಗಳ ಮೂಲಸೌಕರ್ಯದ ಬೇಡಿಕೆ, ಪೂರೈಕೆ ಮತ್ತು ಕೊರತೆಯ ಪ್ರಮಾಣ ಪ್ರತಿಶತದಲ್ಲಿ

| ಸೂಚಕಗಳು | ಕೊಂಕನಳ್ಳಿ (ಅಧ್ಯಯನಕ್ಕೆ ಆಯ್ಕೆಯಾದ ಒಟ್ಟು ಕುಟುಂಬಗಳ ಸಂಖ್ಯೆ–116) | | | ನಿಗದಿ (ಅಧ್ಯಯನಕ್ಕೆ ಆಯ್ಕೆಯಾದ ಒಟ್ಟು ಕುಟುಂಬಗಳ ಸಂಖ್ಯೆ–110) | | |
|---|---|---|---|---|---|---|
| | ಅವಶ್ಯಕತೆ ಕುಟುಂಬಗಳಿಗೆ | ಸರಕಾರದಿಂದ ದೊರಕುವ ನೆರವು ಕುಟುಂಬಗಳಿಗೆ | ಕೊರತೆಯಾಗುವ ಪ್ರಮಾಣ ಕುಟುಂಬಗಳಿಗೆ | ಅವಶ್ಯಕತೆ ಕುಟುಂಬಗಳಿಗೆ | ಸರಕಾರದಿಂದ ದೊರಕುವ ನೆರವು ಕುಟುಂಬಗಳಿಗೆ | ಕೊರತೆಯಾಗುವ ಪ್ರಮಾಣ ಕುಟುಂಬಗಳಿಗೆ |
| ವಸತಿ | | | | | | |
| ಮನೆ ಇದೆ ಅದರೆ ಚಿಕ್ಕದು ಇದೆ/ನೆರವು ಇಲ್ಲ | 76.72 | 65.52 | 0.00 | 67.27 | 60.0 | 0.00 |
| ರೂಪಾಯಿ 1 ಲಕ್ಷಗಿಂತ ಕಡಿಮೆ | 5.17 | 4.31 | 1.72 | 3.64 | 4.55 | 0.00 |
| ರೂಪಾಯಿ 1ಲಕ್ಷ ದಿಂದ 2ಲಕ್ಷದವರೆಗೆ | 4.31 | 30.17 | 5.17 | 4.55 | 35.45 | 6.36 |
| ರೂಪಾಯಿ 2ಲಕ್ಷದಿಂದ 3ಲಕ್ಷದವರೆಗೆ | 12.07 | 0.00 | 18.10 | 15.45 | 0.00 | 24.55 |
| ರೂಪಾಯಿ 3ಲಕ್ಷದಿಂದ 4ಲಕ್ಷ | 17.24 | 0.00 | 17.24 | 26.36 | 0.00 | 20.91 |
| ರೂಪಾಯಿ 4ಲಕ್ಷ ದಿಂದ 5ಲಕ್ಷದ ವರೆಗೆ | 21.55 | 0.00 | 31.03 | 19.09 | 0.00 | 21.82 |
| ರೂಪಾಯಿ 5ಲಕ್ಷದ ಮೆಲ್ಪಟ್ಟು | 39.66 | 0.00 | 26.72 | 30.91 | 0.00 | 26.36 |
| ಕುಡಿಯುವ ನೀರಿಗಾಗಿ | | | | | | |
| ರೂಪಾಯಿ 501–1000 | 6.0 | 4.31 | 7.8 | 4.3 | 3.64 | 6.0 |
| ರೂಪಾಯಿ 1001–1500 | 15.5 | 11.21 | 16.4 | 13.8 | 13.64 | 15.5 |
| ರೂಪಾಯಿ 1501–2000 | 20.7 | 16.38 | 13.8 | 13.8 | 12.73 | 20.7 |
| ರೂಪಾಯಿ 2000ಕ್ಕಿಂತ ಹೆಚ್ಚು | 10.3 | 7.76 | 14.7 | 20.7 | 17.27 | 10.3 |
| ನಳದ ವ್ಯವಸ್ಥೆ ಇಲ್ಲ | 47.4 | 47.41 | 0.0 | 42.2 | 0.00 | 0.0 |
| ಶೌಚಾಲಯಕ್ಕಾಗಿ | | | | | | |
| ಶೌಚಾಲಯದ ವ್ಯವಸ್ಥೆಯೆ ಇಲ್ಲ | 90.5 | 88.79 | 0.0 | 84.5 | 80.91 | 66.4 |
| ಸರಕಾರದ ಯೋಜನೆಯಲ್ಲಿ ಪಡೆದಿದ್ದು | 3.4 | 6.03 | 0.0 | 7.3 | 8.18 | 0.0 |
| ರೂಪಾಯಿ 5000ಕ್ಕಿಂತ ಕಡಿಮೆ | 4.3 | 3.45 | 26.7 | 2.7 | 1.82 | 25.9 |
| ರೂಪಾಯಿ 5001 ರಿಂದ 10000ಚ | 1.7 | 1.72 | 9.5 | 3.6 | 0.00 | 7.8 |
| ರೂಪಾಯಿ 10000 ಕ್ಕಿಂತ ಹೆಚ್ಚು | 0 | 0.00 | 63.8 | 1.8 | 0.00 | 61.2 |

ಮಾಹಿತಿಯ ಮೂಲ: ಕ್ಷೇತ್ರ ಕಾರ್ಯ

ಕೈಗೊಂಡ ಗ್ರಾಮಗಳಲ್ಲಿನ ಬಡತನ ರೇಖೆಯ ಕೆಳಗಿರುವ ಕುಟುಂಬಗಳು ವಸತಿಗಾಗಿ, ಕುಡಿಯುವ ನೀರಿನ ಮತ್ತು ಶೌಚಾಲಯದ ಸೌಲಭ್ಯವನ್ನು ಪಡೆಯಲು ಮಾಡುವ ಖರ್ಚು, ಸರಕಾರದಿಂದ ಪಡೆದ ಸಹಾಯಧನ ಮತ್ತು ಕೊರತೆಯಾಗುವ ಪ್ರಮಾಣವನ್ನು ವಿಶ್ಲೇಷಿಸಲಾಗಿದೆ.

ಬಡತನ ರೇಖೆಯ ಕೆಳಗಿನ ಕುಟುಂಬಗಳಿಗೆ ಬೇಕಾಗುವ ವಸತಿ, ಕುಡಿಯುವ ನೀರು ಮತ್ತು ಶೌಚಾಲಯದ ಸೌಲಭ್ಯಗಳನ್ನು ಪಡೆಯಲು ಬೇಡಿಕೆ: ಕುಟುಂಬಗಳಿಗೆ ಬೇಕಾದ ವಸತಿ, ಕುಡಿಯುವ ನೀರು ಮತ್ತು ಶೌಚಾಲಯದ ಸೌಲಭ್ಯಗಳನ್ನು ದೊರಕಿಸಿಕೊಡುವುದರಲ್ಲಿ ಸರಕಾರದ ಯೋಜನೆಗಳು ವಿಫಲವಾಗಿವೆ ಎಂದು ಹೇಳಬಹುದು. ಏಕೆಂದರೆ ಹೆಚ್ಚಿನ ಕುಟುಂಬಗಳ ಬೇಡಿಕೆಯನ್ನು ಪೂರೈಸಲು ಸಾಧ್ಯವಾಗಿಲ್ಲ. ಕೊಂಕನಳ್ಳಿಯಲ್ಲಿನ ಶೇಕಡಾ 65.52ರಷ್ಟು ಕುಟುಂಬಗಳಿಗೆ ಸರಕಾರದಿಂದ ಸವಲತ್ತು ದೊರಕಿದೆ ಆದರೆ ನಿಗದಿಯಲ್ಲಿ ಶೇಕಡಾ 60ರಷ್ಟು ಕುಟುಂಬಗಳು ಸರಕಾರದ ಕಾರ್ಯ ಯೋಜನೆಗಳಿಂದ ಲಾಭವನ್ನು ಪಡೆದಿವೆ. ಆದರೆ ಈ ಲಾಭವು ಅವರ ಪೂರ್ಣ ಪ್ರಮಾಣದ ಮನೆಯನ್ನು ಕಟ್ಟಿಕೊಳ್ಳಲು ಸಾಧ್ಯವಿಲ್ಲ. ಏಕೆಂದರೆ

ಸರಕಾರವು ಕೊಡುವ ಸಹಾಯಧನದಿಂದ ಇವತ್ತಿನ ಮಾರುಕಟ್ಟೆಯಲ್ಲಿ ಒಂದು ಲಾರಿ ಮರಳು ಸಹ ಬರುವುದಿಲ್ಲ. ಅದು ಕೂಡ ಕಂತುಗಳ ರೂಪದಲ್ಲಿ ಕೊಡಲಾಗುತ್ತದೆ. ಆದ್ದರಿಂದ ಈ ಒಂದು ಕೊರತೆಯನ್ನು ಕುಟುಂಬಗಳು ಅವರ ಸಂಬಂಧಿಕರಲ್ಲಿ ಅಥವಾ ಗ್ರಾಮದ ಧನಿಕರಲ್ಲಿ ಸಾಲ ಮಾಡಿ ಮನೆಯನ್ನು ಕಟ್ಟಿಸಿಕೊಳ್ಳುತ್ತಾರೆ.

ಕೊಂಕನಳ್ಳಿಯಲ್ಲಿನ ಶೇಕಡಾ 39.6ರಷ್ಟು ಕುಟುಂಬಗಳಿಗೆ ಸರಕಾರದ ಅನುದಾನದ ಹೊರತಾಗಿ ರೂಪಾಯಿ 5ಲಕ್ಷದ ಮೇಲ್ಪಟ್ಟು ಅವಶ್ಯಕವಾಗಿ ಬೇಕಾಗಿರುತ್ತದೆ ಮತ್ತು ಇದು ನಿಗದಿಯಲ್ಲಿನ ಶೇಕಡಾ 30.91ರಷ್ಟು ಕುಟುಂಬಗಳಿಗೆ ಹೆಚ್ಚಿನ ಪ್ರಮಾಣದಲ್ಲಿ ಬೇಕಾಗಿರುವುದು ಕಂಡು ಬರುತ್ತದೆ. ಅದೇ ರೀತಿ ಮೀರಾ ಬಕ್ರು (1984)ರವರು ತಮ್ಮ ಲೇಖನದಲ್ಲಿಯೂ ಸಹ ಸರಕಾರಗಳು ವಸತಿಗಾಗಿ ಕೊಡುವ ಹಣಕಾಸಿನ ನೆರವು ಸಾಕಾಗುತ್ತಿಲ್ಲ ಎಂದು ಎತ್ತಿ ತೋರಿಸಿದ್ದಾರೆ. ಆದ್ದರಿಂದ ಸರಕಾರಗಳು ಬಡವರಿಗೆ ಗುಣಮಟ್ಟದ ಮನೆಗಳನ್ನು ಕಟ್ಟಿಕೊಡುವಲ್ಲಿ ಎಡವಿವೆ ಎಂದು ಉಲ್ಲೇಖಿಸಿದ್ದಾರೆ. ಈ ಕ್ಷೇತ್ರಕಾರ್ಯ ಕೈಗೊಂಡ ಎರಡು ಗ್ರಾಮಗಳಲ್ಲಿಯೂ ಸಹ ಅನೇಕ ಬಡತನ ರೇಖೆಯ ಕೆಳಗಿರುವ ಕುಟುಂಬಗಳು ಸರಕಾರದಿಂದ ಹಂಚಿಕೆಯಾದ ಮನೆಗಳನ್ನು ಪೂರ್ಣಗೊಳಿಸಿಕೊಳ್ಳಲು ತಮ್ಮ ಹತ್ತಿರದ ಸಂಬಂಧಿಕರಲ್ಲಿ ಅಥವಾ ಗ್ರಾಮದವರಲ್ಲಿ ಸಾಲ ಮಾಡಿರುವುದು ಮಾಹಿತಿಯನ್ನು ಕಲೆಹಾಕುವ ಸಮಯದಲ್ಲಿ ಅನೇಕ ಕುಟುಂಬಗಳು ಹೇಳಿಕೊಂಡಿರುತ್ತಾರೆ.

**ಒಂದು ತಿಂಗಳಿಗೆ ಕುಟುಂಬಗಳು ಮಾಡುವ ಖರ್ಚು**

ಇಲ್ಲಿಯವರೆಗೆ ಬಡತನ ರೇಖೆಯ ಕೆಳಗಿನ ಕುಟುಂಬಗಳಿಗೆ ಒಂದು ತಿಂಗಳಿಗೆ ಬೇಕಾಗುವ, ಪಡಿತರ ಅಂಗಡಿಗಳ ಮೂಲಕ ವಿತರಣೆಯಾಗುವ ಮತ್ತು ಒಂದು ತಿಂಗಳಿಗೆ ಕೊರತೆಯಾಗುವ ಅಕ್ಕಿ, ಗೋಧಿ, ಸಕ್ಕರೆ ಸೀಮೆ ಎಣ್ಣೆಯನ್ನು ಮತ್ತು ಜೋಳದ ಪ್ರಮಾಣವನ್ನು ತಿಳಿದುಕೊಂಡಿದ್ದೇವೆ. ಈಗ ಮುಂದಿನ ಕೋಷ್ಟಕ 13 ದಿಂದ ಈ ಮೇಲೆ ಹೇಳಿದ ಎಲ್ಲಾ ಆಹಾರ ಪದಾರ್ಥಗಳನ್ನು ಪಡೆಯಲು ಕುಟುಂಬಗಳು ಎಷ್ಟು ರೂಪಾಯಿಗಳು ಖರ್ಚು ಮಾಡುತ್ತವೆ ಎಂಬುದನ್ನು ತಿಳಿದುಕೊಳ್ಳಬಹುದು. ಇಲ್ಲಿ ಜೋಳವನ್ನು ಪಡಿತರ ಅಂಗಡಿಗಳಲ್ಲಿ ವಿತರಿಸದೆ ಇರುವುದರಿಂದ ಅದನ್ನು ಪರಿಗಣನೆಗೆ ತೆಗೆದುಕೊಳ್ಳಲಾಗಿಲ್ಲ. ಕ್ರಮವಾಗಿ ಕಲಬುರಗಿಯಲ್ಲಿನ ಕೊಂಕನಳ್ಳಿ ಮತ್ತು ಧಾರವಾಡದಲ್ಲಿನ ನಿಗದಿ ಗ್ರಾಮದಲ್ಲಿ ಶೇಕಡಾ 41.38ರಷ್ಟು ಮತ್ತು ಶೇಕಡಾ 38.18ರಷ್ಟು ಕುಟುಂಬಗಳು ಪ್ರತಿ ತಿಂಗಳಿಗೆ ರೂಪಾಯಿ 150 ಖರ್ಚು ಮಾಡುತ್ತವೆ. ಇನ್ನು ಶೇಕಡಾ 30.17ರಷ್ಟು ಕೊಂಕನಳ್ಳಿ ಮತ್ತು ಶೇಕಡಾ 35.45ರಷ್ಟು ನಿಗದಿಯಲ್ಲಿ ಕುಟುಂಬಗಳಿಗೆ ಪ್ರತಿ ತಿಂಗಳಿಗೆ ರೂಪಾಯಿ 50 ಖರ್ಚಾಗುತ್ತದೆ. ಕೊಂಕನಳ್ಳಿಯಲ್ಲಿನ ಶೇಕಡಾ 28.45ರಷ್ಟು ಮತ್ತು

## ಕೋಷ್ಟಕ – 5.13
## ಕುಟುಂಬಗಳು ಒಂದು ತಿಂಗಳಿಗೆ ಖರ್ಚು ಮಾಡುವ ಒಟ್ಟು ಹಣ

| ಹಣ (ರೂ.ಗಳಲ್ಲಿ)* | ಕೊಂಕನಳ್ಳಿ (ಅಧ್ಯಯನಕ್ಕೆ ಆಯ್ಕೆಯಾದ ಒಟ್ಟು ಕುಟುಂಬಗಳ ಸಂಖ್ಯೆ–116) | | ನಿಗದಿ (ಅಧ್ಯಯನಕ್ಕೆ ಆಯ್ಕೆಯಾದ ಒಟ್ಟು ಕುಟುಂಬಗಳ ಸಂಖ್ಯೆ–110) | |
|---|---|---|---|---|
| | ಒಟ್ಟು ಕುಟುಂಬಗಳ ಸಂಖ್ಯೆ | ಪ್ರತಿಶತ | ಒಟ್ಟು ಕುಟುಂಬಗಳ ಸಂಖ್ಯೆ | ಪ್ರತಿಶತ |
| ರೂಪಾಯಿ 50 | 35 | 30.17 | 39 | 35.45 |
| ರೂಪಾಯಿ 140 | 33 | 28.45 | 29 | 26.36 |
| ರೂಪಾಯಿ 150 | 48 | 41.38 | 42 | 38.18 |
| ಒಟ್ಟು | 116 | 100.00 | 110 | 100.00 |

ಮಾಹಿತಿಯ ಮೂಲ: ಕ್ಷೇತ್ರ ಕಾರ್ಯ
ಟಿಪ್ಪಣಿ: ಸರಕಾರ ನಿಗದಿ ಪಡಿಸಿದ ಬೆಲೆ ಕ್ರಮವಾಗಿ ರೂಪಾಯಿ 45, 135 ಮತ್ತು 145 ಆಗುತ್ತದೆ ಆದರೆ ಮಾಹಿತಿಯನ್ನು ಸಂಗ್ರಹಿಸುವಾಗ ಮಾಹಿತಿದಾರರು ನೀಡಿರುವ ಆಧಾರದ ಮೇಲೆ ಮೇಲಿನ ಮಾಹಿತಿಯನ್ನು ನೀಡಲಾಗಿದೆ.

ನಿಗದಿಯಲ್ಲಿನ ಶೇಕಡಾ 26.36ರಷ್ಟು ಕುಟುಂಬಗಳು ಪ್ರತಿ ತಿಂಗಳಿಗೆ ರೂಪಾಯಿ 140ರಷ್ಟನ್ನು ಖರ್ಚು ಮಾಡುತ್ತವೆ ಎಂದು ಹೇಳಿದ್ದಾರೆ. ಈ ಎಲ್ಲ ಖರ್ಚು ಪಡಿತರ ನ್ಯಾಯಬೆಲೆ ಅಂಗಡಿಗಳ ಮೂಲಕ ವಿತರಣೆಯಾಗುವ ಅಕ್ಕಿ, ಗೋಧಿ, ಸಕ್ಕರೆ ಮತ್ತು ಸೀಮೆ ಎಣ್ಣೆಗಾಗಿ ಮಾತ್ರ. ಇನ್ನಿತರೆ ಆಹಾರ ದವಸ ಧಾನ್ಯಗಳಿಗೆ ಮಾಡಲಾಗುವ ಖರ್ಚನ್ನು ಮುಂದಿನ ಕೋಷ್ಟಕದಿಂದ ತಿಳಿಯಪಡಿಸಲಾಗಿದೆ. ಒಂದು ಪ್ರಮುಖವಾದ ವಿಚಾರವೆಂದರೆ ಸರಕಾರ ನಿಗದಿ ಪಡಿಸಿದ ಬೆಲೆ ಕ್ರಮವಾಗಿ ರೂಪಾಯಿ 45, 135 ಮತ್ತು 145 ಆಗುತ್ತದೆ ಆದರೆ ಪಡಿತರ ಅಂಗಡಿಗಳು ಕುಟುಂಬಗಳಿಂದ ಕ್ರಮವಾಗಿ ರೂಪಾಯಿ 50, 140 ಮತ್ತು 150ನ್ನು ತೆಗೆದುಕೊಳ್ಳುತ್ತಾರೆ ಎಂದು ಅನೇಕ ಕುಟುಂಬಗಳು ಮಾಹಿತಿಯನ್ನು ಸಂಗ್ರಹಿಸುವಾಗ ತಮ್ಮ ಅಳಲನ್ನು ಹಂಚಿಕೊಳ್ಳುತ್ತಿದ್ದರು.

ಯಾಕೆ ಐದು ರೂಪಾಯಿಗಳನ್ನು ಹೆಚ್ಚಿಗೆ ತೆಗೆದುಕೊಳ್ಳುತ್ತಿದ್ದಾರೆ? ಎಂದು ಕೇಳಿದಾಗ ಸಾಮಾನ್ಯವಾಗಿ ಅನೇಕ ಕುಟುಂಬಗಳು ಗೊತ್ತಿಲ್ಲ ಎಂದು ಹೇಳುತ್ತಿದ್ದರು. ಇನ್ನು ಕೆಲವೊಂದು ಕುಟುಂಬಗಳು ನ್ಯಾಯಬೆಲೆ ಅಂಗಡಿಗಳ ವ್ಯವಸ್ಥಾಪಕರು ತಾಲೂಕಿನ ಗೋದಾಮಿನಿಂದ ಲಾರಿಗಳಲ್ಲಿ ಹೇರಿಕೊಡುವವರ ಕೂಲಿ ಮತ್ತು ಅಂಗಡಿಗಳಲ್ಲಿ ಪ್ರತಿಯೊಬ್ಬರಿಗೂ ತೂಕಮಾಡಿ ಹಂಚುವ ವ್ಯಕ್ತಿಗೆ ಕೂಲಿಯನ್ನು ಕೊಡಬೇಕು ಎಂದು ಹೇಳಿದ್ದರು. ಸರಕಾರವು ನಿಗದಿ ಪಡಿಸಿದ ಒಂದು ರೂಪಾಯಿಗೆ ಒಂದು ಕೆ.ಜಿ ಅಕ್ಕಿಯನ್ನು ವಿತರಿಸುವ ಪೂರ್ವದಲ್ಲಿ ನಿಗದಿ ಗ್ರಾಮದಲ್ಲಿರುವ ಪ್ರಾಥಮಿಕ ಕೃಷಿ ಪತ್ತಿನ ಸಹಕಾರ ಸಂಘದ ನ್ಯಾಯಬೆಲೆ ಅಂಗಡಿಯ ವ್ಯವಸ್ಥಾಪಕರು ಊರಿನಲ್ಲಿ ಒಂದು ಡಂಗುರವನ್ನು ಹೊಡೆಸಿ ಎಲ್ಲರನ್ನೂ ಒಂದು ಕಡೆ ಸೇರಿಸಿ ಎಲ್ಲಾ ಕುಟುಂಬಗಳಿಂದ ಹೆಚ್ಚುವರಿಯಾಗಿ ಐದು ರೂಪಾಯಿಗಳನ್ನು ತೆಗೆದುಕೊಳ್ಳಲಾಗುತ್ತದೆ ಎಂದು ಹೇಳಿದ್ದರು. ಆಗ ಅಲ್ಲಿ ಪರ ಮತ್ತು ವಿರೋಧ ವ್ಯಕ್ತವಾದಾಗ ಎಲ್ಲರೂ ಒಂದು ತೀರ್ಮಾನಕ್ಕೆ ಬರುವವರೆಗೆ

ಆಹಾರ ಪದಾರ್ಥಗಳನ್ನು ವಿತರಿಸುವುದಿಲ್ಲ ಎಂದು ಹೇಳಿ ಸಭೆಯನ್ನು ಮುಕ್ತಾಯಗೊಳಿಸಲಾಯಿತ್ತು. ಒಂದು ವಾರದ ಅಂತರದಲ್ಲಿ ಊರಿನ ಹಿರಿಯರನ್ನು ಸೇರಿಸಿ ಐದು ರೂಪಾಯಿಗಳನ್ನು ಹೆಚ್ಚುವರಿಯಾಗಿ ತೆಗೆದುಕೊಳ್ಳುವ ನಿರ್ಧಾರವನ್ನು ಮಾಡಲಾಯಿತ್ತು. ಅದರಂತೆ ಎಲ್ಲಾ ಕುಟುಂಬಗಳು ಪ್ರತಿ ತಿಂಗಳು ಐದು ರೂಪಾಯಿಗಳನ್ನು ಹೆಚ್ಚುವರಿಯಾಗಿ ಪಾವತಿಸಿ ತಮ್ಮ ಪಾಲಿನ ಪದಾರ್ಥಗಳನ್ನು ತೆಗೆದುಕೊಂಡು ಹೋಗುತ್ತಾರೆ. ಈಗಾಗಲೆ ಹೇಳಿದ ಹಾಗೆ ಏನಾದರೂ ಕೇಳಿದರೆ ಸರಕಾರದಿಂದ ಸಿಗುವ ಸೌಲಭ್ಯಗಳಿಂದ ವಂಚಿತರನ್ನಾಗಿಸುತ್ತಾರೆ ಎಂಬ ಭಯದಿಂದ ಗ್ರಾಮದಲ್ಲಿರುವ ಎಲ್ಲಾ ಕುಟುಂಬಗಳು ಪ್ರಶ್ನೆ ಮಾಡದೆ ತೆಗೆದುಕೊಂಡು ಹೋಗುತ್ತೇವೆ ಎಂದು ಹೇಳಿದ್ದರು. ಪ್ರತಿ ಒಂದು ಕುಟುಂಬದಿಂದ ನ್ಯಾಯ ಬೆಲೆ ಅಂಗಡಿಯವರು ಐದು ರೂಪಾಯಿಗಳನ್ನು ಹೆಚ್ಚಿಗೆ ವಸೂಲಿ ಮಾಡುತ್ತಿದ್ದರು.

**ಪ್ರತಿ ತಿಂಗಳು ಕುಟುಂಬದ ನಿರ್ವಹಣೆಗಾಗಿ ಮಾಡುವ ಒಟ್ಟು ವೆಚ್ಚ**

ಇಲ್ಲಿಯವರಗೆ ವಿಶ್ಲೇಷಣೆ ಮಾಡಿರುವುದು ಕುಟುಂಬಗಳಿಗೆ ಪ್ರತಿ ತಿಂಗಳು ಬೇಕಾಗುವ ಅಕ್ಕಿ, ಸಕ್ಕರೆ, ಗೋಧಿ ಮತ್ತು ಸೀಮೆ ಎಣ್ಣೆಯ ಅವಶ್ಯಕತೆ, ಸರಕಾರದಿಂದ ಪಡೆಯುತ್ತಿರುವ ಮತ್ತು ಕುಟುಂಬಗಳು ಅನುಭವಿಸುತ್ತಿರುವ ಆಹಾರ ಪದಾರ್ಥಗಳ ಕೊರತೆಯನ್ನು ತಿಳಿದು ಕೊಳ್ಳಲಾಯಿತು. ಆದರೆ ಎಲ್ಲಾ ಕುಟುಂಬಗಳು ಕೇವಲ ಅಕ್ಕಿ, ಗೋಧಿ, ಸಕ್ಕರೆಯನ್ನು ತಿಂದು ಜೀವನ ಸಾಗಿಸಲು ಸಾಧ್ಯವಿಲ್ಲ. ಅವುಗಳಿಗೆ ಪೂರಕವಾದ ಇನ್ನೂ ಅನೇಕ ಪದಾರ್ಥಗಳ ಅವಶ್ಯಕತೆ ಇರುತ್ತದೆ. ಉದಾಹರಣೆಗಾಗಿ, ಅಕ್ಕಿ ಕೊಟ್ಟರೆ ಅದನ್ನು ಅನ್ನ ಮಾಡಿಕೊಂಡು ಸೇವಿಸಲು ಅದನ್ನು ಕುದಿಸಲು ಶುದ್ಧವಾದ ನೀರು, ಒಲೆಯನ್ನು ಹಚ್ಚಲು ಕಡ್ಡಿ ಪೊಟ್ಟಣ, ಉರುವಲು ಅಥವಾ ಅನಿಲ ಬೇಕು ಮತ್ತು ಆರೋಗ್ಯದ ದೃಷ್ಟಿಯಿದ ಹಾಗೂ ರುಚಿಗಾಗಿ ಉಪ್ಪಿನ ಅವಶ್ಯಕತೆಯೂ ಇರುವುದು. ಉಪ್ಪು ಹಾಕಿದಾಗ ಮಾತ್ರ ಅನ್ನ ತಯ್ಯಾರು ಆಗುತ್ತದೆ. ಅನ್ನ ಆದ ನಂತರದಲ್ಲಿ ಅದರ ಜೊತೆಗೆ ಸಾಂಬಾರ ಮತ್ತು ತರಕಾರಿಯಿಂದ ಮಾಡಿದ ಪಲ್ಯದ ಅವಶ್ಯಕತೆ ಇರುತ್ತದೆ. ಜೊತೆ ಜೊತೆಗೆ ಅಡುಗೆ ಮಾಡಿದ್ದನ್ನು ನಾಲಿಗೆಗೆ ತಕ್ಕಂತೆ ರುಚಿಯಾಗಬೇಕಾದರೆ ಅದಕ್ಕೆ ಉಪ್ಪಿನಕಾಯಿ ಮತ್ತು ಇತರೆ ಮಸಾಲ ಪದಾರ್ಥಗಳು ಬೇಕಾಗುತ್ತವೆ. ಇವಲ್ಲವುಗಳಿಗೆ ಕುಟುಂಬಗಳು ಮುಕ್ತ ಮಾರುಕಟ್ಟೆಯ ಮೇಲೆ ಅವಲಂಬಿತವಾಗಿವೆ. ಈ ಪೂರಕ ಪದಾರ್ಥಗಳು ಸರಕಾರವು ಯಾವುದೇ ಯೋಜನೆ ಅಥವಾ ಅಂಗಡಿಗಳ ಮೂಲಕ ವಿತರಿಸುವುದಿಲ್ಲ. ಬದಲಾಗಿ ಅವುಗಳನ್ನು ಎಲ್ಲಾ ಕುಟುಂಬಗಳು ಮುಕ್ತ ಮಾರುಕಟ್ಟೆಯಿಂದ ಖರೀದಿಸಬೇಕಾಗುತ್ತದೆ. ಆದ್ದರಿಂದ ಬಡತನ ರೇಖೆಯ ಕೆಳಗಿನ ಕುಟುಂಬಗಳ ಅಭಿವೃದ್ಧಿಯಲ್ಲಿ ಮುಕ್ತ ಮಾರುಕಟ್ಟೆಯ ಪಾತ್ರವು ಸಹ ಬಹಳ ಪ್ರಮುಖವಾಗಿದೆ. ಒಂದು ವೇಳೆ ಊರಲ್ಲಿ ಅಂಗಡಿಗಳು ಮತ್ತು ಮುಕ್ತ ಮಾರುಕಟ್ಟೆ ಇಲ್ಲದೆ ಇದ್ದರೆ ಅವರ ಪರಿಸ್ಥಿತಿ ಇನ್ನೂ ಕೆಳ ಮಟ್ಟದಲ್ಲಿ ಹೋಗುತ್ತಿತ್ತು.

ಆದ್ದರಿಂದ ಮುಂದಿನ ಕೋಷ್ಟಕ 14ರಲ್ಲಿ ಸರಕಾರವು ವಿತರಿಸುವ ಮೇಲಿನ ಪದಾರ್ಥಗಳನ್ನು ಹೊರತು ಪಡಿಸಿ ಒಂದು ತಿಂಗಳಿಗೆ ಕುಟುಂಬಗಳು ಖರ್ಚು ಮಾಡುವ ಒಟ್ಟು ವೆಚ್ಚವನ್ನು ಸಹ ವಿಶ್ಲೇಷಿಸಲಾಗಿದೆ. ಕ್ರಮವಾಗಿ ಕಲಬುರಗಿಯಲ್ಲಿನ ಕೊಂಕನಳ್ಳಿಯ ಶೇಕಡಾ 23.28ರಷ್ಟು ಕುಟುಂಬಗಳಿಗೆ ಪ್ರತಿತಿಂಗಳು ಸರಾಸರಿ ರೂಪಾಯಿ 2500 ಮತ್ತು ಧಾರವಾಡದಲ್ಲಿನ ನಿಗದಿ ಗ್ರಾಮದಲ್ಲಿನ ಶೇಕಡಾ 26.36ರಷ್ಟು ರಷ್ಟು ಹಣವನ್ನು ಕುಟುಂಬಗಳು ಪ್ರತಿತಿಂಗಳು ಸರಾಸರಿ ರೂಪಾಯಿ 3000ಗಳಷ್ಟು ಇನ್ನಿತರೆ ಪದಾರ್ಥಗಳನ್ನು ಮುಕ್ತ ಮಾರುಕಟ್ಟೆಯಿಂದ ಖರೀದಿ ಮಾಡಲು ಖರ್ಚು ಮಾಡುತ್ತವೆ ಎಂದು ಹೇಳಿದ್ದಾರೆ. ಕೊಂಕನಳ್ಳಿಯ ಶೇಕಡಾ 5.17ರಷ್ಟು ಕುಟುಂಬಗಳಿಗೆ ಪ್ರತಿತಿಂಗಳು ರೂಪಾಯಿ 4000ಗಳಷ್ಟು ಬೇಕಾದರೆ ನಿಗದಿಯಲ್ಲಿನ ಶೇಕಡಾ 5.45ರಷ್ಟು ಕುಟುಂಬಗಳಿಗೆ ರೂಪಾಯಿ 500ರಷ್ಟು ಹಣ ಪ್ರತಿತಿಂಗಳು ಬೇಕಾಗುತ್ತದೆ ಎಂದು ಹೇಳಿದ್ದಾರೆ.

**ಕೋಷ್ಟಕ – 5.14**

**ಬಡ ಕುಟುಂಬಗಳ ಖರ್ಚು ಮತ್ತು ಮುಕ್ತ ಮಾರುಕಟ್ಟೆಯ ಪಾತ್ರ**

| ಹಣ (ರೂ.ಗಳಲ್ಲಿ) | ಕೊಂಕನಳ್ಳಿ (ಅಧ್ಯಯನಕ್ಕೆ ಆಯ್ಕೆಯಾದ ಒಟ್ಟು ಕುಟುಂಬಗಳ ಸಂಖ್ಯೆ–116) | | ನಿಗದಿ (ಅಧ್ಯಯನಕ್ಕೆ ಆಯ್ಕೆಯಾದ ಒಟ್ಟು ಕುಟುಂಬಗಳ ಸಂಖ್ಯೆ–110) | |
|---|---|---|---|---|
| | ಒಟ್ಟು ಕುಟುಂಬಗಳ ಸಂಖ್ಯೆ | ಪ್ರತಿಶತ | ಒಟ್ಟು ಕುಟುಂಬಗಳ ಸಂಖ್ಯೆ | ಪ್ರತಿಶತ |
| ರೂಪಾಯಿ 500 | 11 | 9.48 | 6 | 5.45 |
| ರೂಪಾಯಿ 800 | 13 | 11.21 | 9 | 8.18 |
| ರೂಪಾಯಿ 1000 | 15 | 12.93 | 13 | 11.82 |
| ರೂಪಾಯಿ 1500 | 13 | 11.21 | 9 | 8.18 |
| ರೂಪಾಯಿ 2000 | 12 | 10.34 | 11 | 10.00 |
| ರೂಪಾಯಿ 2500 | 27 | 23.28 | 17 | 15.45 |
| ರೂಪಾಯಿ 3000 | 12 | 10.34 | 29 | 26.36 |
| ರೂಪಾಯಿ 4000 | 6 | 5.17 | 9 | 8.18 |
| ರೂಪಾಯಿ 5000 | 7 | 6.03 | 7 | 6.36 |
| ಒಟ್ಟು | 116 | 100.00 | 110 | 100.00 |

ಮಾಹಿತಿಯ ಮೂಲ: ಕ್ಷೇತ್ರ ಕಾರ್ಯ

ಮುಕ್ತ ಮಾರುಕಟ್ಟೆಯಿಂದ ಕೊಂಡುತರುವ ಆಹಾರದ ಪದಾರ್ಥಗಳನ್ನು ಬಡತನ ರೇಖೆಯ ಕೆಳಗಿರುವ ಕುಟುಂಬಗಳು ಎಲ್ಲಿಂದ ತರುತ್ತವೆ ಎಂಬುದನ್ನು ಅಥವಾ ಕೊರತೆಯಾಗುವ ಪದಾರ್ಥಗಳನ್ನು ಯಾರಿಂದ ಪಡೆದುಕೊಳ್ಳುತ್ತವೆ ಎಂಬುದನ್ನು ಕೋಷ್ಟಕ 14ರಲ್ಲಿ ಅಧ್ಯಯನಕ್ಕೆ ಆಯ್ಕೆಮಾಡಿಕೊಂಡ ಎರಡು ಗ್ರಾಮಗಳ ತೌಲನಿಕವಾಗಿ ಚರ್ಚಿಸಲಾಗಿದೆ. ಇಲ್ಲಿ ಕುಟುಂಬಗಳು ಕೊಟ್ಟಿರುವ ಉತ್ತರವು ಒಂದಕ್ಕಿಂತ ಹೆಚ್ಚಿನ ಆಯ್ಕೆಯಾಗಿರುವದರಿಂದ ಕೋಷ್ಟಕದಲ್ಲಿ ಕೊಟ್ಟಿರುವ ಪ್ರತಿಶತವು ನೂರಕ್ಕೆ ಸಮವಾಗಿರುವುದಿಲ್ಲ.

ಕ್ರಮವಾಗಿ ಕಲಬುರಗಿಯ ಕೊಂಕನಳ್ಳಿ ಮತ್ತು ಧಾರವಾಡದಲ್ಲಿನ ನಿಗದಿಯಲ್ಲಿನ ಕುಟುಂಬಗಳಲ್ಲಿ ಶೇಕಡಾ 75.86ರಷ್ಟು ಮತ್ತು ಶೇಕಡಾ 60.91ರಷ್ಟು ಕುಟುಂಬಗಳು ತಮ್ಮ ಹೊಲದಲ್ಲಿ ಬೆಳೆದಿರುವ ಮತ್ತು ಕೂಲಿಯಿಂದ ಬಂದ ಕಾಳು ಮತ್ತು ದಿನಸಿಗಳಿಂದ ತಮ್ಮ ಕುಟುಂಬಕ್ಕೆ ಕೊರತೆಯಾಗುವ ಆಹಾರ ಪದಾರ್ಥಗಳನ್ನು ಸರಿದೂಗಿಸಿಕೊಂಡರೆ ಶೇಕಡಾ 58.62ರಷ್ಟು ಮತ್ತು ಶೇಕಡಾ 36.36ರಷ್ಟು ಕುಟುಂಬಗಳು ಗ್ರಾಮದಲ್ಲಿರುವ ಅಂಗಡಿಗಳಲ್ಲಿ ಉದ್ರಿಯಲ್ಲಿ ತಂದು ಹೊಟ್ಟೆಯನ್ನು ತುಂಬಿಸಿಕೊಳ್ಳುತ್ತಾರೆ. ಈ ರೀತಿಯಾಗಿ ಉದ್ರಿಯನ್ನು ತಂದಾಗ ಅಂಗಡಿಯವರು ಕೇಳಿದಾಗ ವರ್ಷದ ಕೊನೆಯಲ್ಲಿ ಅಥವಾ ಹಣವಿದ್ದಾಗ ಸ್ವಲ್ಪವನ್ನು ಕೊಟ್ಟು ಉಳಿದ ಹಣವನ್ನು ಕೊನೆಯಲ್ಲಿ ಕೊಟ್ಟು ತಮ್ಮ ಲೆಕ್ಕವನ್ನು ಪೂರ್ತಿಗೊಳಿಸುತ್ತಾರೆ. ಈ ರೀತಿಯಾಗಿ ಉದ್ರಿ ತಂದಾಗ ಅಂಗಡಿಯವರು ಪಟ್ಟಣದ ಅಂಗಡಿಗಳಿಗಿಂತ ಹೆಚ್ಚಿನ ಪ್ರಮಾಣದಲ್ಲಿ ಬೆಲೆಯನ್ನು ತೆಗೆದುಕೊಳ್ಳುತ್ತಾರೆ. ಹತ್ತಿರದ ನಗರದ ಮಾರುಕಟ್ಟೆಯಿಂದ ಸಹ ಖರೀದಿ ಮಾಡಿ ತರುತ್ತಾರೆ ಆದರೆ ಈ ಪ್ರಮಾಣವು ಕಡಿಮೆ ಇದೆ. ಈಗಾಗಲೇ ಆಗಿರುವ ಅನೇಕ ಅರ್ಥಶಾಸ್ತ್ರ, ಸಮಾಜಶಾಸ್ತ್ರ ಮತ್ತು ಅಭಿವೃದ್ಧಿಯ ಸಂಶೋಧನೆಗಳಿಂದ ತಿಳಿದು ಬರುವುದೇನೆಂದರೆ ಬಡತನ ನಿವಾರಣೆಯಲ್ಲಿ ಮಾರುಕಟ್ಟೆಯ ಪಾತ್ರವು ಸಹ ಬಹಳ ಮುಖ್ಯವಾಗಿದೆ ಎಂದು ಈ ಮುಂದಿನ ಅಂಶಗಳಿಂದ ತಿಳಿದುಬರುತ್ತದೆ.

ಕಲಬುರಗಿಯ ಕೊಂಕನಳ್ಳಿಯಲ್ಲಿ ಶೇಕಡಾ 37.93ರಷ್ಟು ಕುಟುಂಬಗಳು ಹತ್ತಿರವಾದ ಸೇಡಂ ಮಾರುಕಟ್ಟೆಯಿಂದ ತಂದರೆ ಧಾರವಾಡದಲ್ಲಿಯ ನಿಗದಿಯಲ್ಲಿನ ಶೇಕಡಾ 25.45ರಷ್ಟು ಕುಟುಂಬಗಳು ಜಿಲ್ಲಾ ಕೇಂದ್ರವಾದ ಧಾರವಾಡದ ಮಾರುಕಟ್ಟೆಯಿಂದ ತಂದು ತಮ್ಮ ಕುಟುಂಬದ ಜೀವನವನ್ನು ನಡೆಸುತ್ತಾರೆ. ಈ ರೀತಿಯಾಗಿ ನಗರದ ಮಾರುಕಟ್ಟೆಯಿಂದ ಪದಾರ್ಥಗಳನ್ನು ತೆಗೆದುಕೊಂಡು ತಂದು ಜೀವನವನ್ನು ನಡೆಸಬೇಕಾದರೆ ತಮ್ಮ ಹೊಲದಲ್ಲಿ ಅಥವಾ ಕೂಲಿಯಿಂದ ಬಂದ ದವಸ ಧಾನ್ಯಗಳನ್ನು ತೆಗೆದುಕೊಂಡು ನಗರದ ಮಾರುಕಟ್ಟೆಯಲ್ಲಿ ಮಾರಾಟ ಮಾಡಿ ಬಂದ ಹಣದಲ್ಲಿ ಸ್ವಲ್ಪ ಉಳಿಸಿಕೊಂಡು ಸ್ವಲ್ಪ ಹಣದಲ್ಲಿ ತಮ್ಮ ಕುಟುಂಬಗಳಿಗೆ ಬೇಕಾದ ಕಾಯಿ–ಪಲ್ಯೆ ಮತ್ತು ಕಿರಾಣಿ ಸಾಮಾನುಗಳನ್ನು ತರುತ್ತಾರೆ. ಕೊಂಕನಳ್ಳಿಯಲ್ಲಿನ ಕೆಲವೊಂದು ಕುಟುಂಬಗಳು ತಮ್ಮ ಹತ್ತಿರದ ಪಟ್ಟಣ ಪ್ರದೇಶಗಳಾದ ಕಲಬುರಗಿ ಮತ್ತು ಸೇಡಂನ ಮಾರುಕಟ್ಟೆಗೆ ಹೋಗಿ ತಮ್ಮ ಹೊಲದಲ್ಲಿ ಬೆಳೆದ ಕಾಳು, ದವಸ ಧಾನ್ಯಗಳನ್ನು ಮತ್ತು ಹಾಲನ್ನು ಮಾರಾಟ ಮಾಡಿಕೊಂಡು ತಮ್ಮ ಕುಟುಂಬಗಳಿಗೆ ಬೇಕಾದ ಅಗತ್ಯ ವಸ್ತುಗಳನ್ನು ತರುತ್ತಾರೆ. ಅದೇ ರೀತಿಯಾಗಿ ನಿಗದಿಯಲ್ಲಿನ ಕುಟುಂಬಗಳು ಸಮೀಪದ ಹುಬ್ಬಳ್ಳಿ ಮತ್ತು ಧಾರವಾಡದಲ್ಲಿನ ಅಂಗಡಿಗಳಿಗೆ ಮತ್ತು ಕೆಲವೊಂದು ಸಣ್ಣ ಹೋಟೆಲಗಳಿಗೆ ದಿನಾಲೂ ಹಾಲನ್ನು ಹಾಕುತ್ತಾರೆ. ಈಶ್ವರನ್ ಕೆ. (1976)ರವರ ಅಧ್ಯಯನವು ಸಹ ಇದೇ ರೀತಿಯಾದ ಫಲತಾಂಶವನ್ನು ಕಂಡು ಕೊಂಡಿರುವುದನ್ನು ಕಾಣಬಹುದು. ಆದರೆ ಈಶ್ವರನ್‌ರವರ ಅಧ್ಯಯನದಲ್ಲಿ ಹಾಲಿನ ಜೊತೆಗೆ

ಹಣ್ಣುಗಳನ್ನು ಸಹ ಮಾರಾಟ ಮಾಡುತ್ತಿದ್ದುದನ್ನು ಕಾಣಬಹುದಾಗಿದೆ. ಆದರೆ ಇವರು ತಿಂಗಳಿಗೆ ಒಮ್ಮೆ ಮಾತ್ರ ರೂಪಾಯಿಗಳನ್ನು ತೆಗೆದುಕೊಳ್ಳುತ್ತಾರೆ. ದಿನಾಲೂ ಹಾಲನ್ನು ಹಾಕಬೇಕಾದರೆ ಅವರು ಮೋಟರ್ ಬೈಕ್ ತೆಗೆದುಕೊಂಡು ಅದಕ್ಕೆ ಬಸ್ಸಿನ ಟಿಕೇಟ್ ದರ ಅಥವಾ ಪೆಟ್ರೋಲ್ ಖರ್ಚು ಮತ್ತು ಅವರ ಶ್ರಮವನ್ನು ತೆಗೆದರೆ ಅವರಿಗೆ ಏನೂ ಉಳಿಯುವುದಿಲ್ಲ. ಇನ್ನು ಕೆಲವು ಮಹಿಳೆಯರು ಗ್ರಾಮದಲ್ಲಿ ಬೆಳೆದಿರುವ ಹಣ್ಣು ಮತ್ತು ನಗರದಲ್ಲಿನ ಸಗಟು ವ್ಯಾಪಾರಿಯಲ್ಲಿ ಹಣ್ಣನ್ನು ಖರೀದಿ ಮಾಡಿಕೊಂಡು ಪಟ್ಟಣಗಳ ಬೀದಿಗಳಲ್ಲಿ ಮತ್ತು ಮಾರುಕಟ್ಟೆಯಲ್ಲಿ ಮಾರಾಟ ಮಾಡಿ ತಮ್ಮ ಕುಟುಂಬಗಳನ್ನು ನಡೆಸುತ್ತಾರೆ. ಇದಷ್ಟೆ ಅಲ್ಲದೇ ಸಂಬಂಧಿಕರು ಮತ್ತು ಊರಿನಲ್ಲಿರುವ ಗೆಳೆಯರಿಂದ ಸಹಾಯವನ್ನು ಪಡೆದು ಕುಟುಂಬಕ್ಕೆ ಬೇಕಾದ ಪದಾರ್ಥಗಳನ್ನು ಪಡೆದುಕೊಳ್ಳುತ್ತಾರೆ ಎಂದು ಕೋಷ್ಟಕದಿಂದ ತಿಳಿದುಬರುತ್ತದೆ.

ಕೋಷ್ಟಕ 15ರಲ್ಲಿ ಅಧ್ಯಯನ ಕೈಗೊಂಡ ಗ್ರಾಮಗಳಲ್ಲಿನ ಕುಟುಂಬಗಳು ಮಾಹಿತಿ ಸಂಗ್ರಹಿಸುವ ಸಮಯದಲ್ಲಿ ಸಾರ್ವಜನಿಕ ವಿತರಣಾ ವ್ಯವಸ್ಥೆಯಡಿಯಲ್ಲಿ ಪಡೆಯುವ ಆಹಾರ ಪದಾರ್ಥಗಳ ಗುಣಮಟ್ಟದ ಬಗ್ಗೆ ವ್ಯಕ್ತಪಡಿಸಿದ ಅಭಿಪ್ರಾಯಗಳನ್ನು ಚರ್ಚಿಸಲಾಗಿದೆ. ಸಾರ್ವಜನಿಕ ವಿತರಣಾ ವ್ಯವಸ್ಥೆಯಡಿಯಲ್ಲಿ ವಿತರಿಸುವ ಆಹಾರ ಪದಾರ್ಥಗಳ ಗುಣಮಟ್ಟದ ಕುರಿತು ಕುಟುಂಬಗಳಲ್ಲಿ ವಿಚಾರಿಸಿದಾಗ ಅನೇಕ ಕುಟುಂಬಗಳು ಈ ಹಿಂದೆ ವಿತರಿಸುತ್ತಿದ್ದ ಆಹಾರ ಪದಾರ್ಥಗಳೊಂದಿಗೆ ತುಲನೆ ಮಾಡಿ ತಮ್ಮ ಉತ್ತರಗಳನ್ನು ಕೊಡುತ್ತಿದ್ದು ಕಂಡುಬಂದರೂ ಅವರು ಕೊನೆಯಲ್ಲಿ ಈಗ ವಿತರಣೆಯಾಗುತ್ತಿರುವ ಪದಾರ್ಥಗಳು ಉತ್ತಮವಾಗಿವೆ ಎಂದು

**ಕೋಷ್ಟಕ – 5.15**

**ಕುಟುಂಬಗಳಿಗೆ ಪದಾರ್ಥಗಳಲ್ಲಿ ಕೊರತೆಯಾದಾಗ ಕೊಂಡುಕೊಳ್ಳುವ ಪ್ರಮಾಣ ಶೇಕಡಾವಾರು.**

| ಮೂಲಗಳು | ಕೊಂಕನಳ್ಳಿ (ಅಧ್ಯಯನಕ್ಕೆ ಆಯ್ಕೆಯಾದ ಒಟ್ಟು ಕುಟುಂಬಗಳ ಸಂಖ್ಯೆ–116) | | ನಿಗದಿ (ಅಧ್ಯಯನಕ್ಕೆ ಆಯ್ಕೆಯಾದ ಒಟ್ಟು ಕುಟುಂಬಗಳ ಸಂಖ್ಯೆ–110) | |
|---|---|---|---|---|
| | ಒಟ್ಟು ಕುಟುಂಬಗಳ ಸಂಖ್ಯೆ | ಪ್ರತಿಶತ | ಒಟ್ಟು ಕುಟುಂಬಗಳ ಸಂಖ್ಯೆ | ಪ್ರತಿಶತ |
| ನಗರದ ಮಾರುಕಟ್ಟೆಯಿಂದ ಖರೀದಿ | 44 | 37.93 | 28 | 25.45 |
| ಸಂಬಂಧಿಕರಿಂದ ಸಹಾಯ | 35 | 30.17 | 15 | 13.64 |
| ಗೆಳೆಯರಿಂದ ಸಹಾಯ | 28 | 24.14 | 20 | 18.18 |
| ಗ್ರಾಮದ ಅಂಗಡಿಗಳಿಂದ ಉದ್ರಿ ತರುತ್ತವೆ | 68 | 58.62 | 40 | 36.36 |
| ಹೊಲದಲ್ಲಿ ಬೆಳೆದ ಕಾಳು/ದಿನಸಿಗಳು/ಕೂಲಿಯಿಂದ ಬಂದ ಕಾಳುಕಡಿಗಳು | 88 | 75.86 | 67 | 60.91 |
| ಇತರೆ ಮೂಲಗಳು | 39 | 33.62 | 45 | 40.91 |

ಮಾಹಿತಿಯ ಮೂಲ: ಕ್ಷೇತ್ರ ಕಾರ್ಯ

ಟಿಪ್ಪಣ್ಣೆ: ಇಲ್ಲಿ ಪ್ರತಿಶತವು ಶೇಕಡಾ 100ಕ್ಕೆ ಸಮವಾಗವುದಿಲ್ಲ ಕಾರಣ ಮಾಹಿತಿದಾರರು ಒಂದಕ್ಕಿಂತ ಹೆಚ್ಚಿನ ಉತ್ತರಗಳನ್ನು (Multiple Responses) ಕೊಟ್ಟಿರುತ್ತಾರೆ

ಹೇಳಿರುತ್ತಾರೆ. ಆದರೆ ಕೆಲವೊಂದು ತಿಂಗಳು ಉತ್ತಮವಾದ ಪದಾರ್ಥಗಳು ಬಂದರೆ ಕೆಲವೊಂದು ತಿಂಗಳು ತೀರ ಕನಿಷ್ಠವಾದ ಮತ್ತು ತಿನ್ನಲು ಯೋಗ್ಯವಲ್ಲದ ಪದಾರ್ಥಗಳು ವಿತರಣೆಯಾದ ಉದಾಹರಣೆಗಳು ಸಾಕಷ್ಟು ಇವೆ ಎಂದು ಉತ್ತರಿಸಿದ್ದರು. ಪ್ರತಿತಿಂಗಳು ಒಂದೇ ತರಹದ ಗುಣಮಟ್ಟದ ಆಹಾರ ಪದಾರ್ಥಗಳು ಬರುವುದಿಲ್ಲ ಎಂದು ಮಾಹಿತಿಯನ್ನು ಸಂಗ್ರಹಿಸುವ ಸಮಯದಲ್ಲಿ ಕುಟುಂಬದ ಸದಸ್ಯರು ಹೇಳುತ್ತಿದ್ದರು.

**ಕೋಷ್ಟಕ – 5.16**

**ಕುಟುಂಬಗಳು ಪ್ರತಿತಿಂಗಳು ಪಡೆಯುವ ಪದಾರ್ಥಗಳ ಗುಣಮಟ್ಟದ ಕುರಿತು ಶೇಕಡಾವಾರು**

| ಸೂಚಕಗಳು | ಕೊಂಕನಳ್ಳಿ (ಅಧ್ಯಯನಕ್ಕೆ ಆಯ್ಕೆಯಾದ ಒಟ್ಟು ಕುಟುಂಬಗಳ ಸಂಖ್ಯೆ–116) | | ನಿಗದಿ (ಅಧ್ಯಯನಕ್ಕೆ ಆಯ್ಕೆಯಾದ ಒಟ್ಟು ಕುಟುಂಬಗಳ ಸಂಖ್ಯೆ–110) | |
|---|---|---|---|---|
| | ಒಟ್ಟು ಕುಟುಂಬಗಳು | ಪ್ರತಿಶತ | ಒಟ್ಟು ಕುಟುಂಬಗಳು | ಪ್ರತಿಶತ |
| ನ್ಯಾಯ ಬೆಲೆ ಅಂಗಡಿಯಿಂದ ಪಡೆದ ಪದಾರ್ಥಗಳು ಸೇವಿಸಲು ಯೋಗ್ಯವಾಗಿವೆ | | | | |
| ಹೌದು | 88 | 75.86 | 91 | 82.73 |
| ಇಲ್ಲಾ | 28 | 24.14 | 19 | 17.27 |
| ಒಟ್ಟು | 116 | 100.00 | 110 | 100.00 |
| ತೂಕದಲ್ಲಿ ಹೆಚ್ಚು ಕಡಿಮೆ ಆಗುತ್ತದೆಯೆ | | | | |
| ಆಗುತ್ತದೆ | 101 | 87.07 | 91 | 82.73 |
| ಆಗುವುದ್ದಿಲ್ಲಾ | 15 | 12.93 | 19 | 17.27 |
| ಒಟ್ಟು | 116 | 100.00 | 110 | 100.00 |
| ಹೆಚ್ಚು ಕಡಿಮೆಯಾಗುವ ತೂಕದ ಪ್ರಮಾಣ | | | | |
| 1 ಕೆ.ಜಿ. | 74 | 63.79 | 63 | 57.27 |
| 2.ಕೆ.ಜಿ. | 21 | 18.10 | 17 | 15.45 |
| 3.ಕೆ.ಜಿ. | 9 | 7.76 | 14 | 12.73 |
| 4.ಕೆ.ಜಿ. | 8 | 6.90 | 9 | 8.18 |
| 5.ಕೆ.ಜಿ. | 4 | 3.45 | 7 | 6.36 |
| ಒಟ್ಟು | 116 | 100.00 | 110 | 100.00 |
| ನ್ಯಾಯ ಬೆಲೆ ಅಂಗಡಿಗಳಿಂದ ಪಡೆದ ಪದಾರ್ಥಗಳ ಗುಣಮಟ್ಟದ ಕುರಿತು | | | | |
| ಅತ್ಯುತ್ತಮ | 74 | 63.79 | 63 | 57.27 |
| ಉತ್ತಮ | 21 | 18.10 | 17 | 15.45 |
| ತೃಪ್ತಿಕರವಾಗಿದೆ | 9 | 7.76 | 14 | 12.73 |
| ಅತೃಪ್ತಿಕರವಾವೆ | 8 | 6.90 | 9 | 8.18 |
| ಶೋಚನಿಯವಾಗಿರುತ್ತವೆ | 4 | 3.45 | 7 | 6.36 |
| ಒಟ್ಟು | 116 | 100.00 | 110 | 100.00 |

ಮಾಹಿತಿ: ಕ್ಷೇತ್ರಕಾರ್ಯ

ಕ್ರಮವಾಗಿ ಕಲಬುರಗಿಯಲ್ಲಿಯ ಕೊಂಕನಳ್ಳಿ ಮತ್ತು ಧಾರವಾಡದ ನಿಗದಿ ಗ್ರಾಮದಲ್ಲಿನ ಶೇಕಡಾ 75.86ರಷ್ಟು ಮತ್ತು ಶೇಕಡಾ 82.73ರಷ್ಟು ಕುಟುಂಬಗಳು ಪಡೆದ ಪದಾರ್ಥಗಳು

ಸೇವಿಸಲು ಯೋಗ್ಯವಾಗಿವೆ ಎಂದು ಹೇಳಿದ್ದರೆ, ಶೇಕಡಾ 24.14 ಮತ್ತು ಶೇಕಡಾ 17.27ರಷ್ಟು ಕುಟುಂಬಗಳು ನ್ಯಾಯ ಬೆಲೆ ಅಂಗಡಿಯಿಂದ ಪಡೆದ ಆಹಾರ ಪದಾರ್ಥಗಳು ಸೇವಿಸಲು ಯೋಗ್ಯವಾಗಿಲ್ಲವೆಂದು ಹೇಳಿರುತ್ತಾರೆ. ಇನ್ನು ತೂಕದ ವಿಚಾರದಲ್ಲಿ ಹೇಳುವುದಾದರೆ ಕಲಬುರಗಿಯಲ್ಲಿನ ಶೇಕಡಾ 87.07ರಷ್ಟು ಕುಟುಂಬಗಳು ಪಡೆಯುವ ಆಹಾರ ಪದಾರ್ಥಗಳಲ್ಲಿನ ತೂಕದಲ್ಲಿ ಹೆಚ್ಚು ಕಡಿಮೆಯಾಗುತ್ತದೆ ಎಂದು ಹೇಳಿದ್ದರೆ ಧಾರವಾಡದಲ್ಲಿನ ಶೇಕಡಾ 82.73ರಷ್ಟು ಕುಟುಂಬಗಳು ಸಹ ಇದೇ ರೀತಿಯ ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದಾರೆ. ಯಾವ ಪ್ರಮಾಣದಲ್ಲಿ ತೂಕದಲ್ಲಿ ಹೆಚ್ಚು ಕಡಿಮೆಯಾಗುತ್ತದೆ ಎಂದು ವಿಚಾರಿಸಿ ಕೇಳಿದಾಗ ಈ ಕೆಳಗಿನಂತೆ ಕುಟುಂಬದ ಸದಸ್ಯರು ತಮ್ಮ ಮಾಹಿತಿಯನ್ನು ಹಂಚಿಕೊಂಡಿರುವದು ತಿಳಿದುಬರುತ್ತದೆ. ಕಲಬುರಗಿಯಲ್ಲಿಯ ಕೊಂಕನಳ್ಳಿ ಗ್ರಾಮದಲ್ಲಿನ ಶೇಕಡಾ 63.79ರಷ್ಟು ಕುಟುಂಬಗಳಿಗೆ ಮತ್ತು ಧಾರವಾಡದಲ್ಲಿನ ಶೇಕಡಾ 57.27ರಷ್ಟು ಕುಟುಂಬಗಳಿಗೆ ಪ್ರತಿ ತಿಂಗಳು 1 ಕೆ.ಜಿಯಷ್ಟು ವಿತರಣೆಯಾಗುವ ಆಹಾರ ಪದಾರ್ಥಗಳಲ್ಲಿ ಕಡಿಮೆಯಾಗುತ್ತದೆ. ಶೇಕಡಾ 18.10ರಷ್ಟು ಮತ್ತು ಶೇಕಡಾ 15.45ರಷ್ಟು ಕುಟುಂಬಗಳಿಗೆ ಪ್ರತಿತಿಂಗಳು 2 ಕೆ.ಜಿ.ಯಷ್ಟು ಆಹಾರ ಪದಾರ್ಥಾಗಳು ಅನುಕ್ರಮವಾಗಿ ಕೊಂಕನಳ್ಳಿ ಮತ್ತು ನಿಗದಿಯಲ್ಲಿನ ಬಡ ಕುಟುಂಬಗಳಿಗೆ ಕಡಿಮೆಯಾಗುತ್ತಿದೆ ಎಂದು ಮಾಹಿತಿಯಿಂದ ತಿಳಿದು ಬರುತ್ತದೆ. ಧಾರವಾಡದಲ್ಲಿನ ನಿಗದಿ ಗ್ರಾಮದ ನಿಗದಿಯಲ್ಲಿರುವ ಶೇಕಡಾ 12.73ರಷ್ಟು ಕುಟುಂಬಗಳಿಗೆ ಪ್ರತಿ ತಿಂಗಳು 3 ಕೆ.ಜಿಯಷ್ಟು ಸರಕಾರದಿಂದ ವಿತರಣೆಯಾಗುವ ಆಹಾರ ಧಾನ್ಯಗಳ ತೂಕದಲ್ಲಿ ಕಡಿಮೆಯಾಗುತ್ತದೆ. ಆದರೆ ಕಲಬುರಗಿಯ ಕೊಂಕನಳ್ಳಿ ಗ್ರಾಮದಲ್ಲಿನ ಶೇಕಡಾ 7.76ರಷ್ಟು ಕುಟುಂಬಗಳಿಗೆ ಮಾತ್ರ ಪ್ರತಿ ತಿಂಗಳು ವಿತರಣೆಯಾಗುವ ಆಹಾರ ಪದಾರ್ಥಗಳ ತೂಕದಲ್ಲಿ 3 ಕೆ.ಜಿ.ಯಷ್ಟು ಕಡಿಮೆಯಾಗುತ್ತಿರುವುದನ್ನು ಕುಟುಂಬಗಳ ಸದಸ್ಯರು ಮಾಹಿತಿಯನ್ನು ಹಂಚಿಕೊಂಡಿದ್ದಾರೆ.

ಬಡವರಿಗೆ ಸಿಗಬೇಕಾದ ರೇಷನ್ನು ದೊರಕುತ್ತಿಲ್ಲ. ಕೂಪನ್‌ಗೆ ಕುಟುಂಬದ ಎಲ್ಲಾ ಸದಸ್ಯರ ಭಾವಚಿತ್ರಗಳನ್ನು ತೆಗೆದುಕೊಳ್ಳಬೇಕು, ಮೊಬೈಲ್‌ನಂದ ಎಸ್ಸ್‌ಮ್ಮೆಸ್ಸ್‌ಗಳನ್ನು ಕಳುಹಿಸುವುದು ಮತ್ತು ಅವರ ಕುಟುಂಬಗಳ ಎಲ್ಲಾ ಸದಸ್ಯರ ಹೆಬ್ಬೆರಳು ಗುರುತನ್ನು ತೆಗೆದುಕೊಳ್ಳುವದು ಎಂಬ ಇತ್ಯಾದಿ ನಿಯಮಗಳಿಂದ ನಿಜವಾದ ಬಡವರಿಗೆ ಮತ್ತು ಅನಕ್ಷರಸ್ಥರಿಗೆ ಹೆಚ್ಚಿನ ತೊಂದರೆಯಾಗಿದೆ ಹೊರತು ಅವರಿಗೆ ಹೇಳಿಕೊಳ್ಳುವಷ್ಟು ಅನುಕೂಲವಾಗಿಲ್ಲ. ಈ ಎಲ್ಲಾ ಕಾರಣಗಳಿಂದ ಮೊಬೈಲ್ ಇಲ್ಲದ ಮತ್ತು ಹಲವು ಕುಟುಂಬಗಳ ಸದಸ್ಯರು ದುಡಿದು ತಿನ್ನಲು ದೂರದ ಊರುಗಳಿಗೆ ವಲಸೆ ಹೋಗಿರುವದ್ದರಿಂದ ಹಲವರ ಕೂಪನ್‌ಗಳು ಇನ್ನೂ ಸಿಗುತ್ತಿಲ್ಲವೆಂಬುವದು ನಮ್ಮ ಕ್ಷೇತ್ರಕಾರ್ಯದ ಸಮಯದಲ್ಲಿ ಕೂಡ ಕಂಡುಕೊಂಡಿದ್ದೇವೆ ಎಂದು ಹೇಳಬಹುದು (ಶಾರದಾ ಗೋಪಾಲ 2016). ಬಡತನದ ಕೆಳಗಿನ ಕುಟುಂಬಗಳಿಗೆ ತಾವು ಬೇಳದ ಪದಾರ್ಥಗಳನ್ನು ಮಾರಾಟ ಮಾಡಲು ಮತ್ತು ತಮ್ಮ ಕುಟುಂಬಕ್ಕೆ ಅವಶ್ಯವಿರುವ ದಿನನಿತ್ಯದ ಸರಕು ಸೇವೆಗಳನ್ನು

ಪಡೆಯಲು ಸೂಕ್ತವಾದ ಮಾರುಕಟ್ಟೆಯಿಂದ ತರುವಷ್ಟು ಶಕ್ತಿಯುತರಾಗಿಲ್ಲ (ಎಡ್ವರ್ಡ ಟೈಲರ್, 2009). ಬಡವರಿಗೆ ಮಾರುಕಟ್ಟೆಯಲ್ಲಿ ವ್ಯವಹರಿಸುವಷ್ಟು ಜ್ಞಾನ ಮತ್ತು ತಿಳುವಳಿಕೆಯನ್ನು ಮೂಡಿಸುವ ಕಾರ್ಯಕ್ರಮಗಳು ಇನ್ನು ಹೆಚ್ಚಿನ ರೀತಿಯಲ್ಲಿ ಅನುಷ್ಠಾನವಾಗಬೇಕು.

**ಉಪಸಂಹಾರ**

ಬಡತನ ರೇಖೆಯ ಕೆಳಗಿರುವ ಎಲ್ಲಾ ಜಾತಿ ಮತ್ತು ಧರ್ಮದಲ್ಲಿರುವ ಬಡ ಕುಟುಂಬಗಳಿಗೆ ಸರಕಾರವು ಅನೇಕ ರೀತಿಯ ನೆರವನ್ನು ನೀಡುತ್ತಿದೆ. ಆರೋಗ್ಯ, ಅಹಾರ, ಶಿಕ್ಷಣ, ಕುಡಿಯುವ ನೀರು, ಶೌಚಾಲಯ, ವಸತಿ ಮತ್ತು ಇನ್ನು ಮುಂತಾದ ಸಕಲ ಸೌಲತ್ತುಗಳನ್ನು ಒಡಗಿಸಿಕೊಡುತ್ತಿದೆ. ಆದರೆ ಈ ಎಲ್ಲಾ ಸವಲತ್ತುಗಳು ಯಾರಿಗೆ ತೀರ ಅವಶ್ಯಕತೆ ಇದೆಯೋ ಅವರಿಗೆ ಮುಟ್ಟುತ್ತಿಲ್ಲ. ಬಡವರಲ್ಲದ ಅನೇಕ ಕುಟುಂಬಗಳು ಬಡವರಿಗಾಗಿ ಇರುವ ಕಾರ್ಯಕ್ರಮಗಳ ಅನುಕೂಲತೆಯನ್ನು ತಮ್ಮ ರಾಜಕೀಯ ಮತ್ತು ಜಾತಿ ಪ್ರಭಾವವನ್ನು ಬಳಸಿಕೊಂಡು ಪಡೆಯುತ್ತಿರುವದು ಕ್ಷೇತ್ರಕಾರ್ಯ ಕೈಗೊಂಡ ಗ್ರಾಮಗಳಲ್ಲಿ ಕಾಣ ಬಹುದಾಗಿದೆ. ಇನ್ನು ಅನ್ನಭಾಗ್ಯ ಯೋಜನೆಯ ಕುರಿತು ಎರಡು ಗ್ರಾಮಗಳ ಮೇಲ್ಜಾತಿಯಲ್ಲಿ ಮತ್ತು ಯಾವ ಕುಟುಂಬಗಳಲ್ಲಿ ಹೆಚ್ಚಿನ ಪ್ರಮಾಣದಲ್ಲಿ ಜಮೀನು ಇದೆಯೋ ಅವರು ಅನ್ನಭಾಗ್ಯ ಯೋಜನೆಯಿಂದಾಗಿ ಹಳ್ಳಿಯ ಜನರು ಮೈಗಳ್ಳರಾಗುತ್ತಿದ್ದಾರೆ ಮತ್ತು ಹೊಲದಲ್ಲಿ ಕೂಲಿ ಮಾಡಲು ಆಳುಗಳು ಸಿಗುತ್ತಿಲ್ಲ ಎಂದು ಹೇಳಿ ಅನ್ನಭಾಗ್ಯ ಕಾರ್ಯಕ್ರಮವನ್ನು ಟೀಕಿಸುವುದು ಕಾಣಬಹುದಾಗಿದೆ. ಸರಕಾರ ಇವರನ್ನು ಸೋಮಾರಿಗಳನ್ನಾಗಿ ಮಾಡುತ್ತಿದೆ ಎಂದು ಊರಿನ ಕಟ್ಟೆಗಳಲ್ಲಿ ಕುಳಿತುಕೊಂಡು ಮಾತನಾಡುತ್ತಿರುವುದು ಕ್ಷೇತ್ರಕಾರ್ಯದ ಸಮಯದಲ್ಲಿ ಕಂಡು ಬಂದಿರುತ್ತದೆ. ಇನ್ನು ಶಿಕ್ಷಣಕ್ಕೆ ಸಂಬಂಧಿಸಿದಂತೆ ಹೇಳುವುದಾದರೆ ಕೇವಲ ಪರಿಶಿಷ್ಟ ಜಾತಿ ಮತ್ತು ಪಂಗಡಕ್ಕೆ ಸೇರಿದ ವಿದ್ಯಾರ್ಥಿಗಳಿಗೆ ಮಾತ್ರ ಒಂದು ವರ್ಷದಲ್ಲಿ ಕೇವಲ ಆರು  ಬರೆಯುವ ಪುಸ್ತಕಗಳನ್ನು (Note Books) ವಿತರಿಸುತ್ತಿದೆ. ಆದರೆ ಇವುಗಳು ಒಂದು ವರ್ಷಕ್ಕೆ ಸಾಕಾಗುವುದಿಲ್ಲ. ಇದರ ಪ್ರಮಾಣವನ್ನು ಹೆಚ್ಚಿಗೆ ಮಾಡಿ ಬಡತನ ರೇಖೆಯ ಎಲ್ಲಾ ಕುಟುಂಬಗಳ ಮಕ್ಕಳಿಗೆ ವಿತರಿಸಬೇಕೆಂದು ಅನೇಕ ಕುಟುಂಬಗಳು ಮಾಹಿತಿಯನ್ನು ಪಡೆದುಕೊಳ್ಳುವಾಗ ಹೇಳುತ್ತಿದ್ದರು.

**ಕೊನೆಟಿಪ್ಪಣಿ**


1. ಭಾಸ್ಕರ್ ಮುಖರ್ಜಿ (2004) *'ಪಾವರ್ಟಿ, ಫುಡ್ ಸೆಕ್ಯುರಿಟಿ ಆ್ಯಂಡ್ ಸ್ಟೆಟೆನೆಬಿಲಿಟಿ',* ರಾವತ್ ಪಬ್ಲಿಕೇಶನ್, ಜೈಪುರ.
2. ಜಿಲ್ಲಾ ಸಂಖ್ಯಾ ಸಂಗ್ರಹಣಾಧಿಕಾರಿ (2011) ಗುಲಬರ್ಗಾ ಜಿಲ್ಲೆಯ ಅಂಕಿ ಅಂಶಗಳ ನೋಟ–2011–12, ಪುಟ–6–9.
3. ಜಿಲ್ಲಾ ಸಂಖ್ಯಾ ಸಂಗ್ರಹಣಾಧಿಕಾರಿ (2011) ಧಾರವಾಡ ಜಿಲ್ಲೆಯ ಅಂಕಿ ಅಂಶಗಳ ನೋಟ–2011–12, ಪುಟ–6–9.
4. ಜಿಲ್ಲಾ ಸಂಖ್ಯಾ ಸಂಗ್ರಹಣಾಧಿಕಾರಿ (2011) ಗುಲಬರ್ಗಾ ಜಿಲ್ಲೆಯ ಅಂಕಿ ಅಂಶಗಳ ನೋಟ–2011–12, ಪುಟ–6–9.
5. ಜಿಲ್ಲಾ ಸಂಖ್ಯಾ ಸಂಗ್ರಹಣಾಧಿಕಾರಿ (2011) ಧಾರವಾಡ ಜಿಲ್ಲೆಯ ಅಂಕಿ ಅಂಶಗಳ ನೋಟ–2011–12, ಪುಟ–6–9.
6. ಕರ್ನಾಟಕ ಸರಕಾರ (2014). ಆಹಾರ ಮತ್ತು ನಾಗರೀಕ ಸರಬರಾಜು ಇಲಾಖೆಯ ಅಂತರ ಜಾಲತಾಣದಿಂದ ರಾಜ್ಯ, ಜಿಲ್ಲೆ ಮತ್ತು ತಾಲೂಕಿನಲ್ಲಿರುವ ಒಟ್ಟು ಕುಟುಂಬಗಳನ್ನು ಪಡಿತರ ಚೀಟಿಗಳನುಗುಣವಾಗಿ ಪಡೆದು ಅವುಗಳನ್ನು ಪ್ರತಿಶತಕ್ಕೆ ಬದಲಾಯಿಸಿಕೊಂಡು ವಿಶ್ಲೇಷಣೆಯನ್ನು ಮಾಡಲಾಗಿದೆ.
7. ಅದೇ, ಆಹಾರ ಮತ್ತು ನಾಗರೀಕ ಸರಬರಾಜು ಇಲಾಖೆಯ ಅಂತರ ಜಾಲತಾಣದಿಂದ ಪಡೆಯಲಾಗಿದೆ.
8. ಅದೇ, ಆಹಾರ ಮತ್ತು ನಾಗರೀಕ ಸರಬರಾಜು ಇಲಾಖೆಯ ಅಂತರ ಜಾಲತಾಣದಿಂದ ಪಡೆಯಲಾಗಿದೆ.
9. ಕರ್ನಾಟಕ ಜನಪರ ವೇದಿಕೆ (2008) *ಬಡವರ ಅನ್ನದ ತಟ್ಟೆಗೆ ಕುಬೇರರ ಕನ್ನ*, ಕರ್ನಾಟಕ ಜನಪರ ವೇದಿಕೆ, ಮಂಡ್ಯ.
10. ಶಿವಕುಮಾರಸ್ವಾಮಿ (2012) *'ಸಾರ್ವಜನಕ ವಿತರಣಾ ಪದ್ಧತಿ', ಯೋಜನೆ ಮಾಸ ಪತ್ರಿಕೆ,* ಸಂಪುಟ–28, ಸಂಚಿಕೆ–2.
11. ಎಂ.ಚಂದ್ರ ಪೂಜಾರಿ (2017) *'ಮಾರುಕಟ್ಟೆ ಅಭಿವೃದ್ಧಿ ಮತ್ತು ಪ್ರಜಾಪ್ರಭುತ್ವ', ಹೊಸತು ಮಾಸ ಪತ್ರಿಕೆ,* ಸಂಪುಟ–18, ಸಂಚಿಕೆ–6, ಪುಟ–195–199.
12. ಎಂ.ಚಂದ್ರ ಪೂಜಾರಿ, (2014) *"ಅಭಿವೃದ್ಧಿ ಮತ್ತು ರಾಜಕೀಯ",* ಪಲ್ಲವ ಪ್ರಕಾಶನ, ಚನ್ನಪಟ್ಟಣ, ಪುಟ–58–70.
13. ಚಂದ್ರ ಪೂಜಾರಿ, ಎಂ. (2017) *'ಮಾರುಕಟ್ಟೆ ಅಭಿವೃದ್ಧಿ ಮತ್ತು ಪ್ರಜಾಪ್ರಭುತ್ವ', ಹೊಸತು ಮಾಸ ಪತ್ರಿಕೆ,* ಸಂಪುಟ–18, ಸಂಚಿಕೆ–6, ಪುಟ–195–199.

14. ಭಾರತ ಸರಕಾರ (2013) ಡಿಎಲ್‌ಹೆಚ್‌ಎಸ್–4, ಜಿಲ್ಲಾವಾರು ಮಾಹಿತಿ ಒಳಗೊಂಡಿರುವ ಫ್ಯಾಕ್ಟಸೀಟ್, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ, ದೆಹಲಿ.

15. ಮೀರಾ ಬಕ್ರು (1984) *"ಡಿಸ್ಟ್ರಿಬುಶನ್ ಆಫ್ ವೇಲ್ಫೇರ್: ಪೀಪಲ್ಸ್ ಹೌಸಿಂಗ್ ಸ್ಕೀಮ್ಸ್ ಇನ್ ಕರ್ನಾಟಕ", ಎಕಾನಾಮಿಕ್ ಆ್ಯಂಡ್ ಪೊಲಿಟಿಕಲ್ ವೀಕ್ಲಿ*, ಸಂಪುಟ.19, ಸಂಚಿಕೆ–10, ಪುಟ–427–436.

16. ಈಶ್ವರನ್, ಕೆ. (1976) *'ಗ್ರಾಮೀಣ ಭಾರತದಲ್ಲಿ ಸಂಪ್ರದಾಯ ಮತ್ತು ಆರ್ಥಿಕ ವ್ಯವಸ್ಥೆ',* ಕರ್ನಾಟಕ ವಿಶ್ವವಿದ್ಯಾಲಯ ಧಾರವಾಡ.

17. ಶಾರದಾ ಗೋಪಾಲ (2016) '*ಇದು ಆಹಾರದ ಇನ್ನೊಂದು ರಾಜಕೀಯ',* ದಿನಾಂಕ 1–09–2016ರ ಪ್ರಜಾವಣಿ ದಿನ ಪತ್ರಿಕೆ, ಪುಟ–6.

18. ಎಡ್ವರ್ಡ ಟೈಲರ್ (2009) *'ರೂರಲ್ ಪಾವರ್ಟಿ ಆ್ಯಂಡ್ ಮಾರ್ಕೆಟ್',* ಎಂಬ ಲೇಖನವನ್ನು ಅಂತರಜಾಲತಾಣವಾದ www.fao.org/es/esa ದಿಂದ ಪಡೆಯಲಾಗಿದೆ.



# ಸಮಾರೋಪ

ಈ ಅಧ್ಯಯನವನ್ನು ಈಗಾಗಲೇ ಸ್ಥಾಪಿತ ಜಾತಿ, ವರ್ಗ, ಮಾರುಕಟ್ಟೆಯ ಸಿದ್ಧಾಂತಗಳನ್ನು ಒಪ್ಪಿಕೊಂಡು ರಾಜ್ಯದ ಹಿಂದುಳಿದ ಪ್ರದೇಶದಲ್ಲಿನ ಜಿಲ್ಲೆಯಾದ ಕಲಬುರಗಿ ಮತ್ತು ಸಾಪೇಕ್ಷಿಕವಾಗಿ ಮುಂದುವರೆದ ಜಿಲ್ಲೆಯಾದ ಧಾರವಾಡಗಳಿಂದ ಒಂದೊಂದು ಗ್ರಾಮಗಳನ್ನು ಆಯ್ಕೆಮಾಡಿಕೊಂಡಿದೆ. ಆ ಗ್ರಾಮಗಳಿಲ್ಲಿರುವ ಬಡತನ ರೇಖೆಯ ಕೆಳಗಿರುವ ಕುಟುಂಬಗಳನ್ನು ಅಧ್ಯಯನಕ್ಕೆ ಆಯ್ಕೆ ಮಾಡಿಕೊಂಡು ಮುಂದೆ ವಿವರಿಸಲಾದ ಅಧ್ಯಯನದ ಉದ್ದೇಶಗಳಿಗೆ ಸಂಬಂಧಿಸಿದಂತೆ ಮಾಹಿತಿಯನ್ನು ಸಂಗ್ರಹಿಸಿದೆ. ಬಡತನ ರೇಖೆಯ ಕೆಳಗಿರುವ ಕುಟುಂಬಗಳ ಕ್ಷೇಮಾಭಿವೃದ್ಧಿಗಾಗಿ ಸರಕಾರವು ಹಾಕಿಕೊಂಡಿರುವ ಯೋಜನೆಗಳನ್ನು ಅಭ್ಯಸಿಸುವುದು. ಸಂಶೋಧನೆಯ ಪ್ರದೇಶದಲ್ಲಿನ ಬಡತನ ರೇಖೆಯ ಕೆಳಗಿರುವ ಕುಟುಂಬಗಳ ಸಾಮಾಜಿಕ ಮತ್ತು ಆರ್ಥಿಕ ಸ್ಥಿತಿಗಳನ್ನು ತಿಳಿದುಕೊಳ್ಳುವುದು. ಬಡತನ ರೇಖೆಯ ಕೆಳಗಿರುವ ಕುಟುಂಬಗಳ ಆಹಾರ, ಆರೋಗ್ಯ, ಶಿಕ್ಷಣ, ಕುಡಿಯುವ ನೀರು ಮತ್ತು ಶೌಚಾಲಯದ ಅನುಭೋಗಗಳ ಬೇಡಿಕೆ ಮತ್ತು ಪೂರೈಕೆಗಳನ್ನು ನಿಭಾಯಿಸುವಲ್ಲಿ ಸರಕಾರದ ಮತ್ತು ಮಾರುಕಟ್ಟೆಯ ಪಾತ್ರವನ್ನು ಅವಲೋಕಿಸುವುದು. ಈಗಿರುವ ಸರಕಾರದ ಬಡತನ ನಿವಾರಣೆಯ ಯೋಜನೆಗಳು ಇನ್ನೂ ಉತ್ತಮವಾಗಿ ಜನರನ್ನು ತಲುಪಿ ಅವರ ಜೀವನ ಮಟ್ಟ ಸುಧಾರಣೆಗೆ ಸಲಹೆಗಳನ್ನು ನೀಡುವುದು. ಇದಕ್ಕಾಗಿ ಬಡತನ ರೇಖೆಯ ಕೆಳಗಿರುವ ಕುಟುಂಬಗಳ ಕುರಿತಾಗಿರುವದರಿಂದ ಈ ಅಧ್ಯಯನಕ್ಕೆ ಪ್ರಾಥಮಿಕ ಮತ್ತು ಅನುಷಂಗಿಕ ವಿಧಾನಗಳ ಮೂಲಕ ಸಂಶೋಧನೆಗೆ ಬೇಕಾದ ಮಾಹಿತಿಯನ್ನು ಸಂಗ್ರಹಿಸಲಾಯಿತ್ತು. ಪ್ರಾಥಮಿಕ ವಿಧಾನಗಳಾದ ಗುಣಾತ್ಮಕ ಮತ್ತು ಪರಿಮಾಣಾತ್ಮಕ ತಂತ್ರಗಳನ್ನು ಬಳಸಿಕೊಂಡು ಸಂಶೋಧನೆಯ ಪ್ರದೇಶದಲ್ಲಿನ ಬಡತನ ರೇಖೆಯ ಕೆಳಗಿರುವ ಕುಟುಂಬಗಳನ್ನು ಸಂದರ್ಶಿಸಿ ಉದ್ದೇಶಕ್ಕನುಗುಣವಾಗಿ ಮಾಹಿತಿಯನ್ನು ಕಲೆಹಾಕಲಾಗಿದೆ. ಕುಟುಂಬಗಳನ್ನು ಆಯ್ಕೆಮಾಡಿಕೊಳ್ಳುವಾಗ ವ್ಯವಸ್ಥಿತ ಯಾದೃಚ್ಛಿಕ ಮಾದರಿ (Systematic Random Sample)ಯ ನಿಯಮವನ್ನು ಅನುಸರಿಸಲಾಯಿತ್ತು. ಈ ಎಲ್ಲಾ ವಿಧಾನಗಳಿಂದ ಸಂಗ್ರಹಿಸಿದ ಮಾಹಿತಿಯಿಂದ ವಿಶ್ಲೇಷಿಸಿದ ಮಾಹಿತಿಯ ಫಲಿತಾಂಶಗಳನ್ನು ಮುಂದಿನ ಭಾಗದಲ್ಲಿ ಮಂಡಿಸಲಾಗಿದೆ.

ಎಲ್ಲ ಅಧ್ಯಯನಗಳಂತೆ ಈ ಒಂದು ಅಧ್ಯಯನ ಕೈಗೊಂಡ ಪ್ರದೇಶದಲ್ಲಿ ಕೂಡ ಅತಿ ಹೆಚ್ಚಿನ ಅಂದರೆ ಎರಡು ಗ್ರಾಮಗಳಲ್ಲಿ ಶೇಕಡಾ 35ಕ್ಕಿಂತ ಹೆಚ್ಚಿನ ಇತರೆ ಹಿಂದುಳಿದ ವರ್ಗದವರು ಮತ್ತು ಶೇಕಡಾ 29ಕ್ಕಿಂತ ಹೆಚ್ಚಿನ ಪರಿಶಿಷ್ಟ ಜಾತಿ ಮತ್ತು ಪಂಗಡದ ಗುಂಪಿಗೆ ಸೇರಿದವರಾಗಿದ್ದಾರೆ. ಅಂದರೆ ಅತಿ ಹೆಚ್ಚಿನ ಬಡತನದ ಪ್ರಮಾಣ ಹಿಂದುಳಿದ ವರ್ಗ ಮತ್ತು ಪರಿಶಿಷ್ಟ ಜಾತಿ ಮತ್ತು ಪಂಗಡದವರಲ್ಲಿ ಹೆಚ್ಚಿಗೆ ಇರುವುದು ಈ ತಿಳಿದುಬರುತ್ತದೆ. ಇದಕ್ಕೆ ಮೂಲ ಕಾರಣ ಈ

ವರ್ಗದವರಲ್ಲಿ ಯಾವುದೇ ರೀತಿಯ ಉತ್ಪಾದನಾ ಪರಿಕರಗಳು ಇಲ್ಲದೇ ಇರುವುದು. ಆದ್ದರಿಂದ ದೇಶದಲ್ಲಿ ಭೂ ಸುಧಾರಣೆ ಕಾಯಿದೆ ತಂದರೂ ಸಹ ಅದರಿಂದ ಹೇಳಿಕೊಳ್ಳುವಷ್ಟು ಉಪಯೋಗವಾಗಿಲ್ಲ.

ಅಧ್ಯಯನದ ಎರಡು ಗ್ರಾಮಗಳಲ್ಲಿ ಒಂದೊಂದು ಕುಟುಂಬಗಳಲ್ಲಿ ಒಂದಕ್ಕಿಂತ ಹೆಚ್ಚಿನ ಪಡಿತರ ಚೀಟಿಗಳು ಇರುವುದು ಕಂಡು ಬಂದಿದೆ. ನ್ಯಾಯ ಬೆಲೆಯು ಅಂಗಡಿಯು ಕಾರ್ಯದರ್ಶಿಯ ಪ್ರಕಾರ ಊರಲ್ಲಿನ ಅನೇಕ ಕುಟುಂಬಗಳು ಬಡತನ ರೇಖೆಯ ಕೆಳಗಿನ ಪಡಿತರ ಚೀಟಿಯನ್ನು ಪಡೆಯಲು ಅರ್ಹರಲ್ಲ ಆದೂ ಕೂಡ ಹಲವಾರು ತಪ್ಪು ಮಾಹಿತಿಗಳನ್ನು ನೀಡಿ ಒಂದಕ್ಕಿಂತ ಹೆಚ್ಚಿನ ಕಾರ್ಡುಗಳನ್ನು ಪಡೆದುಕೊಳ್ಳುತ್ತಾರೆ. ಈ ರೀತಿ ಎಲ್ಲ ಜಾತಿಯವರು ಮತ್ತು ವರ್ಗದವರು ಮಾಡುತಿರುವುದು ಕಂಡುಬರುತ್ತದೆ. ಇದು ಅತಿ ಹೆಚ್ಚಾಗಿ ಮೇಲ್ಜಾತಿಗಳ ಮತ್ತು ರಾಜಕೀಯವಾಗಿ ಪ್ರಬಲವಾಗಿರುವ ಕುಟುಂಬಗಳು ತಮ್ಮ ಪ್ರಭಾವ ಬೀರಿ ಮಾಡಿಸಿಕೊಳ್ಳುತ್ತಾರೆ ಎಂದು ಮಾಹಿತಿಯನ್ನು ಹಂಚಿಕೊಂಡಿದ್ದಾರೆ.

ಅಧ್ಯಯನ ಕೈಗೊಂಡ ಎರಡು ಗ್ರಾಮಗಳಲ್ಲಿ ಪಡಿತರ ಚೀಟಿಗಳ ಮೂಲಕ ವಿತರಿಸುವ ಆಹಾರ ಧಾನ್ಯಕ್ಕೆ ಸರಕಾರವು ನಿಗದಿ ಪಡಿಸಿದ ದರಕ್ಕಿಂತಲೂ ಹೆಚ್ಚಿನ ರೂಪಾಯಿ ತೆಗೆದುಕೊಳ್ಳುತ್ತಿರುವದು ಕಂಡು ಬಂದಿರುತ್ತದೆ. ಗ್ರಾಮಸ್ಥರು ಇದರ ಬಗ್ಗೆ ವಿಚಾರಿಸಿದಾಗ ತಾಲೂಕ ಅಥವಾ ಜಿಲ್ಲಾ ಕೇಂದ್ರದಿಂದ ಗ್ರಾಮಕ್ಕೆ ತರಲು ತಗಲುವ ಸಾರಿಗೆ ವೆಚ್ಚವೆಂದು ಸಬೂಬು ಹೇಳಿ ಕೇಳಲು ಬಂದವರನ್ನು ವಾಪಸ್ಸು ಕಳುಹಿಸುತ್ತಾರೆ. ಇದರಿಂದ ಯಾವ ಜನರು ನ್ಯಾಯ ಬೆಲೆ ಅಂಗಡಿಗಳ ವಿರುದ್ಧ ಮಾತನಾಡುತ್ತಾರೊ ಆ ಕುಟುಂಬಗಳಿಗೆ ಮುಂದಿನ ತಿಂಗಳಿನಿಂದ ಅವರ ಪಡಿತರ ಚೀಟಿಗೆ ದೊರಕುವ ದವಸ ಧಾನ್ಯಗಳಲ್ಲಿ ವ್ಯತಯ ಉಂಟಾಗಬಹುದು ಎಂಬ ಹಿಂಜರಿಕೆ ಇದೆ. ಆದ್ದರಿಂದ ಯಾರು ಸಹ ಏನನ್ನು ಕೇಳದೆ ಸುಮ್ಮನೆ ಇರುತ್ತಾರೆ.

ಸರಿಸುಮಾರು ಪ್ರತಿಶತ 25ರಷ್ಟು ಕುಟುಂಬಗಳಿಗೆ ಪ್ರತಿತಿಂಗಳು 25 ಕೆ.ಜಿ.ಗಳಷ್ಟು ಅಕ್ಕಿಯ ಅವಶ್ಯಕತೆ ಕೊಂಕನಹಳ್ಳಿಯಲ್ಲಿದ್ದರೆ ಅಷ್ಟೆ ಪ್ರಮಾಣದ ಅಕ್ಕಿಯು ನಿಗದಿಯಲ್ಲಿ ಪ್ರತಿಶತ 19ರಷ್ಟು ಕುಟುಂಬಗಳಿಗೆ ಅವಶ್ಯಕತೆ ಇರುವದು ಕಂಡುಬರುತ್ತದೆ. ಒಟ್ಟಾರೆಯಾಗಿ 25 ಕೆ.ಜಿ. ಅಕ್ಕಿ ಬೇಕಾಗಿರುವ ಕುಟುಂಬಗಳು ಶೇಕಡಾ 25 ಕೊಂಕನಹಳ್ಳಿಯಲ್ಲಿ ಅಷ್ಟೇ ಪ್ರಮಾಣ ಅಕ್ಕಿ ಬೇಕಾಗಿರುವ ಕುಟುಂಬಗಳು ಧಾರವಾಡದ ನಿಗದಿಯಲ್ಲಿ ಶೇಕಡಾ 24 ನಿಗದಿಯಲ್ಲಿ ಹೆಚ್ಚಾಗಿವೆ. ಎರಡು ಗ್ರಾಮಗಳಿಗೆ ತುಲನೆ ಮಾಡಿ ನೋಡಿದಾಗ 15 ಕೆ.ಜಿ. ಯಿಂದ 35 ಕೆ.ಜಿ. ಅಕ್ಕಿ ಪ್ರತಿ ತಿಂಗಳು ಅವಶ್ಯವಿರುವ ಕುಟುಂಬಗಳ ಸಂಖ್ಯೆ ಹೆಚ್ಚಾಗಿದೆ. ಪ್ರತಿ ತಿಂಗಳು 40 ಕೆ.ಜಿ. ಅಕ್ಕಿ ಬೇಕಾಗುವ ಕುಟುಂಬಗಳು (7%) ನಿಗದಿಯಲ್ಲಿದ್ದರೆ ಕೇವಲ ಪ್ರತಿಶತ 4ರಷ್ಟು ಕುಟುಂಬಗಳಿಗೆ ಕೊಂಕನಹಳ್ಳಿಯಲ್ಲಿ ಅವಶ್ಯಕತೆಯಿದೆ ಆದರೆ 50 ಕೆ.ಜಿ. ಅಥವಾ ಅದಕ್ಕಿಂತ ಹೆಚ್ಚಿನ ಪ್ರಮಾಣದ ಅಕ್ಕಿ ಅವಶ್ಯವಿರುವ ಕುಟುಂಬಗಳು ಎರಡು ಹಳ್ಳಿಗಳಿಗೆ ಹೋಲಿಸಿದಾಗ ಹೆಚ್ಚಿನ ಪ್ರವಮಾಣದ ಅಂತರ

ಕಂಡುಬರುವುದಿಲ್ಲಾ. ಒಟ್ಟಾರೆಯಾಗಿ ಪ್ರತಿತಿಂಗಳು ಕೊಂಕನಳ್ಳಿಯಲ್ಲಿ ಶೇಕಡಾ 21.6ರಷ್ಟು ಮತ್ತು ನಿಗದಿಯಲ್ಲಿ ಶೇಕಡಾ 18.2ರಷ್ಟು ಕುಟುಂಬಗಳಿಗೆ 15 ಕೆ.ಜಿ ಗಳಷ್ಟು ಅಕ್ಕಿಯ ಕೊರತೆ ಇದ್ದುದು ಕಂಡು ಬಂದಿದೆ.

ಅಧ್ಯಯನ ಕೈಗೊಂಡ ಎಲ್ಲಾ ಪ್ರದೇಶಗಳಲ್ಲಿನ ಎಲ್ಲ ಕುಟುಂಬಗಳಿಗೆ ಪ್ರತಿ ತಿಂಗಳಿಗೆ 10 ಕೆ.ಜಿ. ಗೋಧಿ ಮತ್ತು ಕೇವಲ 1 ಕೆ.ಜಿ.ಯಷ್ಟು ಸಕ್ಕರೆಯನ್ನು ವಿತರಿಸಲಾಗುತ್ತಿದೆ. ಈ ಒಂದು ಕೆ.ಜಿ. ಸಕ್ಕರೆಯ ಪ್ರಮಾಣವು ಯಾವುದೇ ಕುಟುಂಬಕ್ಕೆ ಒಂದು ತಿಂಗಳಿಗೆ ಸಾಕಾಗುವುದಿಲ್ಲ. ಅದಕ್ಕಾಗಿ ಅನೇಕ ಕುಟುಂಬಗಳು ಗ್ರಾಮಗಳಲ್ಲಿ ಲಭ್ಯವಿರುವ ಅಂಗಡಿಗಳ ಮೇಲೆ ಹೆಚ್ಚಾಗಿ ಅವಲಂಬಿತರಾಗಿದ್ದಾರೆ. ಆದ್ದರಿಂದ ಗಾಮಗಳಲ್ಲಿರುವ ಸಣ್ಣಪುಟ್ಟ ಅಂಗಡಿಗಳ ಪಾತ್ರ ಬಹಳ ಪ್ರಮುಖವಾಗಿದೆ. ಅಧ್ಯಯನದಲ್ಲಿ ಬಡವರ ಆದಾಯದಲ್ಲಿ ಹೆಚ್ಚಿನ ಪ್ರಮಾಣದ ಆದಾಯ ಅವರ ಮಕ್ಕಳ ಶಿಕ್ಷಣ, ಆಹಾರ ಮತ್ತು ಆರೋಗ್ಯಕ್ಕಾಗಿ ಹೆಚ್ಚಿನ ಪ್ರಮಾಣದಲ್ಲಿ ಬೇಕಾಗುತ್ತದೆ ಎಂದು ತಿಳಿದುಬರುತ್ತದೆ.

ಗ್ರಾಮಗಳಲ್ಲಿನ ದೊಡ್ಡ ಕುಟುಂಬಗಳು, ರಾಜಕೀಯವಾಗಿ ಅಧಿಕಾರದಲ್ಲಿರುವರು, ಪ್ರಬಲ ಜಾತಿಯ ಅಥವ ಕೋಮಿಗೆ ಸೇರಿದವರು ತಮ್ಮ ಕುಟುಂಬಕ್ಕೆ ಒಂದು ತಿಂಗಳಿಗೆ ಎಷ್ಟು ಸಕ್ಕರೆ ಬೇಕಾಗುತ್ತದೆಯೊ ಅಷ್ಟನ್ನು ನ್ಯಾಯ ಬೆಲೆ ಅಂಗಡಿಯ ವ್ಯವಸ್ಥಾಪಕನೊಂದಿಗೆ ವ್ಯವಹಾರವನ್ನು ಕುದಿರಿಸಿ ಮಾರುಕಟ್ಟೆಗಿಂತ ಕಡಿಮೆ ದರವನ್ನು ಕೊಟ್ಟು ತೆಗೆದುಕೊಂಡು ಹೋಗುತ್ತಾರೆ ಎಂದು ಮಾಹಿತಿಯನ್ನು ಕಲೆಹಾಕುವ ಸಂದರ್ಭದಲ್ಲಿ ಪ್ರಸ್ತಾಪಿಸಿರುತ್ತಾರೆ. ಕೆಲವೊಂದು ಕುಟುಂಬಗಳು ತಮ್ಮಲ್ಲಿ ಹಣ ಇರದೆ ಇದ್ದರೆ ಆ ತಿಂಗಳಲ್ಲಿ ಯಾವುದೇ ಪದಾರ್ಥಗಳನ್ನು ಸಹ ತೆಗೆದುಕೊಳ್ಳುವುದಿಲ್ಲ. ಅವರ ಪಾಲಿನ ಪದಾರ್ಥಗಳು ನ್ಯಾಯ ಬೆಲೆ ಅಂಗಡಿಗಳಲ್ಲೆ ಉಳಿಯುತ್ತವೆ ಹೀಗೆ ಉಳಿದ ಸಕ್ಕರೆ, ಅಕ್ಕಿ, ಸೀಮೆ ಎಣ್ಣೆ ಮತ್ತು ಇತರೆ ಪದಾರ್ಥಗಳನ್ನು ಊರಿನ ಅಂಗಡಿಗಳಿಗೆ ಮಾರಾಟ ಮಾಡುತ್ತಾರೆ. ಬಡವರು ಒಂದು ಕೆ.ಜಿ ಸಕ್ಕರೆ ಹೆಚ್ಚಿಗೆ ಕೇಳಿದರೆ ಇಲ್ಲ ಎಂದು ಉತ್ತರ ಸಿಗುತ್ತದೆ ಆದರೆ ಅದೇ ಗ್ರಾಮದ ಪಂಚಾಯತಿಯ ಸದಸ್ಯ ಅಥವಾ ಊರಿನ ಪ್ರಬಲ ವ್ಯಕ್ತಿ ಕೇಳಿದರೆ ಅವರ ಮನೆಯವರೆಗೆ ತೆಗೆದುಕೊಂಡು ಹೊಗಿ ಕೊಟ್ಟು ಹಣವನ್ನು ಸಹ ತೆಗೆದುಕೊಳ್ಳದೆ ಬರುತ್ತಾರೆ ಎಂದು ಬಹಳ ಕೊಪದಿಂದ ಈ ಮಾಹಿತಿಯನ್ನು ಸಂಶೋಧಕರೊಂದಿಗೆ ಹಂಚಿಕೊಳ್ಳುತ್ತಾರೆ. ಇದಕ್ಕೆ ನ್ಯಾಯ ಬೆಲೆ ಅಥವಾ ಸಹಕಾರ ಸಂಘಕ್ಕೆ ತಪ್ಪಾಗುತ್ತಿರುವುದರ ಬಗ್ಗೆ ಮರು ಪ್ರಶ್ನಿಸಿದ್ದಿರಾ ಎಂದು ಕೇಳಿದರೆ. ಮಾಹಿತಿಯನ್ನು ನೀಡುತ್ತಿರುವವರು **"ಬಡವನ ಸಿಟ್ಟು ದವಡಿಗೆ ಮೂಲ"** ಎಂದು ಉತ್ತರಿಸಿದ್ದರು.

ಇನ್ನು ಆರೋಗ್ಯದ ಬಗ್ಗೆ ವಿಶ್ಲೇಷಿಸುವುದಾದರೆ ಸರಕಾರದ ಆರೋಗ್ಯ ಸೇವಾ ಕೇಂದ್ರಗಳಾದ ಜಿಲ್ಲಾ ಆಸ್ಪತ್ರೆ, ತಾಲೂಕ ಆಸ್ಪತ್ರೆ, ಸಮುದಾಯ ಆರೋಗ್ಯ ಕೇಂದ್ರ, ಪ್ರಾಥಮಿಕ ಆರೋಗ್ಯ ಕೇಂದ್ರ ಮತ್ತು ಉಪ ಆರೋಗ್ಯ ಕೇಂದ್ರಗಳಲ್ಲಿ ಕೇವಲ ರೂಪಾಯಿ 2, ರೂಪಾಯಿ 5 ಅಥವಾ

10 ರೂಪಾಯಿಗಳ ಬಳಕೆದಾರರ ಶುಲ್ಕವನ್ನು ಕೆಲವೊಂದು ಪರೀಕ್ಷೆಗಳಿಗೆ ಸರಕಾರ ನಿಗದಿಪಡಿಸಿದೆ, ಆದರೆ ಎಲ್ಲ ಬಡತನ ರೇಖೆಯ ಕೆಳಗಿನ ಕುಟುಂಬಗಳಿಗೆ ಯಾವುದೇ ಶುಲ್ಕ ಇರುವುದಿಲ್ಲ. ಎಲ್ಲ ಆರೋಗ್ಯ ಸೇವೆಗಳು ಉಚಿತವಾಗಿ ದೊರಕಿದ್ದರೂ ಸಹ ಅತಿ ಹೆಚ್ಚಿನ ಪ್ರಮಾಣದಲ್ಲಿ ಕುಟುಂಬಗಳು ಆಹಾರ, ಸಾರಿಗೆ, ಲಂಚ, ದಾದಿಯರಿಗೆ ಖುಷಿಯನ್ನು ಕೊಡುವುದು, ವಸತಿ ಮತ್ತು ಒಂದು ವೇಳೆ ಆಸ್ಪತ್ರೆಗಳಲ್ಲಿ ಔಷಧಿ ಇರದಿದ್ದರೆ ಹೊರಗಿನ ಔಷಧಿಗಳಿಗಾಗಿ ಖರ್ಚು ಮಾಡಬೇಕಾಗುತ್ತದೆ.

ಆರೋಗ್ಯಕ್ಕೆ ಸಂಬಂಧಪಟ್ಟ ಅನೇಕ ಕಾರ್ಯಕ್ರಮಗಳು ತಾಯಿ ಮತ್ತು ಮಕ್ಕಳ ಆರೋಗ್ಯಕ್ಕೆ ಮಾತ್ರ ಸಂಬಂಧಿಸಿದ್ದಾಗಿರುತ್ತವೆ. ತಾಯಿ ಮತ್ತು ಮಕ್ಕಳ ಆರೋಗ್ಯ ಅಲ್ಲದೇ ಅನೇಕ ರೀತಿಯ ಸಾಮಾನ್ಯ ಮತ್ತು ತೀರ ಅಪಾಯಕಾರಿಯಾದ ಆರೋಗ್ಯ ಸಮಸ್ಯೆಗಳು ಎಲ್ಲರನ್ನು ಕಾಡುತ್ತವೆ. ಇವುಗಳಿಗೆ ಕೆಲವೆ ಕೆಲವು ಕಾರ್ಯಕ್ರಮಗಳು ಇವೆ. ಕಲಬುರಗಿಯ ಕೊಂಕನಳ್ಳಿಯ ಗ್ರಾಮದಲ್ಲಿನ ಶೇಕಡಾ 75.86ರಷ್ಟು ಮತ್ತು ಧಾರವಾಡದ ನಿಗದಿ ಗ್ರಾಮದಲ್ಲಿ ಶೇಕಡಾ 53.64ರಷ್ಟು ಕುಟುಂಬಗಳು ಅತಿ ಹೆಚ್ಚಾಗಿ ಸರಕಾರಿ ಆಸ್ಪತ್ರೆಯ ಸೇವೆಗಳ ಮೇಲೆ ಅವಲಂಬಿತರಾಗಿದ್ದರೆ. ಶೇಕಡಾ 21.11ರಷ್ಟು ಕೊಂಕನಳ್ಳಿ ಮತ್ತು ಶೇಕಡಾ 32.73ರಷ್ಟು ನಿಗದಿಯಲ್ಲಿ ಕುಟುಂಬಗಳು ಗ್ರಾಮಗಳಲ್ಲಿನ ಖಾಸಗಿ ವೈದ್ಯರಲ್ಲಿಗೆ ಹೋಗುತ್ತಾರೆ. ಶೇಕಡಾ 59.48ರಷ್ಟು ಕೊಂಕನಳ್ಳಿಯಲ್ಲಿನ ಕುಟುಂಬಗಳು ಮತ್ತು ಶೇಕಡಾ 70ರಷ್ಟು ನಿಗದಿಯಲ್ಲಿನ ಕುಟುಂಬಗಳು ಸರಕಾರಿ ಮತ್ತು ಖಾಸಗಿ ಆಸ್ಪತ್ರೆಗಳೆರಡರಿಂದ ಸೇವೆಗಳನ್ನು ಪಡೆಯುತ್ತಾರೆ ಎಂದು ಮಾಹಿತಿಯನ್ನು ಹಂಚಿಕೊಂಡಿರುತ್ತಾರೆ. ಆದರೆ ಈ ರೀತಿಯ ಖಾಸಗಿ ವೈದ್ಯರು ಯಾವುದೇ ಅಧಿಕೃತ ವೈದ್ಯಕೀಯ ಪ್ರಮಾಣ ಪತ್ರವನ್ನು ಪಡೆಯದೆ ಅವರಲ್ಲಿಗೆ ಬರುವ ರೋಗಿಗಳನ್ನು ಉಪಚರಿಸುತ್ತಾರೆ. ಇವರು ಕೇವಲ ಆರ್.ಎಂ.ಪಿ ವೈದ್ಯರಾಗಿದ್ದು ಸಣ್ಣ ಪುಟ್ಟ ಕಾಯಿಲೆಗಳಾದ ನೆಗಡಿ, ಕೆಮ್ಮು, ಜ್ವರ, ವಾಂತಿ–ಭೇದಿಯಿಂದ ಬಳಲುತ್ತಿದ್ದರೆ ಮಾತ್ರ ರೊಗಿಗಳನ್ನು ಆರೈಕೆ ಮಾಡುತ್ತಾರೆ ಇಲ್ಲದ್ದಿದರೆ ಅವರನ್ನು ನಗರದಲ್ಲಿನ ವೈದ್ಯರ ಹತ್ತಿರ ಕಳುಹಿಸಿ ಕೊಡುತ್ತಾರೆ. ಈ ರೀತಿಯಾದ ಸೇವೆಗಳಿಗೆ ಅವರು ಪ್ರತಿ ಒಬ್ಬರ ಹತ್ತಿರ 50 ರಿಂದ 100 ರೂಪಾಯಿಗಳನ್ನು ತೆಗೆದುಕೊಳ್ಳುತ್ತಾರೆ. ಈ ರೀತಿಯಾಗಿ ಕಾರ್ಯ ನಿರ್ವಹಿಸುವವರಲ್ಲಿ ಕೆಲವರು ನಗರದಲ್ಲಿನ ಪ್ರಸಿದ್ಧ ವೈದ್ಯರಲ್ಲಿ ದಿನ ಪೂರ್ತಿ ಸಹಾಯಕರಾಗಿ ಕೆಲಸವನ್ನು ಮಾಡಿ ಸಾಯಂಕಾಲ ಮಾತ್ರ ತಮ್ಮ ತಮ್ಮ ಗ್ರಾಮಗಳಲ್ಲಿ ಅರೆ–ವೈದ್ಯರಾಗಿ ಕೆಲಸವನ್ನು ಮಾಡುತ್ತಾರೆ.

ಸಾಮಾನ್ಯವಾಗಿ ಎಲ್ಲಾ ಜನರು ಸಾಮಾನ್ಯ ಕಾಯಿಲೆಗಳಾದ ನೆಗಡಿ, ಕೆಮ್ಮು ಮತ್ತು ಸಣ್ಣ ಪ್ರಮಾಣದ ಜ್ವರಗಳಾದಾಗ ಹತ್ತಿರದಲ್ಲೇ ಇರುವ ಸರಕಾರಿ ಅಥವಾ ಖಾಸಗಿ ಸೇವೆಗಳನ್ನು ಪಡೆದುಕೊಂಡು ತಮ್ಮ ಕುಟುಂಬುಗಳ ಸದಸ್ಯರ ಆರೋಗ್ಯವನ್ನು ಕಾಪಾಡಿಕೊಳ್ಳುತ್ತಾರೆ. ಆದರೆ ತೀವ್ರವಾದ ಕಾಯಿಲೆ ಮತ್ತು ಬಹಳ ದಿನಗಳಿಂದ ಇರುವ ಆರೋಗ್ಯ ಸಮಸ್ಯೆಯನ್ನು ನುರಿತ ವೈದ್ಯರು ಇರುವ ಆರೋಗ್ಯ ಕೇಂದ್ರಗಳಿಗೆ ಹೋಗಿ ಸೇವೆಗಳನ್ನು ಪಡೆಯುವುದು ಸಾಮಾನ್ಯ.

ಈ ರೀತಿಯ ಸರಕಾರಿ ಮತ್ತು ಖಾಸಗಿ ಆಸ್ಪತ್ರೆಗಳಿಗೆ ಹೋಗುವುದು ಜನರ ಆರ್ಥಿಕ ಸ್ಥಿತಿ ಮತ್ತು ಸಾಮಾಜಿಕ ಸ್ಥಾನಮಾನದ ಅನುಗುಣವಾಗಿ ನಿರ್ಧಾರಿತವಾಗುತ್ತದೆ ಎಂಬ ಮಾಹಿತಿಯು ಇದರಿಂದ ತಿಳಿದು ಬರುತ್ತದೆ.

ಕುಟುಂಬ ಸದಸ್ಯರು ತೀವ್ರತರಹದ ಅನಾರೊಗ್ಯದಿಂದ ಬಳಲುತ್ತಿದ್ದಾಗ ಆರೈಕೆಗಾಗಿ ಹೋಗುವ ಆಸ್ಪತ್ರೆಯ ಬಗ್ಗೆ ಹೇಳುವುದಾದರೆ ಅನುಕ್ರಮವಾಗಿ ಕಲಬುರಗಿಯಲ್ಲಿನ ಕೊಂಕನಳ್ಳಿ ಮತ್ತು ಧಾರವಾಡದ ನಿಗದಿ ಗ್ರಾಮದಲ್ಲಿನ ಶೇಕಡಾ 47.41ರಷ್ಟು ಮತ್ತು ಶೇಕಡಾ 41.82ರಷ್ಟು ಕುಟುಂಬಗಳು ಸರಕಾರಿ ಆಸ್ಪತ್ರೆಯಲ್ಲಿ ದೊರಕುವ ಸೇವೆಗಳ ಮೇಲೆ ಅವಲಂಬಿತರಾಗಿದ್ದರೆ ಶೇಕಡಾ 64.66 ಮತ್ತು ಶೇಕಡಾ 73.64ರಷ್ಟು ಕುಟುಂಬಗಳು ಖಾಸಗಿ ಆಸ್ಪತ್ರೆಯಲ್ಲಿ ದೊರಕುವ ಸೇವೆಗಳನ್ನು ಪಡೆದಿದ್ದಾರೆ. ಇನ್ನು ಸರಕಾರಿ ಆಸ್ಪತ್ರೆಯಲ್ಲಿ ದಾಖಲಾಗಿ ಸೇವೆಗಳನ್ನು ಪಡೆಯುತ್ತಿರುವಾಗ ಇನ್ನೂ ಹೆಚ್ಚಿನ ಮಟ್ಟದ ಸೇವೆಗಳ ಅವಶ್ಯಕತೆ ಇದ್ದಾಗ ಹೆಚ್ಚಿನ ಹಾಗೂ ಗುಣಮಟ್ಟದ ಚಿಕಿತ್ಸೆಗಾಗಿ ಸಮೀಪದ ತಾಲೂಕಿನಲ್ಲಿರುವ ಮತ್ತು ಜಿಲ್ಲಾ ಕೇಂದ್ರದಲ್ಲಿರುವ ಖಾಸಗಿ ದವಾಖಾನೆಗಳಿಗೆ ಶೇಕಡಾ 76.72 ಮತ್ತು ಶೇಕಡಾ 41.82ರಷ್ಟು ಕುಟುಂಬಗಳು ದಾಖಲಾಗಿ ಆರೈಕೆಯನ್ನು ಪಡೆದಿದ್ದಾರೆ ಎಂದು ಮಾಹಿತಿಯನ್ನು ಕಲೆಹಾಕುವ ಸಮಯದಲ್ಲಿ ತಮ್ಮ ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದಾರೆ. ಸರಕಾರಿ ಮತ್ತು ಖಾಸಗಿ ಎರಡೂ ಸೇವೆಗಳ ಮೇಲೆ ಅವಲಂಬಿತರ ಸಂಖ್ಯೆ ಕಲಬುರಗಿಯಲ್ಲಿನ ಕೊಂಕನಳ್ಳಿಯಲ್ಲಿ ಹೆಚ್ಚು ಕಂಡು ಬಂದಿರುತ್ತದೆ. ಆದರೆ ಧಾರವಾಡದಲ್ಲಿನ ನಿಗದಿ ಗ್ರಾಮದಲ್ಲಿ ಕೇವಲ ಖಾಸಗಿ ಆಸ್ಪತ್ರೆಗೆ ಹೋಗಿ ಆರೈಕೆಯನ್ನು ಪಡೆದಿರುವವರ ಸಂಖ್ಯೆ ಹೆಚ್ಚಿರುವದು ತಿಳಿದುಬರುತ್ತದೆ.

ಖಾಸಗಿ ದವಾಖಾನೆಯಲ್ಲಿ ಚಿಕಿತ್ಸೆ ಪಡೆಯುವದ್ದರಿಂದ ಖಚು ಹೆಚಾಗುತ್ತದೆ ಹೆಚ್ಚಾದ ಖರ್ಚನ್ನು ಭರಿಸಿಕೊಡುವ ಯೋಜನೆಗಳು ಇಲ್ಲ. ಈ ರೀತಿಯಾದ ಹೆಚ್ಚುವರಿ ಖರ್ಚನ್ನು ಆ ವರ್ಷದಲ್ಲಿ ಕುಟುಂಬಗಳಿಗೆ ಬಂದ ಆದಾಯದಿಂದ ಸರಿದೂಗಿಸಿಕೊಳ್ಳುತ್ತವೆ. ಇಲ್ಲದೇ ಇದ್ದರೆ ಬೇರೆಯವರ ಹತ್ತಿರ ಸಾಲಮಾಡಿಯಾದರೂ ಆಸ್ಪತ್ರೆಗೆ ತೆಗೆದುಕೊಂಡು ಹೋಗುತ್ತಾರೆ. ಒಂದು ವೇಳೆ ಗುಣಮುಖರಾಗದೇ ಇದ್ದರೆ ಸಾಲ ಸಾಲವಾಗಿಯೇ ಉಳಿಯುತ್ತದೆ ಮತ್ತು ಮೇಲಾಗಿ ಮನುಷ್ಯನ ಜೀವ ಕೂಡ ಕಳೆದುಕೊಂಡ ಕುಟುಂಬವು ಆ ಸಾಲವನ್ನು ಬಡ್ಡಿ ಚಕ್ರ ಬಡ್ಡಿಯ ರೂಪದಲ್ಲಿ ಮರುಪಾವತಿಸಬೇಕಾಗುತ್ತದೆ. ಇಲ್ಲದೇ ಇದ್ದರೆ ಸಾಲವನ್ನು ಕೊಟ್ಟಿರುವ ಊರಿನ ಗೌಡ ಅಥವಾ ಸಾಹುಕಾರರ ಹತ್ತಿರ ಸಾಲ ಮುಟ್ಟುವವರೆಗೆ ದುಡಿಯಬೇಕಾಗುತ್ತದೆ. ಈ ಪರಿಸ್ಥಿತಿ ಗ್ರಾಮೀಣ ಭಾಗದಲ್ಲಿ ಈಗಲೂ ಸಹ ಜಾರಿಯಲ್ಲಿರುವದು ಕಂಡು ಬರುತ್ತದೆ. ಆದರೆ ಆ ದುಡಿಮೆಯ ರೂಪರೇಷಗಳು ಬದಲಾಗಿರಬಹುದು ಆದರೆ ಸಾಲಕ್ಕಾಗಿ ದುಡಿಯುವುದು ಇನ್ನೂ ಜೀವಂತವಾಗಿದೆ ಎಂದು ಹೇಳಬಹುದು.

ಅಧ್ಯಯನ ಕೈಗೊಂಡ ಎರಡು ಗ್ರಾಮಗಳಲ್ಲಿನ ಶೇಕಡಾ 70ಕ್ಕಿಂತ (ಕೊಂಕನಳ್ಳಿಯಲ್ಲಿ ಶೇಕಡಾ 82.76 ಮತ್ತು ನಿಗದಿಯಲ್ಲಿ ಶೇಕಡಾ 71.82ರಷ್ಟು) ಹೆಚ್ಚಿನ ಕುಟುಂಬಗಳು ತಮ್ಮ ಮಕ್ಕಳನ್ನು ಗ್ರಾಮಗಳಲ್ಲಿ ಲಭ್ಯವಿರುವ ಸರಕಾರಿ ಶಾಲೆಗಳಿಗೆ ಸೇರಿಸಿದ್ದಾರೆ. ಕೊಂಕನಳ್ಳಿಯಲ್ಲಿ ಶೇಕಡಾ 71.55ರಷ್ಟು ಮತ್ತು ನಿಗದಿಯಲ್ಲಿನ ಶೇಕಡಾ 74.55ರಷ್ಟು ಕುಟುಂಬಗಳು ಮಕ್ಕಳ ಶಿಕ್ಷಣಕ್ಕಾಗಿ ಇರುವ ಸರಕಾರದ ಯೋಜನೆಗಳ ಲಾಭವನ್ನು ಪಡೆದುಕೊಂಡಿದ್ದಾರೆ ಎಂದು ಸಂಶೋಧನೆಯಿಂದ ತಿಳಿದು ಬರುತ್ತದೆ. ಈ ಯೋಜನೆಗಳಲ್ಲಿ ಉಚಿತ ಸಮವಸ್ತ್ರ, ಬಿಸಿ ಊಟ, ಸಾರಿಗೆಗಾಗಿ, ಉಚಿತ ಬಸ್ ಪಾಸ್ ಅಥವಾ ಸೈಕಲ್ ಮತ್ತು ಉಚಿತ ಪಠ್ಯಪುಸ್ತಕಗಳನ್ನು ಪಡೆದುಕೊಂಡಿದ್ದಾರೆ. ಈ ಎಲ್ಲ ಯೋಜನೆಗಳು ಎಲ್ಲ ಮಕ್ಕಳಿಗೆ ದೊರೆಯುತ್ತವೆ ಆದರೆ ಕೆಲವೊಂದು ಸಮಯದಲ್ಲಿ ಇವುಗಳಲ್ಲಿ ವ್ಯತ್ಯಯವೂ ಕಂಡುಬರುವುದು.

ಶಿಕ್ಷಣದ ಶುಲ್ಕದ ರೂಪದಲ್ಲಿ ಪರಿಶಿಷ್ಟ ಜಾತಿ/ಪಂಗಡಗಳು ಮತ್ತು ಇತರೆ ಹಿಂದುಳಿದ ಜಾತಿ/ವರ್ಗದ ಮಕ್ಕಳಿಂದ ಪ್ರತಿ ವರ್ಷಕ್ಕೆ 15 ರೂಪಾಯಿನ್ನು ಶಾಲಾ ಶುಲ್ಕವೆಂದು ತೆಗೆದುಕೊಳ್ಳಲಾಗುತ್ತದೆ. ಈ 15 ರೂಪಾಯಿಯಲ್ಲಿ ಕ್ರೀಡಾ ಶುಲ್ಕ ಮತ್ತು ಭಾರತ ಸೇವಾದಳದ ಶುಲ್ಕ ಒಳಗೊಂಡಿರುತ್ತದೆ. ಇನ್ನು ಸಾಮಾನ್ಯ ಗುಂಪಿಗೆ ಸೇರಿದ ಮಕ್ಕಳು 185 ರೂಪಾಯಿನ್ನು ಪ್ರತಿ ವರ್ಷವು ಶಾಲೆಗೆ ಶುಲ್ಕದ ರೂಪದಲ್ಲಿ ತುಂಬಬೇಕಾಗುತ್ತದೆ. ಇದಕ್ಕಿಂತ ಹೆಚ್ಚಿನ ಏನೇ ಶುಲ್ಕ ಬಂದರೆ ಆಯಾ ಕುಟುಂಬದವರು ಭರಿಸಬೇಕಾಗುತ್ತದೆ. ಕಡಿಮೆಯಾದ ಹೊರೆಯನ್ನು ಕುಟುಂಬದ ಆದಾಯದಿಂದ ಮತ್ತು ಸಂಬಂಧಿಕರಲ್ಲಿ ಸಹಾಯದ ರೂಪದಲ್ಲಿ ಪಡೆದು ಸರಿದೂಗಿಸಿಕೊಳ್ಳುತ್ತಾರೆ. ಇದಲ್ಲದೆ ಪರಿಶಿಷ್ಟ ಜಾತಿ ಮತ್ತು ಪಂಗಡದ ಮಕ್ಕಳಿಗೆ ಪ್ರತಿವರ್ಷಕ್ಕೆ ಆರು (6) ನೋಟ್ ಪುಸ್ತಕ ಮತ್ತು ಎಲ್ಲ ಪಠ್ಯ ಪುಸ್ತಕಗಳನ್ನು ಉಚಿತವಾಗಿ ವಿತರಿಸಲಾಗುತ್ತದೆ.

ಸರಕಾರವು ಕೊಡುವ ಆರು ನೋಟ್ ಪುಸ್ತಕದಲ್ಲಿ ಇಡೀ ಒಂದು ವರ್ಷದಲ್ಲಿ ಬರೆಯಲು ಸಾಕಾಗುವುದಿಲ್ಲ. ಇದು ಕೂಡ ಕೇವಲ ಪರಿಶಿಷ್ಟ ಜಾತಿ ಮತ್ತು ಪಂಗಡದ ವಿದ್ಯಾರ್ಥಿಗಳಿಗೆ ಮಾತ್ರ ಇದೆ. ಉಳಿದ ವಿದ್ಯಾರ್ಥಿಗಳಿಗೆ ಈ ಸೌಲಭ್ಯವು ಇರುವುದ್ದಿಲ್ಲ. ಆದರೂ ಕೂಡ ಈ ಆರು ನೋಟ್ ಬುಕ್ಸ್‌ಗಳು ಸಾಕಾಗುವುದ್ದಿಲ್ಲ. ಏಕೆಂದರೆ ಒಂದರಿಂದ ಹತ್ತನೇ ತರಗತಿಯವರಗೆ ಆರು ವಿಷಯಗಳಿಗಾಗಿ ಒಂದು ಕ್ಲಾಸ್ ರೂಂ, ಮತ್ತು ಹೊಂವರ್ಕಗಾಗಿ ಒಂದೊಂದು ನೋಟ್ ಪುಸ್ತಕವನ್ನು ತೆಗೆದುಕೊಂಡರೆ ಒಟ್ಟು ಹನ್ನೆರಡು ನೋಟ್ ಬುಕ್‌ಗಳು ಬೇಕಾಗುತ್ತವೆ. ಅಂದರೆ ಶೇಕಡಾ 50ರಷ್ಟು ಮಾತ್ರ ಸರಕಾರದಿಂದ ದೊರಕುತ್ತಿವೆ. ಆದರೆ ಇದೂ ಕೂಡ ಎಲ್ಲ ಮಕ್ಕಳಿಗೆ ಇಲ್ಲ. ಹಿಂದುಳಿದ ಮತ್ತು ಸಾಮಾನ್ಯ ವಿದ್ಯಾರ್ಥಿಗಳಿಗೆ ಈ ರೀತಿಯ ಯಾವುದೇ ಸೌಕರ್ಯಗಳಿಲ್ಲ ಎಂದು ಹೇಳಬಹುದು. ಹಿಂದುಳಿದ ಮತ್ತು ಸಾಮಾನ್ಯ ಮಕ್ಕಳು ಪಟ್ಟಣದ ಅಂಗಡಿಗಳಿಂದ ತರಬೇಕಾಗುತ್ತದೆ.

ಇನ್ನು ಕುಡಿಯುವ ನೀರಿನ ವಿಚಾರಕ್ಕೆ ಬಂದಾಗ ಗ್ರಾಮಪಂಚಾಯತಿಯಿಂದ ಗ್ರಾಮಗಳಲ್ಲಿ ಬೋರ್ವೆಲ್‌ಗಳನ್ನು ಕೊರೆಯಿಸಲಾಗಿದೆ ಮತ್ತು ಅವುಗಳಿಂದ ಊರಿನಲ್ಲಿರುವ ಟ್ಯಾಂಕರಗೆ ವರ್ಗಾಯಿಸಿ ಅಲ್ಲಿಂದ ಎಲ್ಲ ಕುಟುಂಬಗಳಿಗೆ ನಲ್ಲಿ ಮೂಲಕ ಪ್ರತಿ ದಿವಸ ಎರಡು ತಾಸುಗಳಂತೆ ವಿಸರಿಸಲಾಗುತ್ತದೆ. ಬೋರವೆಲ್‌ನ ನೀರು ಕುಡಿಯಲು ಸಪ್ಪಗೆ ಇರುತ್ತವೆ ಎಂದು ಕುಟುಂಬದಿಂದ ಮಾಹಿತಿಯನ್ನು ಪಡೆಯುತ್ತಿರುವಾಗ ಕುಟುಂಬದ ಸದಸ್ಯರು ಮಾಹಿತಿಯನ್ನು ಹಂಚಿಕೊಂಡಿರುವುದು ಕಂಡುಬರುತ್ತದೆ. ಎಲ್ಲ ಕುಟುಂಬಗಳು ತಮ್ಮ ತಮ್ಮ ಸ್ವಂತ ಕುಡಿಯುವ ನೀರಿನ ಸಂಪರ್ಕವನ್ನು ಹೊಂದಲು ಗ್ರಾಮ ಪಂಚಾಯತಿಯಿಂದ ಒಂದು ಸಾವಿರ ರೂಪಾಯಿಗಳ ಅನುದಾನವನ್ನು ಕೊಡಲಾಗುತ್ತದೆ. ಪ್ರತಿ ವರ್ಷ ಸ್ವಂತ ನಳಗಳನ್ನು ಹೊಂದಿರುವ ಎಲ್ಲ ಕುಟುಂಬಗಳು ಪಂಚಾಯತಿಗೆ ಕುಡಿಯುವ ನೀರಿನ ಶುಲ್ಕದ ರೂಪದಲ್ಲಿ ರೂಪಾಯಿ 650ನ್ನು ಸಂದಾಯ ಮಾಡಬೇಕಾಗುತ್ತದೆ. ಸ್ವಂತ ನಳದ ಸಂಪರ್ಕ ಇಲ್ಲದೆ ಇರುವ ಕುಟುಂಬದವರು ರೂಪಾಯಿ 150ನ್ನು ಪಂಚಾಯತಿಗೆ ಕಟ್ಟಬೇಕಾಗುತ್ತದೆ. ಎರಡು ಗ್ರಾಮಗಳ ರಸ್ತೆಯ ಪಕ್ಕದಲ್ಲಿ ಸಾರ್ವಜನಿಕರ ಅನುಕೂಲಕ್ಕಾಗಿ ಜನರಿಗೆ ಅನುಕೂಲವಾಗುವ ಸ್ಥಳದಲ್ಲಿ ನಳಗಳನ್ನು ಸ್ಥಾಪಿಸಲಾಗಿದೆ. ಎರಡು ಗ್ರಾಮಗಳಲ್ಲಿ ಶುದ್ಧವಾದ ನೀರಿನ ಘಟಕಗಳು ಇರುವುದಿಲ್ಲ. ಈ ರೀತಿಯ ಸರಕಾರದ ಸೌಲಭ್ಯಗಳನ್ನು ಬಿಟ್ಟರೆ ಹೆಚ್ಚಿನ ಯಾವುದೇ ಖರ್ಚು ಆಗಿದ್ದರೆ ಅದು ಆಯಾ ಕುಟುಂಬಕ್ಕೆ ಸಂಬಂಧಿಸಿದೆ ಮತ್ತು ಅವರು ತಮ್ಮ ಉಳಿತಾಯ ಅಥವಾ ಬೇರೆಯವರ ಹತ್ತಿರ ಸಾಲಮಾಡಿಕೊಂಡು ವ್ಯವಸ್ಥೆಯನ್ನು ಕಲ್ಪಿಸಿಕೊಳ್ಳಬೇಕಾಗುತ್ತದೆ.

ವಾಸಿಸಲು ಮನೆಗಳು ಇಲ್ಲದ ಬಡ ಕುಟುಂಬಗಳಿಗೆ ವಸತಿಗಳನ್ನು ಮತ್ತು ನಿವೇಶನಗಳನ್ನು ಒದಗಿಸಲು ಕೇಂದ್ರ ಮತ್ತು ರಾಜ್ಯ ಸರಕಾರಗಳು ಅನೇಕ ಕಲ್ಯಾಣ ಕಾರ್ಯಕ್ರಮಗಳನ್ನು ಜಾರಿಯಲ್ಲಿ ತಂದಿರುತ್ತವೆ. ಆದರೆ ಈ ಎಲ್ಲ ಕಾರ್ಯಕ್ರಮಗಳಲ್ಲಿ ಪರಿಶಿಷ್ಟ ಜಾತಿ ಮತ್ತು ಪಂಗಡದವರಿಗೆ ಕೇವಲ ರೂಪಾಯಿ ಒಂದು ಲಕ್ಷದ ಐವತ್ತು ಸಾವಿರ ರೂಪಾಯಿಗಳು ದೊರಕಿದ್ದರೆ, ಸಾಮಾನ್ಯ ಮತ್ತು ಹಿಂದುಳಿದ ಜಾತಿಯ ಕಡು ಬಡವರಿಗೆ ಇದು 1,20,000 ರೂಪಾಯಿಗಳು ದೊರಕುತ್ತವೆ. ಆದರೆ ಸರಕಾರವು ಕೊಡುವ 1,50000 ರೂಪಾಯಿ ಮತ್ತು 1,20,000 ರೂಪಾಯಿಗಳಲ್ಲಿ ಈಗಿನ ಮಾರುಕಟ್ಟೆಯಲ್ಲಿ ಮನೆ ಕಟ್ಟಿಕೊಳ್ಳಲು ಜಾಗ ಅಥವಾ ಕಟ್ಟಿಕೊಳ್ಳಲು ಬೇಕಾಗುವ ಸಲಕರಣೆಗಳು ಸಿಗುವುದಿಲ್ಲ ಎಂದು ಮಾಹಿತಿಯನ್ನು ಕಲೆಹಾಕುವಾಗ ಕುಟುಂಬಗಳ ಸದಸ್ಯರು ಹೇಳುತ್ತಿರುವದು ತೀರ ಸಾಮಾನ್ಯವಾಗಿತ್ತು.

ಸರಕಾರವು ಹಂಚಿಕೆ ಮಾಡಿರುವ ವಿವಿಧ ವಸತಿ ಯೋಜನೆಯ ವಸತಿಗಳನ್ನು ಗ್ರಾಮ ಪಂಚಾಯತಿಯ ಅಧ್ಯಕ್ಷರು, ಉಪ-ಅಧ್ಯಕ್ಷರು, ಮತ್ತು ಎಲ್ಲ ಸದಸ್ಯರು ತಮ್ಮ ತಮ್ಮಲ್ಲಿ ಸಮನಾಗಿ ಹಂಚಿಕೆ ಮಾಡಿಕೊಳ್ಳುತ್ತಾರೆ. ಈ ರೀತಿಯಾಗಿ ಹಂಚಿಕೆ ಮಾಡಿಕೊಂಡ ವಸತಿಗಳು ಗ್ರಾಮ ಪಂಚಾಯತಿಯ ಸದಸ್ಯರು ತಮಗೆ ಮತ ಹಾಕಿದ ನಾಗರಿಕರಿಗೆ ಹಣದ ರೂಪದಲ್ಲಿ

ಮಾರಿಕೊಳ್ಳುತ್ತಾರೆ ಎಂದು ಈ ಒಂದು ಅಧ್ಯಯನದಲ್ಲಿ ಕಂಡುಕೊಳ್ಳಲಾಗಿದೆ. ಬಡತನ ರೇಖೆಯ ಕೆಳಗಿನ ಪಡಿತರ ಚೀಟಿ ಇದ್ದರು ಸಹ ಅವರಿಗೆ ಇಲ್ಲಿಯವರೆಗೆ ಒಂದು ನಿವೇಶನ ಮತ್ತು ಮನೆಯನ್ನು ಕಟ್ಟಿಕೊಳ್ಳಲು ಆಗಲಿಲ್ಲ ಎಂದು ಬಹಳ ನೋವಿನಿಂದ ಮಾಹಿತಿಯನ್ನು ಹಂಚಿಕೊಳ್ಳುತ್ತಾರೆ. ಕೇಳಿದರೆ ಇಲ್ಲ ಸಲ್ಲದ ಕಾರಣಗಳನ್ನು ಹೇಳಿ ಮುಂದೂಡುತ್ತಾರೆ. ಈ ಒಂದು 1,50,000 ರೂಪಾಯಿಗಳು ನಾಲ್ಕು ಸಮ ಕಂತುಗಳಲ್ಲಿ ಬರುತ್ತದೆ. ಇದನ್ನು ಪಡೆಯಲು ಅನೇಕ ರೀತಿಯ ಪರೋಕ್ಷ ಖರ್ಚುಗಳನ್ನು ಮನೆಯನ್ನು ಕಟ್ಟಿಸಿಕೊಳ್ಳುವವರು ಅಧ್ಯಕ್ಷರಿಂದ ತೆಗೆದುಕೊಂಡು ಗ್ರಾಮ ಪಂಚಾಯತಿಯ ಎಲ್ಲರಿಗೂ ಲಂಚದ ರೂಪದಲ್ಲಿ ಹಣವನ್ನು ಕೊಡದಿದ್ದರೆ ಅವರಿಗೆ ಕಂತುಗಳು ಬರುವುದು ಬಹಳ ಸಮಯ ತೆಗೆದುಕೊಳ್ಳುತ್ತದ್ದೆ. ಇದಕ್ಕಾಗಿ ಕಂತುಗಳನ್ನು ಕಟ್ಟಲು ಬೇರೆಯವರ ಹತ್ತಿರ ಸಾಲ ಮಾಡಬೇಕಾಗುತ್ತದೆ. ಇದು ಒಂದು ರೀತಿಯಾದ ಹಿಂಸೆಯಾಗುತ್ತದೆ ಎಂದು ಮಾಹಿತಿಯನ್ನು ಕಲೆಹಾಕುವಾಗ ಅನೇಕ ಕುಟುಂಬಗಳ ಸದಸ್ಯರು ಹಂಚಿಕೊಂಡಿದ್ದಾರೆ.

ಒಂದು ಸಮುದಾಯ ಅಥವಾ ಒಂದು ಕುಟುಂಬ ಅಥವಾ ಒಬ್ಬ ವ್ಯಕ್ತಿಯ ಆರೋಗ್ಯ ಮತ್ತು ಸ್ವಚ್ಛತೆಯು ಅವನಿಗೆ ದೊರಕುವ ಶುದ್ಧವಾದ ಕುಡಿಯುವ ನೀರು ಮತ್ತು ಸರಿಯಾದ ಶೌಚಾಲಯದ ವ್ಯವಸ್ಥೆಯ ಮೇಲೆ ಅವಲಂಬಿತವಾಗಿದೆ. ಆದ್ದರಿಂದ ನೀರು, ಸ್ವಚ್ಛತೆ ಮತ್ತು ಆರೋಗ್ಯದ ನಡುವೆ ನೇರವಾದ ಸಂಬಂಧವಿದೆ. ಅಶುದ್ಧವಾದ ಕುಡಿಯುವ ನೀರು, ಮಾನವನ ಬೇಡವಾದ ತ್ಯಾಜ್ಯವನ್ನು ಸರಿಯಾಗಿ ನಿರ್ವಹಣೆ ಮಾಡದೆ ಇರುವುದು, ಅಸಂಬಂಧ ಪರಿಸರದ ಸ್ವಚ್ಛತೆ ಮತ್ತು ಮನುಷ್ಯರ ವೈಯಕ್ತಿಕ ಮತ್ತು ಸೇವಿಸುವ ಆಹಾರದಲ್ಲಿ ಸ್ವಚ್ಛತೆ ಇಲ್ಲದೆ ಇರುವುದರಿಂದ ಅಭಿವೃದ್ಧಿ ಹೊಂದುತ್ತಿರುವ ದೇಶದಲ್ಲಿ ಅನೇಕ ರೋಗಗಳಿಗೆ ಬಹಳ ಪ್ರಮುಖವಾದ ಕಾರಣವಾಗಿದೆ. ಇದರಿಂದ ಭಾರತ ದೇಶವು ಹೊರತಾಗಿಲ್ಲ.

ಸರಕಾರ ಕಾರ್ಯಕ್ರಮಗಳಲ್ಲಿ ಶೌಚಾಲಯದ ಸೌಲಭ್ಯವನ್ನು ಕಲ್ಪಿಸಿ ಕೊಡುವ ಕುರಿತು ಅನೇಕ ಯೋಜನೆಗಳು ಜಾರಿಯಲ್ಲಿದ್ದರೂ ಸಹಿತ ಬೆರಳೆಣಿಕೆಯಷ್ಟು ಕುಟುಂಬಗಳು ಮಾತ್ರ ಸೌಲಭ್ಯವನ್ನು ಪಡೆಯುತ್ತಿವೆ. ಇದಕ್ಕೆ ಮೂಲ ಕಾರಣ ಸ್ಥಳೀಯ ಸಂಸ್ಥೆಯ ಚುನಾಯಿತ ಸದಸ್ಯರು ಮತ್ತು ಆಡಳಿತ ವರ್ಗ. ಸರಕಾರದ ಎಲ್ಲಾ ಸೌಕರ್ಯಗಳು ಸ್ಥಳೀಯ ಸಂಸ್ಥೆಗಳ ಮೂಲಕ ಫಲಾನುಭವಿಗೆ ತಲುಪಬೇಕು. ಬಹುತೇಕ ಸ್ಥಳೀಯ ಸಂಸ್ಥೆಗಳಲ್ಲಿ ಗ್ರಾಮಮಟ್ಟದ ಪ್ರಬಲ ಜಾತಿಯ ಮುಖಂಡರ ಮತ್ತು ರಾಜಕೀಯ ನಾಯಕರ ಅಣತಿಯಂತೆ ಕಾರ್ಯಕ್ರಮಗಳು ಅನುಷ್ಠಾನವಾಗುತ್ತವೆ. ಜನರ ಆರೋಗ್ಯದೊಂದಿಗೆ ನೇರ ಸಂಬಂಧ ಹೊಂದಿರುವ ಶೌಚಾಲಯದ ವ್ಯವಸ್ಥೆಯು ಗ್ರಾಮಗಳಲ್ಲಿ ತೀರ ಕೆಳಮಟ್ಟದಲ್ಲಿದೆ ಮತ್ತು ಅವರ ಆರೋಗ್ಯದ ಮೇಲೆ ಕೆಟ್ಟ ಪರಿಣಾಮ ಬೀರುತ್ತದೆ ಎಂದು ಕಲೆಹಾಕಿದ ಮಾಹಿತಿಯಿಂದ ತಿಳಿದು ಬರುತ್ತದೆ. ಇಲ್ಲಿ ತಮ್ಮ ಮಾತನ್ನು ಕೇಳುವವರಿಗೆ, ಸ್ವಪಕ್ಷ ಮತ್ತು ಸ್ವಜಾತಿಯ ಪ್ರಭಾವಗಳು ಕೆಲಸ ಮಾಡುತ್ತವೆ. ಒಂದು

ಗ್ರಾಮ ಪಂಚಾಯತಿಗೆ ಹಂಚಿಕೆಯಾದ ಶೌಚಾಲಯಗಳು ಮತ್ತು ಮನೆಗಳನ್ನು ಆ ಪಂಚಾಯತಿಯ ಆಡಳಿತ ಪಕ್ಷದ ಅಧ್ಯಕ್ಷರು, ಉಪಾಧ್ಯಕ್ಷರು ಮತ್ತು ಸದಸ್ಯರ ನಡುವೆ ಮರು ಹಂಚಿಕೆಯಾಗುತ್ತವೆ. ನಂತರದಲ್ಲಿ ಸದಸ್ಯರು ತಮ್ಮ ತಮ್ಮ ವಾರ್ಡಗಳಲ್ಲಿರುವ ಫಲಾನುಭವಿಗಳಿಂದ ಹಣವನ್ನು ಪಡೆದು ತಮಗೆ ಬೇಕಾದವರಿಗೆ ಹಂಚುತ್ತಾರೆ. ಕೆಲವೊಮ್ಮೆ ಹಣಕಾಸಿನ ನೆರವು ನೆರವಾಗಿ ನಗದಿನ ರೂಪದಲ್ಲಿ ಕೊಡುತ್ತಾರೆ. ಇನ್ನೂ ಕೆಲವು ಗ್ರಾಮ ಪಂಚಾಯತಿಗಳಲ್ಲಿ ಶೌಚಾಲಯ ಇದ್ದವರ ಮನೆಗೆ ಕರೆದುಕೊಂಡು ಹೋಗಿ ಆ ಶೌಚಾಲಯದ ಮುಂದೆ ಆಯ್ಕೆಯಾದ ಫಲಾನುಭವಿಯನ್ನು ಕುಳ್ಳಿರಿಸಿ ಭಾವ ಚಿತ್ರವನ್ನು ತೆಗೆದು ವರದಿಯನ್ನು ಸರಕಾರಕ್ಕೆ ಸಲ್ಲಿಸುತ್ತಾರೆ. ಹೀಗಾಗಿ ಶೌಚಾಲಯದ ವ್ಯವಸ್ಥೆಯನ್ನು ಹೊಂದಿದ ಕುಟುಂಬಗಳು ಬಹಳ ಕಡಿಮೆ ಇರುವುದನ್ನು ಕಾಣಬಹುದು. ಅನೇಕ ಸರಕಾರಿ ಯೋಜನೆಗಳಲ್ಲಿ ಈ ರೀತಿಯಾದ ಅವ್ಯವಹಾರಗಳು ದಿನಪತ್ರಿಕೆಗಳಲ್ಲಿ ವರದಿಯಾಗುತ್ತಿರುತ್ತವೆ. ಗ್ರಾಮಗಳ ಪ್ರವೇಶಕ್ಕಿಂತ ಮೊದಲು ಜನರು ತಂಬಿಗೆ ಹಿಡಿದುಕೊಂಡು ರಸ್ತೆಯ ಎರಡು ಕಡೆ ಮಲ ವಿಸರ್ಜನೆಗೆ ಕುಳಿತುಕೊಳ್ಳುವುದು ಸಾಮಾನ್ಯವಾಗಿ ಕಾಣಬಹುದು. ಇದು ಹೆಚ್ಚಾಗಿ ಕಲಬುರಗಿ ಜಿಲ್ಲೆಯ ಕೊಂಕನಳ್ಳಿಯಲ್ಲಿ ಹೆಚ್ಚಾಗಿ ಕಂಡು ಬರುತ್ತದೆ. ಈ ರೀತಿಯಾಗಿ ಕುಳಿತುಕೊಂಡವರಲ್ಲಿ ಪಾಪ ಮಹಿಳೆಯರ ಸ್ಥಿತಿಯಂತೂ ತುಂಬಾ ಕೆಟ್ಟದ್ದಾಗಿರುತ್ತದೆ. ಇನ್ನು ಹಗಲಿನಲ್ಲಿ ಗ್ರಾಮದ ಬಯಲು ಪ್ರದೇಶ, ಕೆರೆ, ನದಿ, ಹಳ್ಳ–ಕೊಳ್ಳದ ದಡದಲ್ಲಿ ವಿಸರ್ಜನೆ ಮಾಡಿ ಅಲ್ಲಿನ ಪರಿಸರ ಮತ್ತು ನೀರನ್ನು ಮಲಿನ ಮಾಡುವುದು ತೀರ ಸಾಮಾನ್ಯವಾಗಿ ಕಂಡು ಬರುತ್ತದೆ. ವೈಯಕ್ತಿಕ ಮತ್ತು ಕುಟುಂಬಗಳ ಸ್ವಚ್ಛತೆಯ ಕಡೆಗೆ ಹೆಚ್ಚಿನ ಗಮನ ಹರಿಸುವದು ಬಹಳ ಅವಶ್ಯಕವಾಗಿದೆ. ಇದರಿಂದ ಗ್ರಾಮದ, ಪಟ್ಟಣದ ಮತ್ತು ದೇಶದ ಸ್ವಚ್ಛತೆಯು ಸುಧಾರಿಸುವುದರಲ್ಲಿ ಯಾವುದೇ ಸಂಶಯವಿಲ್ಲ.

**ಉಪಸಂಹಾರ**

ಸರಕಾರವು ಬಡವರಿಗಾಗಿ ಕಾಲಕ್ಕೆ ತಕ್ಕಂತೆ ಜಾರಿ ಮಾಡುವ ಕಾರ್ಯಕ್ರಮಗಳನ್ನು ಅತ್ಯಂತ ವ್ಯವಸ್ಥಿತವಾಗಿ ಮತ್ತು ಪರಿಣಾಮಕಾರಿಯಾಗಿ ಅನುಷ್ಠಾನಕ್ಕೆ ತರಬೇಕು. ನ್ಯಾಯಬೆಲೆಯಲ್ಲಿ ಸಂಭವಿಸುವ ಸೋರಿಕೆಯ ಪ್ರಮಾಣವನ್ನು ಕಡಿಮೆಗೊಳಿಸುವ ದಿಕ್ಕಿನಲ್ಲಿ ಸರಕಾರವು ರಾಜಕೀಯ ಮತ್ತು ಜಾತಿ ವರ್ಗಗಳನ್ನು ಮೀರಿ ಬಡತನ ರೇಖೆಯ ಕೆಳಗಿನವರನ್ನು ಸೇರಿಸಿಕೊಂಡು ಸೂಕ್ತವಾದ ಮೇಲ್ವಿಚಾರಣೆಯ ನೀತಿ ನಿಯಮಗಳನ್ನು ರೂಪಿಸಬೇಕು. ಒಂದು ವೇಳೆ ಮಾರುಕಟ್ಟೆಯ ದರಗಳು ಕಡು ಬಡವರಿಗೆ ನಿಲುಕದೆ ಇದ್ದಾಗ ಅವರಿಗೆ ದಿನನಿತ್ಯ ಬೇಕಾಗುವ ಖರ್ಚನ್ನು ನಿಭಾಯಿಸಿಕೊಂಡು ಹೋಗಲು ಸೂಕ್ತವಾದ ಪರಿಹಾರವನ್ನು ನಿಗದಿಪಡಿಸಬೇಕು. ಇದೆಲ್ಲಕ್ಕಿಂತ ಹೆಚ್ಚಾಗಿ ಅವರಿಗೆ ದುಡಿದು ತಿನ್ನಲು ಸರಕಾರದ ಮಟ್ಟದಲ್ಲಿ ಸತತವಾಗಿ ಬಡ ಕುಟುಂಬಗಳಿಗೆ ಪ್ರತಿ ತಿಂಗಳು ಆದಾಯ ಬರುವ ವ್ಯವಸ್ಥೆಯಾಗಬೇಕು. ಬಡವರಿಗಾಗಿ ಮೀಸಲಿರಿಸಿದ ಕಾರ್ಯಕ್ರಮಗಳನ್ನು ಉಳ್ಳವರು ಅನುಭವಿಸಬಾರದೆಂಬ ಮನೋಭಾವನೆ ಬೆಳೆಸಿಕೊಳ್ಳಬೇಕು.

ಸರಕಾರವು ರೂಪಿಸಿದ ಕಾರ್ಯಕ್ರಮಗಳನ್ನು ಮೇಲಿಂದ ಕೆಳ ಹಂತದ ಅಧಿಕಾರಿ ವರ್ಗವು ಉಳ್ಳವರ ಹಿತ ಕಾಯದೇ ನಿಜವಾದ ಮತ್ತು ಅರ್ಹ ಕುಟುಂಬಗಳಿಗೆ/ವ್ಯಕ್ತಿಗಳಿಗೆ ಕಾರ್ಯಕ್ರಮಗಳನ್ನು ತಲುಪಿಸಬೇಕು.

ಬಡತನ ರೇಖೆಯ ಕೆಳಗಿನ ಕುಟುಂಬಗಳನ್ನು ಮೇಲೆತ್ತಲು ಸರಕಾರಗಳು ಅನೇಕ ರೀತಿಯ ಕಾರ್ಯಕ್ರಮಗಳನ್ನು ಹಾಕಿಕೊಂಡಿರುತ್ತವೆ. ಆದರೆ ಸಮಾಜದಲ್ಲಿರುವ ಕೆಲವೊಂದು ವರ್ಗದ ಅಥವಾ ಆ ಯೋಜನೆಗಳಿಂದ ಯಾವುದೇ ಲಾಭವನ್ನು ಪಡೆಯದೆ ಮತ್ತು 'ಯೋಜನೆಯ ಅರ್ಹತೆ ಇಲ್ಲದೇ ಇರುವವರು ಸಹ ಲಾಭವನ್ನು ಪಡೆಯುವ ಸಮುದಾಯದವರು ಯೋಜನೆಗಳನ್ನು ಟೀಕಿಸುವುದರಲ್ಲಿಯೇ ಕಾಲ ಕಳೆಯುತ್ತಿದ್ದಾರೆ. ಕೆಲವೊಬ್ಬರು ಈ ತರಹದ ಯೋಜನೆಗಳಿಂದ ಜನರ ತೆರಿಗೆ ಹಣ ಪೋಲಾಗುತ್ತಿದೆ. ಹಲವು ಯೋಜನೆಗಳಿಂದ ಲಾಭಗಳನ್ನು ಪಡೆಯುತ್ತಿರುವ ಜನರು ಸೋಮಾರಿಗಳಾಗುತ್ತಿದ್ದಾರೆ. ಗ್ರಾಮಗಳಲ್ಲಿ ದಿನದ ಕೂಲಿಗೆ ಜನರು ಸಿಗುತ್ತಿಲ್ಲ. ಇಂತಹ ಟೀಕೆ ಟಿಪ್ಪಣಿಗಳು ಸರಕಾರದ ಪ್ರತಿಯೊಂದು ಯೊಜನೆಗಳು ಜಾರಿಯಾದಾಗ ಕೇಳಿಬರುತ್ತವೆ. ಅದರಲ್ಲೂ ಸಾಮಾಜಿಕ ಮಾಧ್ಯಮಗಳಲ್ಲಿ ಇಂತಹ ನೂರಾರು ಸ್ಟೇಟಸ್‌ಗಳು, ಸಣ್ಣ ಪುಟ್ಟ ಲೇಖನಗಳು ಮತ್ತು ವ್ಯಂಗ್ಯ ಹಾಗೂ ಹಾಸ್ಯ ಭರಿತ ಬರಹಗಳು ಹರಿದಾಡುವದನ್ನು ಕಾಣಬಹುದಾಗಿದೆ. ಈ ರೀತಿಯಾದ ಅಸಮಾಧಾನ, ಅಕ್ರೋಶಗಳನ್ನು ಹೊರ ಹಾಕುವುದು ಅಕ್ಷರಸ್ಥ ಮೇಲು ಮಧ್ಯಮ ವರ್ಗದವರೇ ಹೆಚ್ಚಾಗಿರುವದು ಕಂಡು ಬರುತ್ತದೆ. ಇದಕ್ಕೆ ರಾಜಕೀಯ ಪಕ್ಷಗಳ ಬಣ್ಣವು ಲೇಪಿತವಾಗಿ ಇನ್ನೂ ಹೆಚ್ಚಿನ ಪ್ರಮಾಣದಲ್ಲಿ ಪ್ರತಿಭಟಿಸಲಾಗುತ್ತದೆ. ಕಲ್ಯಾಣ ರಾಜ್ಯದ ಕಲ್ಪನೆಯೇ ಇರದ ವರ್ಗವೊಂದು ಮಾತ್ರ ಇಂತಹ ಟೀಕೆಗಳನ್ನು ಮಾಡಬಲ್ಲದು. ಇಂದು ನಾವು ಒಪ್ಪಿಕೊಂಡಿರುವ ಬಂಡವಾಳಶಾಹಿ ವ್ಯವಸ್ಥೆಯ ಸಂದರ್ಭದಲ್ಲಿ ಕಲ್ಯಾಣ ರಾಜ್ಯದ ಆಶಯಗಳನ್ನು ಜಾರಿಗೊಳಿಸುವುದು ಈಗಿರುವ ಸರಕಾರಗಳ ಪ್ರಮುಖ ಮತ್ತು ಅನಿವಾರ್ಯವಾದ ಕಾರ್ಯಕ್ರಮಗಳಾಗಿವೆ. ಸಮುದಾಯದ ಸಮಸ್ತವಾಗಿ ಸರಕಾರಗಳ ಸೇವಾ ವ್ಯವಸ್ಥೆಯನ್ನು ವಿಸ್ತರಿಸುವುದೇ ಕಲ್ಯಾಣ ರಾಜ್ಯ ಕಲ್ಪನೆಯ ಮೂಲ ಉದ್ದೇಶವಾಗಿರುತ್ತದೆ. ಕೇಂದ್ರೀಕೃತಗೊಳ್ಳುವ ಬಂಡವಾಳದ ನಡುವೆಯೇ ದುಡಿಯುವ ಜನರ ಮತ್ತು ಶ್ರಮಕ್ಕೆ ತಕ್ಕಂತಹ ಪ್ರತಿಫಲ ದೊರೆಯದಂತಹ ಅಸಮಾನ ಸ್ಥಿತಿಯಲ್ಲಿ ಆ ವರ್ಗದ ಜನರ ಹಿತಾಸಕ್ತಿಗಳನ್ನು ಕಾಪಾಡುವದು ಸರಕಾರಗಳ ಕರ್ತವ್ಯವಾಗಿರುತ್ತದೆ ಮತ್ತು ಆಗಿರಲೇಬೇಕು.

ಆದರೆ ಈ ಕಲ್ಯಾಣ ರಾಜ್ಯದ ಕಲ್ಪನೆ ಶಾಶ್ವತವಾಗಿರಲೇಬೇಕೆಂಬ ನಿಯಮವಿಲ್ಲ. ದುಡಿಯಲು ಶಕ್ತವಾಗಿರುವ ಕೈಗಳಿಗೆ ಉದ್ಯೋಗ ಅವಕಾಶಗಳನ್ನು ನೀಡಿ ಸೂಕ್ತ ಪ್ರತಿಫಲ ನೀಡಲು ಸಮರ್ಥವಾದ ದಿನ ಈ ಕಲ್ಯಾಣ ರಾಜ್ಯದಿಂದ ಜನರಿಗೆ ದೊರಕುತ್ತಿರುವ ಉಚಿತ ಯೋಜನೆಗಳು ಇಲ್ಲವಾಗುತ್ತವೆ. ಅಂದರೆ, ಇದರ ಅರ್ಥ ನಾವು ಸಹ ಈ ದಾರಿಯಲ್ಲಿ ನಡೆಯಬೇಕಾದ ಅನಿವಾರ್ಯತೆ ಇದೆ ಎನ್ನುವುದಾಗಿದೆ. ಇದನ್ನು ಸಾಧ್ಯವಾಗಿಸಲು ನಮ್ಮ ಪ್ರಸ್ತುತ ರಾಜಕೀಯ ವ್ಯವಸ್ಥೆಯನ್ನು ಸರಿ

ದಾರಿಯಲ್ಲಿ ತರುವಂತೆ ಮಾಡಬೇಕಾಗಿದೆ. ಆದರೆ ನಮ್ಮ ದೇಶದಲ್ಲಿ ಉಚಿತವಾದವುಗಳನ್ನು ನೀಡುವ ಕಾರ್ಯಕ್ರಮಗಳನ್ನು ಜಾರಿಮಾಡುವಲ್ಲಿ ಇರುವ ಆಸಕ್ತಿ ಉಚಿತಗಳ ಅಗತ್ಯವೇ ಇಲ್ಲದಂತೆ ಮಾಡುವಲ್ಲಿ ಇರುವುದಿಲ್ಲ ಎಂದು ಹೇಳಬಹುದು. ಜಾತಿ, ವರ್ಗ ಮತ್ತು ರಾಜಕೀಯ ಪಕ್ಷ ಹಿತಾಸಕ್ತಿಗಳನ್ನು ಬದಿಗಿಟ್ಟು ಸಮಾನ ಅವಕಾಶಗಳ ಸಮಾಜವೊಂದರ ನಿರ್ಮಾಣದತ್ತ ಯೋಜನೆಗಳು ಕೇಂದ್ರೀಕರಿಸಬೇಕಿದೆ. ಸಮಾನತೆ ಸಮಾಜ ನಿರ್ಮಾಣದಲ್ಲಿ ಎಲ್ಲರೂ ಭೇದ ಭಾವ ಮರೆತು ಕೆಲಸ ಮಾಡಬೇಕಿದೆ. ಸರಕಾರಗಳು ಹಸಿದವರಿಗೆ ಮೀನು ಹಿಡಿಯುವುದನ್ನು ಕಲಿಸಬೇಕೇ ಹೊರತು ಮೀನನ್ನೇ ಕೊಡುವುದು ಸರಿಯಲ್ಲ. ಅಂದರೆ ಹಸಿದವರಿಗೆ ದುಡಿದು ತಿನ್ನಲು ಅವರಿಗೆ ಬೇಕಾದ ಶಿಕ್ಷಣ, ಭೂಮಿ, ಯಂತ್ರ ಮತ್ತು ಬಂಡವಾಳದ ರೂಪದಲ್ಲಿ ಸರಕಾರದಿಂದ ಸಹಾಯಧನದ ರೂಪದಲ್ಲಿ ಕೊಡುವ ವ್ಯವಸ್ಥೆಯಾಗಬೇಕು. ಅಂದರೆ ಬಡತನ ರೇಖೆಯ ಕೆಳಗಿನ ಕುಟುಂಬಗಳಿಗೆ ಉತ್ಪಾದನಾ ಪರಿಕರಗಳನ್ನು ಒದಗಿಸಿ ಕೊಡುವ ಕೆಲಸವಾಗಬೇಕೇ ಹೊರತು ಅವರನ್ನು ಬಳಸಿಕೊಂಡು ಬಿಸಾಡುವ ಪ್ರವೃತ್ತಿಯಾಗಬಾರದು.



# ಪರಾಮರ್ಶನ ಬರಹಗಳು


**1.** ಸುಖದೇವ್ ಥೋರಟ್, ಅನುರಾಧ ಬ್ಯಾನರ್ಜಿ, ವಿನೋಧ ಕೆ ಮಿಶ್ರಾ ಮತ್ತು ಫಿರದೋಸ್ ರಿಜ್ವಿ (2015) *"ಅರಬನ್ ರೆಂಟಲ್ ಹೌಸಿಂಗ್ ಮಾರ್ಕೆಟ್: ಕಾಸ್ಟ್ ಆಂಡ್ ರಿಲಿಜನ್ ಮ್ಯಾಟರ್ಸ್ ಇನ್ ಅಕ್ಸೆಸ್"*, *ಎಕಾನೊಮಿಕ್ ಪೊಲಿಟಿಕಲ್ ವೀಕ್ಲಿ*, ಸಂಪುಟ–50, ಸಂಚಿಕೆ–26 ಮತ್ತು 27, ಪುಟ–49–53.

**2.** ಪಿ.ಸಾಯಿನಾಥ್ (2012) *"ಬರ ಅಂದ್ರೆ ಎಲ್ಲರಿಗೂ ಇಷ್ಟ"*, **ಕನ್ನಡಕ್ಕೆ ಅನು**: ಜಿ.ಎನ್ ಮೋಹನ್, ಅಭಿನವ ಪ್ರಕಾಶನ, ಬೆಂಗಳೂರು.

**3.** ಬಾಲಸುಬ್ರಹ್ಮಣ್ಯಂ ಆರ್. (2012) "*ವರ್ಣ ವ್ಯವಸ್ಥೆ: ಸಂಪೂರ್ಣ ಅವ್ಯವಸ್ಥೆ*" ಮಂಗಳವಾರ 21ನೇ ಆಗಸ್ಟ್, ಪ್ರಜಾವಾಣಿ.

**4.** ಬೊಜ್ಜಾ ತಾರಕಂ (2012) *'ಜಾತಿ ವಿನಾಶ ವರ್ಗ ವಿನಾಶ'* ಪಲ್ಲವ ಪ್ರಕಾಶನ, ಚನ್ನಪಟ್ಟಣ.

**5.** ಭಾಸ್ಕರ್ ಮುಖರ್ಜಿ (2004) '*ಪಾವರ್ಟಿ, ಫುಡ್ ಸೆಕ್ಯುರಿಟಿ ಆ್ಯಂಡ್ ಸ್ಟೆಟೆನೆಬಿಲಿಟಿ*', ರಾವತ್ ಪಬ್ಲಿಕೇಶನ್, ಜೈಪುರ.

**6.** ಭಾರತ ಸರಕಾರ (2013) *ಭಾರತದ ಗ್ರಾಮೀಣಾಭಿವೃದ್ಧಿ ವರದಿ*, ಓರಿಯಂಟ್ ಬ್ಲಾಕ್‌ಸ್ವಾನ್ ಪ್ರೈ.ಲಿ. ಹೈದರಾಬಾದ.

**7.** ಭಾರತ ಸರಕಾರ (2013) *ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ, ಡಿಎಲ್‌ಹೆಚ್‌ಎಸ್–4, ಜಿಲ್ಲಾವಾರು ಮಾಹಿತಿ ಒಳಗೊಂಡಿರುವ ಫ್ಯಾಕ್ಟಸೀಟ್.*

**8.** ಸುಬ್ರಮಣ್ಯನ್, ಎಸ್ (2012) *'ದಿ ಪಾವರ್ಟಿ ಲೈನ್'* ಆಕ್ಸ್‌ಫರ್ಡ್ ಯುನಿವರ್ಸಿಟಿ ಪ್ರೆಸ್, ಡೆಲ್ಲಿ.

**9.** ಸಂಪಾದಕೀಯ (2012) *ಎಕಾನೊಮಿಕಲ್ ಪೊಲಿಟಿಕಲ್ ವೀಕ್ಲಿ*, ಸಂಚಿಕೆ–XLVII No.14, ಪುಟ–7.

**10.** ಸುಬ್ರತಾ ಮುಖರ್ಜಿ, ಸ್ಲಿಮ್ ಹಾದ್ದಡ ಮತ್ತು ಡಿ.ನಾರಾಯಣ (2011) "*ಸೋಷಿಯಲ್ ಕ್ಲಾಸ್ ರಿಲೇಟೆಡ್ ಇನ್‌ಇಕ್ವಾಲಿಟಿಸ್ ಇನ್ ಹೌಸ್‌ಹೋಲ್ಡ್ ಹೆಲ್ತ್ ಎಕ್ಸ್ಪೆಂಡಿಚರ್ ಆಯಿಂಡ್ ಎಕೊನೊಮಿಕ್ ಬರ್ಡನ್: ಎವ್ಹಿಡೆನ್ಸ್ ಫ್ರಮ್ ಕೇರಳ, ಸೌತ್ ಇಂಡಿಯಾ*" *ಇನಟರ್‌ನ್ಯಾಶಿನಲ್ ಜರ್ನಲ್ ಫಾರ್ ಈಕ್ವಿಟಿ ಇನ್ ಹೆಲ್ತ್*, 10:1

**11.** ಸುರಿಂದರ್ ಸ.ಜೊಡಕಾ (2013) '*ಕಾಸ್ಟ್*', ಆಕ್ಸ್‌ಫ್ರಡ್ ಯುನಿವರಸಿಟಿ ಪ್ರೆಸ್, ನವದೆಹಲಿ.

**12.** ಸಂತೋಷ ಮ್ಹೆರೊತ್ರಾ (2010) "ಇನ್ಟರೊಡುಸಿಂಗ್ ಕಂಡ್ಡಿಷನ್ಲ್ ಕ್ಯಾಷ ಟ್ರಾನ್ಸಫ಼ರ್ ಇನ್ ಇಂಡಿಯಾ: ಎ ಪ್ರೊಪಸಲ್ ಫಾರ್ ಫಾಫ್ವಿ ಸಿ,ಸಿ,ಟಿಎಸ್." ಕುರುಕ್ಷೇತ್ರ ಮಾಸಿಕ ಪತ್ರಿಕೆ, ಸಂಪುಟ– ಸಂಚಿಕೆ.

13. ದಿನೇಶ ಎಂ. ಹೆಗಡೆ (2007) *"ಅಭಿವೃದ್ಧಿ ಅಂಚಿನ ಸಮುದಾಯಗಳು: ಹಿಂದುಳಿದ ವರ್ಗಗಳ ಒಂದು ಅಧ್ಯಯನ"* ಅಭಿವೃದ್ಧಿ ಅಧ್ಯಯನ ಸಂಪುಟ–6, ಸಂಚಿಕೆ–2, ಪುಟ–71–96.

14. ದೀಪಾ ನಾರಾಯಣ, ಬಿನಾಯಕ್ ಸೆನ್ ಮತ್ತು ಕಾಟೆ ಹುಲ್ (2009) *'ಮೂವ್ಹಿಂಗ್ ಔಟ್ ಆಫ್ ಪಾವರ್ಟಿ ಇನ್ ಇಂಡಿಯಾ: ಯಾನ್ ಓವ್ಹರ್‌ವ್ಹಿವ್',* ಜಾಗತಿಕ ಬ್ಯಾಂಕ್, ಜಿನೆವಾ.

15. ದಿವಾಕರ ನಾ. (2013) *'ಜಾಗತೀಕರಣ ಮತ್ತು ದಲಿತರು',* ಲಡಾಯಿ ಪ್ರಕಾಶನ, ಗದಗ.

16. ನಟರಾಜನ್ ಬಾಲಮುರಳಿ (2005) *ಕಾಸ್ಟ, ಕ್ಲಾಸ್ ಮತ್ತು ಕಮ್ಯುನಿಟಿ ಇನ್ ಇಂಡಿಯಾ– ಆನ್ ಇತನೋಗ್ರಾಫಿಕ್ ಎಪ್ರೋಚ್. ಇತನೋಲೊಜಿ,* ಸಂಚಿಕೆ.44, ನಂ.3 (ಸಮ್ಮರ), ಪು.227–241.

17. ಪ್ರಲ್ಹಾದಚಾರ ಎಂ. (1987) "ಸಮ್ ಆಸ್ಪಕ್ಟ ಆಫ್ ಅಸೆಟ ಸ್ಟ್ರಕ್ಚರ ಇನ್ ರೂರಲ್ ಕರ್ನಾಟಕ, 1971–82" ಪುಟ–103–306.

18. ಪ್ರಜಾವಾಣಿ (2012) *"2011–12 ನೇ ಸಾಲಿನ ರಾಷ್ಟ್ರೀಯ ಮಾದರಿ ಸಮೀಕ್ಷೆ–ಶೇಕಡಾ 10–ಕಡು ಬಡವರು", ಗುರುವಾರ 2ನೇ ಆಗಸ್ಟ್‌ನಲ್ಲಿ ಸಮೀಕ್ಷೆಯ ಬಗ್ಗೆ ಪ್ರಕಟಣೆ.*

19. ಪೆಲ್ಲಿಸೇರಿ, ಸೋನಿ (2008) *"ಸೋಶಿಯಲ್ ಹೈರಾರ್ಕೀಸ್, ಏಕೋನೋಮಿಕ್ ಇನೀಕ್ವಾಲಿಟಿಸ್ ಆ್ಯಂಡ್ ಇಂಟರ್‌ಪರಸನಲ್ ರಿಲೇಶನ್ಶಿಪ್ಸ್: ಆ್ಯನ್ ಓವರವ್ಹಿವ್ ಫ್ರಂ ಇಂಡಿಯಾ", ಇಂಟರಪರಸೊನಾ* 2(2), ಪುಟ 243–259.

20. ಶಾರದಾ ಗೋಪಾಲ (2016) ಇದು *ಆಹಾರದ ಇನ್ನೊಂದು ರಾಜಕೀಯ,* ದಿನಾಂಕ 1–09–2016ರ ಪ್ರಜಾವಣಿ ದಿನ ಪತ್ರಿಕೆ, ಪುಟ–6.

21. ವಿಶ್ವ ಬ್ಯಾಂಕ್ (2007) *'ಹ್ಯೂಮನ್ ಡೆವಲಂಪ್ಮೆಂಟ್ ಇಂಡಿಕೇಟರ್ಸ್ ರಿಜಿನಲ್ ಟೇಬಲ್ಸ್',* ವಾಷಿಂಗಟನ್ ಡಿಸಿ, ಅಮೇರಿಕಾ.

22. ವಿಶ್ವ ಬ್ಯಾಂಕ್ (2011) *ವಿಶ್ವಬ್ಯಾಂಕ್ 2011ರ ಬಡತನದ ಕುರಿತು ವರದಿ, ವಾಷಿಂಗ್ಟನ್ ಡಿಸಿ, ಅಮೇರಿಕಾ.*

23. ವಿಶ್ವ ಬ್ಯಾಂಕ್ (2014) *ಜಾಗತಿಕ ಬಡತನದ ವರದಿ, ವಾಷಿಂಗ್ಟನ್ ಡಿಸಿ, ಅಮೇರಿಕಾ.*

24. ಮಿಯಿಕಾ ಚಟರ್ಜಿ (2014) *"ಆ್ಯನ್ ಇಂಪ್ರೂಡ್ ಪಿಡಿಎಸ್ ಇನ್ ಎ 'ರಿವೀವಿಂಗ್' ಸ್ಟೇಟ್, ಫುಡ್ ಸೆಕ್ಯುರಿಟಿ ಇನ್ ಕೊರಾಪುಟ್, ಒಡಿಸಾ" ಎಕಾನೊಮಿಕಲ್ ಪೊಲಿಟಿಕಲ್ ವೀಕ್ಲಿ,* ಸಂಚಿಕೆ –XLIX, ಸಂಖ್ಯೆ–45.

25. ಬಸವರಾಜ ಟಿ.ಕುಮ್ಮೂರ (2011) *'ಡಾ.ನಂಜುಡಪ್ಪನವರ ವರದಿ ಮತ್ತು ಕಲಂ–371',* ಎಸ್.ಎಸ್.ಭಾವಿಕಟ್ಟಿ ಪ್ರಕಾಶನ, ಗುಲಬರ್ಗಾ.

**26**. ಲೂಯಿಸ್ಸ್ ಡುಮೊ (2012) '*ಹೊಮೊ ಹೈರಾರಕಿಸ್ಸ್: ದಿ ಕಾಸ್ಟ್ ಸಿಸ್ಟಮ್ ಆಂಡ್ ಇಟ್ಸ್ ಇಂಪ್ಲಿಕೆಶನ್ಸ್*', ಆಕ್ಸ್‌ಫರ್ಡ್ ಯುನಿವರ್ಸಿಟಿ ಪ್ರೆಸ್, ಡೆಲ್ಲಿ.

**27**. ಸಿ.ರಂಗರಾಜನ್ (2014) "*ದಿ ನೀಡ್ ಟು ಮೇಸರ್ ಪಾವರ್ಟಿ*", ದಿ ಹಿಂದೂ ದಿನಪತ್ರಿಕೆ, 7 ಆಗಸ್ಟ್.

**28**. ಸಿ.ಎ.ಕೆ. ಯಸೂದಿಯಾ (2007) "*ಪಾವರ್ಟಿ ಎಲಿವೆಷನ್ ಪ್ರೋಗ್ರಾಮ್ಸ ಇನ್ ಇಂಡಿಯಾ: ಎ ಸೋಶಿಯಲ್ ಆಡಿಟ್*" *ದಿ ಇಂಡಿಯನ್ ಜರ್ನಲ್ ಆಫ್ ಮೆಡಿಕಲ್ ರಿಸರ್ಚ್* ನಂ. 126, ಪುಟ–364–373.

**29**. ಸಿ.ಎ.ಕೆ. ಯೆಸುದೈಯನ್ (1988) "*ಹೆಲ್ತ್ ಸರವೀಸ್ ಯುಟಿಲಾಜೆಸೆನ್ ಇನ್ ಅರ್ಬನ್ ಇಂಡಿಯಾ: ಎ ಸ್ಟಡಿ*" ಮಿತ್ತಲ್ ಪಬ್ಲಿಕೇಶನ್, ದೆಹಲಿ.

**30**. ಶಿವಕುಮಾರಸ್ವಾಮಿ (2012) "*ಸಾರ್ವಜನಿಕ ವಿತರಣಾ ಪದ್ಧತಿ*", *ಯೋಜನೆ ಮಾಸ ಪತ್ರಿಕೆ*, ಸಂಪುಟ 28 ಸಂಚಿಕೆ 2.

**31**. ಶ್ರೀನಿವಾಸ, ಎಂ.ಎನ್. (1976) '*ದಿ ರಿಮ್ಮೆಂಬರ್ಡ ವಿಲೇಜ್*', ಆಕ್ಸಫರ್ಡ ಯುನಿವರ್ಸಿಟಿ ಪ್ರೆಸ್ಸ್, ನ್ಯೂ ದಿಲ್ಲಿ.

**32**. ವಾಸವಿ ಎ.ಆರ್ (1999) "*ಅಗ್ರೆರಿಯನ ಡಿಸ್‌ಟ್ರೆಸ್ಸ ಇನ್ ಬೀದರ್ ಮಾರ್ಕೆಟ್ ಆ್ಯಂಡ್ ಸುಸೈಡ*" *ಎಕನಾಮಿಕ್ ಆ್ಯಂಡ್ ಪೊಲಿಟಿಕಲ್ ವೀಕ್ಲಿ*, ಸಂಪುಟ–34, ಸಂಚಿಕೆ 32.

**33**. ಮುಳಗುಂದ ಈ.ಚ. (2010) '*ಭಾರತೀಯ ಸಮಾಜ ರಚನೆ ಮತ್ತು ಪರಿವರ್ತನೆ*'. ಸೃಷ್ಟಿ ಪ್ರಕಾಶನ, ಧಾರವಾಡ.

**34**. ಮೂರ್ತಿ ಸಿ.ಎಸ್. (1979) "*ಇಫ್ಯಾಕ್ಟ್ ಆಫ್ ಟೆಕ್ನೋಲೊಜಿಕಲ್ ಚೇಂಜ್ ಆನ್ ದಿ ಎಕ್ಸಟೆಂಟ ಆಫ್ ಟೆನ್ನಸ್ಸಿ ಆಂಡ್ ಆನ್ ಕಂಪೋಜಿಷನ್ ಆಪ್ ಟೆನೆನಟ್ಸ; ಎ ಕೇಸ್ ಸ್ಟಡಿ ಇನ್ ಟೂ ಡೆಲ್ಟಾ ವಿಲೇಜೆಸ್*" – *ಪುಟ–86–293.*

**35**. ಮುಕೇಶ ಈಶ್ವರನ್, ಅಶೋಕ ಕೊತವಾಲ, ಭರತ ರಾಮಸ್ವಾಮಿ ಮತ್ತು ವಿಲಿಯಮ ವಾದವಾ (2009) "*ಸ್ಕಟ್ರೋರಲ್ ಲೇಬರ್ ಫ್ಲೋ ಆ್ಯಂಡ್ ಅಗ್ರಿಕಲ್ಚರಲ್ ವೇಜಸ್ ಇನ್ ಇಂಡಿಯಾ, 1983–2004! ಹ್ಯಾಸ್ ಗ್ರೋತ್ ಟ್ರಿಕಲ್ಡ್ ಡೌನ್?*" *ಎಕನಾಮಿಕ್ ಆ್ಯಂಡ್ ಪೊಲಿಟಿಕಲ್ ವೀಕ್ಲಿ*, ಸಂಪುಟ ಸಂಚಿಕೆ.

**36**. ಮಧುರಾ ಸ್ವಾಮಿನಾಥನ್ (2010) "*ದಿ ನ್ಯೂ ಪಾವರ್ಟಿ ಲೈನ್: ಎ ಮೆಥೋಡೊಲೊಜಿ ಡಿಪ್ಲಿ ಫ್ಲಾಡ್*" *ಇಂಡಿಯನ್ ಜರ್ನಲ್ ಆಫ್ ಹುಮನ್ ಡೆವ್ಹಲಪ್ಮೆಂಟ್*, ಸಂಪುಟ.4, ಸಂಚಿಕೆ.1. ಪುಟ: 121–125.

**37**. ಮಾರ್ಟಿನ್ ರೇನ್ (1970) '*ಪ್ರಾಬ್ಲಮ್ ಇನ್ ದಿ ಡೆಫಿನೆಷನ್ ಆ್ಯಂಡ್ ಮೆಜರಮೆಂಟ ಆಫ್ ಪಾವರ್ಟಿ*', ಸಂಪಾದಕರು: ಟೌನ್‌ಸೆಂಡ್ ಪೀಟರ್, *ದಿ ಕಾನ್ಸೆಪ್ಟ ಆಫ್ ಪಾವರ್ಟಿ* ಹೆನೆಮನ್ ಎಜುಕೆಶನಲ್ ಬೂಕ್ಸ, ಲಂಡನ, ಪುಟ 16–63.

38. ಮೊಗಳ್ಳಿ ಗಣೇಶ್ (2015) *'ಜಾತಿ ಮೀಮಾಂಸೆ'*, ಅಭಿನವ ಪ್ರಕಾಶನ, ಬೆಂಗಳೂರು.

39. ವೈ.ಪಿ.ಚಿಬ್ಬರ್, (1968) *'ಫ್ರಂ ಕಾಸ್ಟ್ ಟು ಕ್ಲಾಸ್, ಎ ಸ್ಟಡಿ ಆಫ್ ದ ಇಂಡಿಯನ್ ಮಿಡಲ್ ಕ್ಲಾಸಸ್'*, ನವದೆಹಲಿ.

40. ಯು.ನ್.ಡಿ.ಪಿ. (2011)ಯು.ನ್.ಡಿ.ಪಿ.ಯಅಂತರ್ಜಾಲ ತಾಣದಿಂದ ದಿನಾಂಕ 17.11.2011 ರಂದು ಪಡೆಯಲಾಗಿದೆ.

41. ಯು.ಎನ್.ಡಿ.ಪಿ. (2008) *ಗುಲಬರ್ಗಾ ಜಿಲ್ಲೆಯ ಮಾನವ ಅಭಿವೃದ್ಧಿ ವರದಿ.*

42. ಯರಿಸ್ವಾಮಿ ಎಂ (2002) *'ಗ್ರಾಮ ಪಂಚಾಯತಿ ಮತ್ತು ಸಬಲೀಕರಣ (ಬಳ್ಳಾರಿ ಜಿಲ್ಲೆಯ ಅಧ್ಯಯನ)'*, ಕನ್ನಡ ವಿಶ್ವವಿದ್ಯಾಲಯ, ವಿದ್ಯಾರಣ್ಯ, ಹಂಪಿ.

43. ಯೋಜನಾ (2013) *"ಬೆಳವಣಿಗೆ, ಉದ್ಯೋಗ ಮತ್ತು ಬಡತನ"*, ಸಂಚಿಕೆ–3, ಸಂಪುಟ–29.

44. ಅನದಲೀಬ್ ರೆಹಮಾನ್ (2014) *"ರಿವೈವಲ್ ಆಫ್ ರೂರಲ್ ಪಬ್ಲಿಕ್ ಡಿಸ್ಟ್ರಿಬೂಶನ್ ಸಿಸ್ಟಮ್–ಎಕ್ಸಪ್ಯಾನಸನ್ ಆ್ಯಂಡ್ ಔಟ್ರೀಚ್"*, *ಎಕಾನೊಮಿಕಲ್ ಪೊಲಿಟಿಕಲ್ ವೀಕ್ಲಿ*, ಸಂಚಿಕೆ –XLIX ನಂ.20

45. ಅನಿರುದ್ಧ ಕೃಷ್ಣ (2004) *"ಎಸ್ಕೇಪಿಂಗ್ ಪಾವರ್ಟಿ ಆ್ಯಂಡ್ ಬಿಕಮಿಂಗ್ ಪೂವರ್: ಹೂ ಗೇನ್ಸ್, ಹೂ ಲಾಸ್ಸ್"*, *ವರ್ಲ್ಡ್ ಡೆವಲ್ಪ್‌ಮೆಂಟ*, ಸಂಚಿಕೆ–32 ನಂ.1 ಪುಟ–232–236.

46. ಅಶೋಕ ಕೆ.ಪಂಕಜ (2015) *"ದಿ ಪಬ್ಲಿಕ್ ಡಿಸ್ಟ್ರಿಬ್ಯುಸನ್ ಸಿಸ್ಟಮ್ ಇನ್ ಬಿಹಾರ: ಆನ್ ಅಸ್ಸೆಸಮೆಂಟ್ ಆಫ್ ದಿ ಕೂಪನ್ ಸಿಸ್ಟಮ್"* *ಸೋಶಿಯಲ್ ಚೇಂಜ್*, ಸಂಪುಟ–45, ನಂ.4

47. ಅಮಿತಾ ಶಾ (2002) *"ಸ್ಪ್ಯಾಷಿಯಲ್ ಪಾವರ್ಟಿ ಟ್ರಾಪ್ಸ್ ಇನ್ ರೂರಲ್ ಇಂಡಿಯಾ: ಆನ್ ಎಕ್ಸಪ್ಲನೇಟರಿ ಅನಾಲಿಸಸ್ ಆಫ್ ದಿ ನೇಚರ್ ಆಫ್ ದಿ ಕಾಜಸ್ಸ್"*, *ಜರ್ನಲ್ ಆಫ ಸೋಷಿಯಲ್ ಆ್ಯಂಡ್ ಎಕನಾಮಿಕ ಡೆವಲಂಪಮೆಂಟ್*–ಜುಲೈ – ಡಿಸೆಂಬರ 2002 ಸಂಪುಟ 4 ಸಂಚಿಕೆ–2, ಪುಟ – 123–147.

48. ಅಮರ್ತ್ಯಸೇನ್ (1981) *'ಪಾರ್ವಟಿ ಆಂಡ್ ಫಮಿನೀಸ್'*, ಆಕ್ಸ್‌ಫರ್ಡ್ ಯುನಿವರ್ಸಿಟಿ ಫ್ರೆಸ್, ಡೆಲ್ಲಿ.

49. ಅಮರ್ತ್ಯಸೇನ್ (2000) *'ಸೋಶಿಯಲ್ ಎಕ್ಸ್‌ಕ್ಲೂಸನ್: ಕಾನ್ಸಪ್ಟ್, ಅಪ್ಲಿಕೆಶನ್, ಆಂಡ್ ಸ್ಕ್ರೂಟಿನಿ'*, ಸೊಶಿಯಲ್ ಡೆವಲಪಮೆಂಟ್ ಪೇಪರ್ಸ್ ನಂ.1, ಏಷಿಯಾ ಡೆವಲಪಮೆಂಟ್ ಬ್ಯಾಂಕ್.

50. ಅಮರ್ತ್ಯಸೇನ್ (2000) *'ಡೆವಲೆಪಮೆಂಟ್ ಆಸ್ ಫ್ರೀಡಂ'*, ಆಕ್ಸ್‌ಫರ್ಡ್ ಯುನಿವರ್ಸಿಟಿ ಫ್ರೆಸ್, ಡೆಲ್ಲಿ.

51. ಅಜೀಜ್, ಅಬ್ದುಲ್ (2013,) *"ಸಬ್ಸಿಡಿ ಸೌಲಭ್ಯ ಇನ್ನೆಷ್ಟು ದಿನ?"* ಮಾರ್ಚ, 11ರ ವಿಜಯವಾಣಿ ದಿನಪತ್ರಿಕೆ, ವಿಶೇಷ ಪುರವಣಿ, ಪುಟ–3.

52. ಅಜಿತ್ ಜಕಾರಿಯ್ಸ್ ಮತ್ತು ವಾಮ್ಸಿ ವಕುಲಭರನಮ್ (2011) "*ಕಾಸ್ಟ್ ಸ್ಟ್ರಾಟಿಫಿಕೇಷನ್ ಆ್ಯಂಡ್ ವೆಲ್ತ್ ಇನ್‌ಈಕ್ವಾಲಿಟಿ ಇನ್ ಇಂಡಿಯಾ", ವರ್ಲ್ಡ್ ಡೆವಲಪ್ಮೆಂಟ್* ಸಂಚಿಕೆ–.39 ನಂ.10 ಪುಟ 1820–1833.

53. ಜನಾರ್ದನ (2014) *"ಬಡತನದ ವಿವಿಧ ರೂಪಗಳು ಮತ್ತು ಅವುಗಳನ್ನು ನಿರ್ಧರಿಸುವ ಮಾನದಂಡಗಳು", ಸಮಾಜ ವಿಜ್ಞಾನಗಳ ಸಂಶೋಧನ ಪತ್ರಿಕೆ,* ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ಸಂಪುಟ–1, ಸಂಚಿಕೆ–1, ಪುಟ–189–203.

54. ಜಗನ್ನಾತರಾವ್ ಆರ್. ಪವಾರ ಆಂಡ್ ವಿಜಯ ಬಿ.ಪಾಟೀಲ (1975) "*ಮೇಜರಮೆಂಟ್ ಆಫ್ ರೂರಲ್ ಸರಪ್ಲಸ್ ಅಟ್ ದ ಮೈಕ್ರೋ ಲೆವಲ್ ಇನ್ ದಿ ಶುಗರ ಫ್ಯಾಕ್ಟರಿ ಏರಿಯಾಸ್ ಆಫ್ ದಿ ಮಹಾರಾಷ್ಟ್ರಾ ಸ್ಟೇಟ" ಇಂಡಿಯನ್ ಜರನಲ್ ಆಫ್ ಅಗ್ರಿಕಲ್ಚರಲ ಎಕನಾಮಿಕ್ಸ್,* ಸಂಚಿಕೆ. 10 ನಂ.3 ಜುಲೈ–ಸೆಪ್ಟಂಬರ 1975 ಪು–10–15.

55. ಇಂದಿರಾ ಹಿರ್ವೆ (2003) "*ಐಡೆನ್ಟಿಫಿಕೇಶನ್ ಆಫ್ ಬಿಪಿಎಲ್ ಹೌಸ್ಹೊಲ್ಡ್ಸ್ ಫಾರ್ ಪಾವರ್ಟಿ ಆಲಿವ್ಹೇಷನ್ ಪ್ರೋಗ್ರಾಮ್ಸ್", ಎಕಾನೊಮಿಕಲ್ ಪೊಲಿಟಿಕಲ್ ವೀಕ್ಲಿ,* ಸಂಚಿಕೆ–38 ನಂ.45, ನವ್ಹೆಂಬರ್, 8–14, ಪುಟ–4803–4808.

56. ಜೆ.ಎಡವರ್ಡ್, ಅಲಬರಟ್ ಜೆಜಾ ಮತ್ತು ಅಲಿ ಅರ್ಸಲಾನ್ ಗುರುಕಾನ್ (2009) *'ರೂರಲ್ ಆಂಡ್ ಮಾರ್ಕೆಟ್',* ಇಎಸ್‌ಎ ವರಕಿಂಗ್ ಪೇಪರ್ 09–05, ಅಗ್ರಿಕ್ಚರಲ್ ಡೆವಲಪಮೆಂಟ್ ಎಕಾನೊಮಿಕ್ಸ್ ಡಿವಿಸನ್, ಯುನೈಟೆಡ್ ನೇಷನ್.

57. ಜೇಮ್ಸ್ ಮ್ಯಾನೊರ್ (2008) *"ಪ್ರಗ್‌ಮ್ಯಾಟಿಕ್ ಪ್ರೋಗ್ರಸ್ಸಿವ್ಹ್ ಇನ್ ರೀಜಿನಲ್ ಪೊಲಿಟಿಕ್ಸ್: ದಿ ಕೆಸ್ ಆಫ್ ದೇವರಾಜ್ ಅರಸ್",* ಇದರಲ್ಲಿ: ಘನಶ್ಯಾಮ್ ಶಾ (ಸಂಪಾದಕರು) *'ಕಾಸ್ಟ್ ಆಂಡ್ ಡೆಮೊಕ್ರಾಟಿಕ್ ಪಾಲಿಟಿಕ್ಸ್ ಇನ್ ಇಂಡಿಯಾ',* ಪರಂನೆಂಟ್ ಪ್ರಕಾಶನ, ದೆಹಲಿ.

58. ಜ್ಯೋತಿ ಹಳ್ಳದ ಮತ್ತು ಹೆಚ್.ಆರ್.ಚನ್ನಕ್ಕಿ (2015) 'ಔಟ್ ಆಫ್ ಪಾಕೆಟ್ ಸ್ಪೆಡಿಂಗ್ ಆನ್ ಮೆಟರನಲ್ ಆ್ಯಂಡ್ ಚೈಲ್ಡ್ ಹೆಲ್ತ್ ಸರವೀಸ್ ಇನ್ ರೂರಲ್ ನಾರ್ಥ ಕರ್ನಾಟಕ', ಪಾಪುಲೇಶನ್ ರಿಸರ್ಚ ಸೆಂಟರ್, ರಿಪೋರ್ಟ ನಂ–157, ಧಾರವಾಡ.

59. ಜಿ. ತಿಮ್ಮಯ್ಯಾ (1983) "*ಕಾಸ್ಟ ಆಂಡ್ ಕ್ಲಾಸ ಇನ್ ಕರ್ನಾಟಕ" ಸೋಶಿಯಲ್ ಸೈಂಟಿಸ್ಟ,* ಸಂಪುಟ; 11, ಸಂಚಿಕೆ:117, ಪುಟ; 31–37.

60. ಜಿ.ಎನ್ ನಾಗರಾಜ್ (2018) *"21ನೆಯ ಶತಮಾನದಲ್ಲಿ ಡಾ, ಅಂಬೇಡ್ಕರ್‌ರವರ ಚಿಂತನೆಗಳ ಪ್ರಸ್ತುತತೆ", ಸಂವಾದ,* ಸಂಪುಟ 16 ಸಂಚಿಕೆ 6, ಪುಟ 8–11.

61. ಈಶ್ವರನ್, ಕೆ. (1976) *'ಗ್ರಾಮೀಣ ಭಾರತದಲ್ಲಿ ಸಂಪ್ರದಾಯ ಮತ್ತು ಆರ್ಥಿಕ ವ್ಯವಸ್ಥೆ',* ಕರ್ನಾಟಕ ವಿಶ್ವವಿದ್ಯಾಲಯ ಧಾರವಾಡ.

62. ರಾಬರ್ಟ್ ಚೇಂಬರ್ಸ್ (1988) *ಪಾವರ್ಟಿ ಇನ್ ಇಂಡಿಯಾ; ಕಾನ್ಸೆಪ್ಟ್, ರಿಸರ್ಚ್ ಆ್ಯಂಡ್ ರಿಯಾಲಿಟಿ ಡಿಸಕಷನ್ ಪೇಪರ –ಸಂಖ್ಯೆ–241–ಐಡಿಎಸ್.*

63. ರಾಬರ್ಟ್ ಚೇಂಬರ್ಸ್ (2006) *ಜರ್ನಲ್ ಆಫ್ ಪಾವರ್ಟಿ ಇನ್ ಫೋಕಸ್–* ಯು.ಎನ್.ಡಿ.ಪಿ.

64. ರಾಫೆಲ್ ಡೆನ್ನಿಸ್ (2005) *Child poverty in rich nations:* Report card No. 6 (Report). Innocenti Research Centre.

65. ರಾಫೆಲ್ ಡೆನ್ನಿಸ್ (2009) *"Poverty, Human Development, and Health in Canada: Research, Practice, and Advocacy Dilemmas"*. Canadian Journal of Nursing Research. 41 (2): 7–18.

66. ರಮ್ಯ ವಿಜಯ, ರಾಹುಲ್ ಲಾಹೊಟಿ ಮತ್ತು ಹೇಮಾ ಸ್ವಾಮಿನಾಥನ್ (2013) *"ಮೂವ್ವಿಂಗ್ ಫ್ರಮ್ ಹೌಸ್ಹೋಲ್ಡ್ ಟೂ ಇಂಡಿವ್ವಿಜವಲ್: ಮಲ್ಟಿಡೈಮೆನ್ಶನಲ್ ಪಾವರ್ಟಿ ಆ್ಯನಲೈಸ್ಸ್"* ಭಾರತೀಯ ವ್ಯವಹಾರ ನಿರ್ವಹಣೆ ಸಂಸ್ಥೆ, ಬೆಂಗಳೂರು, ವರ್ಕಕಿಂಗ್ ಪೇಪರ್ ನಂ.404.

67. ರಾಮಮನೋಹರ ಲೋಹಿಯಾ (2011) *'ಜಾತಿ ಪದ್ದತಿ',* ಕನ್ನಡಕ್ಕೆ: ಹಸನ್ ನಯೀಂ ಸುರಕೋಡ, ಲಂಕೇಶ್ ಪ್ರಕಾಶನ, ಬೆಂಗಳೂರು.

68. ರಾಮಕುಮಾರ, ಎಂ.ಎಲ್.ಶರ್ಮಾ ಮತ್ತು ಜಿ.ಎಸ್. ಸಿಸೊಡಿಯಾ (1975) *"ಮೊಬಲಾಯಜೆಸನ್ ಆಫ್ ರೂರಲ್ ಸರಪ್ಲಸ್. ಎ ಸ್ಟಡಿ ಆಫ್ ಸೇವಿಂಗ್ ಇನ್ ರೂರಲ್ ಹಿಸ್ಸಾರ". ಇಂಡಿಯನ್ ಜರನಲ್ ಆಫ್ ಅಗ್ರಿಕಲ್ಚರಲ್ ಎಕನಾಮಿಕ್. ಪುಟ* 16–25.

69. ರಾಜಶೇಖರ ಭಾಸೂ (2011) *"ಎಕನಾಮಿಕ್ಸ್ ಆಫ್ ಕಾಸ್ಟ್", ಫ್ರಂಟಲೈನ್* ಸಂಪುಟ–28 ಸಂಚಿಕೆ–24 ಪುಟ–19, ಡಿಸೆಂಬರ 01,

70. ರಾಜಶೇಖರ್, ವಿ.ಟಿ. (2005) *'ಜಾತಿ: ರಾಷ್ಟ್ರದೊಳಗೊಂದು ರಾಷ್ಟ್ರ',* ಬುಕ್ಸ್ ಫಾರ್ ಚೇಂಜ್, ಬೆಂಗಳೂರು.

71. ರಾಘಬೇಂದ್ರ ಜಾ, ಸಂಬಿತ್ ಭಟ್ಟಾಚಾರ್ಯ, ರಾಘವ್ ಗೈಯ ಮತ್ತು ಶೈಲಶ್ರೀ ಶಂಕರ (2009) *"ಕ್ಯಾಪ್ಚರ್ ಆಫ್ ಆ್ಯಂಟಿ–ಪಾವರ್ಟಿ ಪ್ರೋಗ್ರಾಮ್ಸ್: ಆ್ಯನ್ ಅನಾಲಿಸ್ಸಿ ಆಫ್ ನ್ಯಾಷನಲ್ ರೂರಲ್ ಎಂಪ್ಲಾಯಿಮೆಂಟ್ ಗ್ಯಾರಂಟಿ ಪ್ರೋಗ್ರಾಮ್ ಇನ್ ಇಂಡಿಯಾ" ಜರ್ನಲ್ ಆಫ್ ಏಷಿಯನ್ ಎಕಾನೊಮಿಕ್ಸ್*–20, 456–464.

72. ರಾಧಾ ಜಿ.ಮಣ್ಣರೂ, ಶೋಭಾ ಅಕ್ಕಿ ಮತ್ತು ಹೆಚ್.ಆರ್ ಚನ್ನಕ್ಕಿ (2012) *"ಸ್ವರೋಜಗಾರ್ ಎಂಪ್ಲಾಯಿಮೆಂಟ್ ಅಂಡರ್ ದಿ ಎಸ್‌ಜಿಎಸ್‌ವೈ ಪ್ರೋಗ್ರಾಮ್ ಇನ ರೂರಲ್ ಧಾರವಾಡ"*, ಇದರಲ್ಲಿ: ಜಿ. ಸುದರ್ಶನ ರೆಡ್ಡಿ (ಸಂಪಾದಕರು) *'ಏಕಾನೊಮಿಕ್ ಗ್ರೋಥ್ ಥ್ರೊ ಇನ್ನೊವೆಟಿವ್ ಎಂಟರ್‌ಪ್ರೀನಿವರಶಿಫ್'*, ಹಿಮಾಲಯ ಪಬ್ಲಿಸಿಂಗ್ ಹೌಸ್, ದೆಹಲಿ.

73. ಎಸ್.ಪಿ.ಸಿಂಗ್ (2013) *"ಸಪ್ಲೈ-ಸೈಡ್ ಚಾಲೆಂಜೆಸ್ ಆಫ್ ದಿ ನ್ಯಾಷನಲ್ ಫುಡ್ ಸೆಕ್ಯುರಿಟಿ ಬಿಲ್"*, *ಕುರುಕ್ಷೇತ್ರ*, ನವ್ಹೆಂಬರ್, ಸಂಚಿಕೆ–12, ನಂ–1.

74. ಎನ್ ಎನ್ ಎಸ್ ಓ (2013) *ಜುಲೈ–ಡಿಸೆಂಬರ್, 2012ರಲ್ಲಿ ನಡೆಸಿದ 62ನೇ ಸುತ್ತಿನ ಮಾಹಿತಿಯ ಪ್ರಕಾರ ದೇಶ* ಮತ್ತು *ಕರ್ನಾಟಕ ರಾಜ್ಯದಲ್ಲಿ ಕುಡಿಯುವ ನೀರು, ನೈರ್ಮಲ್ಯ, ಸ್ವಚ್ಛತೆ ಮತ್ತು ವಸತಿ ಮನೆಗಳ ಸ್ಥಿತಿಯನ್ನು ಕುರಿತು ವರದಿ.*

75. ಎನ್.ಸಿ. ಸಕ್ಸೇನಾ (2007) "*ರೂರಲ್ ಪಾವರ್ಟಿ ರಿಡಕ್ಷನ್ ತ್ರೂ ಸೇಂಟ್ರಲಿ ಸ್ಪಾನ್‌ಸರ್ಡ ಸ್ಕೀಮ್ಸ್*" *ದಿ ಇಂಡಿಯನ್ ಜರ್ನಲ್ ಆಫ್ ಮೆಡಿಕಲ್ ರಿಸರ್ಚ್, ಸಂಖ್ಯೆ*–126, ಪುಟ 381–389.

76. ಎನ್.ಚಿನ್ನಸ್ವಾಮಿ ಸೋಸಲೆ (2012) *'ದಲಿತರ ಬದುಕು–ಮೆಲುಕು'*, *ಪ್ರಸಾರಾಂಗ*, ಕನ್ನ ವಿಶ್ವವಿದ್ಯಾಲಯ, ಹಂಪಿ.

77. ಎಂ. ಚಂದ್ರ ಪೂಜಾರಿ (2008) '*ರಾಜಕೀಯದ ಬಡತನ,*' ಸಿದ್ಧಾರ್ಥ ಪ್ರಕಾಶನ ಹೊಸಪೇಟೆ.

78. ಎಂ. ಚಂದ್ರ ಪೂಜಾರಿ (2010) '*ಯಾಕೀಗ ಭೂಮಿ ಪ್ರಶ್ನೆ?*' ಪ್ರಸಾರಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ.

79. ಎಂ. ಚಂದ್ರ ಪೂಜಾರಿ (2014) '*ಅಭಿವೃದ್ಧಿ ಮತ್ತು ರಾಜಕೀಯ*', ಪಲ್ಲವ ಪ್ರಕಾಶನ, ಚನ್ನಪಟ್ಟಣ.

80. ಎಂ.ಚಂದ್ರ ಪೂಜಾರಿ (2010) *'ಇನ್ಫ್ಲ್ಯೂಶನ್ಸ್ ಡಿಸೆಂಟ್ರಲಾಯಿಜೆಶನ್ ಆಂಡ್ ಡೆವಲಪಮೆಂಟ್'*, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

81. ಎಂ.ಚಂದ್ರ ಪೂಜಾರಿ (2012) "*ಅಭಿವೃದ್ಧಿ ಮತ್ತು ಬಡತನ ನಿವಾರಣೆ*", ಡಿಸೆಂಬರ್, ವಿಜಯ ಕರ್ನಾಟಕ ದಿನ ಪತ್ರಿಕೆ.

82. ಎಂ.ಚಂದ್ರ ಪೂಜಾರಿ (2012) "*ಆರ್ಥಿಕಾಭಿವೃದ್ಧಿ ಏಕೆ ಕುಂಠಿತಗೊಂಡಿದೆ?*" ವಿಜಯ ಕರ್ನಾಟಕ ಶುಕ್ರವಾರ 14, ಡಿಸೆಂಬರ್.

83. ಎಂ.ಚಂದ್ರ ಪೂಜಾರಿ (2013) "*ಬಡತನದ ಬವಣೆ*" ಯೋಜನಾ ಸಂಚಿಕೆ–3, ಸಂಪುಟ–29.

**84**. ಎಂ.ಚಂದ್ರ ಪೂಜಾರಿ (2013) *"ಅಭಿವೃದ್ಧಿ ಮತ್ತು ಚುನಾವಣೆ ಗೆಲವು"*, ವಿಜಯ ಕರ್ನಾಟಕ ಜನೇವರಿ 11ರ ದಿನಪತ್ರಿಕೆ.

**85**. ಎಂ.ಚಂದ್ರ ಪೂಜಾರಿ (2014) *"ಬಡತನ ಮತ್ತು ಪ್ರಜಾಪ್ರಭುತ್ವ"*, ಗಾಯತ್ರಿ ಪ್ರಕಾಶನ, ಬಳ್ಳಾರಿ.

**86**. ಎಂ.ಚಂದ್ರ ಪೂಜಾರಿ (2017) *'ನಿಯೋಲಿಬರಲ್ ಅಭಿವೃದ್ಧಿ'* ಲಡಾಯಿ ಪ್ರಕಾಶನ, ಗದಗ.

**87**. ಎಂ.ಚಂದ್ರ ಪೂಜಾರಿ (2017) *'ಮಾರುಕಟ್ಟೆ ಅಭಿವೃದ್ಧಿ ಮತ್ತು ಪ್ರಜಾಪ್ರಭುತ್ವ' ಹೊಸತು ಮಾಸ ಪತ್ರಿಕೆ*, ಸಂಪುಟ–18, ಸಂಚಿಕೆ–6, ಪುಟ–195–199.

**88**. ರಿಚರ್ಡ್ ಮತ್ತು ಫಾಕ್ಸ್, (1997) *"ಫ್ಯಾಮಿಲಿ ಕಾಸ್ಟ್ ಅಂಡ್ ಕಾಮರ್ಸ್ ಇನ್ ಎ ನಾರ್ತ್ ಇಂಡಿಯನ್ ಮಾರ್ಕೆಟ್ ಟೌನ್", ಎಕಾನಮಿಕ್ ಡೆವಲಪ್‌ಮೆಂಟ್ ಕಲ್ಚರಲ್ ಚೇಂಜ್*, ಸಂಚಿಕೆ/5, ಪು.297–314.

**89**. ಒಟ್ಟೊ ಬ್ಲೂಮೆ (1970) *'ದಿ ಪವರ್ಟಿ ಆಫ್ ಓಲ್ಡ್ ಪೀಪಲ್ ಇನ್ ಅರ್ಬನ್ ಆ್ಯಂಡ್ ರೂರಲ್ ಏರಿಯಾಸ್'*, ಸಂಪಾದಕರು: ಟೌನ್‌ಸೆಂಡ್ ಪೀಟರ್, *ದಿ ಕಾನ್ಸೆಪ್ಟ ಆಫ್ ಪಾವರ್ಟಿ* ಹೆನೆಮನ್ ಎಜುಕೆಶನಲ್ ಬೂಕ್ಸ, ಲಂಡನ.

**90**. ಟಿ.ಸಿ.ಎ. ಅನಂತ್ (2013) *"ಬಡತನದ ಅಳತೆಗೋಲು"*, ಯೋಜನಾ ಸಂಚಿಕೆ–3, ಸಂಪುಟ–29.

**91**. ಟಿ.ಆರ್. ಚಂದ್ರಸೇಖರ (2010) *'ಧರೆ ಹತ್ತಿ ಉರಿದರೆ–ಪ್ರಚಲಿತ ಕರ್ನಾಟಕದ ಕುರಿತ ಬರಹಗಳು'*, ಪಲ್ಲವ ಪ್ರಕಾಶನ, ಚನ್ನಪಟ್ಟಣ.

**92**. ಟಿ.ಆರ್. ಚಂದ್ರಶೇಖರ (2011) *'ಹಕ್ಕು–ಹಂಗು–ಅಭಿವೃದ್ಧಿ ಅಧ್ಯಯನ ಪ್ರಬಂಧಗಳು'*, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

**93**. ಟಿ.ಆರ್. ಚಂದ್ರಶೇಖರ್, (2008) *'ಕರ್ನಾಟಕದಲ್ಲಿ ಪ್ರಾದೇಶಿಕ ಅಸಮಾನತೆ ಮತ್ತು ಉನ್ನತ ಅಧಿಕಾರ ಸಮಿತಿ'*, ವಿದ್ಯಾರಣ್ಯ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

**94**. ಟಿ.ಆರ್.ಚಂದ್ರಶೇಖರ (2014) *'ಮಾನವ ಅಭಿವೃದ್ಧಿ ಮಾನವ ಬಡತನ ಮತ್ತು ಮಾನವ ಹಕ್ಕುಗಳು,'* ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

**95**. ಟಿ.ಆರ್.ಚಂದ್ರಶೇಖರ (2104) *'ಅಭಿವೃದ್ಧಿ ಮತ್ತು ಸಾಮಾಜಿಕ ನ್ಯಾಯ'*, ಗಾಯತ್ರಿ ಪ್ರಕಾಶನ, ಬಳ್ಳಾರಿ.

**96**. ಹಂಜ್ಸಾ ಆಲ್ವಿ (1975) *ಇಂಡಿಯಾ ಆ್ಯಂಡ್ ದಿ ಕೋಲೋನಿಯಲ್ ಮೋಡ ಆಫ್ ಪ್ರೊಡಕ್ಷನ ಎಕನಾಮಿಕ ಆ್ಯಂಡ್ ಪೊಲಿಟಿಕಲ್ ವೀಕ್ಲಿ*, ಸಂಚಿಕೆ –10, ನಂ 33/35, ಸ್ಪೆಷಲ್ (ಆಗಸ್ಟ).

97. ಕರ್ನಾಟಕ ಸರಕಾರ (2013) *ಆರ್ಥಿಕ ಸಮೀಕ್ಷೆ–2013–14,* ಕರ್ನಾಟಕ ಸರಕಾರ, ಬೆಂಗಳೂರು.

98. ಕರ್ನಾಟಕ ಸರಕಾರ (2014) *ಆಹಾರ ಮತ್ತು ನಾಗರಿಕ ಸರಬರಾಜು ಇಲಾಖೆಯ ಅಂತರಜಾಲ ತಾಣದಿಂದ ಪಡೆಯಲಾಗಿದೆ.*

99. ಕರ್ನಾಟಕ ಜನಪರ ವೇದಿಕೆ (2008) '*ಬಡವರ ಅನ್ನದ ತಟ್ಟೆಗೆ ಕುಬೇರರ ಕನ್ನ*', ಕರ್ನಾಟಕ ಜನಪರ ವೇದಿಕೆ, ಮಂಡ್ಯ.

100. ಕರ್ನಾಟಕ ರಾಜ್ಯ ಯೋಜನಾ ಮಂಡಳಿ (2008) '*ಕರ್ನಾಟಕದ ಒಂದು ದೃಷ್ಟಿಕೋನ*' ಪುಟ 11–16.

101. ಕಲಬುರಗಿ ಜಿಲ್ಲಾ ಆಡಳಿತ (2012) *2011–12ರ ಗುಲಬರ್ಗಾ ಜಿಲ್ಲೆಯ ಅಂಕಿ ಸಂಖ್ಯೆಗಳ ಪಕ್ಷಿ ನೋಟ.*

102. ಕುಸುಮ ನೈಯರ (1961) '*ಬ್ಲಾಜೂಮ್ಸ ಇನ್ ದಿ ಡಸ್ಟ – ದಿ ಹ್ಯೂಮನ ಎಲಿಮೆಂಟ್ ಇನ್ ಇಂಡಿಯನ್ ಡೆವಲಪ್‌ಮೆಂಟ್*' – ಗೆರಾಲ್ಡ ಡಕ್ಕ ವರ್ತ ಆಂಡ್ ಕೋ. ಲಿಮಿಟೆಡ್. ಲಂಡನ – ಯು.ಕೆ.

103. ಕಂಚ ಐಲಯ್ಯ (2009) '*ಜಾತಿವಿನಾಶ ಮಾರ್ಕ್ಸ್ವಾದಿ ದೃಷ್ಟಿಕೋನ*', ಕನ್ನಡಕ್ಕೆ: ಬಿ.ಸುಜ್ಞಾನಮೂರ್ತಿ, ಲಡಾಯಿ ಪ್ರಕಾಶನ, ಗದಗ.

104. ಕರೀನಾ ಕಪಾಡಿಯಾ, (1997) "*ಮೀಡಿಯಾತಿಂಗ್ ಡಿ ಮಿನಿಂಗ್ ಆಫ್ ಮಾರ್ಕೆಟ್ ಅಪಾರ್ಚೆನಿಟಿಸ್: ಜೆಂಡರ್, ಕಾಸ್ಟ್ ಮತ್ತು ಕ್ಲಾಸ್ ಇನ್ ರೂರಲ್ ಸೌತ್ ಇಂಡಿಯಾ*", *ಎಕಾನಮಿಕ್ ಅಂಡ್ ಪೊಲಿಟಿಕಲ್ ವೀಕ್ಲಿ,* ಸಂಚಿಕೆ. 32, ನಂ.52, ಪು.3329–3335.

105. ಕೆ. ಸುಂದರಂ, ಸುರೇಶ ತೆಂಡೂಲ್ಕರ್ (1990) "*ಪಾವರ್ಟಿ ಅಮಂಗ್ ಸೋಸಿಯಲ್ ಆಂಡ್ ಎಕನಾಮಿಕ್ ಗ್ರೂಪ್ಸ್ ಇನ್ ಇಂಡಿಯಾ ಇನ್ 1990*". *ಎಕನಾಮಿಕ ಆಂಡ್ ಪೊಲಿಟಿಕಲ್ ವೀಕ್ಲೀ,* ಸಂಚಿಕೆ–38, ನಂ.50, 2003, ಪುಟ 5263–5276.

106. ಕೆ.ಜಿ.ಗಾಯತ್ರಿ ದೇವಿ (2008) '*ಪಾವರ್ಟಿ ಆಂಡ್ ನ್ಯಾಚುರಲ್ ರಿಸೋರ್ಸಿಸ: ಮೆಜರಿಂಗ್ ದಿ ಲಿಂಕ್ಸ (ಸಮ್ ಇಶ್ಯುಸ್ಸ ಇನ್ ದಿ ಕಾಂಟೆಸ್ಟ್ ಆಫ್ ಕರ್ನಾಟಕ)*', ವರ್ಕಿಂಗ್ ಪೇಪರ್:142, ಐಸಾಕ್, ಬೆಂಗಳೂರು.

107. ಕೆ.ಎಲ್ ಶರ್ಮಾ (2010) '*ಪರ್ಸ್ಪೆಕ್ಟಿವ್ಸ್ ಆನ್ ಸೋಶಿಯಲ್ ಸ್ಟ್ರಾಟಿಫಿಕೆಶನ್*', ರಾವತ್ ಪ್ರಕಾಶನ, ದೆಹಲಿ.

108. ಡ್ಯಾನಿಯಲ್ ಆಂಡ್ ಆಲಿಸ್ ತ್ರೋನರ್, (1965). "*ಟೈಪ್ಸ ಆಫ್ ಎಂಪ್ಲಾಯರ್– ಲೇಬರ್ ರಿಲೇಷನ್‌ಸಿಪ್ ಇನ್ ಇಂಡಿಯನ್ ಅಗ್ರಿಕಲ್ಚರ್*" ಇಂಡಿಯನ್ ಜರ್ನಲ್ ಆಫ್ *ಅಗ್ರಿಕಲ್ಚರಲ್ ಎಕನಾಮಿಕ್ಸ್, ಸಂಚಿಕೆ 12, ನಂ.2 ಪುಟ–287–302.*

**109.** ಡೈರೆಕ್ಟರೇಟ್ ಆಫ್ ಸೆನ್ಸಸ್ (2011) *ಭಾರತದ 2011ರ ಜನಗಣತಿಯ* ಅಂತರಜಾಲ ತಾಣದಿಂದ

**110.** ಗವರ್ನ್‌ಮೆಂಟ್ ಆಫ್ ಇಂಡಿಯಾ (2013) ರಿಪೋರ್ಟ್ ಆಫ್ ದಿ ಕುಮಿಟಿ ಫಾರ್ ಇವೋಲಿಂಗ್ ಎ ಕಾಂಪೋಸಿಟ್ ಡೆವಲಪ್‌ಮೆಂಟ್ ಇಂಡೆಕ್ಸ್ ಆಫ್ ಸ್ಟೇಟ್ಸ್, ರಘುರಾಮ ರಾಜನ್ ಕಮಿಟಿ, ಮಿನಿಸ್ಟ್ರಿ ಆಫ್ ಫಿನಾನ್ಸ್.

**111.** ಗುಲ್ಮಾಡಿ ನಾಗಾಚಾರ್ಯ (1985) '*ಕಾಸ್ಟ್ ಆ್ಯಂಡ್ ಲ್ಯಾಂಡ್: ಎ ಸ್ಟಡಿ ಆಫ್ ಸಿಸ್ಟಂ ಇನ್ ಲ್ಯಾಂಡ್ ಒನರ್ಶಿಪ್ ಇನ್ ಎ ಸೌತ್ ಇಂಡಿಯನ್ ವಿಲೇಜ್*', ಆಂಧ್ರ ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ ಅಪ್ರಕಟಿತ ಸಂಶೋಧನ ಪ್ರಬಂಧ, ವಾಲ್ಟೇರ್, ಆಂಧ್ರ ಪ್ರದೇಶ.

**112.** ಗೋಪಲರಾವ್, ಎಚ್. ಎಸ್. ಮತ್ತು ಎಂ.ಶ್ರೀಪತಿರಾವ್ (1975) "*ಸ್ಮಾಲ್ ಫಾರಮರ್ ಮತ್ತು ಅಗ್ರಿಕಲ್ಚರಲ್ ಪ್ರೆಜಿಸ್*"*– ಎ ಕೇಸ್ ಆಫ್ ಕಾಟನ್*", *ಇಂಡಿಯನ್ ಜರ್ನಲ್ ಆಫ್ ಅಗ್ರಿಕಲ್ಚರಲ್*, ಪುಟ–204–214.

**113.** ಚನ್ನಕ್ಕಿ ಹೆಚ್. ಆರ್. (2015) "*ಶೌಚಾಲಯದ ವ್ಯವಸ್ಥೆಯಲ್ಲಿನ ಅಸಮಾನತೆ ಕುರಿತು ಒಂದು ಅವಲೋಕನ*", *ಹೊಸತು* ಸಂಪುಟ–17 ಸಂಚಿಕೆ–1, ಪುಟ–41–42.

**114.** ಚನ್ನಕ್ಕಿ ಹೆಚ್. ಆರ್. ಮತ್ತು ರಾಧಾ ಜಿ. ಮಣ್ಣೂರ್ (2016) "*ದಕ್ಷಿಣ ಭಾರತ ಮತ್ತು ಕರ್ನಾಟಕ ರಾಜ್ಯದಲ್ಲಿನ ತಳ ಸಮುದಾಯದಲ್ಲಿರುವ ಬಡತನದ ಕುರಿತು ಒಂದು ವಿಶ್ಲೇಷಣೆ*", *ಹೊಸತು*–ಸಂಪುಟ–18–ಸಂಚಿಕೆ–3, ಪುಟ–25–29.

**115.** ದಾಂಡೇಕರ ವಿ.ಎಂ. (1965) "*ಪ್ರೈಸ್ ಪ್ರೋಡಕ್ಷನ್ ಆಂಡ್ ಮಾರಕೆಟೆಡ್ ಸರ್ಪ್ಲಸ ಆಫ್ ಫುಡಗೇನ್ಸ್.*" *ಇಂಡಿಯನ್ ಜರನಲ್ ಆಫ್ ಅಗ್ರಿಕಲ್ಚರಲ್ ಎಕನಾಮಿಕ್ಸ* – 1940–64 ಸಿಲೆಕ್ಟೆಡ್ ರೀಡಿಂಗ್ಸ, 239–250.

**116.** ದಾಂಡೇಕರ್ ಮತ್ತು ರಾಥ್ (1971) "*ಪಾವರ್ಟಿ ಇನ್ ಇಂಡಿಯಾ ಡೈಮೇನ್ಸ್‌ಸ ಆ್ಯಂಡ್ ಟ್ರೆಡ್ಸ್*" *ಎಕನಾಮಿಕ್ ಆಂಡ್ ಪೊಲಿಟಿಕಲ್ ವೀಕ್ಲಿ*, ಸಂಪುಟ.6, ಸಂಚಿಕೆ–8.

**117.** ದಂತವಾಲಾ, ಎಂ.ಎಲ್. (1987) "*ರೂರಲ್ ಆಸೆಟ್ಸ ಡಿಷ್ಟ್ರಿಬ್ಯೂಷನ ಆ್ಯಂಡ್ ಕಾಂಪೋಜೆಷನ ಆಫ್ ಲೇಬರ ಫೋರ್ಸ. ಇಂಡಿಯನ ಜರನಲ್ ಆಫ್ ಅಗ್ರಿಕಲ್ಚರಲ್ ಎಕನಾಮಿಕ್ಸ,*" ಸಂಚಿಕೆ 42, ನಂ.3, ಜುಲೈ–ಸೆಪ್ಟೆಂಬರ 1987, ಪುಟ –275–285.

**118.** ಚಂದ್ರಶೇಖರ ಟಿ.ಆರ್. (2014) "*ಆಹಾರ ಭದ್ರತೆ: ಜನರನ್ನು ಒಳಗೊಳ್ಳುವ ಯೋಜನೆ*", *ಹೊಸತು* ಸಂಪುಟ–15 ಸಂಚಿಕೆ–12 ಜುಲೈ 2014, ಪುಟ–.

**119.** ದ್ವಾರಕಾನಾಥ್, ಸಿ.ಎಸ್. (2010) '*ಹಿಂದುಳಿದ ವರ್ಗಗಳು–ಅಸ್ಥಿತ್ವ ಮತ್ತು ಅಸಮಾನತೆ*', ಇದರಲ್ಲಿ: ಎಚ್.ಎಸ್.ಅನುಪಮಾ, ಕೃಷ್ಣ ಜಿ. ಮತ್ತು ಕೆ.ಎಲ್ ಚಂದ್ರಶೇಖರ್ ಐಜೂರ್ (ಸಂಪಾದಕರು) '*ಅಸಮಾನ ಭಾರತ–ಜಾತಿ ಜನಗಣತಿ ಮೀಸಲಾತಿಯ ವಿಶ್ಲೇಷಣೆ*', ಲಡಾಯಿ ಪ್ರಕಾಶನ, ಗದಗ.

**120.** ಚಚಡಿ ಎನ್.ಜಿ. (1988) *"ದಿ ಇನ್‌ಟಿಗ್ರೆಟೆಡ್ ರೂರಲ್ ಡೆವಲಪ್‌ಮೆಂಟಲ್ ಪ್ರೋಗ್ರಮ್ ಆ್ಯಂಡ್ ರೂರಲ್ ಪಾವರ್ಟಿ ಇನ್ ಕರ್ನಾಟಕ–ಎ ಕೇಸ್ ಸ್ಟಡಿ ಆಫ್ ಧಾರವಾಡ ಡಿಸ್ಟ್ರಿಕ್"* ಕರ್ನಾಟಕ ವಿಶ್ವವಿದ್ಯಾಲಯಕ್ಕೆ ಸಾದರಪದಿಸಿದ ಅಪ್ರಕಟಿತ ಪ್ರಬಂಧ.

**121.** ದೇಶಪಾಂಡೆ ಅಶ್ವಿನಿ (2011) *'ದಿ ಗ್ರಾಮರ್ ಆಫ್ ಕಾಸ್ಟ್–ಎಕೋನೊಮಿಕ್ ಡಿಸ್ಕ್ರಿಮಿನೆಶನ್ ಇನ್ ಕರಟೆಪರರಿ ಇಂಡಿಯಾ',* ಆಕ್ಸ್‌ಫರ್ಡ್ ಯುನಿವರಸಿಟಿ ಪ್ರೆಸ್, ನವದೆಹಲಿ.

**122.** ಧಾರವಾಡ ಜಿಲ್ಲಾ ಆಡಳಿತ (2012) *2011–12ರ ಧಾರವಾಡ ಜಿಲ್ಲಾ ಅಂಕಿ ಸಂಖ್ಯೆಗಳ ಪಕ್ಷಿ ನೋಟ.*

**123.** ವಿನೋಧ ವ್ಯಾಸಲು (1995) *"ಮ್ಯಾನೇಜ್ಮೆಂಟ್ ಆಫ್ ಪಾವರ್ಟಿ ಅಲಿವ್ಹೆಶನ್ ಪ್ರೋಗ್ರಾಮ್ಸ್ ಇನ್ ಕರ್ನಾಟಕ: ಅನ್ ಓವರವ್ಹಿವ್", ಎಕಾನಾಮಿಕ್ ಆಂಡ್ ಪೊಲಿಟಿಕಲ್ ವೀಕ್ಲಿ,* ಸಂಪುಟ.30, ಸಂಚಿಕೆ–41 & 42, ಪುಟ–2636–2650.

**124.** ಸುಶ್ಮಾ ಸಾಗರ್, ಕಾಂತಾ ಅಹುಜಾ ಮತ್ತು ವಿದ್ಯಾ ಸಾಗರ್ (1987) *"ಪಾವರ್ಟಿ ಅಮಾಂಗ್ ಐಡೆಂಟಿಫಾಯಿಡ್ ವೀಕರ್ ಸೆಕ್ಷನ್ ಇನ್ ರಾಜಸ್ಥಾನ", ಎಕಾನಾಮಿಕ್ ಆಂಡ್ ಪೊಲಿಟಿಕಲ್ ವೀಕ್ಲಿ,* ಸಂಪುಟ.22, ಸಂಚಿಕೆ–26, ಪುಟ–ಎ70–ಎ77.

**125.** ರಿಂಕು ಮುರಗೈ, ಎಂ.ಹೆಚ್, ಸೂರ್ಯನಾರಾಯಣ ಮತ್ತು ಸಲ್ಮಾನ್ ಜೈದಿ (2003) *"ಮೇಜರಿಂಗ್ ಪಾವರ್ಟಿ ಇನ್ ಕರ್ನಾಟಕ: ದಿ ರಿಜಿನಲ್ ಡೈಮೆನಶನ್", ಎಕಾನಾಮಿಕ್ ಆಂಡ್ ಪೊಲಿಟಿಕಲ್ ವೀಕ್ಲಿ,* ಸಂಪುಟ.38, ಸಂಚಿಕೆ–4, ಪುಟ–404–408.

**126.** ವಿ.ಎಸ್.ವ್ಯಾಸ್ ಮತ್ತು ಪ್ರದೀಪ ಭಾರ್ಗವ (1995) *"ಪಬ್ಲಿಕ್ ಇಂಟರವೆನಶನ್ ಫಾರ್ ಪಾವರ್ಟಿ ಅಲಿವೇಶನ್: ಆನ್ ಓವರವ್ಹಿವ್", ಎಕಾನಾಮಿಕ್ ಆಂಡ್ ಪೊಲಿಟಿಕಲ್ ವೀಕ್ಲಿ,* ಸಂಪುಟ.30, ಸಂಚಿಕೆ–41 & 42, ಪುಟ–2559–2572.

**127.** ನೀಲಕಂಠ ರಾಥ್ (1985) *"ಗರೀಭಿ ಹಟಾ ಹೊ: ಕ್ಯಾನ್ ಐಆರ್ಡಿಪಿ ಡೂ ಇಟ್", ಎಕಾನಾಮಿಕ್ ಆಂಡ್ ಪೊಲಿಟಿಕಲ್ ವೀಕ್ಲಿ,* ಸಂಪುಟ.20, ಸಂಚಿಕೆ–6, ಪುಟ–238–246.

**128.** ರಿಂಕು ಮುರಗೈ ಮತ್ತು ಮಾರ್ಟಿನ್ ರಾವಲಿಯನ್ (2005) *"ಎಂಪ್ಲಾಯಿಮೆಂಟ್ ಗ್ಯಾರಂಟಿ ಇನ್ ರೂರಲ್ ಇಂಡಿಯಾ: ವ್ಹಾಟ್ ವುಡ್ ಇಟ್ ಕಾಸ್ಟ್ ಆಂಡ್ ಹೌ ಮಚ್ ಇಟ್ ವುಡ್ ರೆಡ್ಸ್ ಪಾವರ್ಟಿ?", ಎಕಾನಾಮಿಕ್ ಆಂಡ್ ಪೊಲಿಟಿಕಲ್ ವೀಕ್ಲಿ,* ಸಂಪುಟ.40, ಸಂಚಿಕೆ–31, ಪುಟ–3450–3455.

**129.** ಮೀರಾ ಬಕ್ರು (1984) *"ಡಿಸ್ಟ್ರಿಬುಶನ್ ಆಫ್ ವೆಲ್ಫೇರ್: ಪೀಪಲ್ಸ್ ಹೌಸಿಂಗ್ ಸ್ಕೀಮ್ಸ್ ಇನ್ ಕರ್ನಾಟಕ", ಎಕಾನಾಮಿಕ್ ಆ್ಯಂಡ್ ಪೊಲಿಟಿಕಲ್ ವೀಕ್ಲಿ,* ಸಂಪುಟ.19, ಸಂಚಿಕೆ–10, ಪುಟ–427–436.

**130**. ಅಶೋಕ ರುದ್ರ (1978) *"ಕ್ಲಾಸ್ ರಿಲೇಶನ್ಸ್ ಇನ್ ಇಂಡಿಯನ್ ಅಗ್ರಿಕಲ್ಚರ್: I", ಎಕಾನಾಮಿಕ್ ಆ್ಯಂಡ್ ಪೊಲಿಟಿಕಲ್ ವೀಕ್ಲಿ*, ಸಂಪುಟ.13, ಸಂಚಿಕೆ–22, ಪುಟ–916–923.

**131**. ಸುಖದೇವ್ ಥೋರಟ್ ಮತ್ತು ಮೋತಿಲಾಲ್ ಮಹಾಮಲ್ಲಿಕ್(    ) ಕ್ರೋನಿಕ್ ಪಾವರ್ಟಿ ಆ್ಯಂಡ್ ಸೋಶಿಯಲಿ ಡಿಸ್ಸ್‌ಅಡ್ವಾನಟೇಜಡ್ ಗ್ರೂಪ್ಸ್: ಅನಾಲಿಸ್ಸ್ ಆಫ್ ಕಾಜ್ಸ್ ಆ್ಯಂಡ್ ರೇಮಿಡಿಸ್ಸ್, ಕ್ರೋನಿಕ್ ಪಾವರ್ಟಿ ರಿಸರ್ಚ ಸೆಂಟರ್ ಆಫ್ ಇಂಡಿಯನ್ ಇಸ್ಟಿಟ್ಯೂಟ್ ಆಫ್ ಪಬ್ಲಿಕ್ ಅಡ್ಮೀನಿಸ್ಟ್ರೆಶನ್, ವರ್ಕಿಂಗ್ ಪೇಪರ್ ನಂ.33.

**132**. ಎ. ವೈದ್ಯನಾಥನ್ (2001) *"ಪಾವರ್ಟಿ ಆ್ಯಂಡ್ ಪಾಲಿಸಿ", ಎಕನಾಮಿಕಲ್ ಆ್ಯಂಡ್ ಪೊಲಿಟಿಕಲ್ ವ್ಹೀಕ್ಲಿ*, ಸಂಪುಟ–36 ನಂ.21, ಪುಟ–1807–1822.

**133**. ಅರವಿಂದ ಪನಗರಿಯಾ ಮತ್ತು ವಿಶಾಲ ಮೋರೆ (2013) 'ಪಾವರ್ಟಿ ಬೈ ಸೋಶಿಯಲ್, ರೀಲಿಜಿಯಸ್ ಆ್ಯಂಡ್ ಎಕಾನಾಮಿಕ್ ಗ್ರೂಪ್ಸ್ ಇನ್ ಇಂಡಿಯಾ  ಅಮಾಂಗ್ ಆ್ಯಂಡ್ ಇಟ್ಸ್ ಲಾರ್ಜ ಸ್ಟೇಟ್ಸ್ 1993–94 ರಿಂದ 2011–12, ಎಸ್ಆಯ್‌ಪಿಎ–ಆಯ್ಎಸ್ಈಆರ್‌ಪಿ, ಕೋಲಂಬಿಯಾ ಯುನಿವರಸಿಟಿ, ವರ್ಕಿಂಗ್ ಪೇಪರ್ ನಂ.2013–02, ಪುಟ–1–46.

**134**. ಎಡ್ವರ್ಡ ಟೈಲರ್ (2009) *'ರೂರಲ್ ಪಾವರ್ಟಿ ಆ್ಯಂಡ್ ಮಾರ್ಕೆಟ್'*, ಎಂಬ ಲೇಖನವನ್ನು ಅಂತರಜಾಲತಾಣವಾದ www.fao.org/es/esa ದಿಂದ ಪಡೆಯಲಾಗಿದೆ.

**ಅಂತರಜಾಲತಾಣದಿಂದ ಪಡೆದ ಮಾಹಿತಿ**

1. http://kannada.oneindia.in//news/india/fifteen-indian-states-highest-poverty-rates-as-per-rbi-085798.html (ಭಾರತದ 15 ಬಡ ರಾಜ್ಯಗಳು ಮತ್ತು ಇದರಲ್ಲಿ ಕರ್ನಾಟಕ ರಾಜ್ಯಕ್ಕೆ ಎಷ್ಟನೇ ಸ್ಥಾನ?) dated 2-07-2014.
2. www.graam.org.in downloaded on 02/01/2012.
3. ಮೇರಿಯನ್ ವೆಬಸ್ಟರ್ ಶಬ್ದಕೋಶ (2013) https://www.merriam-webster.com/dictionary/poverty ದಿನಾಂಕ 18 ನವೆಂಬರ್ 2013ರಂದು ಅಂತರ ಜಾಲ ತಾಣದಿಂದ ಪಡೆದುದ್ದು.
4. www.censusindia.org
5. www.aahar.kar.nic.in
6. www.planningcommission.org
7. www.aashrya.kar.in



# ಅನುಬಂಧಗಳು

## ಅನುಬಂಧ–1

### ಅಧ್ಯಯನಕ್ಕೆ ಆಯ್ಕೆಮಾಡಿಕೊಂಡ ಜಿಲ್ಲೆಗಳನ್ನು ಒಳಗೊಂಡ ಕರ್ನಾಟಕ ರಾಜ್ಯದ ನಕಾಶೆ




ಸೂಚನೆ: ಈ ನಕಾಶೆಯು ಮಾಪನಕ್ಕೆ ಒಳಪಟ್ಟಿರುವುದಿಲ್ಲ

# ಅನುಬಂಧ–2

## ಸಂಶೋಧನೆಯ ಪ್ರಶ್ನಾವಳಿ

## "ಜಾತಿ, ವರ್ಗ ಮತ್ತು ಮಾರುಕಟ್ಟೆ–ಕರ್ನಾಟಕದಲ್ಲಿನ ಬಡತನ ರೇಖೆಯ ಕೆಳಗಿರುವ ಕುಟುಂಬಗಳ ಅಧ್ಯಯನ"

೧. ನಿಮ್ಮ ಕುಟುಂಬದ ಎಲ್ಲಾ ಸದಸ್ಯರ ಈ ಕೆಳಗಿನ ವಿವರಗಳನ್ನು ಹೇಳಿ

| ಕ್ರ.ಸಂ | ಹೆಸರು | ಯಜಮಾನನೊಂದಿಗಿನ ಸಂಬಂಧ | ಲಿಂಗ | ವಯಸ್ಸು | ವೈವಾಹಿಕ ಸ್ಥಿತಿ | ಶಿಕ್ಷಣ | ಉದ್ಯೋಗ | ವೈಯಕ್ತಿಕ ಆದಾಯ |
|---|---|---|---|---|---|---|---|---|
| ೧ | | | | | | | | |
| ೨ | | | | | | | | |
| ೩ | | | | | | | | |
| ೪ | | | | | | | | |
| ೫ | | | | | | | | |
| ೬ | | | | | | | | |
| ೭ | | | | | | | | |
| ೮ | | | | | | | | |
| ೯ | | | | | | | | |
| ೧೦ | | | | | | | | |

**೨.ಕುಟುಂಬದ ಭೂಹಿಡುವಳಿ, ಬೆಳೆ, ನೀರಾವರಿ ಮತ್ತು ಕೃಷಿ ಆದಾಯ**

ಅ) ನಿಮ್ಮ ಕುಟುಂಬಕ್ಕೆ ಸ್ವಂತ ಕೃಷಿ ಭೂಮಿ ಇದೆಯೇ? ಇದ್ದರೆ ಎಕರೆಗಳಲ್ಲಿ:________

ಆ) ನಿಮ್ಮ ಸ್ವಂತ ಕೃಷಿ ಭೂಮಿಯಲ್ಲಿ ನೀರಾವರಿ ಅನೂಕೂಲತೆ ಪಡೆದಿರುವ ಭೂಮಿ ಎಷ್ಟು?
ಎಕರೆಗಳಲ್ಲಿ:_______

ಉ) ನೀರಾವರಿಯ ಮೂಲ ಯಾವುದು? (ಕೊಳವೆ ಬಾವಿ/ತೆರೆದ ಬಾವಿ/ಹಳ್ಳದ ಬಾವಿ/ಇತರೆ)

ಊ) ನಿಮ್ಮ ಭೂಮಿಯಲ್ಲಿ ಬೆಳೆಯುವ ಆಹಾರ ಬೆಳೆಗಳಾವುವು?

೧______ ೨_______ ೩______ ೪_______ ೫_____

ಋ) ನಿಮ್ಮ ಭೂಮಿಯಲ್ಲಿ ಬೆಳೆಯುವ ವಾಣಿಜ್ಯ ಬೆಳೆಗಳಾವುವು?

೧______ ೨______ ೩______ ೪_______ ೫______

ಏ) ಕೃಷಿಯಿಂದ ನಿಮ್ಮ ಕುಟುಂಬಕ್ಕೆ ಬರುವ ಒಟ್ಟು ವಾರ್ಷಿಕ ಆದಾಯವೆಷ್ಟು?

ಒಟ್ಟು ಆದಾಯ ರೂ.ಗಳಲ್ಲಿ:________________

೩. **ಆಹಾರದ ಬೇಡಿಕೆ–ಪೂರೈಕೆ ಮತ್ತು ಕುಟುಂಬದ ಸದಸ್ಯರು ತೆಗೆದುಕೊಳ್ಳುವ ಆಹಾರದ ಬಗ್ಗೆ**

ಅ) ನಿಮ್ಮ ಕುಟುಂಬಕ್ಕೆ ಪಡಿತರ ಚೀಟಿ ಇದೇಯೇ? ಇದೆ......೧, ಇಲ್ಲ ......... ೨

ಆ) ಇದ್ದರೆ, ಯಾವ ತರಹದ ಪಡಿತರ ಚೀಟಿ?

(ಚೀಟಿಯನ್ನು ನೋಡಿ ಮಾಹಿತಿಯನ್ನು ಕಲೆಹಾಕಲಾಗುವದು)____________

ಇ) ಸಾರ್ವಜನಿಕ ಪಡಿತರ ವಿತರಣೆ ವ್ಯವಸ್ಥೆಯಿಂದ ನಿಮ್ಮ ಕುಟುಂಬವು ಆಹಾರ ಪದಾರ್ಥಗಳನ್ನು ಪಡೆಯುತ್ತದಯೆ? **ಹೌದು/ ಇಲ್ಲ**

ಈ) ಹೌದಾದರೆ ಯಾವ ಯಾವ ಪದಾರ್ಥಗಳನ್ನು ಪಡೆಯುತ್ತಿರಿ ಮತ್ತು ಎಷ್ಟು ಕೆಜಿ?

**ಅಕ್ಕಿ:__________ಕೆ.ಜಿಗಳಲ್ಲಿ ಸಕ್ಕರೆ:__________ಕೆ.ಜಿಗಳಲ್ಲಿ ಗೋಧಿ:__________ಕೆ.ಜಿಗಳಲ್ಲಿ ಸೀಮೆ**

**ಎಣ್ಣೆ:______ಲೀಟರಗಳು**

**ಇತರೆ ಪದಾರ್ಥಗಳು: ೧.__________ ೨. __________ ೩. __________**

ಉ) ಇದಕ್ಕಾಗಿ ಒಂದು ತಿಂಗಳಿಗೆ ಎಷ್ಟು ಖರ್ಚಾಗುತ್ತದೆ? ರೂ.ಗಳಲ್ಲಿ __________ ?) ಒಂದು ತಿಂಗಳಿಗೆ ನಿಮ್ಮ ಕುಟುಂಬಕ್ಕೆ ಎಷ್ಟು ಆಹಾರ ಬೇಕಾಗುವದು ಮತ್ತು ಇದರಲ್ಲಿ ನ್ಯಾಯ ಬೆಲೆ ಅಂಗಡಿಯಿಂದ ಖರೀದಿಸುವ ಆಹಾರದ ಪ್ರಮಾಣ ಎಷ್ಟು?

| | **ತಿಂಗಳಿಗೆ ಬೇಕಾದ್ದುದು** | **ಸರಕಾರದಿಂದ ಪಡೆದ್ದುದು** | **ಕಡಿಮೆಯಾದದ್ದು** |
|---|---|---|---|
| ೧ ಅಕ್ಕಿ: | ________ | ________ | ________ |
| ೨ ಸಕ್ಕರೆ: | ________ | ________ | ________ |
| ೩. ಗೋಧಿ: | ________ | ________ | ________ |
| ೪. ಸೀಮೆ ಎಣ್ಣೆ: | ________ | ________ | ________ |
| ೫. ಜೋಳ: | ________ | ________ | ________ |
| ೬.ಇತರೆ: | ________ | ________ | ________ |
| ೭.ಇತರೆ: | ________ | ________ | ________ |

ಋ) ನ್ಯಾಯಬೆಲೆ ಅಂಗಡಿಯಿಂದ ಪಡೆದ ಆಹಾರ ಪದಾರ್ಥಗಳು ನಿಮ್ಮ ಕುಟುಂಬಕ್ಕೆ ಕಡಿಮೆಯಾದಾಗ ಏನು ಮಾಡುತ್ತಿರಿ?

**ಮಾರುಕಟ್ಟೆಯಿಂದ ತರುತ್ತೆವೆ..............೧** **ಸಂಬಂದಿಕರಿಂದ ಸಹಾಯ ಕೇಳುತ್ತೆವೆ ................ ೨**

**ಗೆಳೆಯರಿಂದ ಕೈಗಡದ ರೂಪದಲ್ಲಿ ತರುತ್ತೆವೆ.....೩** **ಊರಿನ ಅಂಗಡಿಯಲ್ಲಿ ಉದ್ರಿ ತರುತ್ತೆವೆ ..............೪**

**ಇತರೆ .......................................೫** **ಇತರೆ ...............................................೬**

ಎ) ನ್ಯಾಯಬೆಲೆ ಅಂಗಡಿಯಿಂದ ಪೂರೈಕೆಯಾಗುವ ಆಹಾರ ಪದಾರ್ಥಗಳು ತಿನ್ನಲಿಕ್ಕೆ ಯೋಗ್ಯವಾಗಿವೆಯೇ? **ಹೌದು/ ಇಲ್ಲ**

ಏ) ನಿಮಗೆ ಪ್ರತಿತಿಂಗಳು ಸಿಗುವ ಆಹಾರ ಪದಾರ್ಥಗಳ ತೂಕದಲ್ಲಿ ಹೆಚ್ಚು ಕಡಿಮೆಯಾಗುತ್ತದಯೆ? **ಆಗುತ್ತದೆ/ಆಗುವುದ್ದಿಲ್ಲಾ**

ಐ) ಎಷ್ಟು ಕೆ.ಜಿಯ ತೂಕದ ವ್ಯತ್ಯಾಸ ಬರುತ್ತದೆ? **ಕೆಜಿ ವ್ಯತ್ಯಾಸ**__________

ಒ) ಈ ರೀತಿ ತೂಕ ಕಡಿಮೆಯಾದಾಗ ನ್ಯಾಯ ಬೇಲೆ ಅಂಗಡಿಯವರಿಗೆ ಕೇಳಿದ್ದಿರಾ?__________

ಓ) ಕೇಳಿದಾಗ ಏನು ಹೇಳಿದ್ದರು?__________

ಔ) ಒಂದು ವೇಳೆ ಕೇಳಿಲ್ಲಾವೆಂದರೆ ಯಾಕೆ ಕೇಳಲಿಲ್ಲ? __________

ಅಂ) ನ್ಯಾಯ ಬೆಲೆ ಅಂಗಡಿಯಿಂದ ಪಡೆದ ಆಹಾರ ಪದಾರ್ಥಗಳ ಗುಣಮಟ್ಟ ಹೇಗಿದೆ?

**(೧–ಅತ್ಯುತ್ತಮ, ೨–ಉತ್ತಮ, ೩–ತೃಪ್ತಿಕರ, ೪–ಅತೃಪ್ತಿಕರ, ೫–ಶೋಚನಿಯ)**

ಆಃ) ಪಡಿತರ ವ್ಯವಸ್ಥೆಯ ಮೂಲಕ ಪಡೆಯುವ ಆಹಾರ ಪದಾರ್ಥಗಳು ನಿರಂತರವಾಗಿ ದೊರೆಯುತ್ತವೆಯೇ?________

ಯ) ಇಲ್ಲದಿದ್ದರೆ ಎಷ್ಟು ದಿವಸಗಳಿಗೊಮ್ಮೆ ದೊರೆಯುತ್ತವೆ?______________

ರ) ನಿಮ್ಮ ಕುಟುಂಬದ ಸದಸ್ಯರು ಒಂದು ದಿನದಲ್ಲಿ ಎಷ್ಟು ಬಾರಿ ಆಹಾರವನ್ನು ತೆಗೆದುಕೊಳ್ಳುತ್ತಾರೆ?________

ಲ) ಸಾಮಾನ್ಯವಾಗಿ ನಿಮ್ಮ ಕುಟುಂಬದ ಸದಸ್ಯರು ತೆಗೆದುಕೊಳ್ಳುವ ಆಹಾರದಲ್ಲಿ ಯಾವ ಯಾವ ಪದಾರ್ಥಗಳು ಇರುತ್ತವೆ?

**(ಜೋಳ/ಗೋಧಿ/ಅಕ್ಕಿ/ರಾಗಿ/ಸಕ್ಕರೆ/ಕಾಯಿಪಲ್ಲೆ/ತರಕಾರಿ/ತುಪ್ಪ/ಹಾಲು/ಮೊಟ್ಟೆ/ಕೋಳಿಮಾಂಸ/ಕುರಿಮಾಂಸ/ ಇತರೆ_____/ಇತರೆ_)**

ವ) ನಿಮ್ಮ ಕುಟುಂಬದ ಸದಸ್ಯರು ಒಂದು ದಿನದಲ್ಲಿ ಎಷ್ಟು ಕ್ಯಾಲರಿ ಆಹಾರ ತೆಗೆದು ಕೊಳ್ಳಬೇಕು ಎಂದು ನಿಮಗೆ ತಿಳಿದಿದೆಯೆ? **ಹೌದು/ ಇಲ್ಲ**

ಹ) ಹೌದಾದರೆ ಎಷ್ಟು ಕ್ಯಾಲರಿಗಳು?______________

ಳ) ನಿಮ್ಮ ಕುಟುಂಬದ ಸದಸ್ಯರು ತೆಗೆದು ಕೊಳ್ಳುವ ಆಹಾರವು ಪೌಷ್ಟಿಕವಾಗಿರುತ್ತದಯೆ? **ಹೌದು/ ಇಲ್ಲ**

**೪. ಆರೋಗ್ಯದ ಸೇವೆಗಳ ಬೇಡಿಕೆ ಮತ್ತು ಪೂರೈಕೆ**

ಅ) ಸಾಮಾನ್ಯವಾಗಿ ನಿಮ್ಮ ಕುಟುಂಬದ ಸದಸ್ಯರು ಅನಾರೋಗ್ಯದಿಂದ ಬಳಲುತ್ತಿದ್ದಾಗ ಯಾವ ಆಸ್ಪತ್ರೆಗೆ ಕರೆದುಕೋಂಡು ಹೋಗುತ್ತಿರಿ?

**೧. ಸರಕಾರಿ ಆಸ್ಪತ್ರೆ, ೨.ಖಾಸಗಿ ಆಸ್ಪತ್ರೆ, ೩.ಹಳ್ಳಿಯಲ್ಲಿನ ಖಾಸಗಿ ವೈದ್ಯರು, ೪.ಕಿರಿಯ ಮಹಿಳಾ ಆರೋಗ್ಯ ಸಹಾಯಕಿ, ೪—ಇತರೆ, ೫—ಇತರೆ.**

ಆ) ಕಳೆದ ಆರು ತಿಂಗಳಿನಿಂದ ನಿಮ್ಮ ಕುಟುಂಬದ ಸದಸ್ಯರಿಗೆ ನೆಗಡಿ, ಕೆಮ್ಮು, ಜ್ವರ ಮತ್ತು ಸಣ್ಣ–ಪುಟ್ಟ ಕಾಯಿಲೆಗಳಾದಾಗ ಯಾವ ದವಾಖಾನೆ/ಆಸ್ಪತ್ರೆಗೆ ಕರೆದುಕೊಂಡು ಹೋಗಿದ್ದಿರಿ?

**೧.ಸರಕಾರಿ ಆಸ್ಪತ್ರೆ, ೨.ಖಾಸಗಿ ಆಸ್ಪತ್ರೆ, ೩.ಹಳ್ಳಿಯಲ್ಲಿನ ಖಾಸಗಿ ವೈದ್ಯರು, ೪.ಕಿರಿಯ ಮಹಿಳಾ ಆರೋಗ್ಯ ಸಹಾಯಕಿ, ೪—ಇತರೆ, ೫—ಇತರೆ.**

ಇ) ಈ ಮೇಲೆ ಹೇಳಿದ ಸಂದರ್ಭದಲ್ಲಿ ಒಟ್ಟು ಎಷ್ಟು ಖರ್ಚಾಯಿತ್ತು? **ಒಟ್ಟು ಖರ್ಚು ರೂ.ಗಳಲ್ಲಿ:_________ (ಎಲ್ಲಾ ಸೇರಿ)**

ಈ) ಇದರಲ್ಲಿ ಸರಕಾರದಿಂದ ಪಡೆದ ಒಟ್ಟು ಸಹಾಯಧನವೆಷ್ಟು? **ರೂ.ಗಳಲ್ಲಿ:**____________

ಉ) ಕಡಿಮೆಯಾದರೆ ಏನು ಮಾಡುತ್ತಿರಿ? **ಕ್ರಮ:**___________

ಊ) ಕಳೆದ ಆರು ತಿಂಗಳ ಅವಧಿಯಲ್ಲಿ ಕುಟುಂಬದ ಸದಸ್ಯರಿಗೆ ತೀವ್ರತರಹದ ಕಾಯಿಲೆಯಾದಾಗ ಯಾವ ಆಸ್ಪತ್ರೆಗೆ ಕರೆದುಕೊಂಡು ಹೋಗಿದ್ದಿರಿ?

**೧. ಸರಕಾರಿ ಆಸ್ಪತ್ರೆ, ೨.ಖಾಸಗಿ ಆಸ್ಪತ್ರೆ, ೩—ಇತರೆ, ೪—ಇತರೆ.**

ಋ) ಈ ಸಂದರ್ಭದಲ್ಲಿ ಒಟ್ಟು ಎಷ್ಟು ಖರ್ಚಾಯಿತ್ತು? **ಒಟ್ಟು ಖರ್ಚು ರೂಪಾಯಿಗಳು:**__________

ಎ) ನಿಮ್ಮ ಕುಟುಂಬವು ಸರಕಾರದ ಯಾವುದೇ ರೀತಿಯ ಆರೋಗ್ಯ ಯೋಜನೆಯ ಫಲಾನುಭವಿಯೇ? **ಹೌದು–೧, ಇಲ್ಲ–೨**

ಏ) ಯಾವ ಯೋಜನೆಯ ಫಲಾನುಭವಿ? **ಯೋಜನೆಯ ಹೆಸರು:**______________

ಐ) ಯಾವ ರೀತಿಯ ನೆರವನ್ನು ಪಡೆದ್ದಿರಾ? **ನೆರವು:**______________

ಒ) ನಿಮ್ಮ ಕುಟುಂಬದ ಸದ್ಯಸರಿಗೆ ಆರೋಗ್ಯಕ್ಕಾಗಿ ಕಳೆದ ಆರು ತಿಂಗಳಲ್ಲಿ ಒಟ್ಟು ಎಷ್ಟು ಹಣ ಖರ್ಚಾಗಿದೆ?

| | ತಿಂಗಳಿಗೆ ಬೇಕಾದ್ದುದು | ಸರಕಾರದಿಂದ ಪಡೆದ್ದುದು | ಕಡಿಮೆಯಾದದ್ದು |
|---|---|---|---|
| ೧ ಸಾರಿಗೆ ವೆಚ್ಚ | ________ | ________ | ________ |
| ೨. ಡಾಕ್ಟರ ಫೀ: | ________ | ________ | ________ |
| ೩. ಔಷದ ವೆಚ್ಚ | ________ | ________ | ________ |
| ೪.ವೈದ್ಯಕೀಯ ಪರಿಕ್ಷೆಗಳು | ________ | ________ | ________ |
| ೫. ವಸತಿ ವೆಚ್ಚ | ________ | ________ | ________ |
| ೬. ಊಟದ ವೆಚ್ಚ | ________ | ________ | ________ |
| ೭. ಇತರೆ: | ________ | ________ | ________ |

ಓ) ಒಂದು ವೇಳೆ ಸರಕಾರದಿಂದ ತೆಗೆದುಕೊಂಡಿದ್ದು ಸರಿಹೋಗದೆ ಇದ್ದಾಗ ಏನು ಮಾಡುತ್ತಿರಿ?

**ಸಂಬಂದಿಕರಿಂದ ಸಹಾಯ ಕೇಳುತ್ತೆವೆ... ೧　　ಗೆಳೆಯರಿಂದ ಕೈಗಡದ ರೂಪದಲ್ಲಿ ತರುತ್ತೆವೆ..... ೨**

**ಊರಿನವರಲ್ಲಿ ಸಾಲ ತರುತ್ತೆವೆ ........ ೩　　ಇತರೆ .................. ೪**

**ಇತರೆ..................೫　　ಇತರೆ□□□□□□□□□□□□□□□□□೬**

ಔ) ನಿಮ್ಮ ಕುಟುಂಬದ ಸದಸ್ಯರು ಸರಕಾರಿ ಆಸ್ಪತ್ರೆಗೆ ಹೋಗದೇ ಇರಲು ಕಾರಣಗಳೇನು?

**ಕಾರಣಗಳು ೧.________, ೨.________, ೩.________, ೪.________, ೫.________**

ಅಂ) ಸರಕಾರಿ ಆಸ್ಪತ್ರೆಗಳಲ್ಲಿ ದೊರೆಯುವ ಸೌಲಭ್ಯಗಳು ನಿಮಗೆ ತೃಪ್ತಿಯಾಗಿವೆಯೇ?

**(೧__ಅತ್ಯುತ್ತಮ, ೨__ಉತ್ತಮ, ೩____ತೃಪ್ತಿಕರ, ೪□ಅತೃಪ್ತಿಕರ, ೫—ಶೋಚನಿಯ)**

ಅಃ) ನಿಮ್ಮ ಕುಟುಂಬಕ್ಕೆ ಯಶಶ್ವಿನಿ ಕಾರ್ಡ ಇದೆಯೇ? ಇದೆ□೧, ಇಲ್ಲ□೨

ಕ) ಇದ್ದರೆ ಈ ಕಾರ್ಡಿನ್ವಯ ದೊರಕುವ ಸೌಲಭ್ಯಗಳಾವುವು? ೧.________,
೨.________, ೩.________

**೫. ಶಿಕ್ಷಣ ಮತ್ತು ಉದ್ಯೋಗದಲ್ಲಿನ ಬೇಡಿಕೆ ಮತ್ತು ಪೂರೈಕೆ**

ಅ) ನಿಮ್ಮ ಕುಟುಂಬದಲ್ಲಿರುವ ಮಕ್ಕಳು ಶಾಲೆಗೆ ಹೋಗುತ್ತಾರೆಯೇ? **ಹೊಗುತ್ತಾರೆ/ಹೊಗುವುದಿಲ್ಲಾ**

ಆ) ಹೋಗುತ್ತಿದ್ದರೆ ಯಾವ ಶಾಲೆಗೆ? **ಸರಕಾರಿ...೧, ಖಾಸಗಿ......೨**

ಇ) ಒಂದು ವೇಳೆ ಹೋಗದ್ದಿರೆ ಕಾರಣಗಳೇನು? **ಕಾರಣಗಳು:**

೧________ ೨.________ ೩.________

ಈ) ನಿಮ್ಮ ಕುಟುಂಬದ ಮಕ್ಕಳು ಸರಕಾರದ ಯಾವುದೇ ಶಿಕ್ಷಣ ಯೋಜನೆಯ
ಫಲಾನುಭವಿಯೇ?________

ಉ) ಯಾವ ಯೋಜನೆ? ಹೆಸರು:________

ಊ) ಮೇಲೆ ಹೇಳಿದ ಯೋಜನೆಯಲ್ಲಿ ಯಾವ ರೀತಿಯ ನೆರವನ್ನು
ಪಡೆದಿದ್ದಿರಿ:________

ಉ) ನಿಮ್ಮ ಕುಟುಂಬದ ಒಬ್ಬ ಮಗುವಿಗೆ ಒಂದು ವರ್ಷದ ಶಿಕ್ಷಣಕ್ಕೆ ಅಂದಾಜ ಎಷ್ಟು ಬೇಕಾಗುತ್ತದೆ ಮತ್ತು ಸರಕಾರದಿಂದ ಸಹಾಯದ ರೂಪದಲ್ಲಿ ಎಷ್ಟು ದೊರೆಯುತ್ತದೆ?

| | ವರ್ಷಕ್ಕೆ ಬೇಕಾದ್ದುದು | ಸರಕಾರದಿಂದ ಪಡೆದ್ದುದು | ಕಡಿಮೆಯಾದದ್ದು |
|---|---|---|---|
| ೧. ಶಾಲಾ ಶುಲ್ಕ: | ________ | ________ | ________ |
| ೨. ಪಠ್ಯ ಪುಸ್ತಕ: | ________ | ________ | ________ |

೩. ಸಾರಿಗೆ: ___________ ______________ ____________

೪. ಸಮವಸ್ತ್ರ: ___________ ______________ ____________

೫. ಊಟ: ____________ ______________ ____________

೬ ಇತರೆ: ____________ _____________ ______________

ಋ) ಒಂದು ವೇಳೆ ಸರಕಾರದಿಂದ ಪಡೆದ್ದಿದು ಸರಿಹೋಗದೆ ಇದ್ದಾಗ ಏನು ಮಾಡುತ್ತಿರಿ?
___________

ಎ) ನಿರಂತರವಾಗಿ ದೊರಕದೆ ಇದ್ದಾಗ ಏನು ಮಾಡುತ್ತಿರಿ?

(ಉದಾ: ಊಟ, ಶಾಲಾ ಶುಲ್ಕ)______________

ಏ) ನಿಮ್ಮ ಕುಟುಂಬದ ಯಾವುದೇ ಸದ್ಯಸರು ಸರಕಾರದ ಉದ್ಯೋಗ ಯೋಜನೆಗಳ ಫಲಾನಿಭವಿಗಳೆ?__________

ಐ) ಯಾವ ತರಹದ ಉದ್ಯೋಗದ ಯೋಜನೆ?______________

ಒ) ಯಾವ ರೀತಿಯ ನೆರವನ್ನು ಪಡೆದ್ದಿರಾ?___________________

ಓ) ಮ.ಗಾ.ಉ.ಖಾ. ಯೋಜನೆಯಡಿಯಲ್ಲಿ ನಿಮ್ಮ ಕುಟುಂಬದ ಎಷ್ಟು ಸದ್ಯಸರಿಗೆ ಜಾಬ್ ಕಾರ್ಡ ಇದೇ?_______________

ಔ) ಈ ಯೋಜನೆಯಡಿಯಲ್ಲಿ ನಿಮ್ಮ ಕುಟುಂಬದ ಸದ್ಯಸರಿಗೆ ಒಟ್ಟು ಎಷ್ಟು ದಿವಸ ಉದ್ಯೋಗ ದೊರೆಯುತ್ತದೆ?__________

ಅಂ) ಈ ಯೋಜನೆಯಿಂದ ನಿಮ್ಮ ಕುಟುಂಬವು ಗಳಿಸುವ ಒಟ್ಟು ಆದಾಯವೆಷ್ಟು?______________

**೬. ವಸತಿ, ಕುಡಿಯುವ ನೀರು ಮತ್ತು ನೈರ್ಮಲ್ಯದಲ್ಲಿನ ಬೇಡಿಕೆ ಹಾಗೂ ಪೂರೈಕೆ**

ಅ) ಇದು ನಿಮ್ಮ ಸ್ವಂತ ಮನೆಯೇ? ಹೌದು/ಇಲ್ಲ

ಆ) ಒಂದು ವೇಳೆ ಬಾಡಿಗೆ ಮನೆಯಾಗಿದ್ದರೆ ತಿಂಗಳ ಬಾಡಿಗೆ ಎಷ್ಟು? ಬಾಡಿಗೆ ರೂ.ಗಳಲ್ಲಿ:_____________

ಇ) ಸ್ವಂತದಾಗಿದ್ದರೆ, ಈಗಿರುವ ಮನೆ ಕುಟುಂಬದ ಎಲ್ಲರಿಗೆ ವಾಸಿಸಲು ಸಾಕಾಗುತ್ತದಯೇ?______________

ಈ) ಸಾಕಾಗದೇ ಇದ್ದರೇ ಏನು ಮಾಡುತ್ತಿರೀ?__________________

ಉ) ಇದನ್ನು ಬಿಟ್ಟು ಬೇರೆ ಮನೆ ಇದೇಯೇ? ಇದೆ/ಇಲ್ಲ

ಊ) ನಿಮ್ಮ ಕುಟುಂಬವು ಸರಕಾರದ ಯಾವುದೇ ವಸತಿ ಯೊಜನೆಯ ಫಲಾನುಭವಿಯೇ?_________________

ಋ) ಹೌದಾದರೆ ಯಾವ ಯೋಜನೆಯ ಫಲಾನುಭವಿ?______________

ಎ) ಯಾವ ರೀತಿಯ ನೆರವನ್ನು ಪಡೆದ್ದಿರಾ? ________________

ಏ) ಯೋಜನೆಯಲ್ಲಿ ಪಡೆದ ವಸತಿಯು ವಾಸಿಸಲು ಯೋಗ್ಯವಾಗಿದೆಯೇ? _________________

ಐ) ಒಂದು ವೇಳೆ ವಾಸ ಮಾಡಲು ಯೋಗ್ಯವಾಗಿಲ್ಲವೆಂದರೆ ಏಕೆ?

ಕಾರಣಗಳು: ೧________, ೨_______, ೩______

ಒ) ಯೋಜನೆಯಲ್ಲಿ ಪಡೆದ ಮನೆಯ ಗುಣಮಟ್ಟ ಹೇಗಿದೆ?

(೧__ಅತ್ಯುತ್ತಮ, ೨__ಉತ್ತಮ, ೩.ತೃಪ್ತಿಕರ, ೪. ಅತೃಪ್ತಿಕರ, ೫.ಶೋಚನಿಯ)

ಓ) ಯೋಜನೆಯಲ್ಲಿ ಪಡೆದ ಮನೆಯಲ್ಲಿ ಎಷ್ಟು ಕೋಣೆಗಳಿವೆ? ಕೋಣೆಗಳ ಸಂಖ್ಯೆ

ಔ) ನಿಮ್ಮ ಕುಟುಂಬವು ವಾಸಿಸಲು ಯೋಗ್ಯವಾದ ಒಂದು ಮನೆಯನ್ನು ಕಟ್ಟಿಕೊಳ್ಳಲು ಒಟ್ಟು ಎಷ್ಟು ಹಣ ಖರ್ಚಾಗುತ್ತದೆ?

| | **ಬೇಕಾದ್ದು** | **ಸರಕಾರದಿಂದ ಪಡೆದಿದ್ದು** | **ಕಡಿಮೆಯಾದದ್ದು** |
|---|---|---|---|
| ಹಣಕಾಸಿನ ನೆರವು: | ________ | ______________ | ___________ |
| ಸಾಮಾಗ್ರಿಗಳ ನೆರವು: | _______ | ______________ | __________ |
| ಇತರೆ ನೆರವು: | ____________ | ______________ | __________ |

ಅಂ) ಮನೆಯನ್ನು ಕಟ್ಟಿಕೊಳ್ಳಲು ಸರಕಾರದಿಂದ ಪಡೆದಿದ್ದು ಕಡಿಮೆಯಾದಾಗ ಏನು ಮಾಡುತ್ತಿರಿ?

**ಕ್ರಮ:**__________

ಅಃ) ನಿಮ್ಮ ಮನೆಗೆ ವಿದ್ಯುತ್ ಸಂಪರ್ಕವಿದೆಯೇ? **ಇದೆ/ಇಲ್ಲ**

ಕ) ಈ ವಿದ್ಯುತ್ ಸಂಪರ್ಕವು ಸರಕಾರದಿಂದ ಕೊಡಲ್ಪಟ್ಟಿದೆಯೆ? **ಹೌದು/ಇಲ್ಲ**

ಖ) ಹೌದಾದರೆ ಯಾವ ಯೋಜನೆಯಡಿಯಲ್ಲಿ ದೊರಕಿದೆ? **ಯೋಜನೆಯ ಹೆಸರು:**__________

ಗ) ನಿಮ್ಮ ಕುಟುಂಬದ ಕುಡಿಯುವ ನೀರಿನ ಮೂಲ ಯಾವುದು?

**(ಬೋರ್‌ವೆಲ್‌ಗಳು/ಹ್ಯಾಂಡ ಪಂಪ್ಸ್/ಮಿನಿವಾಟರ್ ಟ್ಯಾಂಕ್/ಕೊಳವೆ ನೀರು ಪೂರೈಕೆ/ಇತರೆ)**

ಘ) ನಿಮ್ಮ ಕುಟುಂಬಕ್ಕೆ ಪ್ರತ್ಯೇಕವಾದ ಕುಡಿಯುವ ನೀರಿನ ವ್ಯವಸ್ಥೆ ಇದೆಯೇ? **ಇದೆ/ಇಲ್ಲ**

ಙ) ಒಂದು ವೇಳೆ ನಿಮ್ಮ ಕುಟುಂಬಕ್ಕೆ ಕುಡಿಯುವ ನೀರಿನ ವ್ಯವಸ್ಥೆ ಇರದ್ದಿದರೆ ಕುಡಿಯುವ ನೀರನ್ನು ಎಲ್ಲಿಂದ ತರುತ್ತಿರಿ? **ಸ್ಥಳ:**________

ಚ) ಈ ಸ್ಥಳವು ನಿಮ್ಮ ಮನೆಯಿಂದ ಎಷ್ಟು ದೂರವಿದೆ? **ದೂರ:**________

ಛ) ದಿನದ ಎಷ್ಟು ಸಮಯ ಕುಡಿಯುವ ನೀರಿನ ಪೂರೈಕೆ ಇದೆ?

**(ದಿನವಿಡಿ/ನಿರ್ಧಿಷ್ಟ ಸಮಯದಲ್ಲಿ ಮಾತ್ರ/ಹೊತ್ತುಗೊತ್ತು ಇಲ್ಲ)**

ಜ) ದಿನಕ್ಕೆ ಎಷ್ಟು (ಲೀಟರ್) ಕುಡಿಯುವ ನೀರಿನ ಪೂರೈಕೆ ಆಗುತ್ತಿದೆ? **ಲೀಟರ್ ನೀರು:**_______

ಝ) ನೀರು ಕುಡಿಯಲು ಯೋಗ್ಯವಾಗಿದೆಯೇ? **ಹೌದು/ಇಲ್ಲ**

ಞ) ಬೇರೆ ಸ್ಥಳದಿಂದ ನೀರು ತರುವದರಿಂದ ಎಷ್ಟು ಹಣ ಖರ್ಚಾಗುತ್ತದೆ?

**ಒಟ್ಟು ಹಣ ಖರ್ಚು ರೂ.ಗಳಲ್ಲಿ:**_______

ಟ) ನಿಮ್ಮ ಕುಟುಂಬಕ್ಕೆ ಪ್ರತ್ಯೇಕವಾದ ಕುಡಿಯುವ ನೀರಿನ ಸೌಲಭ್ಯವನ್ನು ಪಡೆಯಲು ಒಟ್ಟು ಎಷ್ಟು ಖರ್ಚಾಯಿತ್ತು ಮತ್ತು ಇದರಲ್ಲಿ ಸರಕಾರದಿಂದ ಪಡೆದ ಸಹಾಯಧನವೆಷ್ಟು?

**ಒಟ್ಟು ಖರ್ಚು ರೂಗಳಲ್ಲಿ:**__________

**ಸರಕಾರದಿಂದ ಪಡೆದ ಹಣ:**__________

**ಹೆಚ್ಚುವರಿ ಹಣ:**______________

ಠ) ಕಡಿಮೆಯಾದ ಹಣವನ್ನು ಯಾವ ರೀತಿ ಹೋದಾಣಿಕೆ ಮಾಡುತ್ತಿರಿ? **ಕ್ರಮ:**

ಡ) ನೀವು ಅಡುಗೆ ಮಾಡಲು ಬಳಸುವ ಇಂಧನ ಯಾವುದು?______________

ಢ) ನಿಮ್ಮ ಮನೆಗೆ ಗ್ಯಾಸ್ (ಎಲ್.ಪಿ.ಜಿ.) ಸಂಪರ್ಕವಿದೆಯೇ? **ಇದೆ/ಇಲ್ಲ**

ಣ) ಇದ್ದರೆ ಗ್ಯಾಸ್ ರಿಯಾಯಿತಿ (ಸಬ್ಸಿಡಿ) ಯು ದೊರೆತ್ತಿದೆಯೇ? **ದೊರೆತ್ತಿದೆ/ದೊರೆತ್ತಿಲ್ಲ**

ತ) ಎಷ್ಟು? **ರಿಯಾಯತಿ ಹಣ ರೂ.ಗಳಲ್ಲಿ:**__________

ಥ) ನಿಮ್ಮ ಕುಟುಂಬಕ್ಕೆ ಪ್ರತ್ಯೇಕವಾದ ಶೌಚಾಲಯದ ವ್ಯವಸ್ಥೆ ಇದೆಯೇ? **ಇದೆ/ಇಲ್ಲ**

ದ) ಇದ್ದರೆ ಇದನ್ನು ಕಟ್ಟಿಸಿಕೊಳ್ಳಲು ಒಟ್ಟು ಎಷ್ಟು ಖರ್ಚಾಯಿತ್ತು ಮತ್ತು ಇದರಲ್ಲಿ ಸರಕಾರದಿಂದ ಪಡೆದ ಸಹಾಯಧನವೆಷ್ಟು?

**ಒಟ್ಟು ಖರ್ಚು ರೂಗಳಲ್ಲಿ:_______________**

**ಸರಕಾರದಿಂದ ಪಡೆದ ಹಣ:_____________**

**ಹೆಚ್ಚುವರಿ ಹಣ:____________________**

ಧ) ಇದರಲ್ಲಿ ಹೆಚ್ಚುವರಿ ಹಣವನ್ನು ಯಾವ ರೀತಿ ಭರಿಸಿಕೊಂಡಿದ್ದಿರಿ? ___________

ನ) ಸರಕಾರದಿಂದ ಪಡೆದ ಹಣ ಯಾವ ಯೋಜನೆಯಡಿಯಲ್ಲಿ ಪಡೆಯಲಾಗಿದೆ? **ಹೆಸರಿಸಿ:___________**

ಪ) ಶೌಚಾಲಯ ಇಲ್ಲದಿದ್ದರೆ ಕುಟುಂಬದ ಸದಸ್ಯರು ಪ್ರತಿದಿನ ಮಲ ಮತ್ತು ಮೂತ್ರ ವಿಸರ್ಜನೆಗಾಗಿ ಎಲ್ಲಿಗೆ ಹೋಗುತ್ತಾರೆ?

**ಬಯಲು ಪ್ರದೇಶ/ಸಮುದಾಯ ಶೌಚಾಲಯ/ಹೊಲಕ್ಕೆ/ಇತರೆ:______________**

ಫ) ನೀವು ಬಳಸಿದ ನೀರನ್ನು ಎಲ್ಲಿಗೆ ಬಿಡುತ್ತಿರಿ?

**ಮನೆಮುಂದಿನ ರಸ್ತೆ/ಇಂಗು ಗುಂಡಿ (ಮನೆ ಹಿಂದೆ/ಪಕ್ಕದಲ್ಲಿ)/ಚರಂಡಿ/ಇತರೆ:_**

ಬ) ಚರಂಡಿಗೆ ಬಿಡುವುದಾದರೆ, ಸಮರ್ಪಕವಾದ ಚರಂಡಿ ವ್ಯವಸ್ಥೆ ಇದೆಯೇ?

**೧______ಇದೆ, ೨______ಇಲ್ಲ**

ಭ) ಇದ್ದರೆ, ಚರಂಡಿಯಲ್ಲಿ ಕೊಳಚೆ ನೀರು ಸರಾಗವಾಗಿ ಹರಿದು ಹೋಗುತ್ತಿದಿಯೇ?
**೧_____ಹೋಗುತ್ತಿದೆ, ೨_____ಇಲ್ಲ**

ಭ) ನಿಮ್ಮ ಮನೆಯಲ್ಲಿನ ಕಸಕಡ್ಡಿಗಳನ್ನು ಹಾಕಲು ತಿಪ್ಪೆ ಗುಂಡಿ ಮಾಡಿದ್ದೀರಾ?

**೧_____ಹೌದು, ೨_____ಇಲ್ಲ**

ಮ) ಹೌದಾದರೆ, ತಿಪ್ಪೆ ಗುಂಡಿ ಎಲ್ಲಿದೆ? ______________

ಯ) ನಿಮ್ಮ ದನಕರುಗಳ ಸೆಗಣಿಯನ್ನು ಸಂಗ್ರಹಿಸಲು ತಿಪ್ಪಿಗುಂಡಿ ಇದೆಯೇ?

**೧______ಹೌದು, ೨______ಇಲ್ಲ**

ರ) ಹೌದಾದರೆ ತಿಪ್ಪೆಗುಂಡಿ ಎಲ್ಲಿದೆ?_____________

ವ) ನಿಮ್ಮ ಕುಟುಂಬದ ಸದಸ್ಯರಿಗೆ ಯಾವ ಯಾವ ಅಭ್ಯಾಸಗಳಿವೆ **(ಚಟಗಳು)**? ________________

ಹ) ಈ ಮೇಲಿನ ಅಭ್ಯಾಸಗಳಿಗೆ ಸರಾಸರಿ ಒಂದು ತಿಂಗಳಿಗೆ ಒಬ್ಬರಿಗೆ ಎಷ್ಟು ಖರ್ಚಾಗುತ್ತದೆ? **ಒಟ್ಟು ಖರ್ಚು ರೂ.ಗಳಲ್ಲಿ:_____**

**೭. ಕುಟುಂಬದ ಲಕ್ಷಣಗಳು**

ಅ) ನಿಮ್ಮ ಕುಟುಂಬದ ಮುಖ್ಯಸ್ಥರ ಧರ್ಮ ಯಾವುದು? **ಧರ್ಮ:**______________

ಆ) ನಿಮ್ಮ ಕುಟುಂಬದ ಮುಖ್ಯಸ್ಥರ ಜಾತಿ ಮತು ಉಪಜಾತಿ ಯಾವುದು? **ಜಾತಿ ಹೆಸರು:**________ **ಉ.ಜಾತಿ:**_________

ಇ) ಈ ಜಾತಿಯು ಪರಿಶಿಷ್ಟ ಜಾತಿಗೆ ಸೇರಿದೇಯೆ? **ಹೌದು**_____೧, ಇಲ್ಲ_____೨

ಈ) ಈ ಜಾತಿಯು ಪರಿಶಿಷ್ಟ ಪಂಗಡಕ್ಕೆ ಸೇರಿದೆಯೆ? **ಹೌದು** _____೧, ಇಲ್ಲ_____೨

ಉ) ಈ ಜಾತಿಯು ಇತರೆ ಹಿಂದುಳಿದ ಜಾತಿಗೆ ಸೇರಿದೆಯೇ? **ಹೌದು**_____೧, ಇಲ್ಲ_____೨

ಊ) ನಿಮ್ಮದು ಅವಿಭಕ್ತ ಕುಟುಂಬವೋ ಅಥವಾ ವಿಭಕ್ತ ಕುಟುಂಬವೋ? __________________

ಋ) ನಿಮ್ಮ ಕುಟುಂಬದ ಆದಾಯದ ಮುಖ್ಯ ಮೂಲ ಯಾವುದು? _________________

